# ಕಾಮಲಾಪುರ: ಒಂದು ಸಾಂಸ್ಕೃತಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾಪ್ರಬಂಧ

ಸಂಶೋಧಕರು

ಶ್ರೀಮತಿ ಕೆ. ಶಿವಲೀಲಾ ಲೋಕೇಶ್

ಎಂ.ಎ., ಬಿ.ಇಡಿ., ಎಂ.ಫಿಲ್



ಮಾರ್ಗದರ್ಶಕರು

ಡಾ. ಕೆ.ಜಿ. ಭಟ್‌ಸೂರಿ

ಎಂ.ಎ., ಪಿಎಚ್.ಡಿ., ಡಿಪ್.ಇನ್.ಎಪಿ



ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೮

# ಕಾಮಲಾಪುರ: ಒಂದು ಸಾಂಸ್ಕೃತಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾಪ್ರಬಂಧ

ಸಂಶೋಧಕರು

**ಶ್ರೀಮತಿ ಕೆ. ಶಿವಲೀಲಾ ಲೋಕೇಶ್**

ಎಂ.ಎ., ಬಿ.ಇಡಿ., ಎಂ.ಫಿಲ್.

ಮಾರ್ಗದರ್ಶಕರು

**ಡಾ. ಕೆ.ಜಿ.ಭಟ್‌ಸೂರಿ**

ಎಂ.ಎ., ಪಿಎಚ್.ಡಿ., ಡಿಪ್.ಇನ್.ಎಪಿ






ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ - ೫೮೩ ೨೭೬

೨೦೦೮

# ಪ್ರಮಾಣ ಪತ್ರ

**"ಕಾಮಲಾಪುರ ಒಂದು ಸಾಂಸ್ಕೃತಿಕ ಅಧ್ಯಯನ"** ಕುರಿತಾದ ಕ್ಷೇತ್ರಕಾರ್ಯಾವಲಂಬಿತ ಪಿಎಚ್.ಡಿ. ಸಂಶೋಧನ ಮಹಾಪ್ರಬಂಧವನ್ನು ಶ್ರೀಮತಿ **ಕೆ.ಶಿವಲೀಲಾ ಲೋಕೇಶ್** ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಹಾಗೂ ಯಾವುದೇ ಪದವಿಗಾಗಿ ಇವರಿಂದ ಸಲ್ಲಿಸಲ್ಪಟ್ಟಿಲ್ಲವೆಂದು ಪ್ರಮಾಣಿಕರಿಸಲಾಗಿದೆ.

**ಡಾ.ಕೆ.ಜಿ.ಭಟ್‌ಸೂರಿ**
ಮಾರ್ಗದರ್ಶಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೧.೦೮.೨೦೦೮

# ಘೋಷಣಾ ಪ್ರಮಾಣ ಪತ್ರ

**"ಕಾಮಲಾಪುರ ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಕ್ಷೇತ್ರಕಾರ್ಯಾವಲಂಬಿತ ಪಿಎಚ್.ಡಿ. ಸಂಶೋಧನ ಮಹಾಪ್ರಬಂಧವನ್ನು ನಾನು ಡಾ.ಕೆ.ಜಿ.ಭಟ್‌ಸೂರಿ, ಪ್ರವಾಚಕರು, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರ ಮಾರ್ಗದರ್ಶನದಲಿ ಸಿದ್ಧಪಡಿಸಿದ್ದೇನೆ. ಈ ಮಹಾಪ್ರಬಂಧವು ಇದಕ್ಕೂ ಮೊದಲು ಯಾವುದೇ ಪದವಿಗಾಗಿ ಎಲ್ಲಿಯೂ ಸಾದರಪಡಿಸಿಲ್ಲವೆಂದು ಹಾಗೂ ಈ ಮೊದಲು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ನನ್ನಿಂದ ಸಲ್ಲಿಸಲ್ಪಟ್ಟಿಲ್ಲವೆಂದು ಮತ್ತು ಇಡಿಯಾಗಿ ಇಲ್ಲವೇ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ಪ್ರಮಾಣಿಕರಿಸುತ್ತಿದ್ದೇನೆ.

ಕೆ. ಶಿವಲೀಲಾ ಲೋಕೇಶ್

**ಕೆ.ಶಿವಲೀಲಾ ಲೋಕೇಶ್**
ಸಂಶೋಧನ ವಿದ್ಯಾರ್ಥಿನಿ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೧.೦೮.೨೦೦೮

# ಪರಿವಿಡಿ

## ಸಂಕ್ಷೇಪ ಸೂಚಿ

| | | |
|---|---|---|
| ವಿ.ಸಾ.ಜಿ | : | ವಿಜಯನಗರ ಆಡಳಿತ ಮತ್ತು ಸಾಮಾಜಿಕ ಜೀವನ |
| ಇ.ತಿ.ದ | : | ಇತಿಹಾಸ ದರ್ಶನ |
| ಕಂ.ವಿ | : | ಕಂಠೀರವ ನರಸರಾಜ |
| ಕ.ವಿ.ಶಾ.ಸಂ | : | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ |
| ಜ್ಞಾ.ಚ | : | ಜ್ಞಾನ ಚಂದ್ರಾಭ್ಯುದಯ |
| ಚ.ಪು | : | ಚನ್ನ ಬಸವ ಪುರಾಣ |
| ಜೀ.ವ | : | ಜೀವಂಧರ ಚರಿತೆ |
| ಧ.ಪು | : | ಧರ್ಮನಾಥ ಪುರಾಣ |
| ಪ.ಪು | : | ಪದ್ಮರಾಜ ಪುರಾಣ |
| ಪ್ರೌ.ಕಾ | : | ಪ್ರೌಢದೇವರಾಯನ ಕಾವ್ಯ |
| ಭ.ವೈ | : | ಭರತೇಶ ವೈಭವ |
| ಮೊ.ತ | : | ಮೋಹನ ತರಂಗಿಣಿ |
| ವಿ.ಚ | : | ವಿಜಯಕುಮಾರಿ ಚರಿತ್ರೆ |
| ವಿ.ಶಾ | : | ವಿಜಯನಗರ ಶಾಸನಗಳು |
| ವಿ.ಅ.ಸ | : | ವಿಜಯನಗರ ಅಧ್ಯಯನ ಸಂಪುಟ |
| ಸಾ.ರಾ.ಜಿ | : | ಸಾಮಾಜಿಕ ಹಾಗೂ ರಾಜಕೀಯ ಜೀವನ |
| ಸ.ಕೌ | : | ಸಮ್ಯುಕ್ತ ಕೌಮುದಿ |
| ಸೊ.ಸೇ | : | ಸೊಬಗಿನ ಸೇನೆ |
| ಸಂ. | : | ಸಂಪುಟ |

## Abbrevations

| | | |
|---|---|---|
| A.R | : | Annual Reports |
| ARIE | : | Annual Reports on Indian Epigraphy |
| ARSIE | : | Annual Reports on South Indian Epigraphy |
| BKI | : | Bombay Karntaka Inscriptions, Vol-I |
| EI | : | Epigraphia Indica |
| EC | : | Epigraphia Carnatika |
| IA | : | Indian Antiquerry |
| JESI | : | Journal of the Epigraphical Society of India, Mysore |
| KI | : | Karnataka Inscriptions |
| MAR | : | Annual Reports of the Mysore Archaeological Reports |
| SII | : | South Indian Inscriptions |
| VPR | : | Vijayanagara Progress of Research |

## ಅಧ್ಯಾಯ–೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ



ಪೀಠಿಕೆ: ಭಾರತೀಯ ಸಾಂಸ್ಕೃತಿಕ ಇತಿಹಾಸವನ್ನು ಪುನರ್ ರಚಿಸುವ ನಿಟ್ಟಿನಲ್ಲಿ ಕರ್ನಾಟಕ ಪಾತ್ರ ಅತಿ ಮಹತ್ವದ್ದಾಗಿದೆ. ಇತಿಹಾಸ ಪೂರ್ವ ಕಾಲದಿಂದ ತುಲನಾತ್ಮಕ ಅಧ್ಯಯನವನ್ನು ಮಾಡಿ ನೋಡಿದರೆ, ಕರ್ನಾಟಕದಲ್ಲಿ ದೊರೆತ ಕುರುಹುಗಳು ಕರ್ನಾಟಕದ್ಯಾಂತ ಹರಡಿದ್ದು, ಇದು ಮಾನವನ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಸಾಮ್ರಾಜ್ಯಗಳ ನಿರ್ಮಾಣ, ಅವುಗಳ ವ್ಯವಸ್ಥೆ, ಧಾರ್ಮಿಕ ದೃಷ್ಟಿ, ಸಾಹಿತ್ಯಿಕ ಸೃಷ್ಟಿ, ಶಿಲ್ಪ, ಸಂಗೀತ ಹೀಗೆ ಎಲ್ಲಾ ರಂಗಗಳಲ್ಲಿಯೂ ಭಾರತೀಯ ಇತಿಹಾಸಕ್ಕೆ ಕರ್ನಾಟಕದ ಕೊಡುಗೆ ವೈಶಿಷ್ಟ್ಯ ಪೂರ್ಣ. ಇತಿಹಾಸ ಅಂದರೆ ಇತಿ+ಹ+ಅಸ=ಇತಿಹಾಸವೆಂದಾಗುತ್ತದೆ. ಹಿಂದೆ ವಾಸ್ತವಿಕ ನಡೆದ ಘಟನೆಗಳ ನಿರೂಪಣೆಯಾಗುತ್ತದೆ. ಸಂಸ್ಕೃತಿ ಅಥವಾ ಸಾಂಸ್ಕೃತಿಕ ಎಂದರೆ ರಾಜಕೀಯ, ಸಾಮಾಜಿಕ, ಆರ್ಥಿಕ ಎಲ್ಲಾ ರಂಗಗಳಲ್ಲಿ ಅವಿರಿತವಾಗಿ ಸಾಧಿಸಿದ ಪ್ರಗತಿ ಮತ್ತು ಇದರ ವಿಫಲತೆಗಳನ್ನು ಯಥಾವತ್ತಾಗಿ ನಿರೂಪಿಸುವುದೇ ಇತಿಹಾಸದ ಕಾರ್ಯ. ಇದೇ ಸಾಂಸ್ಕೃತಿಕ ಇತಿಹಾಸ[1] ಎಂದರೆ ತಪ್ಪಾಗಲಿಕ್ಕಿಲ್ಲ.

ಒಂದು ನಾಡಿನ ಸಾಂಸ್ಕೃತಿಕ ಇತಿಹಾಸವನ್ನು ವಸ್ತು ನಿಷ್ಠವಾಗಿ ರಚಿಸುವಾಗ ಆ ಪ್ರದೇಶದ ಅನ್ವೇಷಣೆ, ಶೋಧನೆ, ಸಂಗ್ರಹಣೆ ಮತ್ತು ಪ್ರಕಟಣೆ ಗ್ರಾಮಗಳಿಂದ ಪ್ರಾರಂಭವಾಗಬೇಕು. ಅಲ್ಲಿನ ರಾಜಕೀಯ, ಆಡಳಿತ, ವಾಸ್ತುಶಿಲ್ಪ, ಸಾಹಿತ್ಯ, ಧರ್ಮ, ಆರ್ಥಿಕ, ಸಾಮಾಜಿಕ, ಸಂಪ್ರದಾಯ ಇವು ಸಾಂಸ್ಕೃತಿಕ ಇತಿಹಾಸದಲ್ಲಿ ಮಹತ್ವವಾದ ಸ್ಥಾನವನ್ನು ಪಡೆಯುತ್ತವೆ. ಕನ್ನಡ ನಾಡನ್ನು ಆಳಿದ ಮುಖ್ಯ ಅರಸುಮನೆತನಗಳ ಇತಿಹಾಸ ಈಗಾಗಲೇ ಹೆಚ್ಚು ಸಂಶೋಧನೆಗಳು ನಡೆದಿವೆ. ಆದರೆ ಗ್ರಾಮ ಗ್ರಾಮಗಳ ಇತಿಹಾಸ ರಚನೆ ಇನ್ನೂ ಹೆಚ್ಚಿಗೆ ನಡೆದಿಲ್ಲ. ಈ ನಿಟ್ಟಿನಲ್ಲಿ ಕಾಮಲಾಪುರ ಗ್ರಾಮವನ್ನು ಸೀಮಿತ ಮಾಡಿಕೊಂಡು ಪುರಾತತ್ವ ಅವಶೇಷಗಳನ್ನೆಲ್ಲಾ ಒಂದೆಡೆ ಕಲೆಹಾಕಿ ವಿವಿಧ ಮಜಲುಗಳಿಂದ ಅವುಗಳ ಅಧ್ಯಯನ ಮಾಡುವುದು ಪ್ರಸ್ತುತ ಸಂಶೋಧನೆಯ ಉದ್ದೇಶ.

ಸಾಂಸ್ಕೃತಿಕ ಇತಿಹಾಸ ರಚಿಸುವಾಗ ಅಥವಾ ಇದನ್ನು ಗಮನಿಸುವ ರೀತಿಯಲ್ಲಿ ಬದಲಾವಣೆ ಯಾಗುತ್ತಿರುತ್ತದೆ. ಈ ಬದಲಾವಣೆ ಅವರವರ ಬೌದ್ಧಿಕ ಜ್ಞಾನವನ್ನು ಅವಲಂಬಿಸಿರುತ್ತದೆ. ಕರ್ನಾಟಕ

ಮುಖ್ಯವಾದ ಅರಸು ಮನೆತನಗಳ ಇತಿಹಾಸ ಹೆಚ್ಚಿನದಾಗಿ ಪುರಾತತ್ವ ಕುರುಹುಗಳ ಮೇಲೆಯೇ ಅವಲಂಬಿಸಿದೆ. ಈ ಹಿನ್ನಲೆಯನ್ನು ಆಧರಿಸಿ ಸೀಮಿತ ಪ್ರದೇಶವನ್ನು ಆಯ್ದುಕೊಂಡು ಅಧ್ಯಯನ ಮಾಡಿದ್ದಲ್ಲಿ ಗ್ರಾಮದ ಇತಿಹಾಸಕ್ಕೆ ಹೆಚ್ಚು ಮಹತ್ವ ನೀಡಿದಂತಾಗುತ್ತದೆ. ಇದೊಂದು ವಸ್ತುನಿಷ್ಠ ಅಧ್ಯಯನವೂ ಆಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಹೊಸಪೇಟೆ ತಾಲೂಕಿನ ಕಾಮಲಾಪುರ ಗ್ರಾಮವನ್ನು ಸೀಮಿತವಾಗಿರಿಸಿಕೊಂಡು 'ಕಾಮಲಾಪುರ-ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯ ಅಡಿಯಲ್ಲಿ ವಸ್ತುನಿಷ್ಠವಾಗಿ ಅಧ್ಯಯನ ಮಾಡಿದ ಪ್ರಯತ್ನ ಇದಾಗಿದೆ.

**ಪೂರ್ವಾಧ್ಯಯನಗಳ ಸಮೀಕ್ಷೆ:** ಕಾಮಲಾಪುರ ಗ್ರಾಮದ ಕುರಿತು ಈವರೆಗೆ ವಸ್ತು ನಿಷ್ಠವಾದ ಹಾಗೂ ಪ್ರತ್ಯೇಕವಾಗಿ ಅಧ್ಯಯನ ಹೆಚ್ಚಿನದಾಗಿ ನಡೆದಿಲ್ಲವೆಂದೇ ಹೇಳಬೇಕು ಆದರೆ ಈ ಗ್ರಾಮದಲ್ಲಿನ ಕೆಲವೊಂದು ದೇವಾಲಯಗಳು, ಮೂರ್ತಿಗಳು, ಕೋಟೆಗಳು ಮತ್ತು ಜಾನಪದೀಯ ಅಂಶಗಳ ಕುರಿತು ಕೆಲವೊಂದು ಕೃತಿಗಳಲ್ಲಿ ಉಲ್ಲೇಖಗೊಂಡಿವೆ ಹಾಗೂ ಲೇಖನಗಳು ಪ್ರಕಟವಾಗಿವೆ.

ಶ್ರೀ ದೇವಕುಂಜರಿಯವರ 'ಹಂಪೆ' ಕೃತಿಯಲ್ಲಿ ಕಾಮಲಾಪುರ ಪ್ರದೇಶವನ್ನು ಒಳಗೊಂಡ ಹಂಪೆ ಪ್ರದೇಶದ ಸ್ಮಾರಕಗಳ ಸ್ಥೂಲ ಪರಿಚಯ ಮಾಡಲಾಗಿದೆ.[೧] ಬಸವರಾಜಮಲಶೆಟ್ಟಿರವರ 'ಹಂಪೆ -ಒಂದು ಪರಿಚಯ' ಕೃತಿಯಲ್ಲಿ ಕಾಮಲಾಪುರದ ಐತಿಹಾಸಿಕ ಅವಶೇಷಗಳ ಕುರಿತು ಪ್ರಸ್ತಾವಿಸಿದೆ.[೨] ಆರ್.ಶೇಷ ಶಾಸ್ತ್ರಿ ರವರ 'ಕರ್ನಾಟಕದ ವೀರಗಲ್ಲುಗಳು' ಕೃತಿಯಲ್ಲಿ ಕಾಮಲಾಪುರ ಗ್ರಾಮದಲ್ಲಿನ ಕೆಲವೊಂದು ವೀರಗಲ್ಲುಗಳ ಬಗ್ಗೆ ಚರ್ಚಿಸಲಾಗಿದೆ.[೩] ವಸುಂಧರ ಫಿಲಿಯೋಜರವರ 'ಅಳಿದುಳಿದ ಹಂಪೆ' ಕೃತಿಯಲ್ಲಿ ಕಾಮಲಾಪುರದ ಕೆಲವು ದೇವಾಲಯಗಳನ್ನು ವಿವರಿಸಿದ್ದಾರೆ.[೪] ಕೆ.ಶ್ರೀಕಂಠಯ್ಯ ರವರು 'ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಸಾಮಾಜಿಕ, ರಾಜಕೀಯ ಜನಜೀವನ ಚರಿತ್ರೆ' ಕೃತಿಯಲ್ಲಿ ಈ ಪ್ರದೇಶದ ಜನರ ಸಾಮಾಜಿಕ, ರಾಜಕೀಯ, ಆರ್ಥಿಕ ಜೀವನ ಕುರಿತು ನಿರೂಪಿಸಿದ್ದಾರೆ.[೫] ಎಸ್.ರಾಜಶೇಖರ್ ರವರ 'ಮಾಸ್ಟರ್ ಪೀಸಸ್ ಆಫ್ ವಿಜಯನಗರ ಆರ್ಟ್ಸ್' ಕೃತಿಯಲ್ಲಿ ಕಾಮಲಾಪುರ ಗ್ರಾಮದಲ್ಲಿ ಲಭ್ಯವಾದ ವಿಜಯನಗರ ಕಾಲದ ಕೆಲವು ದೇವಾಲಯಗಳ ವಾಸ್ತು ಶೈಲಿಯ ಲಕ್ಷಣಗಳ ಬಗ್ಗೆ ಉಲ್ಲೇಖಿಸಲಾಗಿದೆ.[೬] ಎಂ.ಚಿದಾನಂದ ಮೂರ್ತಿರವರ 'ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು' ಎಂಬ ಕೃತಿಯಲ್ಲಿ ಕಾಮಲಾಪುರದ ಪರಿಸರದಲ್ಲಿನ ಮಾಸ್ತಿಗಲ್ಲುಗಳನ್ನು ಅರ್ಥೈಸಿದ್ದಾರೆ.[೭] ಡಾಮಿಕ್ ಡೇವಿಜನ್ ಜೆನ್‌ಶಿನ್‌ರವರ 'ದಿ ಇರ್‍ರಿಗೇಷನ್ ಸಿಸ್ಟಮ್ ಅಂಡ್ ವಾಟರ್ ಸಪ್ಲೈ ಸಿಸ್ಟಮ್ ಆಫ್ ದಿ ಸಿಟಿ ಆಫ್ ವಿಜಯನಗರ' ಕೃತಿಯಲ್ಲಿ ಕಾಮಲಾಪುರದ ಪರಿಸರದಲ್ಲಿ ಲಭ್ಯವಾದ ನೀರಿನ ತೂಬಿನ ಅವಶೇಷಗಳ ಕುರಿತಿದೆ.[೮] ಸಂ.ಶ್ರೀ ಭೂಸನೂರುಮಠ ರವರ 'ವಿಜಯ ಕಲ್ಯಾಣ' ಕೃತಿಯಲ್ಲಿ, ಕಾಮಲಾಪುರ ಗ್ರಾಮದ ಲೌಖಿಕ ಮತ್ತು ಸೈನಿಕ ವಾಸ್ತು ಶೈಲಿಯ ವಿಚಾರಗಳನ್ನು ಚರ್ಚಿಸಲಾಗಿದೆ.[೧೦] ಚನ್ನಕ್ಕ ಎಲಿಗಾರ ರವರ 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ' ಕೃತಿಯಲ್ಲಿ ಕಾಮಲಾಪುರ ಪ್ರದೇಶದಲ್ಲಿ ಲಭ್ಯವಿದ್ದ ಮಾಸ್ತಿಗಲ್ಲು ಶಿಲ್ಪಗಳನ್ನು ಸೆರೆಹಿಡಿಯಲಾಗಿದೆ.[೧೧] ಜಿ.ಎಸ್.ದೀಕ್ಷಿತ್ ರವರ 'ಸಂಗಮರ ಕಾಲದ ವಿಜಯನಗರ' ಕೃತಿಯಲ್ಲಿ ಕಾಮಲಾಪುರ ಪರಿಸರದ ಸುತ್ತ ಮುತ್ತಲಿನ ಇತಿಹಾಸ ಮತ್ತು ಸಂಸ್ಕೃತಿಗಳ ವಿಚಾರಗಳನ್ನು ಸೆರೆಹಿಡಿಯಲು ಪ್ರಯತ್ನಿಸಲಾಗಿದೆ.[೧೨] ಸದಾನಂದ ಕನವಳ್ಳಿರವರ

‘ಮರೆತುಹೋದ ಮಹಾ ಸಾಮ್ರಾಜ್ಯ ವಿಜಯನಗರ’ ಕೃತಿ ಕಾಮಲಾಪುರ ಪರಿಸರದ ಐತಿಹಾಸಿಕ ವಿಚಾರ ಧಾರೆಗಳ ಕುರಿತಿದೆ.[೧೩] ಎಂ.ಎಂ.ಕಲಬುರ್ಗಿರವರ ‘ಕರ್ನಾಟಕದ ಕೈಫಿಯತ್ತುಗಳು’ ಕೃತಿ ಕಾಮಲಾಪುರದ ಐತಿಹ್ಯದ ಕುರಿತಿದೆ.[೧೪] ಚೆನ್ನಬಸಪ್ಪ ಪಾಟೇಲ ಮತ್ತು ವಿನೋದ ಪಾಟೇಲ ರವರ ‘ವಿಜಯನಗರದ ಶಾಸನಗಳು’ ಸಂಪುಟದಲ್ಲಿ ಕಾಮಲಾಪುರ ಗ್ರಾಮದ ಶಾಸನಗಳ ಬಗ್ಗೆ ಸಂಕ್ಷಿಪ್ತ ಮಾಹಿತಿಯನ್ನು ನೀಡಲಾಗಿದೆ.[೧೫] ಪುರುಷೋತ್ತಮ ಬಿಳಿಮಲೆರವರ ‘ಹಂಪಿ ಜಾನಪದ’ ಕೃತಿ ಕಾಮಲಾಪುರ ಪ್ರದೇಶದ ಜಾನಪದ ಸಂಸ್ಕೃತಿಯ ಕುರಿತಿದೆ.[೧೬] ಸಿ.ಪಿ.ಎಂ.ಕೊಟ್ರಯ್ಯರವರ ‘ಹಂಪೆ’ ಕೃತಿ ಕಾವುಲಾಪುರ ಪ್ರದೇಶದ ಕೆಲವೊಂದು ಅವಶೇಷಗಳನ್ನು ಒಳಗೊಂಡಿದೆ.[೧೭] ಎಸ್.ವೈ.ಸೋಮಶೇಖರರವರ ‘ಹಂಪೆ ಬಜಾರುಗಳು’ ಕೃತಿಯಲ್ಲಿ ಕಾಮಲಾಪುರ ಪ್ರದೇಶದ ದೇವತೆ ‘ಪಟ್ಟಣದ ಎಲ್ಲಮ್ಮ’. ಹೆಬ್ಬಾಗಿಲುಗಳ, ಕೊತ್ತಲಗಳ ಬಗ್ಗೆ ಅಂದಿನ ಪೇಟೆ ಪಟ್ಟಣದ ಕುರಿತಿದೆ.[೧೮] ಡಿ.ವಿ.ಪರಮಶಿವ ಮೂರ್ತಿ ರವರ ‘ಕನ್ನಡ ಶಾಸನಶಿಲ್ಪ’ ಕೃತಿಯಲ್ಲಿ ಕಾಮಲಾಪುರದಲ್ಲಿ ದೊರೆತ ಕೆಲವೊಂದು ವೀರ ಸ್ಮಾರಕ ಶಿಲ್ಪಗ ಬಗ್ಗೆ ಚರ್ಚಿಸಿದ್ದಾರೆ.[೧೯] ಕೆ.ಎಂ.ಸುರೇಶ್‌ರವರ ‘ಕರ್ನಾಟಕ ದೇವಾಲಯ ಕೋಶ’ ಕೃತಿಯಲ್ಲಿ ಕಾಮಲಾಪುರ ಪ್ರದೇಶದ ಕೆಲವು ದೇವಾಲಯಗಳ ವಾಸ್ತು ಪರಿಚಯವಿದೆ.[೨೦] ಚೆಲುವರಾಜು ರವರ ‘ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಧ್ಯಯನ’ ಈ ಕೃತಿ ಕಾಮಲಾಪುರ ಪ್ರದೇಶದ ಕೆಲವೊಂದು ಜಾನಪದ ಸಂಸ್ಕೃತಿಯ ಕುರಿತಿದೆ.[೨೧] ಸಿ.ಪಿ.ಎಂ.ಕೊಟ್ರಯ್ಯ ರವರ ‘ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ’ ಕೃತಿಯಲ್ಲಿ ಕಾಮಲಾಪುರದ ಅಂದಿನ ನೀರಿನ ವ್ಯವಸ್ಥೆ ಬಗ್ಗೆ ಸೂಕ್ತ ಮಾಹಿತಿ ಸೆರೆಹಿಡಿದಿದ್ದಾರೆ.[೨೨] ಸಿ.ಎಸ್.ವಾಸುದೇವನ್‌ರವರ ‘ಹಂಪಿ ಪರಿಸರದ ಕೆರೆಗಳು’ ಪುಸ್ತಕದಲ್ಲಿ ಕಾಮಲಾಪುರದ ಕೆರೆಗಳ ಮಾಹಿತಿ ಸೆರೆಹಿಡಿದಿದ್ದಾರೆ.[೨೩] ಬರಗೂರು ರಾಮಚಂದ್ರಪ್ಪ ನವರ ‘ಕರ್ನಾಟಕ ಸಂಗಾತಿ’ ಯಲ್ಲಿ ಕಾಮಲಾಪುರದ ಹಜಾರರಾಮ ದೇವಾಲಯದ ವಿಷಯ ಒಳಗೊಂಡಿದೆ.[೨೪] ಸಿ.ಮಹಾದೇವ ಮತ್ತು ಇತರರು ಇವರ ‘ಹೊಸಪೇಟೆ ತಾಲೂಕು ದರ್ಶನ’ ದಲ್ಲಿ ಕಾಮಲಾಪುರದ ವಸ್ತು ಸಂಗ್ರಹಾಲಯ ಒಳಗೊಂಡ ತಾಲೂಕಿನ ಪರಿಚಯ ಮಾಡಲಾಗಿದೆ.[೨೫] ಎ.ವಿ.ನರಸಿಂಹ ಮೂರ್ತಿರವರ ‘ಕರ್ನಾಟಕ ನಾಣ್ಯ ಪರಂಪರೆ’ ಯಲ್ಲಿ ಕಾಮಲಾಪುರ ಪರಿಸರದಲ್ಲಿ ದೊರೆತ (ವಿಜಯನಗರ ಕಾಲದ) ನಾಣ್ಯಗಳನ್ನು ಪರಿಚಯಿಸಲಾಗಿದೆ.[೨೬] ಬಿ.ಎ.ವಿವೇಕರೈರವರ ‘ಪ್ರವಾಸಿ ಕಂಡ ಇಂಡಿಯಾ’ದಲ್ಲಿ ಈ ಪ್ರದೇಶದ ಸ್ಮಾರಕಗಳ ಬಗ್ಗೆ ವಿದೇಶಿಯರ ಪ್ರವಾಸಿ ಕಥನಗಳನ್ನು ಸೆರೆಹಿಡಿಯಲಾಗಿದೆ.[೨೭]

**ಸಂಶೋಧನಾ ಲೇಖನಗಳು:** ಎಚ್.ಎಲ್.ನಾಗೇಗೌಡರವರ ‘ಪ್ರವಾಸಿ ಕಂಡ ಇಂಡಿಯಾ’ ಲೇಖನದಲ್ಲಿ ವಿಜಯನಗರದ (ಕಾಮಲಾಪುರ ಪ್ರದೇಶದ) ಸ್ಮಾರಕಗಳ ವೈಶಿಷ್ಟ್ಯತೆಯ ಬಗ್ಗೆ ವಿದೇಶಿಯರ ಪ್ರವಾಸಿ ಕಥನಗಳಿವೆ.[೨೮] ಎಂ.ಬಿ.ಪದ್ಮರವರ ‘ವಿಜಯನಗರ ಶಾಸನಗಳಲ್ಲಿ ಮಹಿಳೆ’ ಲೇಖನದಲ್ಲಿ, ಕಾಮಲಾಪುರ ಪರಿಸರದ ಮಾಸ್ತಿಗಲ್ಲುಗಳ ಬಗ್ಗೆ ಇಲ್ಲಿಯ ಮಹಿಳೆಯರ ಸ್ಥಾನ–ಮಾನದ ಬಗ್ಗೆ ವಿಚಾರಗಳನ್ನು ಸಂಕ್ಷಿಪ್ತವಾಗಿ ಸೆರೆಹಿಡಿಯಲಾಗಿದೆ.[೨೯] ಚೆನ್ನಬಸಪ್ಪ.ಎಸ್.ಪಾಟೇಲ ರವರ ‘ಶಾಸನಗಳಲ್ಲಿ ಕಂಡಂತೆ ವಿಜಯನಗರ ಪಟ್ಟಣದ ನೀರಿನ ವ್ಯವಸ್ಥೆ’ ಲೇಖನದಲ್ಲಿ ಕಾಮಲಾಪುರ ಪರಿಸರದ ನೀರಿನ

ಅರವಟ್ಟಿಗೆ ಅವಶೇಷಗಳ ವಿಚಾರಗಳನ್ನು ವಿವರಿಸಿದ್ದಾರೆ.[೩೦] ಟಿ.ಎಂ.ಮಂಜುನಾಥಯ್ಯನವರು 'ಅನಂತಪುರದ ಮಲ್ಲಿಕಾರ್ಜುನ ದೇವಾಲಯ' ಲೇಖನದಲ್ಲಿ ಈ ಪ್ರದೇಶದ ಶೈವ ದೇವಾಲಯದ ವಾಸ್ತು ಶೈಲಿಯ ಬಗ್ಗೆ ಕೂಲಂಕುಷವಾಗಿ ಚರ್ಚಿಸಿ ವಿವರಿಸಿದ್ದಾರೆ.[೩೧] ಎಸ್.ಸರಸ್ವತಿರವರ 'ವಿಜಯನಗರ ಕಾಲದ ಶಿಲ್ಪದಲ್ಲಿ ಸ್ತ್ರೀಯರು' ಈ ಲೇಖನದಲ್ಲಿ ಈ ಪ್ರದೇಶದ ಮಹಿಳೆಯರ ವೀರತ್ವದ ಕುರಿತಿದೆ.[೩೨] ಸಿ.ಎಸ್.ವಾಸುದೇವನ್ ರವರು 'ವಿಜಯನಗರ ಪಟ್ಟಣ ಮತ್ತು ಅದರ ಉಪನಗರಗಳು' ಲೇಖನದಲ್ಲಿ ಕಾಮಲಾಪುರ ವಿಜಯನಗರ ಕಾಲದಲ್ಲಿ ಉಪನಗರವಾಗಿತ್ತೆಂದು ಮಾಹಿತಿ ನೀಡಲಾಗಿದೆ.[೩೩] ಎಂ.ಎಚ್.ಶಂಕರನಾರಾಯಣನವರು 'ವಿಜಯನಗರ ಅರಸರ ನಾಣ್ಯ ಸಂಪತ್ತು' ಲೇಖನ, ಈ ಪ್ರದೇಶದ ಪ್ರಾಚೀನ ನಾಣ್ಯ ವಿಚಾರದ ಕುರಿತಿದೆ.[೩೪] ಕೆ.ಎಂ.ಸುರೇಶ್ ರವರು ಅವರ 'ಹಂಪಿ ಪ್ರದೇಶದ ಸೂರ್ಯ ಶಿಲ್ಪಗಳು' ಲೇಖನ ಇದರಲ್ಲಿ ಕಾಮಲಾಪುರದ ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿನ ಸೂರ್ಯ ಮೂರ್ತಿ ಶಿಲ್ಪದ ಲಕ್ಷಣಗಳನ್ನು ವಿವರಿಸಿದ್ದಾರೆ.[೩೫] ಆರ್.ಎಚ್.ಕುಲಕರ್ಣಿ ರವರ ವಿಜಯನಗರ ಕಾಲದ ಗಾರೆ ಕಲೆ ಒಂದು ಅವಲೋಕನ' ಲೇಖನ ಕಾಮಲಾಪುರ ಪರಿಸರದ ರಾಮಚಂದ್ರ ದೇವಾಲಯದ ಗಾರೆ ಶಿಲ್ಪದ ಲಕ್ಷಣಗಳ ಕುರಿತಿದೆ.[೩೬] ಟಿ.ಎಂ.ಮಂಜುನಾಥಯ್ಯರವರ 'ವಿಜಯನಗರ ಪಟ್ಟಣದಲ್ಲಿ ಆನೆಯ ನಾಲೆ' ಲೇಖನದಲ್ಲಿ, ಕಾಮಲಾಪುರ ಪ್ರದೇಶದ ಸೈನಿಕ ವಾಸ್ತು ಶೈಲಿಯಾದ ಆನೆ ಸಾಲಿನ ಅವಶೇಷದ ಬಗ್ಗೆ ಸಂಕ್ಷಿಪ್ತವಾಗಿ ಮಾಹಿತಿಯನ್ನು ಕೊಟ್ಟಿದ್ದಾರೆ.[೩೭] ಹೆಚ್.ಟಿ.ತಳವಾರ ರವರ 'ನಗರ ದೇವತೆ ಪಟ್ಟಣದ ಎಲ್ಲಮ್ಮ ದೇವಸ್ಥಾನ' ಒಂದು ಟಿಪ್ಪಣಿ ಲೇಖನದಲ್ಲಿ ಈ ಪ್ರದೇಶದ ಪಟ್ಟಣದ ಎಲ್ಲಮ್ಮನ ಮೂರ್ತಿಶಿಲ್ಪದ ಪ್ರತಿಮಾ ಲಕ್ಷಣಗಳನ್ನು ಸೆರೆಹಿಡಿದಿದ್ದಾರೆ.[೩೮] ಜಗದೀಶ ರವರ 'ಹಂಪಿ ಮೆಟ್ಟಿಲು ಪುಷ್ಕರಣಿಯ ನಿರ್ಮಾಣ ತಾಂತ್ರಿಕತೆ' ಲೇಖನದಲ್ಲಿ ಕಾಮಲಾಪುರ ಪರಿಸರ ಪ್ರದೇಶದ ಈ ಪುಷ್ಕರಣಿಯ ತಾಂತ್ರಿಕತ ಮಾಹಿತಿಯನ್ನು ಚರ್ಚಿಸಲಾಗಿದೆ.[೩೯]

**ಸಂಶೋಧನಾ ಪ್ರಬಂಧಗಳು**: ಎಸ್.ಸೋಮಶೇಖರ್ ರವರ 'ಹಂಪಿಯ ಬಜಾರುಗಳು' ಎಂ.ಫಿಲ್ ಮಹಾ ಪ್ರಬಂಧದ ಕಾಮಲಾಪುರ ಭಾಗದ ವಾಸ್ತು ವಿಚಾರಗಳ ಚಿತ್ರಣವನ್ನು ಒಳಗೊಂಡಿದೆ.[೪೦] ಎಂ.ಪಿ.ವೀಣಾರವರ 'ಮನೆ, ಸಮಾಜ ಮತ್ತು ಸಂಸ್ಕೃತಿ' ಎಂಬ ಎಂ.ಫಿಲ್ ಪ್ರಬಂಧದಲ್ಲಿ ಕಾಮಲಾಪುರದ ಸಂಸ್ಕೃತಿಯ ಕೆಲವು ವಿಚಾರ ಧಾರೆಗಳನ್ನು ಸಂಕ್ಷಿಪ್ತವಾಗಿ ಸೆರೆಹಿಡಿದಿದ್ದಾರೆ.[೪೧] ಎಸ್.ಸೋಮಶೇಖರ್ ರವರು 'ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ದನೀತಿ' ಪಿ.ಎಚ್.ಡಿ ಮಹಾ ಪ್ರಬಂಧದಲ್ಲಿ ಹಂಪಿಯ ಆಡಳಿತ ವ್ಯವಸ್ಥೆಯ ಬಗ್ಗೆ ಅಂದರೆ ಸೈನ್ಯ ವ್ಯವಸ್ಥೆ ಯುದ್ಧ ವ್ಯವಸ್ಥೆಯ ಹಲವು ಹತ್ತು-ಮುಖಗಳನ್ನು ಚರ್ಚಿಸಿದ್ದಾರೆ.[೪೨] ಆರ್.ಬಿ.ಕುಮಾರ್‌ರವರು 'ಕರ್ನಾಟಕದ ಮುದ್ದೆ ಕಂಬಾರರ ಸಮುದಾಯದ ಸಾಂಸ್ಕೃತಿಕ ವಿಚಾರ ಧಾರೆಗಳನ್ನು ಚರ್ಚಿಸಿದ್ದಾರೆ.[೪೩] ಶರಣು ಬಸಪ್ಪರವರ 'ಕೊಪ್ಪಳ-ಹಂಪಿ ಪ್ರದೇಶದ ಪ್ರಾಗೈತಿಹಾಸ ಕಾಲದ ಕಲೆ' ಪಿ.ಎಚ್.ಡಿ. ಮಹಾ ಪ್ರಬಂಧದ, ಕಾಮಲಾಪುರ ಪ್ರದೇಶದ ಕೆರೆಗಳು ಹವಾಮಾನ, ಪ್ರಾಗೈತಿಹಾಸವನ್ನು ಸೆರೆಹಿಡಿಯಲಾಗಿದೆ.[೪೪] ಕೆ.ಮಹೇಶ್ ರವರ 'ಕೃಷ್ಣದೇವರಾಯನ ಕಾಲನ ವೈಷ್ಣವ ದೇವಾಲಯಗಳು' ಮಹಾ ಪ್ರಬಂಧದಲ್ಲಿ ಕಾಮಲಾಪುರದಲ್ಲಿನ ಕೆಲವು ವೈಷ್ಣವ ಧರ್ಮ ಮತ್ತು ದೇವಾಲಯಗಳನ್ನು ಪರಿಚಯಿಸಿದ್ದಾರೆ.[೪೫] ಎಂ.ಕೊಟ್ರೇಶ್‌ರವರ 'ಕೋಟೆ-

ಕೊತ್ತಲಗಳು'-ಒಂದು ಅಧ್ಯಯನ ಮಹಾಪ್ರಬಂಧದಲ್ಲಿ ಕಾಮಲಾಪುರ ಕೋಟೆ-ಕೊತ್ತಲಗಳು-ಬಾಗಿಲುಗಳ ಬಗ್ಗೆ, ಶಾಸನಗಳ ಹಿನ್ನೆಲೆಯಲ್ಲಿ ಪೂರಕ ಮಾಹಿತಿ ನೀಡಿದ್ದಾರೆ.[೨೬] ಎಚ್.ಶಿವಾನಂದ ಬಂಟನೂರ ಅವರು 'ಕರ್ನಾಟಕ ಜನಪದ ಶಿಲ್ಪಕಲೆ ಒಂದು ಅಧ್ಯಯನ' ಪಿ.ಎಚ್.ಡಿ ಮಹಾ ಪ್ರಬಂಧದಲ್ಲಿ ಕಾಮಲಾಪುರದ ಜಾನಪದ ಶಿಲ್ಪಕಲೆಗಳ ವೈಲಕ್ಷಣಗಳನ್ನು ಜಾನಪದೀಯ ಐತಿಹ್ಯಗಳ ಜೊತೆಗೆ ಚರ್ಚಿಸಿದ್ದಾರೆ.[೨೭] ಎಂ.ಕೆ.ಗಿರೀಶ್ ಕುಮಾರ್ ರವರು 'ಕರ್ನಾಟಕದ ಬುಡಕಟ್ಟು ಚಿತ್ರಕಲೆ' ಮಹಾ ಪ್ರಬಂಧದಲ್ಲಿ ಕಾಮಲಾಪುರ ಪ್ರದೇಶದ ಹಲವಾರು ಬುಡಕಟ್ಟು ಜನಾಂಗದ ಚಿತ್ರಕಲೆಯ ಬಗ್ಗೆ ವಿವರಿಸಿದ್ದಾರೆ.[೨೮] ಎಂ.ಕೆ.ದುರುಗಪ್ಪನವರ 'ವಿಜಯನಗರೋತ್ತರ ಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು :- ಚಾರಿತ್ರಿಕ ಅಧ್ಯಯನ' ಪ್ರಬಂಧದಲ್ಲಿ ವಿಜಯನಗರ (ಹಂಪಿ ಕ್ಷೇತ್ರದ) ಪರಿಸರದ ಬೇಡ ಜನಾಂಗದ ಸಂಸ್ಕೃತಿಯ ಕುರಿತಿದೆ.[೨೯] ಜೆ.ರವೀಂದ್ರ ಕುಮಾರ ರವರು ಮೌಖಿಕ ಚರಿತ್ರೆ ಮತ್ತು ಹಂಪಿ' ಎಂಬ ಎಂ.ಫಿಲ್ ಕಿರು ಪ್ರಬಂಧದಲ್ಲಿ ಕಾಮಲಾಪುರದ ಕೆಲವೊಂದು ಸ್ಮಾರಕಗಳನ್ನು ಜಾನಪದ ಐತಿಹ್ಯಗಳ ಹಿನ್ನಲೆಯಲ್ಲಿ ಚರ್ಚಿಸಿದ್ದಾರೆ.[೩೦] ಎ.ಕರಿಬಸಪ್ಪರವರ 'ಬಳ್ಳಾರಿ ಜಿಲ್ಲೆಯ ಐತಿಹ್ಯಗಳು' ಮಹಾ ಪ್ರಬಂಧದಲ್ಲಿ, ಕಾಮಲಾಪುರದ ಐತಿಹ್ಯದ ಬಗ್ಗೆ ವಿವರವಾಗಿ ಸಾಹಿತ್ಯಿಕ ಹಾಗೂ ಜಾನಪದ ಹಿನ್ನಲೆಯಲ್ಲಿ ಸೆರೆಹಿಡಿಯಲಾಗಿದೆ.[೩೧] ಕೆ.ಶಿವಲೀಲಾರವರ 'ಕಮಲಾಪುರದ ಶಾಸನಗಳು ಮತ್ತು ಐತಿಹಾಸಿಕ ಹಿನ್ನಲೆಯಲ್ಲಿ ಅಧ್ಯಯನ ಮಾಡಲಾಗಿದೆ.[೩೨] ಕೆ.ಸತೀಶ್‌ರವರು 'ವಿಜಯನಗರ ಕಾಲದ ಶೈವ ದೇವಾಲಯಗಳು' ಮಹಾ ಪ್ರಬಂಧದಲ್ಲಿ ಈ ಗ್ರಾಮದ ಶೈವ ಧರ್ಮ, ವಿಜಯನಗರ ಕಾಲದಲ್ಲಿ ಶೈವ ಧರ್ಮದ ವಿಕಾಸ ಮತ್ತು ದೇವಾಲಯಗಳ ವಾಸ್ತು ವಿಚಾರಗಳನ್ನು ಅಧ್ಯಯನ ಮಾಡಲಾಗಿದೆ.[೩೩] ಜಗದೀಶ ಕುಮಾರ ರವರು 'ಬೇಡ ಬುಡಕಟ್ಟಿನ ಬೇಟೆ ಆಚರಣೆ: ಒಂದು ಸಮಾಜ ಶಾಸ್ತ್ರೀಯ ಅಧ್ಯಯನ' ಎಂ.ಫಿಲ್ ಕಿರು ಪ್ರಬಂಧದಲ್ಲಿ ಕಾಮಲಾಪುರದ ಬೇಡ ಸಮುದಾಯದ ಸಾಂಸ್ಕೃತಿಕ ವಿಚಾರಗಳನ್ನು ಕುರಿತು ಚರ್ಚಿಸಿದ್ದಾರೆ.[೩೪] ಸಿ.ಎಸ್.ಅಪರ್ಣಾರವರ 'ಸಂಗಮರ ದೇವಾಲಯಗಳು' ಡಿ.ಲಿಟ್ ಮಹಾ ನಿಬಂಧದಲ್ಲಿ ಕಾಮಲಾಪುರದ ಪ್ರಸನ್ನ ವಿರುಪಾಕ್ಷ ದೇವಾಲಯದ ವಾಸ್ತು ವೈಶಿಷ್ಟತೆಯ ಬಗ್ಗೆ ಚರ್ಚಿಸಿದ್ದಾರೆ.[೩೫] ಅಂಜನೇಯ ನವರು 'ಮ್ಯಾಸ ಬೇಡರ ಕನ್ನಡ ಸಮಾಜೋಭಾಷಿಕ ಅಧ್ಯಯನ' ಪಿ.ಎಚ್.ಡಿ ಮಹಾ ಪ್ರಬಂಧದಲ್ಲಿ ಕಾಮಲಾಪುರದ ಮ್ಯಾಸಬೇಡ ಸಮುದಾಯದ ಭಾಷೆಯನ್ನು ಪರಿಚಯಿಸಿದ್ದಾರೆ.[೩೬] ಆರ್.ಸುಮನರವರ 'ವಿಜಯನಗರದ ತುಳುವ ಅರಸರ ರಾಣಿಯರು: ಚಾರಿತ್ರಿಕ ಅಧ್ಯಯನ' ಎಂ.ಫಿಲ್ ಕಿರು ಪ್ರಬಂಧದಲ್ಲಿ, ಕಾಮಲಾಪುರದ ಕೆಲವೊಂದು ಸ್ಮಾರಕಗಳ ಹಿನ್ನಲೆಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

**ಅಧ್ಯಯನದ ಉದ್ದೇಶ**: ಈ ಮೇಲೆ ಹೇಳಲಾದ ಕೃತಿಗಳು, ಲೇಖನಗಳು ಮತ್ತು ಪ್ರಬಂಧಗಳು ಕಾಮಲಾಪುರ ಗ್ರಾಮದ ಕುರಿತು ಕೆಲವೊಂದು ದಾಖಲೆಗಳನ್ನು ನೀಡುತ್ತಾದರೂ ಇದೇ ಕಾಮಲಾಪುರ ಗ್ರಾಮಧ ಪೂರ್ಣ ಅಧ್ಯಯನವಾಗುವುದಿಲ್ಲ. ಹೆಚ್ಚಿನ ಕೃತಿಗಳು ಹಂಪಿಯ ಮೇಲಿನ ಕುರಿತಾದರೂ ಕಾಮಲಾಪುರದ ಕುರಿತು ಅಲ್ಲಲ್ಲಿ ಉಲ್ಲೇಖಗಳು ಮಾತ್ರ ಕಾಣಿಸಿಕೊಳ್ಳುತ್ತವೆ. ಆದರೆ [ಕಾಮಲಾಪುರ ಗ್ರಾಮವನ್ನು ಸೀಮಿತ ಮಾಡಿಕೊಂಡು] ಇಲ್ಲಿಯ ಕ್ಷೇತ್ರ ಕಾರ್ಯವನ್ನು ಮಾಡಿ ಈವರೆಗೆ ಇದಕ್ಕಾಗಿ ಸೀಮಿತವಾದ ಕೃತಿಗಳು ಈವರೆಗೆ ಹೊರಬಂದಿಲ್ಲ. ಈ ಹಿನ್ನಲೆಯಲ್ಲಿ [ಈ ಪ್ರದೇಶಕ್ಕೆ ಹೆಚ್ಚಿನ ಒತ್ತು

ಕೊಟ್ಟು ಕ್ಷೇತ್ರ ಕಾರ್ಯದ ಕುರುಹುಗಳ ಆಧಾರದಲ್ಲಿ ಕಮಲಾಪುರ ಗ್ರಾಮದ ಸಾಂಸ್ಕೃತಿಕ ಅಧ್ಯಯನವನ್ನು ವಸ್ತು ನಿಷ್ಠವಾಗಿ ಪುನರ್ ರಚಿಸುವುದೇ ಈ ಸಂಶೋಧನೆಯ ಮುಖ್ಯ ಉದ್ದೇಶವಾಗಿದೆ.

**ಆಕರ ಸಾಮಗ್ರಿಗಳು:** ಒಂದು ಗ್ರಾಮದ ಇತಿಹಾಸವನ್ನು ಪುನರ್ ರಚಿಸುವಾಗ ಇಲ್ಲಿರುವ ಪ್ರಾಚ್ಯಾವಶೇಷಗಳು ಮತ್ತು ಕೃತಿಗಳು ಪೂರಕ ಅಂಶಗಳಾಗುತ್ತವೆ. ಈ ಗ್ರಾಮದಲ್ಲಿ ಕಂಡು ಬಂದಿರುವ ಪುರಾತತ್ವ ಅವಶೇಷಗಳಾದ ಸ್ಮಾರಕಗಳು, ಮೂರ್ತಿ ಶಿಲ್ಪಗಳು, ಸ್ಮಾರಕಶಾಸನಗಳು, ನಾಣ್ಯಗಳು ಇಲ್ಲಿನ ಸಾಂಸ್ಕೃತಿಕ ಅಧ್ಯಯನಕ್ಕೆ ಪೂರಕ ಮಾಹಿತಿಗಳಾಗಿವೆ.

**ಸ್ಮಾರಕಗಳು:** ಸ್ಮಾರಕಗಳು ನಾಡಿನ ಅಮೂಲ್ಯ ಸಂಪತ್ತು. ಒಂದು ನಾಡಿನ ಸಾಂಸ್ಕೃತಿಕ ಪ್ರತಿ ಕೃತಿಗಳೆಂದರೆ ಸ್ಮಾರಕಗಳು. ಶಾಸನ ಮತ್ತು ಸಾಹಿತ್ಯಿಕ ಕೃತಿಗಳಿಂದ ತಿಳಿಯದೇ ಇರುವ ವಿಷಯವನ್ನು ಸ್ಮಾರಕಗಳ ಅಧ್ಯಯನದಿಂದ ತಿಳಿಯಬಹುದು. ಅಲ್ಲದೇ ಈ ಆಕರಗಳು ಸಂಸ್ಕೃತಿಯ ಮುಖ್ಯ ಘಟ್ಟಗಳನ್ನು ತಿಳಿಯಲು ಸಹಕಾರಿ. ಕಳೆದು ಹೋದ ಹಣವನ್ನು, ಭೂಮಿಯನ್ನು ಮರಳಿ ಪಡೆಯಬಹುದು. ಆದರೆ ನಮ್ಮ ಸಂಸ್ಕೃತಿ ನಾಶವಾದರೆ ಅದನ್ನು ಪುನಃ ಪಡೆಯುವುದು ಕಷ್ಟ ಸಾಧ್ಯ. ಈ ದೃಷ್ಠಿಯಲ್ಲಿ ನಮ್ಮ ಸಂಸ್ಕೃತಿಯನ್ನು ಪರಿಚಯಿಸುವ ಸ್ಮಾರಕಗಳು ಸಂಸ್ಕೃತಿಯ ಜ್ಞಾನ ನಿಧಿಯಾಗಿವೆ ಎಂದರೆ ತಪ್ಪಾಗದು. ಪ್ರಸ್ತುತ ಕಾಮಲಾಪುರ ಗ್ರಾಮದ ಸ್ಮಾರಕಗಳಿಗೆ ಸಂಬಂಧಿಸಿದಂತೆ ಎರಡು ವಿಧಗಳಿವೆ. ಧಾರ್ಮಿಕ ಸ್ಮಾರಕಗಳು ಮತ್ತು ಲೌಕಿಕ ಸ್ಮಾರಕಗಳು ವಿವಿಧ ಧರ್ಮಗಳಿಗೆ ಸಂಬಂಧಿಸಿದ ದೇವಾಲಯ, ಜಿನಾಲಯ, ಅರವಟ್ಟಿಗೆ, ಬಾವಿ, ಗಜಶಾಲೆ, ರಾಣಿಸ್ನಾನಗೃಹಗಳು ಲೌಕಿಕ ಸ್ಮಾರಕಗಳಾಗಿವೆ. ಇವು ಸಮಕಾಲೀನ ಧಾರ್ಮಿಕ, ಸಾಮಾಜಿಕ ಆರ್ಥಿಕ ವ್ಯವಸ್ಥೆ ಮತ್ತು ಸಂಸ್ಕೃತಿಯ ವಿವಿಧ ಮಜಲುಗಳನ್ನು ಪರಿಚಯಿಸುತ್ತವೆ. ಕಾಮಲಾಪುರ ಮತ್ತು ಸುತ್ತಲಿನ ಪರಿಸರದಲ್ಲಿ ಮೂಲ ಸ್ವರೂಪದಲ್ಲಿನ ದೇವಾಲಯಗಳು ಮತ್ತು ಜೀರ್ಣೋದ್ಧಾರವಾಗಿರುವ ದೇವಾಲಯಗಳಾಗಿವೆ. ಇವುಗಳನೆಲ್ಲ ಒಂದೆಡೆ ಸಂಗ್ರಹಿಸಿ ಈ ಆಕರಗಳ ಆಧಾರದಲ್ಲಿ ಸಾಂಸ್ಕೃತಿಕ ಅಧ್ಯಯನ ಕೈಗೊಳ್ಳಲಾಗಿದೆ. ಈ ಪ್ರದೇಶದಲ್ಲಿ ಆರು ಮಸೀದಿಗಳಿದ್ದು ಅವು ಮುಸ್ಲಿಂ ವಾಸ್ತು ರಚನೆಯ ಅಧ್ಯಯನಕ್ಕೆ ಪ್ರಮುಖ ಆಕರಗಳಾಗಿವೆ. ಇಲ್ಲಿನ ಕೋಟೆ ಮತ್ತು ನಾಲ್ಕು ಬಾವಿಗಳು ಲೌಕಿಕ ವಾಸ್ತು ರಚನೆಯ ಅಧ್ಯಯನಕ್ಕೆ ಪೂರಕ ಆಕರಗಳಾಗಿವೆ.

**ಮೂರ್ತಿಶಿಲ್ಪಗಳು:** ದೇವಾಲಯಗಳು ಇದ್ದ ಮೇಲೆ ಅಲ್ಲಿ ಮೂರ್ತಿಶಿಲ್ಪ ಇರಲೇಬೇಕು. ಗುಡಿಗಳಲ್ಲಿ ಮೂರ್ತಿ ಪೂಜೆ ಮಾಡಿಕೊಂಡು ಬಂದಾಗಲೇ ವಾಸ್ತುಶಿಲ್ಪ, ಶಿಲ್ಪಶಾಸ್ತ್ರ, ವಿಗ್ರಹ, ಪ್ರತಿಷ್ಠಾಪನಾವಿಧಿ, ಪೂಜಾವಿಧಿಗಳು, ಹುಟ್ಟಿಕೊಂಡವು. ಶಿಲ್ಪಗಳು ಸಮಕಾಲೀನ ಧಾರ್ಮಿಕ ಸ್ಥಿತಿ–ಗತಿಗಳು, ಆಚಾರ, ವಿಚಾರಗಳು, ಪ್ರತಿಮಾ ಲಕ್ಷಣಗಳು, ವಸ್ತ್ರಾಭರಣಗಳು, ಆಯುಧೋಪಕರಣಗಳು, ನಂಬಿಕೆ–ಸಂಪ್ರದಾಯಗಳು, ಶಿಲ್ಪಗಳ ಲಕ್ಷಣ ತಿಳಿಯಲು ಪ್ರಮುಖ ಆಕರಗಳಾಗಿವೆ. ಕಾಮಲಾಪುರ ಪ್ರದೇಶದ ಪರಿಸರದಲ್ಲಿ ವೈಷ್ಣವ ಪರಂಪರೆಯು ವಿಷ್ಣುವಿನ ಇಪ್ಪತ್ನಾಲ್ಕು ರೂಪಗಳ ಶಿಲ್ಪಗಳಲ್ಲಿ ಕೆಲವು ರೂಪದ ಶಿಲ್ಪಗಳು ಆತನ ವಾಹನ, ಮಾನವ ರೂಪಿ ಗರುಡನ ಶಿಲ್ಪಗಳು ಬಹುಸಂಖ್ಯೆಯಲ್ಲಿ ಕಂಡುಬಂದಿವೆ. ಶೈವ ಪರಂಪರೆಯ ವಿವಿಧ ಪ್ರಕಾರ ಬ್ರಹ್ಮಸೂತ್ರಗಳುಳ್ಳ ಶಿವಲಿಂಗಗಳು, ಶಿವನ ಬೇರೆ ಬೇರೆ ರೂಪದ ಶಿಲ್ಪಗಳು, ನಂದಿಶಿಲ್ಪ ಪರಿವಾರ ದೇವ–ದೇವತೆಯರ ಶಿಲ್ಪಗಳು, ಜೈನ ಪರಂಪರೆಯ ವರ್ತಮಾನ

ಕಾಲದ ಇಪ್ಪತ್ನಾಲ್ಕು ಜೈನ ತೀರ್ಥಂಕರಲ್ಲಿ, ಕೆಲವು ಶಿಲ್ಪಗಳು ಬಹಳ ವಿರಳವಾಗಿ ಬೆಳಕಿಗೆ ಬಂದಿವೆ. ಸೂರ್ಯ, ಗಾಣಪತ್ಯ, ಕಾರ್ತಿಕೇಯ ಶಾಕ್ತ ಪಂಥದ ಶಿಲ್ಪಗಳು, ಗ್ರಾಮದೇವತೆಯ ಕಾಷ್ಠ ಪ್ರತಿಮೆಗಳು, ಹನುಮಂತನ ಶಿಲ್ಪಗಳು ಪಂಚಮುಖಲಿಂಗಗಳು, ನಾಗ ಶಿಲ್ಪಗಳು ಇವು ಮೂರ್ತಿಶಿಲ್ಪ ಅಧ್ಯಯನಕ್ಕೆ ಪೂರಕ ಮಾಹಿತಿ ನೀಡುತ್ತವೆ. ಧಾರ್ಮಿಕ ಮತ್ತು ಸಾಮಾಜಿಕ ಆಚಾರ–ವಿಚಾರಗಳನ್ನು ಹಾಗೂ ಈ ಪ್ರದೇಶದ ಶಿಲ್ಪಕಲೆಯ ಬೆಳವಣಿಗೆ, ಪ್ರತಿಮಾ ಲಕ್ಷಣಗಳು ಮೂರ್ತಿಶಿಲ್ಪ ಅಧ್ಯಯನಕ್ಕೆ ಸಾಕ್ಷಿಗಳಾಗಿವೆ.

**ಸ್ಮಾರಕ ಶಾಸನಗಳು**: ಕರ್ನಾಟಕದಲ್ಲಿ ಸ್ಮಾರಕ ಶಾಸನಗಳ ಪಾತ್ರ ಅತಿ ಮಹತ್ವದ್ದು. ಸ್ಮಾರಕಗಲ್ಲುಗಳು ಅಧ್ಯಯನ ದೃಷ್ಟಿಯಿಂದ ವರ್ಗೀಕರಿಸುವಾಗ ಕಾಲದ ದೃಷ್ಟಿ, ಪ್ರಾದೇಶಿಕ ದೃಷ್ಟಿ, ವಸ್ತುದೃಷ್ಟಿ, ಧರ್ಮದೃಷ್ಟಿ ಮತ್ತು ವಿಷಯ ದೃಷ್ಟಿಯಿಂದ ವಿಂಗಡಣೆ ಮಾಡಿದರೆ ಮಾತ್ರ ಸಂಸ್ಕೃತಿಯ ಮಜಲುಗಳನ್ನು ತಿಳಿಯಲು ಸಾಧ್ಯ.[೬೦] ಸ್ಮಾರಕಗಲ್ಲುಗಳಲ್ಲಿ ಈ ಮಿತಿಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಬೇಕಾಗುತ್ತದೆ. ಮೂರ್ತಿಶಿಲ್ಪವನ್ನು ಅಧ್ಯಯನ ಮಾಡುವಾಗ ಇದಕ್ಕೊಂದು ಇತಿ–ಮಿತಿಗಳಿವೆ. ಇಲ್ಲಿ ಪುರಾಣ, ತತ್ವಗಳೇ ಪ್ರಧಾನವಾಗಿರುತ್ತದೆ. ಆದರೆ ಸ್ಮಾರಕಗಲ್ಲುಗಳಲ್ಲಿ ಜನರ ಆಚಾರ–ವಿಚಾರವೇ ಪ್ರಧಾನವಾಗಿರತ್ತದೆ. ಸಂಸ್ಕೃತಿಯ ಕಲೆಯ ಕಾರ್ಯದಲ್ಲಿ ಹಲವಾರು ಅರಸು ಮನೆತನಗಳು ಮುದ್ರೆಯನ್ನು ಒತ್ತಿದಂತೆ ಕಲಾವಂತಿಕೆಯ ಶ್ರೀಮಂತಿಕೆಯನ್ನು ಸ್ಮಾರಕಗಲ್ಲುಗಳ ಮೇಲೂ ಮೆರೆದಿರುವುದು ವಿಶೇಷತೆಯಾಗಿದೆ. ಸ್ಮಾರಕಗಲ್ಲುಗಳೆಂದರೆ 'ವೀರನ ಸ್ಮರಣೆಗೋಸ್ಕರವಾಗಿ, ಸ್ಮಾರಕವಾಗಿ ನಿಲ್ಲಿಸಿದ ಕಲ್ಲು' ಎಂದರ್ಥ. ಈ ಸ್ಮಾರಕಗಳು ವಿವಿಧ ಸಂದರ್ಭಗಳಿಗೆ ಅನುಗುಣವಾಗಿ, ವೈರಿಗಳೊಂದಿಗೆ ಹೋರಾಡಿ, ವೀರ ಮರಣವನ್ನಪ್ಪಿದ ವೀರರ ಪತಿಯ ಮರಣದ ತರುವಾಯ ಚಿತೆಯೇರುತ್ತಿದ್ದ ಪತ್ನಿಯರ ಮತ್ತು ತಮ್ಮ ಜೀವಮಾನದ ಕೊನೆಗಳಿಗೆಯಲ್ಲಿ ಸಲ್ಲೇಖನ ವ್ರತವನ್ನು ಸ್ವೀಕರಿಸಿ, ದೇಹತ್ಯಾಗ ಮಾಡುತ್ತಿದ್ದ ಮುನಿ, ಶ್ರಾವಕರ ಪರೋಕ್ಷ ವಿನಯಾರ್ಥವಾಗಿ ಕ್ರಮವಾಗಿ ನಿಷಧಿಗಲ್ಲುಗಳನ್ನು ನಿಲ್ಲಿಸಲಾಗುತ್ತಿತ್ತು. ಕಾಮಲಾಪುರದಲ್ಲಿ ಪ್ರಸ್ತುತ ೩೮ ವೀರಗಲ್ಲುಗಳು, ೨೭ ಮಹಾಸತಿಗಲ್ಲುಗಳು, ೧ ನಿಷಿಧಿಗಲ್ಲುಗಳು ಕಂಡುಬಂದಿವೆ. ಶೈವ, ವೈಷ್ಣವ, ಜೈನ, ಬೌದ್ಧ ಧರ್ಮಗಳ ದೇವಾಲಯಗಳಿಗೆ ಭೂಮಿಯನ್ನು ದಾನ ಮಾಡಿದ ಸಂದರ್ಭಗಳಲ್ಲಿ ಈ ಭೂಮಿಯ ಸೀಮಾ ಚಕ್ಕ ಬಂದಿಯನ್ನು ಸೂಚಿಸಲು ಸೀಮಾಗಲ್ಲುಗಳನ್ನು ನಿಲ್ಲಿಸಲಾಗುತ್ತಿತ್ತು. ಆಯಾ ಧರ್ಮದ ಧಾರ್ಮಿಕ ಆರ್ಥಿಕ ಮತ್ತು ಸಂಸ್ಕೃತಿಯ ವಿವಿಧ ಮುಖಗಳ ವಿಶ್ಲೇಷಣಾಧ್ಯಯನಕ್ಕೆ ಇವು ಆಕರ ಸಾಮಾಗ್ರಿಗಳಾಗಿವೆ.

**ನಾಣ್ಯಗಳು**: ಇವು ಸರ್ವ ವ್ಯಾಪ್ತಿ.[೬೧] ಸಮಾಜ ಸಂಕೀರ್ಣವಾದಂತೆ ವಸ್ತುವಿನ ಮೇಲೆ ಆದ ನ್ಯೂನ್ಯತೆ ಮತ್ತು ಇತಿ–ಮಿತಿಗಳಿಂದ ನಾಣ್ಯಗಳ ಉಗಮವಾಯಿತು. ನಾಣ್ಯಗಳು ಆರ್ಥಿಕ ಇತಿಹಾಸದ ಪುನರ್ ರಚನೆಯಲ್ಲಿ ಬಹು ಮುಖ್ಯ ಆಕರಗಳಾಗಿವೆ. ಅವು ವಿವಿಧ ಕಾಲಾವಧಿಗಳಲ್ಲಿ ಪ್ರಚಲಿತದಲ್ಲಿದ್ದ ವಿವಿಧ ಬಗೆಯ ಲೋಹಗಳು, ಸಮಕಾಲೀನ ಆರ್ಥಿಕ, ಧಾರ್ಮಿಕ, ಸಾಮಾಜಿಕ, ವ್ಯವಸ್ಥೆ ಮತ್ತು ಸಂಸ್ಕೃತಿಯನ್ನು ಪರಿಚಯಿಸುವುದು ಕೆಲವು ಅರಸು ಮನೆತನಗಳ ಮತ್ತು ಅರಸರ ಆಳ್ವಿಕೆಯ ಕಾಲಮಾನವನ್ನು ನಿರ್ದಿಷ್ಟವಾಗಿ ಗುರುತಿಸಲು ತುಂಬಾ ಉಪಯುಕ್ತವಾಗಿವೆ. ಪ್ರಸ್ತುತ ಕಾಮಲಾಪುರ ಪ್ರದೇಶದಲ್ಲಿ ವಿಜಯನಗರ ಮನೆತನದ ಸದಾಶಿವರಾಯನ ಕಾಲದ, ಶ್ರೀಕೃಷ್ಣ ದೇವರಾಯನ ಕಾಲದ

ನಾಣ್ಯಗಳು ಬೆಳಕಿಗೆ ಬಂದಿವೆ. ಕಾಮಲಾಪುರದ ಕೆಲವು ಶಾಸನಗಳಲ್ಲಿ ಕೆಲವೊಂದು ನಾಣ್ಯಗಳು ಉಲ್ಲೇಖಿತವಾಗಿವೆ. ಇವು ಇಲ್ಲಿನ ನಾಣ್ಯ ಶಾಸ್ತ್ರ ಅಧ್ಯಯನಕ್ಕೆ ಪೂರಕ ಆಕರಗಳಾಗಿವೆ.

**ಶಾಸನಗಳು:** ಪ್ರಾಚೀನ ಅರಸರು ಆಜ್ಞೆಯ ಮೂಲಕ ತಿಳಿಸುವ ಬರಹಗಳೇ ಶಾಸನಗಳಾಗಿವೆ. ಇತಿಹಾಸ ಪುನರ್ ರಚನೆಯಲ್ಲಿ ಶಾಸನಗಳ ಪಾತ್ರ ಅತಿ ಪ್ರಮುಖವಾದದ್ದು. ಅಂದಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಅಥವಾ ಸಾಂಸ್ಕೃತಿಕ ಅಧ್ಯಯನಕ್ಕೆ ಶಾಸನಗಳೇ ಪ್ರಮುಖ ಆಧಾರ. ಶಾಸನಗಳು ಸಾಂಸ್ಕೃತಿಕ ಮಜಲುಗಳನ್ನು ಪರಿಚಯಿಸುವ ವಸ್ತು ನಿಷ್ಠ ದಾಖಲೆಗಳಾಗಿವೆ. ಪ್ರಸ್ತುತ ಕಾಮಲಾಪುರ ಪರಿಸರದ ಪ್ರದೇಶದಲ್ಲಿ (ನೂರ ಮೂವತ್ತಾರು) ೧೩೬ ಶಾಸನಗಳು ಲಭ್ಯವಾಗಿವೆ. ಈ ಎಲ್ಲಾ ಶಾಸನಗಳು ಈ ಪ್ರದೇಶದ ರಾಜಕೀಯ, ಧಾರ್ಮಿಕ, ಆರ್ಥಿಕ, ಸಂಸ್ಕೃತಿ, ಕಲೆ, ಸಾಹಿತ್ಯ ಅಧ್ಯಯನಕ್ಕೆ ಉಪಯುಕ್ತವಾಗಿವೆ.

**ಸಾಹಿತ್ಯ ಕೃತಿಗಳು:** ಒಂದು ಜನಾಂಗದ ಅಭ್ಯುದಯವನ್ನು ಅರಿಯಲು ಉತ್ತಮವೂ, ಪರಿಣಾಮಕಾರಿಯೂ ಆದ ಮಾಧ್ಯಮ ವೆಂದರೆ ಅಂದಿನ ಸಾಹಿತ್ಯ. ಕಾವ್ಯಶಾಸ್ತ್ರ, ಕಥೆ, ಇವೆಲ್ಲವೂ ಸಾಹಿತ್ಯಿಕ ರೂಪಗಳೇ, ಇದರಲ್ಲೂ ವಿಶೇಷವಾಗಿ ವೇದಗಳು, ಬ್ರಹ್ಮೋಪನಿಷತ್‌ಗಳು, ವೇದಾಂಗ ಇವೆಲ್ಲವೂ ಪುರಾತನ ಕೃತಿಗಳಿಂದಲೂ ಅಪ್ರತ್ಯಕ್ಷವಾಗಿ ಪೂರಕ ಮಾಹಿತಿಯನ್ನು ನೀಡುತ್ತದೆ. ಶರಣ ಸಾಹಿತ್ಯ, ವಚನ ಸಾಹಿತ್ಯ, ವಿದೇಶಿ ಸಾಹಿತ್ಯಗಳೂ ಸಂಸ್ಕೃತಿಯ ಅಥವಾ ನೇರವಾಗಿ ಪುನರ್ ರಚನೆಯಲ್ಲಿ ಗಣನೀಯ ಪಾತ್ರ ವಹಿಸಿವೆ. ಪ್ರಾಚೀನ ಕೃತಿಗಳು ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ಸ್ಥಿತಿ–ಗತಿಗಳ ಸಂಸ್ಕೃತಿ ಮೊದಲಾದ ವಿವರಗಳನ್ನು ನೀಡುತ್ತವೆ. ಕಾಮಲಾಪುರ ಪರಿಸರದ ರಾಜಕೀಯ, ಧಾರ್ಮಿಕ, ಸಾಮಾಜಿಕ, ಆರ್ಥಿಕ ಮತ್ತು ಸಂಸ್ಕೃತಿಯನ್ನು ಚರ್ಚಿಸುವಾಗ ಪರೋಕ್ಷವಾಗಿ ಪ್ರೌಢದೇವರಾಯನ ಕಾವ್ಯ ಕಲ್ಯಾಣಕೀರ್ತಿ, ಜ್ಞಾನಭಂದ್ರಾಭ್ಯುದಯ, ಕನಕದಾಸನ ಮೋಹನ ತರಂಗಿಣಿ, ದೇವರಾಜನ ಸೊಬಗಿನ ಸೋನೆ, ನಂಜುಂಡನ ರಾಮನಾಥ ಚರಿತೆ, ಬೊಮ್ಮರಸನ ಸಮ್ಯುಕ್ತ ಕಾಮುದಿ, ವಿರುಪಾಕ್ಷ ಪಂಡಿತನ 'ಚೆನ್ನ ಬಸವ ಪುರಾಣ' ಶೃತಕೀರ್ತಿಯ 'ವಿಜಯಕುಮಾರ ಚರಿತ್ರೆ' ಬಾಹುಬಲಿ ಪಂಡಿತನ 'ಧರ್ಮಪುರಾಣ' ಅಭಯ ಸೂರಿಯ 'ಗೊಮ್ಮಟಸಾರದ ಕರ್ನಾಟಕ ವೃತಿ', ರತ್ನಾಕರ ವರ್ಣಿ 'ಭರತೇಶ ವೈಭವ' ವೃತ್ತೆ ವಿಲಾಸನ 'ಧರ್ಮ ಪರೀಕ್ಷೆ', ಇವೆಲ್ಲವುಗಳನ್ನು ಅಧ್ಯಯನದ ಅನುಕೂಲಕ್ಕೆ ತಕ್ಕಂತೆ ಬಳಸಲಾಗಿದೆ. ಈಗಾಗಲೇ ಪ್ರಕಟವಾಗಿರುವ ಕೃತಿ, ಲೇಖನ ಮತ್ತು ಪ್ರಬಂಧಗಳನ್ನು ಪೂರಕವಾಗಿ ಮಾಹಿತಿಗಾಗಿ ಇಲ್ಲಿನ ಸಾಂಸ್ಕೃತಿಕ ಅಧ್ಯಯನ ಕೈಗೊಳ್ಳಲು ಆಕರವಾಗಿ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ವ್ಯಾಪ್ತಿ:** ಪ್ರಸ್ತುತ ಸಂಶೋಧನ ಅಧ್ಯಯನದ ವ್ಯಾಪ್ತಿಯನ್ನು ಪೂರ್ವಾಭಿ ಮುಖವಾಗಿ, ಕನ್ನಡ ವಿಶ್ವವಿದ್ಯಾಲಯದ ಹಿಂಭಾಗದ ಪ್ರಾಗೈತಿಹಾಸಿಕ ಕಾಲದ ನೆಲೆಯಿಂದ ಪ್ರಾರಂಭಿಸಿ, ಪಶ್ಚಿಮಾಭಿಮುಖವಾಗಿ ಅಕ್ಕ ತಂಗಿಯ ಗುಂಡಿನ ವರೆಗೂ, ಉತ್ತರಾಭಿಮುಖವಾಗಿ ರಾಮನಗರದ ವರೆಗೂ, ದಕ್ಷಿಣಾಭಿಮುಖವಾಗಿ ಕಡ್ಡಿರಾಂಪುರದ ಅಡ್ಡ ರಸ್ತೆಯ ವೆರೆಗೂ ಸೀಮಿತವಾಗಿರಿಸಿದೆ– ಪ್ರಧಾನವಾಗಿ ಕಮಲಾಪುರ ಸುತ್ತ–ಮುತ್ತ ಪರಿಸರದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ಕಂಡು ಬಂದ ಪ್ರಾಗೈತಿಹಾಸಿಕ ಅವಶೇಷಗಳ ನೆಲೆ, ದೇವಾಲಯ, ಶಿಲ್ಪ, ಸ್ಮಾರಕಗಲ್ಲು, ಶಾಸನ,

ನಾಣ್ಯ, ಲೌಕಿಕ ವಾಸ್ತು ರಚನೆ ಮೊದಲಾದ ಪುರಾತತ್ವ ಅವಶೇಷಗಳ ಆಧಾರದಲ್ಲಿ ಇಲ್ಲಿನ ಸಾಂಸ್ಕೃತಿಕ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡು ಬಂದ ಪ್ರತಿಯೊಂದು ಪ್ರಾಚೀನ ದೇವಾಲಯದ ವಾಸ್ತು ರಚನೆಯನ್ನು ಅಧ್ಯಯನ ಮಾಡಿ, ಶೈಲಿಗಳನ್ನು ಗುರುತಿಸಿ ಅವುಗಳ ಗುಣ ಲಕ್ಷಣಗಳನ್ನು ಕಂಡುಕೊಳ್ಳಲಾಗಿದೆ. ಅವುಗಳ ವಾಸ್ತು ವಿವರಣೆಗಳನ್ನು ಚರ್ಚಿಸುವಾಗ ಮೊದಲ ತಿರ್ಯಙ್ಮುಖ ವಾಸ್ತು ರಚನೆಯನ್ನು (ಗರ್ಭಗೃಹದಿಂದ ಮುಖ ಮಂಟಪದ ವರೆಗಿನ ಒಳಭಾಗ) ನಂತರ ಊರ್ಧ್ವ ಮುಖ ವಾಸ್ತು ರಚನೆಯನ್ನು (ಅಧಿಷ್ಠಾನ ದಿಂದ ಕಳಸದವರೆಗಿನ ಹೊರಭಾಗ) ಪರಿಶೀಲಿಸಿ ಅವುಗಳಲ್ಲಿರುವ ವಿವಿಧ ಉಪಾಂಗಗಳ ವಾಸ್ತು ಲಕ್ಷಣಗಳನ್ನು ಗುರುತಿಸಲಾಗಿದೆ. ದೇವಾಲಯಗಳಲ್ಲಿ ಮತ್ತು ಅವುಗಳ ಪರಿಸರದಲ್ಲಿ ಕಂಡು ಬಂದ ಶಿಲ್ಪಗಳನ್ನು ಮಾಧ್ಯಮ ಶೈಲಿ, ಕಾಲಮಾನ ಮತ್ತು ಪ್ರತಿಮಾ ಲಕ್ಷಣಗಳ ಹಿನ್ನಲೆಯಲ್ಲಿ ಗಮನಿಸಿ ವಿಶ್ಲೇಷಿಸಲಾಗಿದೆ.

ಸ್ಮಾರಕ ಶಿಲೆಗಳ ಬಗ್ಗೆ ಚರ್ಚಿಸುವಾಗ ಅವುಗಳ ಮೇಲೆ ಕೊರೆದ ಶಾಸನ ಮತ್ತು ಉಬ್ಬು ಶಿಲ್ಪಗಳನ್ನು ಗಣನೆಗೆ ತೆಗೆದುಕೊಂಡು ವಿಷಯ ನಿರೂಪಣೆಗಾಗಿ ಅವುಗಳ ಉಪಯುಕ್ತತೆಯನ್ನು ವಿಂಗಡಿಸಿ ಪರಿಶೀಲಿಸಲಾಗಿದೆ. ಸಂಶೋಧನಾ ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ದೊರೆತ ಮತ್ತು ಸ್ಥಳೀಯ ಶಾಸನೋಕ್ತ ವಿವಿಧ ಪ್ರಕಾರದ ನಾಣ್ಯಗಳ ಕುರಿತು ಮಾಹಿತಿ ಸಂಗ್ರಹಿಸಲಾಗಿದೆ. ಹೀಗೆ ಮೂಲ ಮತ್ತು ಪೂರಕ ಆಕರಗಳಾದ ಸಾಹಿತ್ಯ, ಶಾಸನ, ದೇವಾಲಯ, ಶಿಲ್ಪ, ಸ್ಮಾರಕಗಲ್ಲು, ನಾಣ್ಯ ಮೊದಲಾದ ಕುರುಹುಗಳು ಒದಗಿಸುವ ವಿವರಗಳನ್ನೆಲ್ಲ ಪ್ರತ್ಯೇಕವಾದ ಪಟ್ಟಿಕೆಗಳಲ್ಲಿ ಸಂಗ್ರಹಿಸಿ, ವಿಷಯಕ್ಕನುಗುಣವಾಗಿ ಹೊಂದಿಸಿಕೊಂಡು ಪ್ರಸ್ತುತ ಸಂಶೋಧನ ಸಂಪ್ರಬಂಧವನ್ನು ವ್ಯವಸ್ಥಿತ ರೀತಿಯಲ್ಲಿ ಅಧ್ಯಯನ ಮಾಡುವುದೇ ಇಲ್ಲಿ ಗಮನಿಸಬೇಕಾದ ಅಂಶ.

**ಅಧ್ಯಯನದ ವಿಧಾನ:** ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಮತ್ತು ವಿಷಯ ವಿಶ್ಲೇಷಣೆಯಲ್ಲಿ ವಿಧಿ-ವಿಧಾನಗಳನ್ನು ಅನುಸರಿಸಲಾಗಿದೆ. ಪ್ರಾರಂಭದಲ್ಲಿ ಕಾಮಲಾಪುರ ಪ್ರದೇಶದ ಇತಿಹಾಸ, ಸಂಸ್ಕೃತಿ, ಶಾಸನ, ದೇವಾಲಯ, ಮೂರ್ತಿಶಿಲ್ಪ, ಸ್ಮಾರಕ ಶಿಲೆ, ಜಾನಪದ, ವಸ್ತು ಸಂಗ್ರಹಾಲಯದ ವಸ್ತುಗಳನ್ನು ಪ್ರಮುಖ ಆಕರವಾಗಿ ಬಳಸಿಕೊಳ್ಳಲಾಗಿದೆ. ಈಗಾಗಲೇ ಪ್ರಕಟವಾಗಿರುವ ಕೃತಿ, ಲೇಖನ ಮತ್ತು ಪ್ರಬಂಧಗಳನ್ನು ಪರಿಶೀಲಿಸಿ ಅದರೊಟ್ಟಿಗೆ ಅಕಾರಾದಿಯಲ್ಲಿ ಆಕರ ಕೃತಿಗಳ ಪಟ್ಟಿಯನ್ನು ತಯಾರಿಸಿಕೊಳ್ಳಲಾಯಿತು. ತರುವಾಯ ಈ ಗ್ರಾಮದ ಕ್ಷೇತ್ರ ಕಾರ್ಯವನ್ನು ಕೈಗೊಂಡು ಪ್ರಾಚೀನ ಪ್ರಾಗೈತಿಹಾಸಿಕ ನೆಲೆ, ದೇವಾಲಯ, ಜಿನಾಲಯ, ಮಸೀದಿ, ಶಿಲ್ಪ, ಸ್ಮಾರಕಗಲ್ಲುಗಳು, ನಾಣ್ಯ, ಕೋಟೆ, ಕೊತ್ತಲ, ಬಾವಿ, ಕೆರೆಗಳು, ಕಾವಲುಗಾರು ಗೋಪುರ, ಮಹಾದ್ವಾರಗಳು, ಮೊದಲಾದ ಪುರಾತತ್ವ ಅವಶೇಷಗಳ ಸಂಪೂರ್ಣವಾದ ವಿವರ ದಾಖಲಾತಿಯೊಂದಿಗೆ ಮತ್ತು ಛಾಯಾಚಿತ್ರಗಳನ್ನು ಪ್ರಸ್ತುತ ಅಳವಡಿಸಿಕೊಳ್ಳಲಾಗಿದೆ.

**ಪ್ರಾಕೃತಿಕ ಹಿನ್ನಲೆ:** ಪ್ರತಿಯೊಂದು ಪ್ರದೇಶದ ಜನಜೀವನ ಮತ್ತು ಇತಿಹಾಸ ಅಲ್ಲಿನ ಭೌಗೋಳಿಕ ಪರಿಸರ ಮತ್ತು ನೈಸರ್ಗಿಕ ಸಂಪತ್ತಿನ ಹಿನ್ನಲೆಯಿಂದ ಹೆಚ್ಚು ಪ್ರಭಾವಿತವಾಗಿರುತ್ತದೆ. ಪ್ರಾಚೀನ ಕಾಲದಲ್ಲಿ ಜನ ಜೀವನವನ್ನು ನಿರ್ಧರಿಸುವ ಪ್ರಮುಖ ಸಾಧನ ಭೌಗೋಳಿಕ ಸನ್ನಿವೇಶ.[೬] ನೆಲದ ಗುಣ ಅಲ್ಲಿ ದೊರೆಯುವ ಖನಿಜ ಸಂಪತ್ತು, ನದಿ, ಪರ್ವತಗಳು, ಕೆರೆಗಳು, ಬಾವಿ, ಮರಳುಗಾಡು,

ತೀರ ಪ್ರದೇಶ ಮೊದಲಾದ ಸಂಪನ್ಮೂಲಗಳು ಅಲ್ಲಿನ ನಿವಾಸಿಗಳ ಕಸಬು, ಉಡುಗೆ-ತೊಡುಗೆ, ಧಾರ್ಮಿಕ ಸ್ವಭಾವ ಮತ್ತು ಆಚಾರ-ವಿಚಾರಗಳನ್ನು ರೂಪಗೊಳಿಸುವಲ್ಲಿ ಮಹತ್ತರ ಪಾತ್ರವನ್ನು ವಹಿಸಿದೆ. ಭೌಗೋಳಿಕ ವೈಶಿಷ್ಟ್ಯಗಳನ್ನು ಹಿನ್ನಲೆಯಾಗಿ ಹೇಳದಿದ್ದಲ್ಲಿ ಒಂದು ಪ್ರಧಾನ ನೆಲೆಯನ್ನು ಉಪೇಕ್ಷಿಸಿದಂತಾಗುತ್ತದೆ. ಪ್ರಸ್ತುತ ಕಾಮಲಾಪುರ ಗ್ರಾಮ ೨೯.೯೦ ಚ.ಕಿ.ಮೀ ಗಳಷ್ಟು ವಿಸ್ತಾರವನ್ನು ಒಳಗೊಂಡಿದೆ.[೬೮] ಕಾಮಲಾಪುರ ತನ್ನ ಸುತ್ತ ಮುತ್ತಲು ಹೆಚ್ಚಿನ ಬೆಟ್ಟ-ಗುಡ್ಡಗಳಿಂದ ಆವೃತವಾಗಿದ್ದು, ಅಲ್ಲಿನ ನೈಸರ್ಗಿಕ ಸೌಂದರ್ಯಕ್ಕೆ ಕಳಸ ಪ್ರಾಯದಂತೆ ಮೆರಗು ನೀಡುತ್ತಿರುವುದು ಇಲ್ಲಿನ ಪ್ರಾಮುಖ್ಯತೆಗಳಲ್ಲಿ ಒಂದು. ಕಾಮಲಾಪುರ ಗ್ರಾಮ ಹಂಪೆಯ ಅಧೀನದಲ್ಲಿರುವ ಕ್ಷೇತ್ರವೇ ಆಗಿರುವುದರಿಂದ ಈ ಪ್ರದೇಶದ ಸುತ್ತ-ಮುತ್ತ, ಬೆಟ್ಟ-ಗುಡ್ಡಗಳ ಪ್ರಭಾವ ಸಾಕಷ್ಟು ಬೀರಿವೆ. ಮಾಲ್ಯವಂತ, ಋಷಿಮೂಕ, ಕಿಷ್ಕಿಂದೆ, ಅಂಜನಾದ್ರಿ, ಮಾತಂಗ ಪರ್ವತ, ಜಂಭುನಾಥಬೆಟ್ಟ, ಹಂಪೆ ನದಿ ಎಡಬದಿಯಲ್ಲಿ ರಾಮನ ಮಲೈ, ಕುಮಾರಸ್ವಾಮಿ, ರಾಮಾಯಣ, ಮಹಾಭಾರತದ ಕುರುಹುಗಳು ಇಲ್ಲಿನ ಐತಿಹಾಸಿಕ ಹೆಜ್ಜೆಗಳಿಗೆ ಮೆರಗು ನೀಡಿವೆ. ಕಾಮಲಾಪುರ ಪ್ರದೇಶದಲ್ಲಿ ವಿಜಯನಗರ ಕಾಲದ ಪೂರ್ವದಲ್ಲಿ ಕಬ್ಬಿಣ ತಯಾರಿಸುವ ಕುಲುಮೆ ಇತ್ತು ಎಂಬುದಕ್ಕೆ ಸಾಕ್ಷಿಯಾಗಿ ಕನ್ನಡ ವಿಶ್ವವಿದ್ಯಾಲಯದ ಸಮೀಪ ಕೆಲವು ಕುರುಹುಗಳು ದೊರೆತಿವೆ. ಬೂದಿ ಬಣ್ಣದ ನಸುಗೆಂಪು ಮತ್ತು ಬೆಣಚುಕಲ್ಲು, ಕಣ ಶಿಲೆಗಳನ್ನು ಇಲ್ಲಿ ಕಾಣಬಹುದಾಗಿದೆ. ಶಾಸನೋಕ್ತ ಕೆಲವು ಬಾವಿಗಳು, ರಂಗನಬಾವಿ, ಲಿಂಗನಬಾವಿ, ಕೊಂಡಮ್ಮನ ಬಾವಿ, ವಿಜಯನಗರ ಪುಷ್ಕರಣಿ, ಅಹಮ್ಮದ್ ಖಾನನ ಬಾವಿ ಹೀಗೆ ಈ ಬಾವಿಗಳು ಇಲ್ಲಿನ ಪರಿಸರದಲ್ಲಿ ಲಭ್ಯವಾಗಿವೆ.

**ಅಧ್ಯಯನ ಸ್ವರೂಪ**: ಅಧ್ಯಯನದ ವಿಧಾನದಲ್ಲಿ ಗಮನಿಸಿದಂತೆ ವಿಷಯಗಳ ಆಧಾರದಲ್ಲಿ ಪ್ರಸ್ತುತ ಸಂಶೋಧನೆಯನ್ನು ಏಳು ಅಧ್ಯಾಯನಗಳಲ್ಲಿ ವಿಂಗಡಿಸಲಾಗಿದೆ. ಮೊದಲನೆಯ ಅಧ್ಯಾಯ 'ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ'ವನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಅಧ್ಯಯನದ ಅವಶ್ಯಕತೆ, ಉದ್ದೇಶ, ವ್ಯಾಪ್ತಿ ಮತ್ತು ವಿಧಾನ ಪೂರ್ವಾಧ್ಯಯನಗಳ ಸಮೀಕ್ಷೆ, ಪೂರಕ ಆಕರ ಸಾಮಗ್ರಿ ಯಾವ ರೀತಿಯಲ್ಲಿ ಉಪಯುಕ್ತವಾಗಿದೆ ಎಂಬುದನ್ನು ಚರ್ಚಿಸಲಾಗಿದೆ.

ಎರಡನೇ ಅಧ್ಯಾಯ 'ಐತಿಹಾಸಿಕ ಹಿನ್ನಲೆ'ಯಲ್ಲಿ, ಸ್ಥಳೀಯ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಕಾಮಲಾಪುರ ಪದನಿಷ್ಪತ್ತಿ, ಕಾಮಲಾಪುರ ಪ್ರದೇಶದ ಸುತ್ತ-ಮುತ್ತಲಿನ ರಾಜಕೀಯ ಚರಿತ್ರೆ, ಸಾಮಾಜಿಕ ಸ್ಥಿತಿಗತಿಗಳು, ಸಮಾಜ, ವರ್ಣಾಶ್ರಮ, ಧರ್ಮ-ಜಾತಿ ಸ್ತ್ರೀಯರ ಸ್ಥಾನಮಾನ, ದೇವದಾಸಿ ಪದ್ಧತಿ, ಶಿಕ್ಷಣ ಪದ್ದತಿ, ಸಾಮಾಜಿಕ ಕಾರ್ಯಗಳು, ಉದ್ಯಾನವನಗಳು, ಅರವಟ್ಟಿಗೆ, ಛತ್ರಗಳು, ಆರ್ಥಿಕ ಸ್ಥಿತಿ-ಗತಿಗಳಲ್ಲಿ ಬೆಳೆ-ನೀರಾವರಿ ಕೆರೆಕಟ್ಟೆಗಳು ಬಾವಿಗಳು, ತೆರಿಗೆ ವ್ಯವಸ್ಥೆ, ನಾಣ್ಯ ಪದ್ಧತಿ, ತೂಕ ಮತ್ತು ಅಳತೆ ಪದ್ದತಿ, ಆಡಳಿತ ವ್ಯವಸ್ಥೆ, ರಾಜ್ಯದ ಆಡಳಿತ-ರಾಜರು ಮಂತ್ರಿಗಳು ಮತ್ತು ಇತರ ಅಧಿಕಾರಿಗಳು, ಸಾಮಂತ ಅರಸರುಗಳ ಪಾತ್ರವನ್ನು ಈ ಅಧ್ಯಾಯದಲ್ಲಿ ಅಳವಡಿಸಲಾಗಿದೆ.

ಮೂರನೇ ಅಧ್ಯಾಯ 'ವಾಸ್ತುಕಲೆ' ಅಧ್ಯಾಯದಲ್ಲಿ ಹಿನ್ನಲೆಯಾಗಿ ಕನ್ನಡ ನಾಡಿನ ದೇವಾಲಯಗಳ ನಿರ್ಮಾಣದ ಪ್ರಾರಂಭ, ಬೆಳವಣಿಗೆ, ಪ್ರಭೇದಗಳು, ವಾಸ್ತುಕಲೆಯಲ್ಲಿ ಸೈನಿಕ ವಾಸ್ತುಕಲೆ ಮತ್ತು

ಲೌಕಿಕ ವಾಸ್ತುಕಲೆ ಎಂಬ ಎರಡು ಪ್ರಭೇದಗಳನ್ನು ವಿಂಗಡಿಸಲಾಗಿದೆ ವಿವಿಧ ಧರ್ಮಗಳಿಗೆ ಸಂಬಂಧಿಸಿದಂತೆ ಇರುವ ದೇವಾಲಯಗಳು ಲೌಕಿಕ ವಾಸ್ತು ಕಲೆ ಎನಿಸಿದರೆ, ಕೋಟೆ-ಕೊತ್ತಲ, ಮಹಾದ್ವಾರ, ಮಸೀದೆಗಳು ಸೈನಿಕ ವಾಸ್ತು ಕಲೆಯಾಗಿವೆ. ಇವುಗಳ ವಾಸ್ತು ವಿವರಣೆ ಈ ಅಧ್ಯಾಯದಲ್ಲಿದೆ.

ನಾಲ್ಕನೇ ಅಧ್ಯಾಯ 'ಮೂರ್ತಿಶಿಲ್ಪ' ಅಧ್ಯಯನದ ಹಿನ್ನಲೆಯಾಗಿ ಭಾರತೀಯ ಮತ್ತು ಕನ್ನಡ ನಾಡಿನ ಸಂದರ್ಭಗಳಲ್ಲಿ ಶಿಲ್ಪಗಳ ಉಗಮ ಮತ್ತು ವಿಕಾಸದ ಪರಿಚಯದೊಂದಿಗೆ ಕಾಮಲಾಪುರ ಪ್ರದೇಶದಲ್ಲಿ ಕಂಡು ಬರುವ ವೈಷ್ಣವ, ಶೈವ, ಜೈನ, ಧರ್ಮಗಳ ಮತ್ತು ಸೌರ, ಗಾಣಪತ್ಯ ಶಾಕ್ತ ಮೊದಲಾದ ಪಂಥಗಳ ಶಿಲ್ಪಗಳ ಪ್ರತಿಮಾ ಲಕ್ಷಣಗಳು, ಕಾಷ್ಠ-ಲೋಹ ಶಿಲ್ಪಗಳು, ಸ್ಮಾರಕ ಶಿಲೆಗಳು, ವೀರಗಲ್ಲು, ಮಹಾಸತಿಗಲ್ಲು, ನಿಷಧಿಗಲ್ಲು, ಲಿಂಗ ಮುದ್ರೆಗಲ್ಲು, ವಾಮನ ಮುದ್ರೆಗಲ್ಲು, ವಾಮನ ಮುದ್ರೆಕಲ್ಲು, ಮುಕ್ಕೊಡೆಗಲ್ಲು, ಹೀಗೆ ವಿವಿಧ ಸ್ಮಾರಕಗಲ್ಲುಗಳ ವೈಶಿಷ್ಟ್ಯತೆಯನ್ನು ಹೇಳಲಾಗಿದೆ.

ಐದನೇ ಅಧ್ಯಾಯ 'ಜಾನಪದ ವೈಶಿಷ್ಟ್ಯತೆ' ಅಧ್ಯಯನಕ್ಕೆ ಹಿನ್ನಲೆಯಾಗಿ ಜಾನಪದ-ಜನಪದ ಆಚರಣೆಯ ಜಾನಪದ ಆಟ, ಹಬ್ಬಗಳು, ಜಾನಪದ ಕಲೆ, ಜಾತ್ರೆ ಉತ್ಸವಗಳು, ಗ್ರಾಮದೇವತೆ ಅದರ ವೈಶಿಷ್ಠತೆ ಯಾವ ರೀತಿಯಲ್ಲಿ ಪ್ರಭಾವ ಬೀರಿದೆ ಎಂಬುದನ್ನು ಚರ್ಚಿಸಲಾಗಿದೆ.

ಆರನೇ ಅಧ್ಯಾಯ 'ವಸ್ತು ಸಂಗ್ರಹಾಲಯಗಳು' ಅಧ್ಯಯನಕ್ಕೆ ಹಿನ್ನಲೆಯಾಗಿ ಅವುಗಳ ಮಹತ್ವ-ಶೈಕ್ಷಣಿಕ ಕೇಂದ್ರವಾಗಿ ಅವುಗಳ ಪಾತ್ರವನ್ನು ಹೇಳಲಾಗಿದೆ. ಭಾರತೀಯ ಪುರಾತತ್ವ ವಸ್ತು ಸಂಗ್ರಹಾಲಯ, ರಾಜ್ಯ ಪುರಾತತ್ವ ಇಲಾಖೆಯ ವಸ್ತು ಸಂಗ್ರಹಾಲಯಗಳು, ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯಗಳಲ್ಲಿರುವ ಮೂರ್ತಿಶಿಲ್ಪಗಳು ಮತ್ತು ಸ್ಮಾರಕ ಶಿಲ್ಪಗಳು ಯಾವ ರೀತಿಯಲ್ಲಿ ಪ್ರಭಾವ ಬೀರಿವೆ ಎಂಬುವುದನ್ನು ತಿಳಿಯಪಡಿಸಿವೆ.

ಏಳನೇ ಅಧ್ಯಾಯ 'ಸಮಾರೋಪ' ಒಟ್ಟಾರೆ ಆರು ಅಧ್ಯಾಯಗಳಲ್ಲಿ ಕಂಡು ಬಂದ ಮಹತ್ವದ ಅಂಶಗಳನ್ನು ಈ ಸಾಂಸ್ಕೃತಿಕ ಅಧ್ಯಯನಕ್ಕೆ ಹೇಗೆ ಪೂರಕವಾಗಿವೆ ಎಂಬುದನ್ನು ಸ್ಪಷ್ಟೀಕರಿಸಲಾಗಿದೆ.

ಪ್ರಬಂಧದ ಕೊನೆಯಲ್ಲಿ ಅನುಬಂಧವಿದೆ. ಅನುಬಂಧದಲ್ಲಿ ಹೊಸಪೇಟೆ ತಾಲೂಕು ನಕಾಶೆ, ಕಾಮಲಾಪುರ ಸುತ್ತ ಮುತ್ತಲಿನ ಸ್ಮಾರಕಗಳ ನಕಾಶೆ, ಕಾಮಲಾಪುರ ಹೆಸರು ತಿಳಿಸುವ ಶಾಸನ ಪಟ್ಟಿ, ಶಾಸನೋಕ್ತ ದೇವಾಲಯಗಳ ಪಟ್ಟಿ, ಗ್ರಂಥಸೂಚಿ, ರೇಖಾ ಚಿತ್ರಗಳು, ಛಾಯಾಚಿತ್ರಗಳು, ವಿಜಯನಗರ ಕಾಲದ ಆಯುಧಗಳು, ಆಭರಣಗಳು ಮತ್ತು ಮಹತ್ವದ ಛಾಯಾಚಿತ್ರಗಳನ್ನು ಅಳವಡಿಸಲಾಗಿದೆ.



**ಅಡಿಟಿಪ್ಪಣಿ**

೧. ದೀಕ್ಷೀತ್ ಜಿ.ಎಸ್. ಮತ್ತು ಜೋಷಿ.ಟಿ.ಟಿ. "ಜಗತ್ತಿನ ಇತಿಹಾಸ" ೧೯೭೨, ಪು-೧

೨. ದೇವಕುಂಜರಿ, "ಹಂಪೆ" ೧೯೭೦, ದೆಹಲಿ

೩. ಬಸವರಾಜ್ ಮಲಶೆಟ್ಟಿ "ಹಂಪೆ ಒಂದು ಪರಿಚಯ" ೧೯೮೧, ಶ್ರೀ ಜಗದ್ಗುರ ಕೊಟ್ಟೂರು ಸ್ವಾಮಿ ಮಠ, ಹಂಪೆ

೪. ಶೇಷಶಾಸ್ತ್ರೀ.ಆರ್. "ಕರ್ನಾಟಕದ ವೀರಗಲ್ಲುಗಳು" ೧೯೮೨, ಬೆಂಗಳೂರು
೫. ವಸುಂಧರ ಫಿಲಿಯೋಜ್ "ಅಳಿದುಳಿದ ಹಂಪೆ" ೧೯೮೨, ಬೆಂಗಳೂರು
೬. ಶ್ರೀಕಂಠಯ್ಯ.ಕೆ. "ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಜನಜೀವನ ಚರಿತ್ರೆ" ೧೯೮೩, ಮೈಸೂರು
೭. ರಾಜಶೇಖರ.ಎಸ್. "ಮಾಸ್ಟರ್ ಪೀಸಸ್ ಆಫ್ ವಿಜಯನಗರ ಆರ್ಟ್" ೧೯೮೩ ಬಾಂಬೆ
೮. ಚಿದಾನಂದ ಮೂರ್ತಿ.ಎಮ್. "ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು" ೧೯೮೪, ಬೆಂಗಳೂರು
೯. ಡಾಮಿಕ್ ಡೇವಿಜನ್ ಜೆನ್‌ಕಿನ್ "ದಿ ಇರಿಗೇಶನ್ ಸಿಸ್ಟಮ್ ಆಂಡ್ ವಾಟರ್ ಸಪ್ಲೈಯ್ ಸಿಸ್ಟಮ್ ಆಫ್ ದಿ ಸಿಟಿ ಆಫ್ ವಿಜಯನಗರ" ವಾಲ್ಯೆಮ್-II, ೧೯೮೮, ಲಂಡನ್
೧೦. ಸಂ.ಶ್ರೀ.ಭೂಸನೂರ್ ಮಠ "ವಿಜಯಕಲ್ಯಾಣ" ೧೯೮೮, ಹಂಪೆ
೧೧. ಚೆನ್ನಕ್ಕ ಎಲಿಗಾರ "ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ" ೧೯೯೦, ಧಾರವಾಡ
೧೨. ದೀಕ್ಷಿತ್.ಜಿ.ಎಸ್. "ಸಂಗಮರ ಕಾಲದ ವಿಜಯನಗರ" ೧೯೯೧, ಬೆಂಗಳೂರು
೧೩. ಸದಾನಂದ ಕನವಳ್ಳಿ "ಮರೆತುಹೋದ ಮಹಾಸಮ್ರಾಜ್ಯ" ೧೯೯೨, ಹಂಪೆ
೧೪. ಕಲಬುರ್ಗಿ.ಎಮ್.ಎಮ್. "ಕರ್ನಾಟಕದ ಕೈಫಿಯತ್ತುಗಳು" ೧೯೯೪, ಹಂಪೆ
೧೫. ಚನ್ನಬಸ್ಸಪ್ಪ ಪಾಟೀಲ್ ಮತ್ತು ವಿನೋದ್ ಪಾಟೀಲ್ "ವಿಜಯನಗರದ ಶಾಸನಗಳು" ಸಂ.೩. ೧೯೯೬, ಮೈಸೂರು
೧೬. ಪುರುಷೋತ್ತಮ ಬಿಳಿಮಲೆ "ಹಂಪಿ ಜಾನಪದ" ೧೯೯೬, ಹಂಪೆ
೧೭. ಕೊಟ್ರಯ್ಯ.ಸಿ.ಟಿ.ಎಮ್. "ಹಂಪೆ" ೧೯೯೭, ಹೊಸಪೇಟೆ
೧೮. ಸೋಮಶೇಖರ.ಎಸ್.ವೈ "ಹಂಪೆಯ ಬಜಾರುಗಳು" ೧೯೯೭, ಹಂಪೆ
೧೯. ಪರಮಶಿವಮೂರ್ತಿ.ಡಿ.ವಿ. "ಕರ್ನಾಟಕ ಶಾಸನ ಶಿಲ್ಪ" ೧೯೯೯, ಕ.ವಿ.ವಿ. ಹಂಪೆ
೨೦. ಸುರೇಶ್.ಕೆ.ಎಮ್ ಮತ್ತು ಇತರರು "ಕರ್ನಾಟಕ್ ದೇವಾಲಯ ಕೋಶ" ೧೯೯೯, ಹಂಪೆ
೨೧. ಚಲುವರಾಜು "ಹಂಪಿಯ ಸ್ಮಾರಕಗಳಲ್ಲಿ ಜಾನಪದಿಯ ಅಧ್ಯಯನ" ೨೦೦೦, ಹಂಪೆ
೨೨. ಕೊಟ್ರಯ್ಯ.ಸಿ.ಟಿ.ಎಮ್. "ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ" ೨೦೦೧, ಹಂಪೆ
೨೩. ವಾಸುದೇವನ್.ಸಿ.ಎಸ್. "ಹಂಪಿ ಪರಿಸರದ ಕೆರೆಗಳು" ೨೦೦೧, ಹಂಪೆ
೨೪. ಬರಗೂರು ರಾಮಚಂದ್ರಪ್ಪ "ಕರ್ನಾಟಕ ಸಂಗಾತಿ" ೨೦೦೨, ಬೆಂಗಳೂರು
೨೫. ಮಹಾದೇವ್.ಸಿ. ಮತ್ತು ಇತರರು "ಹೊಸಪೇಟೆ ತಾಲೂಕು ದರ್ಶನ" ೨೦೦೨, ಹಂಪೆ
೨೬. ನರಸಿಂಹ ಮೂರ್ತಿ.ಎ.ವಿ. "ಕರ್ನಾಟಕ ನಾಟ್ಯ ಪರಂಪರೆ" ೨೦೦೩, ಬೆಂಗಳೂರು
೨೭. ವಿವೇಕರೈ.ಬಿ.ಎ. "ಪ್ರವಾಸಿ ಕಂಡ ಇಂಡಿಯಾ" ೨೦೦೫, ಕ.ವಿ.ವಿ. ಹಂಪೆ
೨೮. ಶಿವಶಂಕರ್.ಎಮ್.ಎಲ್. ಮತ್ತು ಚನ್ನಬಸಪ್ಪ.ಎಸ್.ಪಾಟೀಲ. "ವಿಜಯನಗರ ಅಧ್ಯಯನ ಸಂ.೨." ೧೯೯೬, ಮೈಸೂರು
೨೯. ದೇವರಾಜ್.ಡಿ.ವಿ. ಮತ್ತು ಚನ್ನಬಸಪ್ಪ "ವಿಜಯನಗರದ ಅಧ್ಯಯನ ಸಂ.೧" ೧೯೯೫ ಮೈಸೂರು

೩೦. ದೇವರಾಜ್.ಡಿ.ವಿ. ಮತ್ತು ಚನ್ನಬಸಪ್ಪ "ವಿಜಯನಗರದ ಅಧ್ಯಯನ ಸಂ.೧" ೧೯೯೫ ಮೈಸೂರು

೩೧. ಶಿವಶಂಕರ್.ಎಮ್.ಎಲ್. ಮತ್ತು ಚನ್ನಬಸಪ್ಪ "ವಿಜಯನಗರದ ಅಧ್ಯಯನ ಸಂ.೨" ೧೯೯೬, ಮೈಸೂರು

೩೨. ಶಿವಶಂಕರ್.ಎಮ್.ಎಲ್. ಮತ್ತು ಚನ್ನಬಸಪ್ಪ "ವಿಜಯನಗರದ ಅಧ್ಯಯನ ಸಂ.೨" ೧೯೯೬, ಮೈಸೂರು

೩೩. ಶಿವಶಂಕರ್.ಎಮ್.ಎಲ್.ಮತ್ತು ಚನ್ನಬಸಪ್ಪ "ವಿಜಯನಗರದ ಅಧ್ಯಯನ ಸಂ.೨" ೧೯೯೬, ಮೈಸೂರು

೩೪. ಶಿವಶಂಕರ್.ಎಮ್.ಎಲ್. ಮತ್ತು ಚನ್ನಬಸಪ್ಪ "ವಿಜಯನಗರದ ಅಧ್ಯಾಯನ ಸಂ.೩" ೧೯೯೮, ಮೈಸೂರು

೩೫. ಕೃಷ್ಣಪ್ಪ.ಎಮ್.ವಿ. ಮತ್ತು ಚನ್ನಬಸಪ್ಪ.ಎಸ್.ಪಾಟೀಲ್ "ವಿಜಯನಗರ ಅಧ್ಯಯನ ಸಂ.೪" ೧೯೯೯, ಪು.೫–೮

೩೬. ಕೃಷ್ಣಪ್ಪ.ಎಮ್.ವಿ. ಮತ್ತು ಚನ್ನಬಸಪ್ಪ.ಎಸ್.ಪಾಟೀಲ್ "ವಿಜಯನಗರ ಅಧ್ಯಯನ ಸಂ.೫" ೨೦೦೦, ಪು.೪–೮

೩೭. ಕೃಷ್ಣಪ್ಪ.ಎಮ್.ವಿ. ಮತ್ತು ಚನ್ನಬಸಪ್ಪ.ಎಸ್.ಪಾಟೀಲ್"ವಿಜಯನಗರ ಅಧ್ಯಯನ ಸಂ.೫" ೨೦೦೦, ಪು.೩೭–೪೩

೩೮. ಕೃಷ್ಣಪ್ಪ.ಎಮ್.ವಿ. ಮತ್ತು ಎಚ್.ಟಿ.ತಳವಾರ್ "ವಿಜಯನಗರ ಅಧ್ಯಯನ ಸಂ.೬" ೨೦೦೧, ಪು.೧೧೪

೩೯. ರಾಮಕೃಷ್ಣ.ಕೆ.ಆರ್., ಟಿ.ಎಸ್.ಗಂಗಾಧರ, ಮಂಜುನಾಥಯ್ಯ ಟಿ.ಎಮ್. "ವಿಜಯನಗರ ಅಧ್ಯಯನ ಸಂ.೭" ೨೦೦೨, ಪು.೧೨೪–೧೩೧

೪೦. ಸೋಮಶೇಖರ.ಎಸ್. " ಹಂಪೆಯ ಬಜಾರುಗಳು (ಪ್ರಕಟಿತ ಎಂ.ಫಿಲ್ ಪ್ರಬಂಧ)" ೧೯೯೪, ಚರಿತ್ರೆ ವಿಭಾಗ, ಕ.ವಿ.ವಿ. ಹಂಪೆ

೪೧. ವೀಣಾ.ಎಮ್.ಪಿ. "ಮನೆ, ಸಮಾಜ ಮತ್ತು ಸಂಸ್ಕೃತಿ (ಪ್ರಕಟತ ಎಂ.ಫಿಲ್ ಪ್ರಬಂಧ) " ೧೯೯೫, ಚರಿತ್ರೆ ವಿಭಾಗ ಕ.ವಿ.ವಿ. ಹಂಪೆ

೪೨. ಸೋಮಶೇಖರ.ಎಸ್. "ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧ ನೀತಿ( ಅ ಪ್ರಕಟಿತ ಪಿಎಚ್.ಡಿ. ಪ್ರಬಂಧ)" ೧೯೯೫, ಪುರಾತತ್ವ ವಿಭಾಗ, ಕ.ವಿ.ವಿ. ಹಂಪೆ

೪೩. ಕುಮಾರ್.ಆರ್.ಬಿ. "ಕರ್ನಾಟಕದ ಮುದ್ದೆ ಕಂಬಾರರು (ಅಪ್ರಕಟಿತ ಪಿ.ಎಚ್.ಡಿ.ಪ್ರಬಂಧ)" ೨೦೦೦, ಜಾನಪದ ವಿಭಾಗ, ಕ.ವಿ.ವಿ. ಹಂಪೆ

೪೪. ಶರಣಬಸಪ್ಪ.ಪಿ. "ಕೊಪ್ಪಳ–ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ನೆಲೆ" (ಅಪ್ರಕಟಿತ ಪಿಎಚ್.ಡಿ.ಪ್ರಬಂಧ) ೨೦೦೨, ಪುರಾತತ್ವ ವಿಭಾಗ, ಕ.ವಿ.ವಿ. ಹಂಪೆ

೪೫. ಮಹೇಶ್.ಕೆ. "ಕೃಷ್ಣದೇವರಾಯನ ಕಾಲದ ವೈಷ್ಣವ ದೇವಾಲಯಗಳು" (ಅಪ್ರಕಟಿತ ಪಿಎಚ್.ಡಿ.ಪ್ರಬಂಧ) ೨೦೦೨, ವಸ್ತುಸಂಗ್ರಹಾಲಯ ವಿಭಾಗ

೪೬. ಕೊಟ್ರೇಶ್.ಎಮ್. "ಕೋಟೆ-ಕೊತ್ತಲಗಳು ಒಂದು ಅಧ್ಯಯನ" (ಅಪ್ರಕಟಿತ ಪಿಎಚ್.ಡಿ.ಪ್ರಬಂಧ) ೨೦೦೨, ಶಾಸನಶಾಸ್ತ್ರ ವಿಭಾಗ, ಕ.ವಿ.ವಿ. ಹಂಪೆ

೪೭. ಶಿವಾನಂದ.ಎಚ್.ಬಂಟನೂರು "ಕರ್ನಾಟಕ ಜನಪದ ಶಿಲ್ಪಕಲೆ ಒಂದು ಅಧ್ಯಯನ" (ಅಪ್ರಕಟಿತ ಪಿಎಚ್.ಡಿ.ಪ್ರಬಂಧ) ೨೦೦೨, ಶಿಲ್ಪವರ್ಣ ಚಿತ್ರ ವಿಭಾಗ, ಕ.ವಿ.ವಿ. ಹಂಪಿ

೪೮. ಗಿರೀಶ್ ಕುಮಾರ್.ಎಮ್.ಕೆ. "ಕರ್ನಾಟಕದ ಬುಡಕಟ್ಟು ಚಿತ್ರಕಲೆ" (ಅಪ್ರಕಟಿತ ಪಿಎಚ್.ಡಿ ಪ್ರಬಂಧ) ೨೦೦೨, ಬುಡಕಟ್ಟು ವಿಭಾಗ, ಕ.ವಿ.ವಿ. ಹಂಪೆ

೪೯. ದುರಗಪ್ಪ.ಎಮ್.ಕೆ. "ವಿಜಯನಗರೋತ್ತರ ಕಾಲಿನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು" (ಅಪ್ರಕಟಿತ ಪಿಎಚ್.ಡಿ.ಪ್ರಬಂಧ) ೨೦೦೩, ಚರಿತ್ರೆ ವಿಭಾಗ, ಕ.ವಿ.ವಿ. ಹಂಪೆ

೫೦. ರವೀಂದ್ರ ಕುಮಾರ್.ಜೆ. 'ಮೌಖಿಕ ಚರಿತ್ರೆ ಮತ್ತು ಹಂಪಿ" (ಅಪ್ರಕಟಿತ ಪಿ.ಎಚ್.ಡಿ.ಪ್ರಬಂಧ) ೨೦೦೩, ಜಾನಪದ ವಿಭಾಗ, ಕ.ವಿ.ವಿ. ಹಂಪೆ

೫೧. ಕರಿಬಸಪ್ಪ.ಎ. "ಬಳ್ಳಾರಿ ಜಿಲ್ಲೆಯ ಐತಿಹ್ಯಗಳು" ೨೦೦೩, ಹಸ್ತಪ್ರತಿ ವಿಭಾಗ, ಕ.ವಿ.ವಿ. ಹಂಪೆ

೫೨. ಶಿವಲೀಲಾ.ಕೆ. "ಕಾಮಲಾಪುರದ ಶಾಸನಗಳು ಮತ್ತು ದೇವಾಲಯಗಳು" ೨೦೦೩, ಶಾಸನ ಶಾಸ್ತ್ರವಿಭಾಗ ಕ.ವಿ.ವಿ. ಹಂಪೆ

೫೩. ಸತೀಶ್.ಕೆ. "ವಿಜಯನಗರ ಕಾಲದ ಶೈವ ದೇವಾಲಯಗಳು" ೨೦೦೪, ಶಾಸನ ಶಾಸ್ತ್ರವಿಭಾಗ, ಕ.ವಿ.ವಿ. ಹಂಪೆ

೫೪. ಜಗದೀಶ್ ಕುಮಾರ್ "ಬೇಡ ಬುಡಕಟ್ಟಿನ ಬೇಟೆ ಆಚರಣೆ: ಒಂದು ಸಾಮಾಜ ಶಾಸ್ತ್ರೀಯ ಅಧ್ಯಾಯನ" ೨೦೦೪, ಬುಡಕಟ್ಟು ವಿಭಾಗ, ಕ.ವಿ.ವಿ. ಹಂಪೆ

೫೫. ಅಪರ್ಣಾ.ಸಿ.ಎಸ್. "ಸಂಗಮರ ದೇವಾಲಯಗಳು" (ಡಿ.ಲಿಟ್.ಮಹಾ ನಿಬಂಧ) ೨೦೦೪, ಕ.ವಿ.ವಿ. ಹಂಪೆ

೫೬. ಆಂಜನಯ್ಯ "ಮ್ಯಾಸ ಬೇಡರ ಕನ್ನಡ ಸಮಾಜೋಭಾಷಿಕ ಅಧ್ಯಯನ" (ಅಪ್ರಕಟಿತ ಪಿಎಚ್.ಡಿ ಪ್ರಬಂಧ) ೨೦೦೬, ಭಾಷಾ ನಿಕಾಯ ವಿಭಾಗ, ಕ.ವಿ.ವಿ. ಹಂಪೆ

೫೭. ಸುಮನ್.ಆರ್. "ವಿಜಯನಗರದ ತುಳುವ ಅರಸರ ರಾಣಿಯರು: ಚಾರಿತ್ರಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಪ್ರಬಂಧ) " ೨೦೦೬, ಚರಿತ್ರೆ ವಿಭಾಗ, ಕ.ವಿ.ವಿ. ಹಂಪೆ

೫೮. ಮುದಿಗೌಡ ಜಿ.ಎಸ್. ಲೋಕೋಪಕಾರಂ-ಒಂದು ಸಾಂಸ್ಕೃತಿಕ ಅಧ್ಯಯನ, ಪು.೧೩-೧೪

೫೯. ರಾಮಚಂದ್ರರಾವ್.ಎಸ್.ಕೆ. "ಮೂರ್ತಿಶಿಲ್ಪ ನೆಲೆ-ಹಿನ್ನೆಲೆ" ೧೯೭೫, ಪು.೪೪

೬೦. ಪರಮಶಿವಮೂರ್ತಿ.ಡಿ.ವಿ. "ಕನ್ನಡ ಶಾಸನ ಶಿಲ್ಪ" ೧೯೯೯, ಪು.೪೯-೫೧

೬೧. ನರಸಿಂಹಮೂರ್ತಿ.ಎ.ವಿ. ಪೂರ್ವೋಕ್ತ, ಪು.೧

೬೨. ಷೇಕ್ ಅಲಿ.ಬಿ. ರಂಗಸ್ವಾಮಯ್ಯ ಜಿ.ಆರ್. "ದಕ್ಷಿಣ ಭಾರತದ ಇತಿಹಾಸ" ೧೯೯೭, ಪು.೪

೬೩. ಶೇಷಶಾಸ್ತ್ರೀ.ಆರ್. "ಕರ್ನಾಟಕದ ವೀರಗಲ್ಲು" ೧೯೮೨, ಪು-೧೦೩

೬೪. ಪಟ್ಟಣ ಪಂಚಾಯತಿಯ ಮೂಲದಾಖಲೆ, ೨೦೦೩



# ಅಧ್ಯಾಯ-೨

## ಐತಿಹಾಸಿಕ ಹಿನ್ನಲೆ

ಭರತ ಖಂಡದ ಸಂಸ್ಕೃತಿ ಉಳಿದ ಪ್ರಾಚೀನ ಸಂಸ್ಕೃತಿಗಳಿಗಿಂತ ಹೆಚ್ಚು ಪ್ರಾಚೀನ. ಈ ಸಂಸ್ಕೃತಿಗೆ ಪ್ರಾಚೀನ. ಅವಾರ್ಚಿನಗಳೆರಡನ್ನು ಸೇರಿಸುವ ಸಾಮರಸ್ಯದ ಶಕ್ತಿ ಇದೆ. ಕ್ನನಡ ನಾಡು ತನ್ನ ಬಹುಮುಖ ಸಂಸ್ಕೃತಿಯಲ್ಲೂ ಏಕತೆಯಿಂದ ಮೆರೆದಿದೆ.[೧] ಈ ಹಿನ್ನಲೆಯಲ್ಲಿ ವಿಭಿನ್ನ ಆಡಳಿತ ವಿಭಾಗಗಳಾಗಿದ್ದ, ಕಾಮಲಾಪುರವನ್ನೊಳಗೊಂಡ ಕೃಷ್ಣಾಪುರ, ಅಚ್ಚುತಾಪುರ, ವಿಠಲಾಪುರ, ಮಲಪನಗುಡಿ, ಶಾಲೆ ತಿರುಮಲಾರಾಯ ಪಟ್ಟಣ, ಅನಂತಪುರ, ವರದರಾಜಮ್ಮನ ಪಟ್ಟಣ, ವೆಂಕಟಾಪುರ, ಆನೆಗುಂದಿ, ನಿಂಬಾಪುರ, ನಾಗಲಾಪುರಗಳಲ್ಲಿ ಮಾಡಲೀಕರು, ಪ್ರಭುನಾಯಕರುಗಳು, ಸಾಮಂತರುಗಳು ಆಳಿ ಅಳಿದು ಉಳಿದ ಕುರುಹುಗಳು ಇಲ್ಲಿ ಸಾಕಷ್ಟಿವೆ.[೨] ಈ ಒಂದು ಆಧಾರದ ಹಿನ್ನಲೆ ಆಧರಿಸಿ ಕಾಮಲಾಪುರ ಗ್ರಾಮದ ಪದನಿಷ್ಪತ್ತಿ ಮತ್ತು ಹಿನ್ನಲೆಯನ್ನು ಅರಿಯಲು ಮಾಡಿದ ಪ್ರಯತ್ನ ಇದಾಗಿದೆ.

'ಕಾಮಲಾಪುರ' ಈ ಪದವನ್ನು ಆರ್ಥೈಸಿದಾಗ, ಕಾಮಲಾ ಎಂದರೆ 'ಉತ್ತಮ ಸ್ತ್ರೀ', 'ಲಕ್ಷ್ಮಿ' ಎಂಬ ಅರ್ಥ ನೀಡುತ್ತದೆ. ಪುರ ಎಂದರೆ ಪಟ್ಟಣ ಅಥವಾ ನಗರ ಎಂದರ್ಥ ಒಟ್ಟಿನಲ್ಲಿ 'ಕಾಮಲಾಪುರ' ಎಂಬ ಪದವನ್ನು ವಿಂಗಡಿಸಿ ನೋಡಿದಾಗ, 'ಸ್ತ್ರೀ ನಗರ' ಅಥವಾ 'ಲಕ್ಷ್ಮಿ ನಗರ' ಎಂಬ ಅರ್ಥವೂ ಬರುತ್ತದೆ.[೩] ಪ್ರಸ್ತುತ 'ಕಾಮಲಾಪುರ' ಎಂದು ಪದ ಉಚ್ಚಾರ ಮಾಡಿದರೆ, ಕಮಲ=ನೀರಿನಲ್ಲಿ ಅರಳುವ ಪುಷ್ಪ, ತಾವರೆ. ಪುರ=ನಗರ, ಪಟ್ಟಣ. ಪುರ ಎಂಬ ಶಬ್ದವನ್ನು ಸಪ್ತಾಂಗಗಳಲ್ಲಿಯೂ ಬಳಸಲಾಗಿದೆ. 'ಕಾಮಲಾಪುರ' ಎಂದರೆ 'ಕರೆಯಲ್ಲಿ ಬೆಳೆಯುವ ತಾವರೆ ಹೂವಿನ ನಗರ' ಎಂಬ ಅರ್ಥವನ್ನು ನೀಡುತ್ತದೆ. ಈ ಕೆರೆಗೆ ಶೋಭೆಯನ್ನು ಉಂಟು ಮಾಡುವ ಶ್ವೇತ ಬಣ್ಣದ ಕಮಲದ ಪುಷ್ಪಗಳು, ಇಲ್ಲಿ ಬೆಳೆಯುವುದರಿಂದ ಈ ಪ್ರದೇಶಕ್ಕೆ 'ಕಾಮಲಾಪುರ' ಹೆಸರು ಬಂದಿರಲಿಕ್ಕೂ ಸಾಕು. ಕಮಲಾದೇವಿ ಎಂಬುವವಳು ಈ ಪ್ರದೇಶದ ಆರಾಧ್ಯ ದೇವತೆಯಾಗಿರುವುದರಿಂದ, 'ಕಾಮಲಾಪುರ' ಹೆಸರು ಬಂದಿರಬೇಕೆಂದು ಪ್ರತೀತಿಯೂ ಇದೆ. 'ಲಕ್ಷ್ಮಿ' ಶ್ರೇಷ್ಠ ಸ್ತ್ರಿಯಾಗಿರುವುದರಿಂದ ಇವಳನ್ನು ಎಲ್ಲರೂ ದೈವಭಾವನೆಯಿಂದ ನೋಡಿದ್ದರಿಂದ ಇವಳ ಜ್ಞಾಪಕಾರ್ಥವಾಗಿ ಈ ಪುರಕ್ಕೆ ಕಾಮಲಾಪುರ ಎಂದು

ಕರೆದಿರುವ ಸಾಧ್ಯತೆ ಇದೆ.[೪] ಪ್ರೌಢದೇವರಾಯನ ಪತ್ನಿ ಕಮಲಾದೇವಿಯ ಹೆಸರೂ ಈ ಗ್ರಾಮಕ್ಕೆ ಬಂದಿರ ಬಹುದೇ?[೫] 'ಕಾಮಲಾಪುರ' ಎಂಬ ಪದ ವಿಜಯನಗರ ಕಾಲಕ್ಕಿಂತ ಪೂರ್ವದಾದ್ದರಿಂದ ಪ್ರೌಢದೇವರಾಯನ ಪತ್ನಿ ಕಮಲಾದೇವಿಯ ಹೆಸರು ನಂತರ ಬಂದಿದ್ದರಿಂದ 'ಕಾಮಲಾಪುರ' ಹೆಸರು ಕಮಲಾಪುರಕ್ಕೆ ಬಂದಿದೆ ಎಂಬುದು ಸಮಂಜಸವಲ್ಲ. ವಿಜಯನಗರ ಕಾಲದ ಶಾಸನಗಳಲ್ಲಿ, 'ಕಾಮಲಾಪುರ' ಹೆಸರಿನ ಉಲ್ಲೇಖಗಳಿವೆ. ಕಾಮಲಾಪುರಕ್ಕೆ ಮೂಲ ಹೆಸರು ಅಂಜನಗರಿ ಎಂದು, ನಂತರ ಕಮ್ಮಾರಗುಂಟೆ ಎಂದಾಗಿತ್ತು. ಕಾಲಾಂತರದಲ್ಲಿ 'ಕಾಮಲಾಪುರ' ಎಂದಾಗಿರಬೇಕು.[೬] ಇವೆಲ್ಲಾ ಅಂಶಗಳ ಹಿನ್ನಲೆಯಾಗಿ ಇಟ್ಟಕೊಂಡು ನಮಗೆ ತಿಳಿದುಬರುವ ಅಂಶ ಬಹುಶಃ ಕಾಮಲ, ಕಮಲ, ಸ್ತ್ರೀ ನಾಮವಾಗಿದ್ದರಿಂದ, 'ಕಾಮಲಾಪುರ' ಎಂಬ ಹೆಸರು ಬಂದಿರುವ ಸಾಧ್ಯತೆ ಇದೆ.

**ಪುರಾತತ್ವ ಆಕರಗಳು**

ಪುರಾತತ್ವ ಆಕರಕ್ಕೆ ಸಂಬಂಧಿಸಿದಂತೆ ಎರಡು ಶಾಸನಗಳು ಮಾತ್ರ 'ಕಾಮಲಾಪುರ' ಗ್ರಾಮದ ಹೆಸರನ್ನು ಉಲ್ಲೇಖಿಸುತ್ತವೆ. ಕ್ರಿ.ಶ. ೧೫೪೧ ರ ಶಾಸನ ಕಾಮಲಾಪುರದಲ್ಲಿರುವ ಗುಂಡಿನ ಮೇಲಿರುವ ಶಾಸನವೊಂದು, ಅಚ್ಯುತದೇವರಾಯನ ಆಳ್ವಿಕೆಯಲ್ಲಿ, ಸಾಳುವ ಡಣ್ಣಾಯಕ ಆಡಳಿತದಲ್ಲಿದ್ದ 'ಕಾಮಲಾಪುರ' ಸ್ಥಳದ ಕೊಂಡ ಮಾರಸ್ಯೆಯ್ಯನು ಪಾಳೆಯ ಭೂಮಿಯನ್ನು ಲಕ್ಷ್ಮೀನರಸಿಂಹ ದೇವರ ದೀಪಾರಾಧನೆಗೆ ದಾನ-ನೀಡಿದ ವಿಷಯವನ್ನು ತಿಳಿಸುತ್ತದೆ.[೭]

ಕ್ರಿ.ಶ.೧೫೦೪ರ ಚಿಕ್ಕ ಹುಡೆ ದೇವಾಲಯದ ದಕ್ಷಿಣಕ್ಕಿರುವ ಕಲ್ಲಿನ ಮೇಲಿನ ಇನ್ನೊಂದು ಶಾಸನದಲ್ಲಿ, ವರದರಾಜಮ್ಮನ ಪಟ್ಟಣದ ಪೂರ್ವದಿಕ್ಕಿಗೆ ಪೆನುಗೊಂಡೆ ಬಾಗಿಲ ಬಳಿ, ರಘುನಾಥ ದೇವರನ್ನು ಪ್ರತಿಷ್ಠೆ ಮಾಡಿಸಿ, ದೇವರ ಅಮೃತ ಪಡಿಗೆ ನೈವೇದ್ಯಕ್ಕೆ ಕಾಮಲಾಪುರ ಕೆರೆಯ ಕೆಳಗಿನ ಹೂವಿನ ಸಿದ್ದಯ್ಯ ಗದ್ದೆಯ ಉತ್ಪತ್ತಿಯ ಭಾಗಗಳನ್ನು ಮತ್ತು ತೆಂಗಿನ ಮರಗಳನ್ನು ದಾನವಾಗಿ ನೀಡಿದ ವಿವರಗಳನ್ನು ವಿವರಿಸುತ್ತವೆ.[೮] ಕಾಮಲಾಪುರ ಎಂದು ಶಾಸನಗಳಲ್ಲಿ ಉಲ್ಲೇಖವಾಗಿದ್ದರೂಕೂಡ, ಇಂದಿಗೂ ವಾಡಿಕೆ ಇರುವುದು ಕಮಲಾಪುರ. ಬಹುಶಃ ಅಂದಿನ ಕಾಮಲಾಪುರ ಇಂದು ಕಮಲಾಪುರವಾಗಿದೆ. ಆಧಾರಗಳ ಹಿನ್ನಲೆಯಲ್ಲಿ ಇದ್ದಂತಹ ಅನೇಕ ವಿಷಯಗಳನ್ನು ಈ ಪ್ರದೇಶದ ಹೆಸರಿನ ಉಗಮದ ಮೂಲವನ್ನು ಅರಿತುಕೊಳ್ಳಲು ಸೂಕ್ತವಾಗಿವೆ.

**ಆಡಳಿತ ವಿಭಾಗ**

ಸಮಾಜದ ಏಳಿಗೆಗೆ ಕಾರಣವಾಗಿರುತ್ತದೆ. ಆಡಳಿತದ ಅನುಕೂಲಕ್ಕೆ ತಕ್ಕಂತೆ ಆಡಳಿತವನ್ನು ಸೂಕ್ತವಾಗಿ ನಡೆಸಿಕೊಂಡು ಬರಲು ದೇಶ ಅಥವಾ ರಾಜ್ಯವನ್ನು ಹಲವಾರು ವಿಭಾಗಗಳಾಗಿ ವಿಂಗಡಿಸಿ ಆಳುವ ಪದ್ಧತಿ ಇಂದಿಗೂ ಇದೆ. ಅಂದರೆ, ರಾಜ್ಯ, ಜಿಲ್ಲೆ, ತಾಲೂಕು, ಹೋಬಳಿ ಎಂದು ಇಂದು ವಿಂಗಡಿಸಿದರೆ ಅಂದು ವಿಜಯನಗರ ಸಾಮ್ರಾಜ್ಯವನ್ನು ನಾಡು, ದೇಶ, ಕಂಪಣ, ಮಂಡಲ ಎಂದೂ ವಿಭಾಗಿಸ್ಪಡುತ್ತಿತ್ತು. ಇಂತಹ ವಿಭಜನೆ ಆಡಳಿತಕ್ಕೆ ಅನುಕೂಲವಾಗಿರುತ್ತಿತ್ತು.[೯] ಇದಕ್ಕೆ ಶಾಸನಗಳು ಪೂರಕ ಮಾಹಿತಿಯನ್ನು ಒದಗಿಸುತ್ತವೆ. ಶಾಸನಗಳ ಆಧಾರದಲ್ಲಿ ಕಾಮಲಾಪುರ ಅದರ ಸುತ್ತ-ಮುತ್ತಲಿನ ಶಾಸನಗಳ ಆಧಾರದಲ್ಲಿ ವಿಜಯನಗರ ಕಾಲದ ಆಡಳಿತ ವಿಭಾಗಗಳನ್ನು ಇಲ್ಲಿ

ಪ್ರಸ್ತಾಪಿಸಲಾಗಿದೆ. ಈ ಪ್ರದೇಶದಲ್ಲಿ ವೆಂಟೆ, ಅಳಿತ, ಸಂಸ್ಥಾನ, ಸೀಮೆ, ಮಾಗಣಿ, ಮಂಡಳ, ನಾಡು, ಸ್ಥಳ, ರಾಜ್ಯ ಪದಗಳು ಶಾಸನಗಳಿಂದ ಕಾಣಸಿಗುತ್ತವೆ. ಉದಾ: ಕಳಸಾಪುರದ ಮಾಗಣಿ ಇದು ಇಂದಿನ ಕಾಮಲಾಪುರದ ಮಾಲ್ಯವಂತ ದೇವಾಲಯದ ಮುಂದೆ ಬರುವ ಇಂದಿನ ಆಡಳಿತ ವಿಭಾಗ.

ಗ್ರಾಮವು ಪ್ರಾಂತ್ಯ ವ್ಯವಸ್ಥೆಯ ಏಕಾಂಶವಾಗಿತ್ತು. ಪ್ರತಿ ಗ್ರಾಮವು ಆಡಳಿತದ ಭಾಗವಾಗಿತ್ತು. ಪ್ರತಿ ಗ್ರಾಮದಲ್ಲೂ ಒಂದು ಅಥವಾ ಹೆಚ್ಚಿನ ಪಾಳೆಯಗಳಿದ್ದವು. ಹಲವು ಗ್ರಾಮಗಳನ್ನು ಸೇರಿಸಿ ಸ್ಥಳ ಎಂದು ಕರೆಯಲಾಗುತ್ತಿತ್ತು. ಅರವೀಡು ವಂಶದ ಆಳ್ವಿಕೆಯಲ್ಲಿ ಸ್ಥಳ ಎಂಬ ಹೆಸರಿನ ಬದಲು ಸಮ್ಮತ್ ಅಥವಾ ಸಮುತು ಎಂಬ ಹೆಸರುಗಳಿಂದ ಕರೆಯಲಾಗುತ್ತಿತ್ತು. ನಾಡು ಅಥವಾ ಸೀಮೆ ಮತ್ತು ರಾಜ್ಯದ ನಡುವೆ ನಾವು 'ವಳಿತ' ಎಂಬ ಪುನರ್ ವಿಭಾಗ ಕಾಣುತ್ತೇವೆ.[೧೦] ಅನೇಕ ಕನ್ನಡ ಶಾಸನಗಳು ವಳಿತ ಎಂಬ ಪದಕ್ಕೆ ವೇಂಠೆಯ ಅಥವಾ ವೇಂಠೆ ಎಂಬ ಪದವನ್ನು ಉಪಯೋಗಿಸುತ್ತವೆ.[೧೧] ವಳಿತ ಅಥವಾ ವೇಂಠೆಯು ಸ್ಥಳಕ್ಕಿಂತ ದೊಡ್ಡದಾಗಿ ರಾಜ್ಯಕ್ಕಿಂತ ಚಿಕ್ಕದಾಗಿತ್ತು. ಉದಾಹರಣೆಗಾಗಿ ವಿಜಯನಗರ ಸಾಮ್ರಾಜ್ಯದ ಉದಯಗಿರಿ, ಪೆನುಗೊಂಡೆ ಮತ್ತು ಹಂಪಿ ಪ್ರಾಂತ್ಯಗಳನ್ನು ಅನೇಕ ವಳಿತಗಳನ್ನಾಗಿ ವಿಂಗಡಿಸಲಾಗಿದ್ದಿತು. ಈ ಆಡಳಿತ ವಿಭಾಗಗಳಲ್ಲಿ ನಾಲ್ಕು ಮುಖ್ಯವಾದವು. ಅವು ನಾಡು, ಗ್ರಾಮ, ಅಗ್ರಹಾರ ಮತ್ತು ಪಟ್ಟಣ. ಅವುಗಳಲ್ಲಿದ್ದ ಆಡಳಿತ ಸಂಸ್ಥೆಗಳು ಕ್ರಮವಾಗಿ ನಾಡು, ಊರು, ಮಹಾಸಭಾ ಮತ್ತು ನಗರಗಳಾಗಿದ್ದವು ಇದ್ದವು.

**ಗ್ರಾಮ:** ಗ್ರಾಮದ ವ್ಯವಹಾರವನ್ನು ಗ್ರಾಮಸ್ಥರೇ ನಡೆಸಿಕೊಂಡು ಹೋಗುತ್ತಿದ್ದರು. ಇದು ಆರ್ಥಿಕ ಕ್ಷೇತ್ರದಲ್ಲಿ ಸ್ವತಂತ್ರವಾಗಿತ್ತು. ಗಾವುಂಡ ಅಥವಾ ಮುಖಂಡನು ಗ್ರಾಮಾಡಳಿತದಲ್ಲಿ ಪ್ರಮುಖ ವ್ಯಕ್ತಿಯಾಗಿದ್ದನು. ಕರಣಿಕನನ್ನು ಸೇನಬೋವ ಅಥವಾ ಕುಲಕರಣಿ ಎಂದು ಕರೆಯಲಾಗುತ್ತಿತ್ತು. ಗ್ರಾಮ ಸೇವಕರು ೧೨ ಮಂದಿ ಇದ್ದು ಅವರನ್ನು ಆಯಗಾರರೆಂದು ಕರೆಯಲಾಗುತ್ತಿತ್ತು.[೧೨] ಗಾವುಂಡ ಗ್ರಾಮ ಸಭೆಯೊಡನೆ ಅವನು ಗ್ರಾಮದ ಅಭ್ಯುದಯಕ್ಕೆ ಜವಾಬ್ದಾರಿ ಹೊಂದಿದ್ದನು. ಈತ ಜನರ ಪ್ರತಿನಿಧಿಯಾಗಿ ಮತ್ತು ಸರ್ಕಾರದ ಸಿದ್ದಿಗಾಗಿ ಕೆಲಸ ಮಾಡುತ್ತಿದ್ದನು. ಆತನ ಸಂಭಾವನೆ, ತೆರಿಗೆಯಿಂದ ರಿಯಾಯಿತಿ ಪಡೆದ ಭೂಮಿ. ಈತನು ಗ್ರಾಮದ ದಂಡಾಧಿಕಾರಿಯಾಗಿ ಸಣ್ಣ ಪುಟ್ಟ ಅಪರಾಧಗಳ ವಿಚಾರಣೆ ನಡೆಸುತ್ತಿದ್ದನು. ಈತನು ಸಾರ್ವಜನಿಕರಿಂದ ಮತ್ತು ಸರ್ಕಾರದಿಂದ ಹಣ ಸಂಗ್ರಹಿಸಿ, ಲೋಕೋಪಯೋಗಿ ಕಾರ್ಯಗಳನ್ನು ನಡೆಸುತ್ತಿದ್ದನು.[೧೩] ತಮಿಳು ಪ್ರಾಂತ್ಯದಲ್ಲಿ ಗ್ರಾಮ ಮುಖಂಡನನ್ನು ರೆಡ್ಡಿ ಅಥವಾ ಗೌಡನೆಂದು ಕರೆಯಲಾಗುತ್ತಿದ್ದಿತು.[೧೪] ಆಂಧ್ರ ಪ್ರಾಂತ್ಯದಲ್ಲೂ ಈತನನ್ನು ಗೌಡ ಅಥವಾ ರೆಡ್ಡಿಯೆಂದು ಕರೆಯುತ್ತಿದ್ದರು.[೧೫] ಹಾಗೆ ಯಜಮಾನ ಎಂಬ ಪದ ಬಳಕೆಯಲ್ಲಿತ್ತು. ಈ ಹುದ್ದೆ ವಂಶ ಪಾರಂಪರ್ಯವಾಗಿತ್ತು. ಈ ಗ್ರಾಮ ಮುಖಂಡನಿಗೆ ಕಂದಾಯ ಮತ್ತು ಸಾಗುವಳಿಗೆ ಸಂಬಂಧಿಸಿದ ಹಲವು ಕರ್ತವ್ಯಗಳನ್ನು ವಹಿಸಲಾಗಿತ್ತು. ರಾಜನು ಈ ಹುದ್ದೆಯನ್ನು ತನಗೆ ಬೇಕಾದವರಿಗೆ ಕೊಡಬಹುದಾಗಿತ್ತು. ಈತನು ಜನರ ಪ್ರತಿನಿಧಿ ಮತ್ತು ಸರ್ಕಾರದ ನಿಯೋಗಿಯಾಗಿದ್ದನು.

**ಗ್ರಾಮ ಸಭೆಗಳು:** ಇವುಗಳಿಂದ ಆಡಳಿತ ನಡೆಸಲಾಗಿತ್ತು. ವಿಜಯನಗರ ಕಾಲದಲ್ಲಿ ಜಮೀನುಗಳ ಮೇಲಿನ ಹತೋಟಿ, ನೀರಾವರಿ ಕೆಲಸಗಳ ಮತ್ತು ದೇವಸ್ಥಾನಗಳ ಮೇಲ್ವಿಚಾರಣೆ ತೆರಿಗೆಗಳ ವಸೂಲಿ

ಮತ್ತು ರಿಯಾಯಿತಿಗಳ ನೀಡಿಕೆ, ದಾನಗಳ ಹತೋಟಿ, ಹಣದ ಠೇವಣಿಗಳನ್ನು ಹೊಂದಿರುವುದು, ಬ್ಯಾಂಕಿನ ವ್ಯವಹಾರಗಳು ಮುಂತಾದ ವಿವಿಧ ಕರ್ತವ್ಯಗಳನ್ನು ನೆರವೇರಿಸುತ್ತಿದ್ದವು.[೧೬] ವಿಜಯನಗರ ಕಾಲದಲ್ಲಿ ಈ ಸಭೆಗಳು ಹೊಸ ತೆರಿಗೆಗಳನ್ನು ವಿಧಿಸುವ ಮತ್ತು ಸಾರ್ವಭೌಮ ಸರ್ಕಾರಕ್ಕೆ ಸಲ್ಲಿಸಬೇಕಾಗಿದ್ದ ತೆರಿಗೆಗಳನ್ನು ನಿರ್ಧರಿಸುವ, ಹಲವು ಹಕ್ಕುಗಳನ್ನು ಹೊಂದಿದ್ದವು. ಇವು ಧರ್ಮದರ್ಶಿಯಾಗಿ ಕೆಲಸ ಮಾಡುತ್ತಿದ್ದವು.[೧೭] ಕೆರೆಗಳು ಮತ್ತು ದೇವಸ್ಥಾನಗಳೇ ಮೊದಲಾದ ಲೋಕೋಪಯೋಗಿ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದವು.

**ಅಗ್ರಹಾರಗಳು:** ಬ್ರಾಹ್ಮಣ, ವಿದ್ವಾಂಸರ ಜೀವನೋಪಾಯಕ್ಕೆ ಕೊಟ್ಟ ಗ್ರಾಮವೇ ಅಗ್ರಹಾರ. ಬ್ರಾಹ್ಮಣ ಪಾಲುಗಾರರನ್ನು "ಮಹಾಜನರೆಂದು" ಕರೆಯುತ್ತಿದ್ದರು. "ಮಹಾಜನಸಭೆ" ಅಗ್ರಹಾರದ ವಿಷಯಗಳ ಮೇಲ್ವಿಚಾರಣೆ ಹೊಂದಿದ್ದಿತು. ಇವರು ಪೌರಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು. ಇವು ವಿಶ್ವವಿದ್ಯಾನಿಲಯ ಕೇಂದ್ರಗಳಾಗಿದ್ದವು. ಅಲ್ಲದೇ, ಸ್ವಯಂ ಅಧಿಕಾರವುಳ್ಳ ಸಂಸ್ಥೆಯಾಗಿದ್ದವು. ರಾಜನ ಒಪ್ಪಿಗೆಯ ಮೇಲೆ ಆತನ ಅಧಿಕಾರಿಗಳು ಅಗ್ರಹಾರವನ್ನು ಸ್ಥಾಪಿಸುತ್ತಿದ್ದರು. ಈ ಅಗ್ರಹಾರಗಳನ್ನು ಗ್ರಾಮ ಮತ್ತು ನಾಡು ಸಭೆಗಳು ಸ್ಥಾಪಿಸಿದವು. ಮಹಾಜನರನ್ನು ಹೆಬ್ಬಾರರು ಎಂದು ಕರೆಯಲಾಗುತ್ತಿತ್ತು. ಅಗ್ರಹಾರದ ಮೇಲೆ ಸರ್ಕಾರ ತನ್ನ ಅಧಿಕಾರಿಗಳನ್ನು ನೇಮಿಸುತ್ತಿದ್ದಿತು. ಅಗ್ರಹಾರಗಳು ಸ್ವಾಯತ್ತತೆಯ ಹಕ್ಕುಗಳನ್ನು ಹೊಂದಿದ್ದ ಸಂಸ್ಥೆಯಾಗಿದ್ದಿತು.

**ಮಹಾಜನ ಸಭಾ:** ಅಗ್ರಹಾರ ಗ್ರಾಮಗಳ ಆಡಳಿತ ಮಹಾಜನರನ್ನೊಳಗೊಂಡ ಸಭೆಗೆ ಸೇರಿದ್ದಿತು. ಈ ಸಭೆಗಳು ಮಂಟಪಗಳಲ್ಲಿ (ಸಭಾಂಗಣ) ಸೇರುತ್ತಿದ್ದವು ಹಾಗೂ ಸಾರ್ವಜನಿಕ ಸ್ಥಳಗಳಲ್ಲಿಯೂ ಸೇರುತ್ತಿದ್ದವು. ಮಹಾಜನರ ತೀರ್ಮಾನಗಳನ್ನು ಒಮ್ಮತದಿಂದ ತೆಗೆದುಕೊಳ್ಳಲಾಗುತ್ತಿದ್ದಿತೆಂಬುದಕ್ಕೆ "ಸರ್ವೈಕಮತ್ಯರಾಗಿ", "ಐಕಸ್ವಾಮ್ಯವಾಗಿ",[೧೮] ಒಡಂಬಟ್ಟು ಎಂಬ ಪದಗಳನ್ನು ಉಪಯೋಗಿಸುತ್ತವೆ.[೧೯] "ಮಹಾಜನ" ಸಭೆಯು ಅಗ್ರಹಾರದ ಮಠೀಯ ಆಡಳಿತ, ಸಾರ್ವಜನಿಕ, ಆರ್ಥಿಕ, ಸಾಮಾಜಿಕ ಮತ್ತು ನ್ಯಾಯ ವಿತರಣೆಗೆ ಸಂಬಂಧ ಪಟ್ಟ ಅನೇಕ ಕರ್ತವ್ಯಗಳನ್ನು ಮಾಡುತ್ತಿದ್ದವು. ಛತ್ರ ಮತ್ತು ಮಠಗಳನ್ನು ನಡೆಸಿಕೊಂಡು ಹೋಗಲು ಸಾರ್ವಜನಿಕ ದತ್ತಿಗಳನ್ನು ಇವರು ಸಂರಕ್ಷಣೆ ಮಾಡುತ್ತಿದ್ದರು.[೨೦] ಅಗ್ರಹಾರದಲ್ಲಿ ಗಡಿ ವಿವಾದಗಳನ್ನು ಹಾಗೂ ಅಗ್ರಹಾರದ ಗ್ರಾಮಗಳ ನಡುವೆ ನಡೆದ ವಿವಾದಗಳನ್ನು ತೀರ್ಮಾನಿಸುವುದು ಇದರ ಪ್ರಮುಖ ಕರ್ತವ್ಯವಾಗಿತ್ತು. ಭೂ–ವಿನಿಮಯವನ್ನು ಮಾಡುತ್ತಿದ್ದರು. ದೇವಸ್ಥಾನಗಳು ಮತ್ತು ಕೆರೆಗಳ ಮೊದಲಾದ ಲೋಕೋಪಯೋಗಿ ಕೆಲಸಗಳನ್ನು ನಿರ್ವಹಿಸುತ್ತಿದ್ದಿತು. ಇವರಿಗೆ ಭೂಕಂದಾಯದ ಪ್ರಶ್ನೆಗಳನ್ನು ತಿರ್ಮಾನಿಸುವ ಅಧಿಕಾರವಿದ್ದಿತು. ಇವರು ನ್ಯಾಯಾಧಾರಿಗಳಾಗಿ ಕೆಲಸ ಮಾಡುತ್ತಿದ್ದರು. ಮಹಾಜನ ಸಭೆಗಳು ಸಮಾಜದ ಏಳಿಗೆಗೆ ಪ್ರಯತ್ನಿಸುತ್ತಿದ್ದರು. ಇವರು ಇತರರೊಡನೆ ಮೊಕದ್ದಮೆಯನ್ನು ತೀರ್ಮಾನಿಸುತ್ತಿದ್ದರು ಇದರಿಂದ ನ್ಯಾಯ ವಿತರಣೆಯ ಅಧಿಕಾರವನ್ನು ಚಲಾಯಿಸುತ್ತಿದ್ದ ಹಾಗೆ ತೋರುತ್ತದೆ. ಇವರು ಪಾಂಡಿತ್ಯಕ್ಕೆ, ವೇದಾಧ್ಯಯನಕ್ಕೆ ನಾಟ್ಯಕಲೆಗೆ ಉತ್ತೇಜನ ನೀಡುತ್ತಿದ್ದರು. ಯಾತ್ರಿಕರಿಗೆ ಆಹಾರ ಒದಗಿಸುವ ಕಾರ್ಯವನ್ನು ನಿರ್ವಹಿಸಿತಿತ್ತು.

**ಪಟ್ಟಣಗಳು:** ಪುರ, ನಗರ ಮತ್ತು ಪಟ್ಟಣವೆಂಬ ಪದಗಳು ನಗರ ಅಥವಾ ಪಟ್ಟಣವನ್ನು ಸೂಚಿಸುತ್ತವೆ. ಪಟ್ಟಣದಲ್ಲಿ ಜನಸಂಖ್ಯೆಯು ಹೆಚ್ಚಾಗಿತ್ತು.[೨೧] ವಿಜಯನಗರಕ್ಕೆ ಭೇಟಿ ನೀಡಿದ ಪೋರ್ಚುಗೀಸ್

ಪ್ರವಾಸಿಗ ಪೇಸ್ ಗ್ರಾಮಗಳು, ಪಟ್ಟಣಗಳು ಮತ್ತು ನಗರಗಳನ್ನು ಗುರುತಿಸಿದ್ದಾನೆ. ಅವನು ರಾಜ್ಯವೆಲ್ಲಾ, ನಗರಗಳು ಮತ್ತು ಗ್ರಾಮಗಳಿಂದಕೂಡಿ, ನಿಬಿಡ ಜನಸಂಖ್ಯೆ ಹೊಂದಿತ್ತೆಂದು ತಿಳಿಸುತ್ತಾನೆ.[೨೨]

'ಮಿತಾಕ್ಷರ'ದ ಪ್ರಕಾರ, ನಗರವು ಗ್ರಾಮಕ್ಕಿಂತ ಎರಡರಷ್ಟು ಮತ್ತು ನಗರ ನಾಲ್ಕರಷ್ಟು ದೊಡ್ಡದಾಗಿತ್ತು.[೨೩] ಇಟಲಿ ಪ್ರವಾಸಿ ನಿಕೊಲೊ ಕಂಟಿ, ವಿಜಯನಗರದ ವಿವರವನ್ನು ಈ ರೀತಿ ತಿಳಿಸುತ್ತಾನೆ. ನಗರದ ಸುತ್ತಳತೆ ೬೦ ಮೈಲಿಗಳು, ಗೋಡೆಗಳು ಬೆಟ್ಟಗಳವರೆಗೆ ಹೋಗಿದ್ದವು. ಹಾಗೆ ತಗ್ಗು ಪ್ರದೇಶವನ್ನೆಲ್ಲ ಒಳಗೊಂಡಿತ್ತು.[೨೪] ಮತ್ತೊಬ್ಬ ಪರ್ಶಿಯಾ ದೇಶದ ರಾಯಭಾರಿ, ಅಬ್ದುಲ್‌ರಜಾಕ್, 'ವಿಜಯನಗರವು ಅಂದಿನವರೆಗೆ ಕಣ್ಣಿನಲ್ಲಿ ನೋಡಿಲ್ಲದಂತಹ ನಗರವಾಗಿದ್ದಿತೆಂದು' ತಿಳಿಸುತ್ತಾನೆ. ಜನಸಂಖ್ಯೆ ಹೆಚ್ಚಾಗಿದ್ದಿತೆಂದು, ಪೇಟೆ ಬೀದಿಗಳು ಉದ್ದವಾಗಿಯೂ ಮತ್ತು ಅಗಲವಾಗಿಯೂ ಇದ್ದುವೆಂದು ತಿಳಿಸುತ್ತಾನೆ.[೨೫] ಪಟ್ಟಣಗಳಲ್ಲಿ ಜೀವನ ಸೌಕರ್ಯಗಳು ಹೆಚ್ಚಾಗಿದ್ದವು. ವಿಜಯನಗರಕ್ಕೆ ಭೇಟಿ ನೀಡಿದ ಮತ್ತೊಬ್ಬ ಪೋರ್ಚುಗೀಸ್ ಪ್ರಯಾಣಿಕ ನ್ಯೂನಿಜ್ ಹೊಸಪೇಟೆ ವಿಚಾರವಾಗಿ ಈ ರೀತಿ ಬರೆದಿದ್ದಾನೆ. ಕೃಷ್ಣದೇವರಾಯನು ಅಲ್ಲಿ ಕಲ್ಲು ಕಟ್ಟಡದ ಮನೆಗಳುಳ್ಳ, ಬಹಳ ಉದ್ದವಾದ ರಸ್ತೆಯನ್ನು ಮಾಡಿಸಿದ್ದನೆಂದು, ಅದರ ಉದ್ದ ೪೭೦೦ ಮತ್ತು ೪೦ ಹೆಜ್ಜೆಗಳಿದ್ದವೆಂದು ತಿಳಿಸುತ್ತಾನೆ. ಅಲ್ಲದೆ ಅದು ನೋಡಲು ಅತ್ಯಂತ ಸುಂದರವಾದ ಬೀದಿಯಾಗಿದ್ದಿತ್ತು.[೨೬] ಪ್ರಸ್ತುತ ಕಮಲಾಪುರ ಗ್ರಾಮ ಹೊಸಪೇಟೆ ತಾಲೂಕಿಗೆ ಒಳಪಟ್ಟಿದೆ. ವಿಜಯನಗರದ ಬೀದಿಯ ವಿಚಾರವಾಗಿ ಪೇಸ್ ಈ ರೀತಿ ವಿವರಿಸಿದ್ದಾನೆ. ಅಲ್ಲಿ ಅಗಲವಾದ ಮತ್ತು ಸುಂದರವಾದ ಒಂದು ಬೀದಿ ಇದ್ದಿತೆಂದೂ, ಸಾಲುಸಾಲಾಗಿದ್ದ ಅನೇಕ ಮನೆಗಳು ಮತ್ತು ಬೀದಿಗಳಿದ್ದವೆಂದು ತಿಳಿಸುತ್ತಾನೆ.[೨೭] ವಿಜಯನಗರಕ್ಕೆ ಹೇರಳವಾದ ನೀರು ಸರಬರಾಜು ಆಗುತ್ತಿತ್ತು. ಹಂಪೆಗೆ ನೀರು ಸರಬರಾಜು, ತುರ್ತು ಕಾಲುವೆ ಮತ್ತು ತುಂಗಭದ್ರ ನದಿಯಿಂದ ಆಗುತ್ತಿದ್ದಿತು.[೨೮] ಪಟ್ಟಣದಲ್ಲಿ ವ್ಯಾಪಾರ ಹೆಚ್ಚಾಗಿದ್ದಿತು. ಇದು ಪ್ರಮುಸಖ ವಾಣಿಜ್ಯ ಸಂಸ್ಥೆಯಾಗಿದ್ದಿತು. ಅಲ್ಲದೆ ಕೈಗಾರಿಕೆಗಳಿಗೆ ಮೀಸಲಾದ ಒಂದು ಆಡಳಿತ ವಿಭಾಗವಾಗಿದ್ದಿತೆಂದು ಕಾಣುತ್ತದೆ. ಈ ಪಟ್ಟಣವು ಒಂದು ಪ್ರಮುಖ ದೇವಸ್ಥಾನದ ಸುತ್ತ ಬೆಳೆದು ಮತೀಯ ಕೇಂದ್ರ ಹಾಗೂ ಯಾತ್ರಾ ಸ್ಥಳವಾಗಿ ಅಭಿವೃದ್ಧಿಗೊಳ್ಳುತ್ತದೆ. ಉದಾ:– ಶ್ರೀ. ವಿರುಪಾಕ್ಷ ದೇವಸ್ಥಾನದ (ವಿಜಯನಗರದ) ಉತ್ತರದಲ್ಲಿ ಆನೆಗೊಂದಿಯಿಂದ ದಕ್ಷಿಣಕ್ಕೆ ಹೊಸಪೇಟೆವರೆಗೆ. ಪಶ್ಚಿಮದಲ್ಲಿ ಹಂಪಿಯಿಂದ, ಪೂರ್ವದಲ್ಲಿ ಕಾಮಲಾಪುರದವರೆಗೆ ಹಬ್ಬಿತ್ತು. ಕಾಮಲಾಪುರದಲ್ಲಿ ಅಚ್ಯುತರಾಯನು ತನ್ನ ಪತ್ನಿ ವರದಾದೇವಿಯು ಗೌರವಾರ್ಥವಾಗಿ ಕಟ್ಟಿಸಿದ ವರದರಾಜಮ್ಮನ ಪಟ್ಟಣವಿದ್ದಿತು.[೨೯] ಈ ಪಟ್ಟಣಗಳು ದೇಶದ ಒಳ ವ್ಯಾಪಾರದ ಕೇಂದ್ರಗಳಾಗಿದ್ದವು ಮತ್ತು ಕೆಲವು ವೇಳೆ ಪಟ್ಟಣಗಳಿಗೆ ರಾಜರ ಮತ್ತು ಮಂತ್ರಿಗಳ ಹೆಸರುಗಳನ್ನು ಇಡಲಾಗುತ್ತಿತ್ತು. ಇದು ಸಂತೆಗಳ ಸ್ಥಾಪನೆ, ಪಟ್ಟಣಗಳ ಅಭಿವೃದ್ಧಿಗೆ ಕಾರಣವಾಯಿತು. ಸಂತೆ ನಡೆಯುವ ಸ್ಥಳವನ್ನು ಪೇಟೆ, ಸಂತೆ ಅಥವಾ ಸಂತೇಪೇಟೆ ಎಂದು ಕರೆಯುತ್ತಿದ್ದರು. ಪಟ್ಟಣ ಸ್ವಾಮಿ ಅನೇಕ ವೇಳೆ ಪಟ್ಟಣದ ಸ್ಥಾಪಕ. ಈ ಹುದ್ದೆಯೂ ವಂಶ ಪಾರಂಪರ್ಯವಾಗಿದ್ದಿತು.[೩೦] ಮುಖಂಡತ್ವವೂ ಅನೇಕ ವೇಳೆ ವಂಶ ಪಾರಂಪರ್ಯವಾಗಿದ್ದಿತು.[೩೧] ಪಟ್ಟಣ ಸ್ವಾಮಿಯು ಶ್ರೇಣಿಗಳಿದ್ದ ಪೌರಾಡಳಿತವನ್ನು ಹೊಂದಿದ್ದನೆಂದು ಕಾಣುತ್ತದೆ.[೩೨] ಇವರು ವಸೂಲು ಮಾಡುತ್ತಿದ್ದ ಸುಂಕ ಮತ್ತು ಇತರ ವರಮಾನವನ್ನು

ಕೆಲವೊಮ್ಮೆ ದೇವಾಲಯದ ಸೇವೆಗೆ ದಾನಮಾಡುತ್ತಿದ್ದರು. ಭೂದಾನ ಮಾಡುವಾಗ ಪಟ್ಟಣ ಸ್ವಾಮಿಯ ಒಪ್ಪಿಗೆಯನ್ನು ಪಡೆಯಬೇಕಾಗಿತ್ತು.

**ಪೌರಸಭೆ:** ನಗರ ಸಭೆ ಎಂದೂ, ಸಭೆ ಎಂದೂ ಕರೆಯಲಾಗುತ್ತದೆ. ಈ ನಗರ ಒಂದು ಆಡಳಿತ ವಿಭಾಗವಾಗಿತ್ತು. ನಗರ ಎಂಬ ಪದವನ್ನು ಪೌರಸಭೆಗೆ ಸೂಚಿಸಲು ಉಪಯೋಗಿಸಲಾಗುತ್ತಿತ್ತು. ಪೌರಸಭೆಗೆ ನಕರ, ನಖರ, ನಗರಸಮೂಹ ಅಥವಾ ಸಮೂಹ ಎಂಬ ಪದಗಳನ್ನು ಉಪಯೋಗಿಸಲಾಗುತ್ತಿತ್ತು. ಪಟ್ಟಣಸ್ವಾಮಿ ಪೌರಸಭಾಧ್ಯಕ್ಷನಾಗಿರುತ್ತಿದ್ದನು.[೩೩] ಪೌರ ಸಭೆಯು ಪ್ರತಿನಿಧಿ ಸಂಸ್ಥೆಯಾಗಿದ್ದು, ಸ್ಥಳೀಯ ಜನರ ಹಿತವನ್ನು ರಕ್ಷಿಸುತ್ತಿದ್ದಿತು. ಇದರ ಸದಸ್ಯರಲ್ಲಿ ಒಮ್ಮತ ಮನೋಭಾವ ಇದ್ದಿತು.[೩೪] ಇದರ ಸದಸ್ಯರನ್ನು ಅನೇಕ ವೇಳೆ "ನಗರತ್ತಾರ್" ಎಂದು ಕರೆಯಲಾಗುತ್ತಿದ್ದಿತು.[೩೫] ನಗರದ ಅಧಿಕಾರಿಗಳಲ್ಲಿ ಲೆಕ್ಕಿಗರು ಮತ್ತು ನಗರ ಮಧ್ಯಸ್ಥರು ಸೇರಿದ್ದರು.[೩೬] ನಗರವು ಒಂದು ದೇಶದ ವಿಭಾಗವಿದ್ದಂತೆ. ಪ್ರತಿಯೊಂದು ಪಟ್ಟಣ ಮತ್ತು ನಗರಗಳಲ್ಲಿ ಶಾಂತಿ ಪಾಲನೆಗೆ ಒಬ್ಬ ಮುಖ್ಯಾಧಿಕಾರಿಯ ನೇತೃತ್ವದಲ್ಲಿ ಅನೇಕ ತಳವಾರರಿಗೆ ವಹಿಸಲ್ಪಟ್ಟಿತ್ತು.[೩೭]

**ಸಮಾಜ:** ಮಾನವನು ಸಮಾಜ ಜೀವಿ. ಇವನು ಸಾಮಾಜಿಕ ಜೀವನದ ವಿವಿಧ ಮೌಲ್ಯಗಳಿಗೆ ಪ್ರಭಾವಿತನಾಗಿರುತ್ತಾನೆ. ಧರ್ಮವು ಜನ ಜೀವನದ ಸ್ವರೂಪಕ್ಕೆ ನಿರ್ಣಾಯಕ ಶಕ್ತಿ. ಧರ್ಮ ಜೀವನದ ಎಲ್ಲಾ ರಂಗಗಳಲ್ಲೂ ಹಾಸು ಹೊಕ್ಕಾಗಿದೆ. ಇದರಿಂದ ಸಾಮಾಜಿಕ ಜೀವನವನ್ನು ಹಸನುಗೊಳಿಸುವ ಪ್ರಯತ್ನ ನಡೆಯಿತು. ಪ್ರಸ್ತುತ ಕಾಮಲಾಪುರ ಗ್ರಾಮ ಹಂಪಿ ಕ್ಷೇತ್ರದೊಳಗಿನ ಪ್ರದೇಶವಾದ್ದರಿಂದ, ಈ ಕ್ಷೇತ್ರದ ಸಾಹಿತ್ಯಿಕ ಆಧಾರಗಳು, ವಿದೇಶಿ ಪ್ರವಾಸಿಗರ ಬರಹಗಳು, ಶಾಸನಗಳು, ಸಾಮಾಜಿಕ ವ್ಯವಸ್ಥೆಯ ರಚನೆಯನ್ನು ರೂಪಿಸಲು ಬಹಳೇ ಸಹಕಾರಿಯಾಗಿವೆ. ಈ ಹಿನ್ನಲೆಯಲ್ಲಿ ಈ ಪ್ರದೇಶದ ಸಮಕಾಲೀನ ಸಾಮಾಜಿಕ ವ್ಯವಸ್ಥೆಯನ್ನು ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ಚಾತುರ್ವರ್ಣಗಳು:** ಪ್ರಾಚೀನ ಭಾರತದಲ್ಲಿ ವ್ಯಕ್ತಿಗಳನ್ನು, ಸಾಮಾಜಿಕ ವ್ಯವಸ್ಥೆಯಲ್ಲಿ, ಅವರು ಕೈಗೊಳ್ಳುವ ಉದ್ಯೋಗ ಮತ್ತು ವೃತ್ತಿಗಳ ಹಿನ್ನಲೆಯಲ್ಲಿ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳನ್ನು ವಿಂಗಡಿಸಲಾಗಿದ್ದ ವಿಚಾರ ಋಗ್ವೇದದ ಪುರಷ ಸೂಕ್ತ ಮತ್ತು ಸಮಕಾಲೀನ ಸಾಹಿತ್ಯಿಕ ಕುರುಹುಗಳು ಮನದಟ್ಟು ಮಾಡುತ್ತವೆ.[೩೮] ಕರ್ನಾಟಕದಲ್ಲಿ ಪ್ರಾದೇಶಿಕತೆಯಂತೆ ಜಾತಿ ಅಥವಾ ವರ್ಣ ವ್ಯವಸ್ಥೆ ಒಂದು ವಿಧ, ಶ್ರೀಮಂತ-ಬಡವ, ಮೇಲು-ಕೀಳು ಒಟ್ಟಾರೆ ಆರ್ಥಿಕ ಅಸಮಾನತೆಯೂ ಅನೇಕ ತರಹದ ಸಾಮಾಜಿಕ ವ್ಯವಸ್ಥೆಗೆ ಎಡೆಮಾಡಿಕೊಟ್ಟಿದೆ.[೩೯] ಸಮಾಜ ಎಂದ ಮೇಲೆ ಪ್ರಮುಖವಾಗಿ ನಾಲ್ಕು ತರಹದ ವರ್ಣ ವ್ಯವಸ್ಥೆಯು ಇರುತ್ತದೆ. ಸಾಮಾಜಿಕವಾಗಿ ಒಟ್ಟಾರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ವಿಂಗಡಿಸಿದರೂ, ಪ್ರಸ್ತುತ ಕಾಮಲಾಪುರ ಗ್ರಾಮದ ಪರಿಸರದಲ್ಲಿ, ಇದರ ಜೊತೆಗೆ ಇತರೆ ಕೋಮುವಾರು ಜನರು ಇದ್ದಾರೆ.[೪೦]

**ಬ್ರಾಹ್ಮಣರು:** ಪ್ರಾಚೀನ ಮತ್ತು ಮಧ್ಯಯುಗೀನ ಕಾಲದ ಸಮಾಜದಲ್ಲಿ, ಬ್ರಾಹ್ಮಣರು ಅತ್ಯಂತ ಗೌರವಾನ್ವಿತರೆನಿಸಿದ್ದರು. ಅತ್ಯಂತ ಪ್ರಭಾವ ಶಾಲಿಗಳು ಆಗಿದ್ದರು. ಹುಯೆನ್‌ತ್ಸಾಂಗನು ಅಂದಿನ ಸಮಾಜದಲ್ಲಿದ್ದ ನಾಲ್ಕು ವರ್ಣಗಳ ಬಗ್ಗೆ ಬರೆಯುತ್ತ ಬ್ರಾಹ್ಮಣರು ಪರಿಶುದ್ಧ ಜೀವನ ನಡೆಸುತ್ತಿದ್ದರೆಂದು,

ತತ್ವಗಳನ್ನು ಆಚರಣೆಯಲ್ಲಿ ತರುತ್ತಿದ್ದರೆಂದೂ, ಧರ್ಮಾಚರಣೆಯಲ್ಲಿ ತೊಡಗುತ್ತಿದ್ದರೆಂದು ಉಲ್ಲೇಖಿಸಿದ್ದಾನೆ.[೪೧] ಬ್ರಾಹ್ಮಣರು ವರ್ತಕರಾಗಿಯೂ, ಮಂತ್ರಿಗಳಾಗಿಯೂ, ಮಾಂಡಲೀಕರಾಗಿಯೂ, ದಂಡನಾಯಕರಾಗಿಯೂ, ಇದ್ದ ನಿದರ್ಶನಗಳು ಇಲ್ಲದಿಲ್ಲ. ಆದರೆ ಹೆಚ್ಚಿನ ಮಟ್ಟಿಗೆ ಬ್ರಾಹ್ಮಣರ ಕರ್ತವ್ಯ ಪುರೋಹಿತ ಮತ್ತು ಅರ್ಚನಾ ವೃತ್ತಿಗಳಿಗೆ ಮೀಸಲಾಗಿತ್ತು.

**ಕ್ಷತ್ರಿಯರು:** ಬ್ರಾಹ್ಮಣರ ತರುವಾಯ ಸಮಾಜದಲ್ಲಿ ಕ್ಷತ್ರಿಯರ ಸ್ಥಾನ ಹಿರಿಯದಾಗಿತ್ತು. ಅಂದಿನ ಸಾಮಾಜದ ಧಾರ್ಮಿಕ ವ್ಯವಸ್ಥೆಯಲ್ಲಿ ಬ್ರಾಹ್ಮಣ ಸರ್ವೋತ್ತಮವೆನಿಸಿದರೆ, ಆಡಳಿತ ವ್ಯವಸ್ಥೆಯಲ್ಲಿ ಕ್ಷತ್ರಿಯರಾಜನು ಸರ್ವಾಧಿಕಾರಿ ಎನಿಸಿದ್ದನು. ಬ್ರಾಹ್ಮಣರು ಆರ್ಥಿಕವಾಗಿ, ಕ್ಷತ್ರಿಯರನ್ನು ಅವಲಂಬಿಸಿದ್ದರೆ.[೪೨] ಅದಕ್ಕೆ ಪ್ರತಿಯಾಗಿ ಕ್ಷತ್ರಿಯರು ತಮ್ಮ ಪುಣ್ಯಾರ್ಜನೆಯ ವೈದಿಕ ಆಚರಣೆಗಳಿಗಾಗಿ ಬ್ರಾಹ್ಮಣರನ್ನು ಅವಲಂಬಿಸಿದ್ದರು. ಕ್ಷತ್ರಿಯ ಎಂಬ ಪದ "ವೀರ" ಎಂದರ್ಥ. ಇವರ ಕರ್ತವ್ಯ ಹೆಚ್ಚಿನ ಮಟ್ಟಿಗೆ ವ್ಯಾಪಾರ ಮತ್ತು ವ್ಯವಸಾಯ. ಉದಾ :- ಇರುಗುಪ್ಪ ನಾಯಕನಂತಹ ಜೈನ ದಂಡನಾಯಕನಿಂದಲೂ, ವಿಜಯನಗರ ಸಾಮ್ರಾಜ್ಯಕ್ಕೆ ಗಣನೀಯ ಸೇವೆ ಸಂದಿದೆ. ಉಳಿದ ಮತದವರೂ ಏನು ಇಲ್ಲವೆಂದಲ್ಲ. ಆದರೂ ವಿಜಯನಗರ ಕಾಲದಲ್ಲಿ ಕ್ಷತ್ರಿಯರದೇ ಮೇಲುಗೈಯಾಗಿತ್ತು.[೪೩] ವಿಜಯನಗರ ಕಾಲದಲ್ಲಿ ಬ್ರಾಹ್ಮಣರು ಸಹ ಕೇವಲ ದೇವಾಲಯದ ಪೂಜಾ ವಿಧಿಗಳನ್ನು ನಂಬಿರದೇ ಇತರ ವೃತ್ತಿಗಳನ್ನು ಅವಲಂಬಿಸಿದ್ದರು ಎಂಬುದನ್ನು ಪಯಾರ್ಯುನ ಪ್ರವಾಸಿ ಕಥನದಿಂದ ತಿಳಿದು ಬರುತ್ತದೆ.[೪೪]

**ವೈಶ್ಯರು:** ಮೂರನೆಯ ವರ್ಗದವರಾದ ವೈಶ್ಯರು ವರ್ತಕರು. ಬ್ರಾಹ್ಮಣರು ನಾಡಿನ ಧಾರ್ಮಿಕ ಜೀವನ ರೂಪಿಸಿದರೆ, ಕ್ಷತ್ರಿಯರು ರಾಜ್ಯದ ಆಡಳಿತ ಸೂತ್ರವನ್ನು, ವೈಶ್ಯರು ಆರ್ಥಿಕ ವ್ಯವಸ್ಥೆಯನ್ನು ನಿಯಂತ್ರಿಸುವವರಾಗಿದ್ದರು. ಇವರು ವರ್ತಕ ವರ್ಗದವರಾದ ಶೆಟ್ಟರ ಜನಾಂಗದವರು.[೪೫] ಮನುಸ್ಮೃತಿಯಲ್ಲಿ ವೈಶ್ಯರ ಕರ್ತವ್ಯಗಳನ್ನು ಈ ರೀತಿ ಹೇಳಲಾಗಿದೆ. ಪಶುಪಾಲನೆ, ದಾನಕೊಡುವುದು, ಯಜ್ಞಮಾಡುವುದು, ಅಧ್ಯಯನ ಮಾಡುವುದು, ನೆಲ-ಜಲಗಳಲ್ಲಿ ವ್ಯಾಪಾರ ಮಾಡುವುದು, ಬಡ್ಡಿಸಾಲ ಕೊಡುವುದು ಮತ್ತು ಕೃಷಿಯಲ್ಲಿ ತೊಡಗುವುದು.[೪೬] ಆದರೆ ಪ್ರಸ್ತುತ ಈ ನಾಡಿನಲ್ಲಿ ವ್ಯಾಪಾರಿಗಳು (ವರ್ತಕರು) ಮಾತ್ರ ತಮ್ಮನ್ನು ವೈಶ್ಯರೆಂದು ಹೇಳಿಕೊಂಡಿದ್ದಾರೆ. ಇವರು ಸಮಾಜದಲ್ಲಿ ಗಮನಾರ್ಹ ಸೇವೆಯನ್ನು ನಿರ್ವಹಿಸುತ್ತಿದ್ದರು. ವಣಿಕ ಸಮಾಜದ ಅಥವಾ ಶ್ರೇಣಿಯ ಮುಖ್ಯಸ್ಥ, ಇಲ್ಲಿ ವೈಶ್ಯ ಜನಾಂಗಕ್ಕೆ ಸೇರಿ ಸಮಾನರಾಗಿ ಪ್ರಾಮುಖ್ಯತೆಯನ್ನು ಪಡೆದಿದ್ದವರು, ವೀರ ಪಾಂಚಾಳರು.[೪೭]

**ಶೂದ್ರರು:** ಆರ್ಥಿಕವಾಗಿ ನಿರ್ಬಲರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ ನಿಸ್ವಾರ್ಥ ಸೇವೆ ಮಾಡಿಕೊಂಡಿರುವುದೇ ಈ ಶೂದ್ರರ ಕರ್ತವ್ಯವೆಂದು ಮನುಸ್ಮ್ರತಿ ಉಲ್ಲೇಖಿಸುತ್ತದೆ.[೪೮] ಆದರೂ ಇವರಲ್ಲಿ ಡೊಂಬ, ನಾವಿದ ಹಾವಾಡಿಗರು ಮೊದಲಾದವರು ತಮ್ಮ ಹಕ್ಕು-ಬಾಧ್ಯತೆಗಳನ್ನು ಕಾಪಾಡಿಕೊಂಡಿದ್ದರು. ಇವರಿಗೆಲ್ಲ ವಿಜಯನಗರ ಅರಸರಿಂದ ಪ್ರೋತ್ಸಾಹ ದೊರೆಯುತ್ತಿತ್ತು.[೪೯] ಉದಾ: ಡೊಂಬರ ಬದುಕನ್ನು ಚಿತ್ರಿಸುವ ಕೆಲವು ಉಬ್ಬು ಶಿಲ್ಪಗಳು ಮಹಾನವಮಿ ದಿಬ್ಬದ ಸ್ಮಾರಕದಲ್ಲಿ ಕಾಣಬಹುದು. ಇವರ ಚಮತ್ಕಾರದ ಆಟದ ಬಗ್ಗೆ, ಅಬ್ದುಲ್ ರಜಾಕ್ ನವರಾತ್ರಿ ವೈಭವವನ್ನು ವರ್ಣಿಸುವ ಸಂದರ್ಭದಲ್ಲಿ ಹೇಳುತ್ತಾನೆ.[೫೦] ಹಾವಾಡಿಗರು, ಕೋತಿ ಕುಣಿಸುವವರ, ಉಬ್ಬು ಶಿಲ್ಪಗಳನ್ನು ವಿಠಲ ದೇವಸ್ಥಾನ, ಹಜಾರರಾಮ ದೇವಸ್ಥಾನದ ಭಿತ್ತಿಗಳ ಮೇಲೆ ಕಾಣಬಹುದು.[೫೧] ಹೀಗೆ ವರ್ಣ

ಎಂಬ ಶಬ್ದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರ ಈ ಕುರಿತು ಅನೇಕ ಸಾಹಿತ್ಯಿಕ ಕೃತಿಗಳೂ ಇವರ ಲಕ್ಷಣಗಳನ್ನು ನಿರೂಪಿಸುತ್ತವೆ. ವೇದಾಧ್ಯಯನ ವಿಪ್ರರಿಗೂ, ಧರಣಿ ಪಾಲನ ಕ್ಷತ್ರಿಯರಿಗೂ, ವ್ಯಾಪಾರ ವ್ಯವಹಾರ ವೈಶ್ಯರಿಗೂ ಕೃಷಿ ಮುಂತಾದ ಸೇವಾ ವೃತ್ತಿಗಳು ಶೂದ್ರರಿಗೆ ಹೇಳಿಸಿದವು.[೫೨] ಈ ನಾಲ್ಕು ವರ್ಣಗಳ ಮೂಲ ಏನೇ ಇರಲಿ, ಇವು ಅಂದಿನ ಸಮಾಜದ ಮೇಲಿನ ಅಸಮಾನತೆಯನ್ನು ನಿದರ್ಶಿಸುತ್ತವೆ. ಶಿವ ಶರಣರ, ದಾಸಕೂಟದವರು ತಮ್ಮ ವಚನ ಕೀರ್ತನೆಗಳ ಮೂಲಕ ಈ ವ್ಯವಸ್ಥೆಗೆ ಹೊಸ ತಿರುವನ್ನು ನೀಡಿದರು.[೫೩] ಒಟ್ಟಾರೆ ಮೇಲೆ ಹೇಳಿದ ಲಕ್ಷಣದಲ್ಲಿ ನಾಲ್ಕು ವರ್ಣವ್ಯವಸ್ಥೆಯನ್ನು ಸೂಚಿಸಿದರೂ, ಇಲ್ಲಿನ ಪ್ರಾದೇಶಿಕ ವ್ಯವಸ್ಥೆಯಲ್ಲಿ ಈಗಲೂ ಅನೇಕ ಉಪಜಾತಿಗಳು ಇಲ್ಲಿವೆ ಉದಾ: ಬೋದಿ, ಕುರುಬ, ನಾಯಕ ಮುಂತಾದವು.

**ಸ್ತ್ರೀಯರ ಸ್ಥಾನಮಾನ:** ಸುಧೀರ್ಘವಾದ ಭಾರತೀಯ ಇತಿಹಾಸದಲ್ಲಿ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ ತೆರೆತೆರೆನಾಗಿದೆ. ವೇದಕಾಲದಲ್ಲಿ ಸ್ತ್ರೀಯರಿಗಿದ್ದ ಸ್ವಾತಂತ್ರ್ಯ ಮನ್ನಣೆಗಳು ಅನಂತರದ ಕಾಲದಲ್ಲಿ ಕಡಿಮೆಯಾದವು. ಭಾರತೀಯ ಅದರಲ್ಲೂ ಹೆಚ್ಚಾಗಿ ಕರ್ನಾಟಕದ ಸ್ತ್ರೀಗೆ ಗೌರವಸ್ಥಾನವಿದ್ದರೂ[೫೪] "ಅರ್ಥೋಹಿ ಕನ್ಯಾ ಪರಕೀಯ ಏವಾ" ಹೆಣ್ಣು ಮನೆಬಿಟ್ಟು ಹೋಗುವವಳು ಅಥವಾ ಪರಕೀಯ ಎಂಬ ವಾಡಿಕೆಯೂ ಇತ್ತು.[೫೫] ಧಾರ್ಮಿಕ, ರಾಜಕೀಯ, ಆರ್ಥಿಕ, ಕಲೆ, ಸಾಹಿತ್ಯ ಮುಂತಾದ ವಿವಿಧ ರಂಗಗಳಲ್ಲಿ ಮಹಿಳೆಯರು ವಹಿಸಿದ್ದ, ಪಾತ್ರಗಳಿಸಿದ್ದ ಸಾಧನೆ ಅತಿ ಮಹತ್ವದ್ದು.[೫೬] ಸಾಮಾಜಿಕ ರಂಗಗಳಲ್ಲಿ ಹೆಣ್ಣು, ತಾಯಿ, ಪತ್ನಿ, ಸಹೋದರಿ ಮತ್ತು ಮಗಳಾಗಿ ಪಾತ್ರಗಳಾಗಿದ್ದಳು. ಇದಕ್ಕೆ ಶಾಸನಗಳು ಪೂರಕ ಮಾಹಿತಿಯನ್ನು ಒದಗಿಸುತ್ತವೆ. ಮಹಾನವಮಿದಿಬ್ಬ, ಹಜಾರರಾಮ ದೇವಾಲಯ, ಪಟ್ಟಾಭಿರಾಮ ದೇವಾಲಯಗಳ ಹೊರಭಿತ್ತಿಗಳಲ್ಲಿ ಮತ್ತು ಸ್ತಂಭಗಳಲ್ಲಿ, ಕೆಲವು ಶಿಲ್ಪ ಕಲಾಕೃತಿಗಳು ಮಹಿಳೆಯರನ್ನು, ಹೋರಾಟಗಾರ್ತಿಯರಾಗಿ, ಕುಸ್ತಿಪಟುಗಳಾಗಿ, ಅಂಗರಕ್ಷಕರಾಗಿ ಸಂಗೀತರಾಗಿಯೂ, ನೃತ್ಯಗಾರ್ತಿಯರಾಗಿ ಹಬ್ಬಹರಿದಿನ ಆಚರಣೆ ಮಾಡುವುದು ಇತ್ಯಾದಿ ಮೂರ್ತಿಶಿಲ್ಪಗಳಲ್ಲಿ ಕಾಣಬಹುದು.

ಮಹಿಳೆಯರ ಜೀವನದ ಇನ್ನೊಂದು ಮುಖ, ದೇವಾಲಯಗಳಿಗೆ ದಾನಗಳನ್ನು ನೀಡುವುದು. ಉದಾ: ಕೃಷ್ಣದೇವಾರಾಯನ ರಾಣಿಯರಾದ ತಿರುಮಲಾದೇವಿ ಮತ್ತು ಚಿನ್ನಾದೇವಿ, ತಿರುಪತಿಯ ದೇವರಿಗೆ ಚಿನ್ನದ ಬಟ್ಟಲು, ಕಂಠೀಹಾರ, ಪದಕಹಾರ, ಗ್ರಾಮ ಇತ್ಯಾದಿಗಳನ್ನು ಅರ್ಪಿಸಿದರು.[೫೭] ಹೀಗೆ ಶಾಸನಗಳು ಹಾಗೂ ಪುರಾತತ್ವ ಆಕರಗಳು ಅಂದಿನ ಸ್ತ್ರೀಯರಿಗೆ ಗೌರವಿತ್ತೆಂಬುದನ್ನು ಧೃಡಪಡಿಸುತ್ತವೆ. ಬ್ರಾಹ್ಮಣರಿಗೆ ದಾನ ಮಾಡುವುದು, ಕೆರೆಕಟ್ಟೆ, ಅಗ್ರಹಾರ, ಛತ್ರ ನಿರ್ಮಾಣ ಮಾಡುವ ಮೊದಲಾದ ಜನೋಪಕಾರ್ಯಗಳಲ್ಲೂ, ಮಹಿಳೆ ಸಕ್ರಿಯವಾಗಿ ಭಾಗವಹಿಸುತ್ತಿದ್ದಳು. ಈ ರೀತಿಯ ಮಹಿಳೆಯರ ಸ್ಥಾನ ಮಾನದ ದಾರಿಯಲ್ಲಿ, ಕಂಟಕ ಪ್ರಾಯವಾಗಿದ್ದ ವೇಶ್ಯಾವೃತ್ತಿ (ಸೂಳೆ), ದೇವದಾಸಿ ವ್ಯವಸ್ಥೆ ಮತ್ತು ಸತಿಸಹಗಮನ ಮೊದಲಾದ ಅನಿಷ್ಠ ಪದ್ದತಿಗಳು ಈ ಸಮಾಜದಲ್ಲಿ ಬಲಿಷ್ಠವಾಗಿದ್ದವು ಎಂಬುದು ಗಮನಿಸಬೇಕಾದ ಅಂಶ.[೫೮]

**ಸೂಳೆಯರು:** ಸೂಳೆಯರು, ದೇವದಾಸಿಯರೆಂದು, ಭಗವಂತನ ದಾಸಿಯರು ದೇವರ ಸೇವಾ ಕೈಕಾರ್ಯಗಳಿಗೆ ನೆರವೇರಿಸುವವರು ಎಂದರ್ಥ.[೫೯] ದೇವಾಲಯಗಳಲ್ಲಿ ನೃತ್ಯ, ಗಾಯನ ಮಾಡುವ ಮೂಲಕ ದೇವರ ಸೇವೆಯನ್ನು ಮಾಡಿಕೊಂಡು ಬದುಕುವವರು. ಗರ್ಭಗೃಹದ ಮುಂದೆ

ರಂಗಮಂಟಪದಲ್ಲಿ ನಡೆಯುವ ಗಾಯನ ನೃತ್ಯಗಳೇ ರಂಗಭೋಗಗಳು, ಇದರ ಉಪಕರಣಗಳು ದೇವದಾಸಿಯರು. ಮೊಟ್ಟಮೊದಲ ಬಾರಿಗೆ ಬಾದಾಮಿ ಚಲುಕ್ಯರ ಕಾಲದಲ್ಲಿ ಪಟ್ಟದಕಲ್ಲಿನ ವಿರುಪಾಕ್ಷ ದೇವಾಲಯದ ದೇಗುಲದ ಸೂಳೆಯೊಬ್ಬಳು ದಾನ ಮಾಡಿದ ಮೊದಲ ಉಲ್ಲೇಖ ಕಂಡುಬರುತ್ತದೆ.[೬೦] ದೇವಾಲಯಗಳು ಬೆಳೆದಂತೆ ಸೂಳೆಯರ ಸಂಖ್ಯೆಯೂ ಉಲ್ಬಣಗೊಂಡಿತು. ಇವರ ಕಾರ್ಯಕ್ಷೇತ್ರವೂ ಹೆಚ್ಚಾಯಿತು. ಇವರ ಕೆಲಸಕ್ಕೆ ತಕ್ಕಂತೆ, ಸೂಳೆಯರಿಗೆ ಹೆಸರನ್ನು ಇಡಲಾಯಿತು. ಸ್ತಂಭದ ಪಕ್ಕದಲ್ಲಿ ದೇವಾಲಯದ ಅಲಂಕಾರಕ್ಕೆ ನಿಲ್ಲುವ ಸೂಳೆಯನ್ನು ಸ್ತಂಭ ಸೂಳೆಯರೆಂದು ಕರೆಯಲಾಯಿತು.[೬೧] ನರ್ತನ, ನೃತ್ಯಾದಿ ಕಾರ್ಯಗಳನ್ನು ಮಾಡುವ ಸೂಳೆಯನ್ನು "ಪಾತ್ರ" ಎಂದು ಶಾಸನಗಳು ಕರೆದಿವೆ.[೬೨] ಗರ್ಭಗೃಹದಿಂದ ಹೊರಗೆ ಹೊರಟಾಗ ದೇವರಿಗೆ ಚಾಮರವನ್ನು ಬೀಸುತ್ತಿದ್ದರು. ಈ ಚಾಮರ ಬೀಸುವ ಕಾರ್ಯಕ್ಕೆ ನೇಮಕ ಮಾಡಿಕೊಂಡ ಸೂಳೆಯರನ್ನು "ಚಾಮರದ ಸೂಳೆಯರು" ಎಂದು ಕರೆಯಲಾಗಿದೆ.[೬೩] ಹೀಗೆ ವೃತ್ತಿಗನುಗುಣವಾಗಿ ಅವರನ್ನು ಕರೆಯಲಾಗುತ್ತಿತ್ತು. ದೇವಾಲಯಗಳಲ್ಲಿ ಇವರ ಸೇವೆ ವಂಶಪಾರಂಪರ್ಯವಾಗಿತ್ತು.[೬೪] ದೇವದಾಸಿಯರೆಲ್ಲರೂ ವೇಶ್ಯಯರೇ, ವೇಶ್ಯಯರೆಲ್ಲರೂ ದೇವದಾಸಿಯರಾಗಿರಲಿಲ್ಲ.[೬೫]

**ಪಾಯೆರ್ಝ್**: ದೇವರ ಪೂಜೆಯ ಸಮಯದಲ್ಲಿ ದೇವಸ್ಥಾನಕ್ಕೆ ಸೇರಿದ ದೇವದಾಸಿಯರು ನೃತ್ಯಮಾಡುತ್ತಾರೆ. ಇವರು ಸೂಳೆಗಾರಿಕೆ ಮಾಡುತ್ತಾ ಊರಿನ ಪ್ರಮುಖ ಬೀದಿಯಲ್ಲಿ ವಾಸ ಮಾಡುತ್ತಾರೆ. ಇವರ ಬಗ್ಗೆ ಜನರಲ್ಲಿ ಬಹಳ ಗೌರವ ಭಾವನೆ ಇದೆ[೬೬] ಎಂದು ವಿದೇಶಿ ಪ್ರವಾಸಿ ಪಾಯೆರ್ಝ್ ದಾಖಲಿಸಿದ್ದಾನೆ. ದೇವರ ಸೇವೆಯಲ್ಲಿ ಧಾರ್ಮಿಕರಂಗದಲ್ಲಿ ಬಿಗಿಯಾದ ಹಿಡಿತಹೊಂದಿದ ವೇಶ್ಯಯರು ವಿಜಯನಗರದ ಪ್ರತಿಯೊಂದು ದೇವಾಲಯಗಳಿಗೆ ಅರಸರು, ಪಟ್ಟಣ ಸ್ವಾಮಿಗಳು, ಶ್ರೀಮಂತರು, ನಾಗರೀಕರು ಅನೇಕ ದಾನಗಳನ್ನು ನೀಡಿದರು. ಹೀಗೆ ಶ್ರೀಮಂತ ಖಜಾನೆಗಳಾಗಿ ದೇವಸ್ಥಾನಗಳು ಮೆರೆದವು. ಪುರೋಹಿತ ಮತ್ತು ದೇವದಾಸಿಯರ ಸಂಬಂಧ ಹದಗೆಟ್ಟಿತು. ದೇವಾಲಯದ ವಾರ್ಷಿಕ ಆಚರಣೆಯಾದ ರಥದ ಉತ್ಸವ ಕಾರ್ಯದಲ್ಲಿ ರಥದ ಮೇಲೆ ಉತ್ಸವ ಮೂರ್ತಿ ಇಟ್ಟು ವೈಭವದಿಂದ ಮೆರವಣಿಗೆ ಮಾಡುತ್ತಾರೆ. ಆಗ ಸೂಳೆಯರು ಇತರ ಸ್ತ್ರೀಯರು ಹಾಡುತ್ತಾ ಈ ಉತ್ಸವದಲ್ಲಿ ಭಾಗವಹಿಸುತ್ತಾರೆ ಎಂದು ಪಾಯೆರ್ಝ್ ಹೇಳುತ್ತಾನೆ.

ಸೋಮನಾಥ ಕವಿಯು ರಾಜ ಸಭೆಯಲ್ಲಿ ವೇಶ್ಯಯರಿದ್ದರೆ ಅದು ಶುಭ ಸೂಚನೆ ಎಂದು ಹೇಳುತ್ತಾನೆ. ಇದು ಸ್ವಾಭಾವಿಕ ವೃತ್ತಿ ಎಂಬುದು ಸಾಮಾಜಿಕ ದುರಂತವೇ ಸರಿ. ಈ ರಾಜಧಾನಿಯಲ್ಲಿ ಅನಾರೋಗ್ಯಕರ ಸಂಸ್ಕೃತಿಯು ನಿರ್ಮಾಣಗೊಂಡು ನೈತಿಕತೆಯು ಕುಸಿಯಲಾರಂಭಿಸಿತು.[೬೭] ಚೆನ್ನ ಬಸವ ಪುರಾಣದಲ್ಲಿ ಹೇಳುವಂತೆ ಶಿವಭಕ್ತ ಸೂಳೆಯರ ಗುಂಪು ಅಲ್ಲಿಗೆ ಬಂದ ವಿಟಜಂಗಮರೊಡನೆ ಕೂಡಿ ಅನಂತ ಸೌಖ್ಯ ಪಡೆಯುತ್ತಿದ್ದು, ನಂತರದಲ್ಲಿ ಶಿವಪೂಜೆ ಮಾಡುತ್ತಿದ್ದರು. ಇದರಿಂದ ಬಹುತೇಕ ದೇವಾಲಯ ಕಾಮಕೇಳಿಯ ತಾಣಗಳಾಗಿದ್ದವೆಂಬುದು ನಿಖರವಾಗುತ್ತದೆ.[೬೮] ಒಟ್ಟಾರೆಯಾಗಿ ಹೀಗೆ ವಿಜಯನಗರ ಕಾಲದಲ್ಲಿ ಈ ಅನಿಷ್ಠ ಪದ್ಧತಿ ಪ್ರಚಲಿತದಲ್ಲಿದ್ದು, ಇದು ಅಂದಿನ ಕಾಲದ ಧಾರ್ಮಿಕ ಪರಿಸರ ವಿಜಯನಗರದ ಕೊನೆಯ ಕಾಲಕ್ಕಾಗಲೇ ಅಧೋಗತಿಗಿಳಿದಿತ್ತು ಎಂಬುದು ಸ್ಪಷ್ಟಪಡಿಸುತ್ತದೆ.

**ಸಹಗಮನ ಪದ್ದತಿ:** ಹಿಂದೂ ಸಂಸ್ಕೃತಿಯ ಒಂದು ಆಚರಣೆ. ಮರಣಹೊಂದಿದ ಗಂಡನ ಜೊತೆಗೆ ಚಿತೆಗೆ ಹಾರಿ ತಾವು ಪ್ರಾಣ ತ್ಯಾಗ ಮಾಡುವ ಪದ್ದತಿ ಇತ್ತು. ಈ ಪದ್ದತಿ ಹೆಚ್ಚು ಪ್ರಚಲಿತದಲ್ಲಿತ್ತು. ಇಂದು ನಮಗೆ ಇದು ನಿಕೃಷ್ಟವೆನಿಸಿದರೂ ಈ ಪದ್ದತಿ ಅಂದಿನ ಸಮಾಜದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ.[೬೯]

**ಸಾಮಾಜಿಕ ಕಾರ್ಯಗಳು:** ಸಮಾಜದ ಜನರ ಜೀವನಕ್ಕೆ ಧರ್ಮವೇ ನಿರ್ಣಾಯಕ ಶಕ್ತಿ. ಇದು ಜನರ ಜೀವನದ ಎಲ್ಲಾ ರಂಗಗಳಲ್ಲಿಯೂ ಪಸರಿಸಿದೆ. ಧರ್ಮವನ್ನು ಅವಲಂಬಿಸಿದ ಮನುಜ ಸದ್ಗತಿಯನ್ನು ಸಂಪಾದಿಸುತ್ತಾನೆ.[೭೦] ಮಾನವನ ಮನಸ್ಸಿನಲ್ಲಿ ಬೇರೂರಿದ ಕೆಲವು ಭಾವನೆಯಲ್ಲಿ ಧರ್ಮವೂ ಒಂದು. "ಧರ್ಮೋ ರಕ್ಷತಿರಕ್ಷಿತ" ಎಂದರೆ ಧರ್ಮವನ್ನು ರಕ್ಷಣೆ ಮಾಡಿದರೆ ಧರ್ಮ ನಮ್ಮನ್ನು ರಕ್ಷಿಸುತ್ತದೆ ಎಂಬ ಭಾವನೆಯಿಂದ ಸಮಾಜದ ಒಳಿತಿಗಾಗಿ ಧರ್ಮಕಾರ್ಯಗಳನ್ನು ಮಾಡುವುದು ಅಥವಾ ದಾನ ಮಾಡುವುದು ಪುಣ್ಯಸಂಪಾದನೆಗಾಗಿ. ಹೀಗಾಗಿ ಸಮಾಜದಲ್ಲಿ ದೇವಾಲಯಗಳ ನಿರ್ಮಾಣ, ಕೆರೆ, ಬಾವಿ ನಿರ್ಮಿಸುವುದು, ಉದ್ಯಾನವನ, ಅರವಟ್ಟಿಗೆ ಮತ್ತು ಛತ್ರ ನಿರ್ಮಿಸುವುದು. ಇವು ಸಾಮಾಜಿಕ ಕಾರ್ಯಗಳಾಗಿದ್ದವು.

**ಉದ್ಯಾನವನ:** ಉದ್ಯಾನವನ ಎಂಬುದು ಸಾರ್ವಜನಿಕ ಉಪಯೋಗಕ್ಕಾಗಿ ಇದ್ದ ವಿಹಾರೋದ್ಯೋಗ.೭೧ ವಿರುಪಾಕ್ಷೇಶ್ವರ ಪಥದ ಇಕ್ಕೆಲದಲ್ಲಿ ಸುರದ್ರುಮಗಳನ್ನು ಇಡಲಾಗಿತ್ತು. ಇಲ್ಲಿ ಹೂವಿನ ತೋಟಗಳನ್ನು ನಿರ್ಮಿಸಲಾಗಿತ್ತು.[೭೨] ಕ್ರಿ.ಶ.೧೫ ಮತು ೧೬ನೇ ಶತಮಾನದ ಶಾಸನ ಕೃಷ್ಣರಾಯ ಕೆರೆಯ ದೇವರ ತೋಟವನ್ನು ಉಲ್ಲೇಖಿಸುತ್ತದೆ.[೭೩] ಪ್ರಮುಖ ದಾರಿಗಳ ಅಕ್ಕ-ಪಕ್ಕ ಸಾಲುಮರಗಳನ್ನು ನಡೆಸಿದ್ದ ವಿಷಯವನ್ನು ವಿದೇಶಿಯರ ಬರವಣಿಗೆಯ ಪ್ರವಾಸಿ ಕಥನದಲ್ಲಿ ತಿಳಿಸಲಾಗಿದೆ. ೧೫ ಮತ್ತು ೧೬ನೇ ಶತಮಾನದ ಶಾಸನ ವೆಂಕಟರಾಯನ ತೋಟವನ್ನು ಉಲ್ಲೇಖಿಸಿದೆ.[೭೪]

**ಅರವಟ್ಟಿಗೆ:** ಅರೆ ಎಂದರೆ "ಧರ್ಮ", ವಾಟಿಕಾ ಎಂದರೆ "ಸ್ಥಳ" ಅಂದರೆ ಧರ್ಮದ ಸ್ಥಳವೆಂದರ್ಥ. "ಅರಚ್ಚಾಲೈ" ಎಂಬುದಾಗಿ ತಮಿಳು ಪದ ಇದೆ. ಧರ್ಮದ ಸ್ಥಳದಲ್ಲಿ ಧರ್ಮಕಾರ್ಯವಾದ ಬಾಯಾರಿಕೆ ಇಂಗಿಸಿಕೊಳ್ಳಲು ಅರವಟ್ಟಿಕೆ ಅವಶ್ಯ, ಆದಕಾರಣ ಪ್ರಯಾಣಿಕರಿಗೆ ಬಾಯಾರಿಕೆಯನ್ನು ಹಿಂಗಿಸಿಕೊಳ್ಳಲು ದಾರಿಗಳ ಪಕ್ಕದಲ್ಲಿ ಅರವಟ್ಟಿಕೆಗಳು ಇರುತ್ತಿದ್ದವು. ಛತ್ರಗಳಲ್ಲಿ, ದೇವಸ್ಥಾನಗಳಲ್ಲಿ, ಸ್ವತಂತ್ರವಾಗಿಯೂ ಇರುತ್ತಿದ್ದವು ಇಂತಹ ಅರವಟ್ಟಿಗೆಗಳು ಕಾಣಸಿಗುತ್ತವೆ. ಅರವಾಟಿಕಾ, ಅರವಂಟಿಕೆಯಾಗಿದೆ. ಬಹುತೇಕ ಪ್ರಾಚೀನ ಕಾವ್ಯಗಳು ಹಾದಿಬದಿಯ ಅರವಂಟಿಕೆ ಮತ್ತು ಅಲ್ಲಿ ನೀರೆರೆಯುವ ಯುವತಿಯರನ್ನು ವರ್ಣಿಸಿವೆ.[೭೫] ಉದಾ: ರಾಣಿ ಸ್ನಾನಗೃಹದಿಂದ ೧/೨ ಕಿ.ಮೀ ದೂರದಲ್ಲಿ ಹಂಪಿಗೆ ಹೋಗುವ ರಸ್ತೆಯ ಬಲ ಪಕ್ಕದಲ್ಲಿ ಈ ಅರವಟ್ಟಿಗೆ ಅಷ್ಟಕೋನಾಕೃತಿಯಲ್ಲಿ ರಚನೆಯಾಗಿರುವುದನ್ನು ಕಾಣಬಹುದು.

**ಛತ್ರಗಳು:** ಪ್ರವಾಸಿಗರಿಗೆ ಅರವಟ್ಟಿಕೆಗಳಲ್ಲಿ ನೀರು ಲಭ್ಯವಾದರೆ ಛತ್ರ(ಸತ್ರ)ಗಳಲ್ಲಿ ಆಹಾರ, ವಿಶ್ರಾಂತಿ ತೆಗೆದುಕೊಳ್ಳಲು ವಸತಿಯೂ ಲಭ್ಯವಾಗುತ್ತಿತ್ತು.[೭೬] "ಸತ್ರ" ಎಂಬುದು ಛಾತ್ರದಿಂದ ಬೆಳೆದು ಬಂದಿರುವ ಸಾಧ್ಯತೆಗಳು ಇವೆ. ಛಾತ್ರ ಎನ್ನುವುದು ಊಟ, ವಸತಿಗಳ ಸ್ಥಳವಾಗಿದ್ದು, ಇವು ಪ್ರವಾಸಿಗರ ಅನ್ನದಾನ ಕೇಂದ್ರಗಳಾಗಿ ಪ್ರಸ್ತುತ ಛತ್ರಗಳಾಗಿವೆ. ಇಂತಹ ಛತ್ರಗಳು ಕಾಮಲಾಪುರದ ಪರಿಸರದಲ್ಲಿ ನಿರ್ಮಿತವಾಗಿವೆ.

೧. ಅಹಮ್ಮದಾಖಾನ ಛತ್ರ ಮತ್ತು ೨. ದಾದಾಪೀರ ಛತ್ರ

ಎರಡನೇ ದೇವರಾಯನ ಸೇವಕನಾದ ಕಟಿಗೆಯ ಅಹಮ್ಮದ್ ಖಾನನು ಅರಸನಿಗೆ ಪುಣ್ಯವಾಗಲೆಂದು ಕ್ರಿ.ಶ.೧೪೩೯ ರಲ್ಲಿ ಅಹಮ್ಮದ್ ಖಾನ್‌ನು ಛತ್ರವನ್ನು ಮತ್ತು ಅದರ ಬಳಿ ಬಾವಿಯನ್ನು ನಿರ್ಮಿಸಿದನು.[೭೭] ಹೀಗೆ ಕಾಮಲಾಪುರದ ಮಧ್ಯಕಾಲೀನ ಇತಿಹಾಸದಲ್ಲಿ ಧರ್ಮಛತ್ರದ ಉಪಯೋಗ ಕುರಿತು ಶಾಸನಗಳು ಪೂರಕ ಮಾಹಿತಿಯನ್ನು ನೀಡಿವೆ.

ಕ್ರಿ.ಶ.೧೮೩೨-೩೩ರಲ್ಲಿ ಸೈಯದ್ ಶಂಸುದ್ದೀನ್ ಖಾದರಿ ಉರ್ಫ್ ದಾದಾ ಪೀರ ಛತ್ರ ನಿರ್ಮಿಸಿದನು.[೭೮] ಹಿಂದೂ-ಮುಸ್ಲಿಂ ಏಕತೆಯ ದೃಷ್ಟಿಯಿಂದ ನಿರ್ಮಾಣವಾದ ಸ್ಮಾರಕ. ಇದರ ಪೂರ್ವದಿಕ್ಕಿಗೆ ಇದರ ಸಂಬಂಧವಾಗಿ ತೋರಿಸಿದ ನೀರಿನ ಬಾವಿಯೂ ಕಾಣಸಿಗುತ್ತದೆ.

ಅರವಟಿಕೆಯಂತೆ ಇನ್ನೊಂದು ಸಮಾಜ ಕಾರ್ಯ, ಕೆರೆ, ಬಾವಿ, ಆಣೆಕಟ್ಟು, ಕಾಲುವೆಗಳನ್ನು ತೋಡಿಸುವುದು. ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರಮಂ ಮಾಡಿಸು ಎಂಬ ವಿಜಯನಗರದ ಪ್ರೌಢದೇವರಾಯನ ಮಂತ್ರಿಯ ಲಕ್ಷ್ಮೀಧರಾಮಾತ್ಯನ ಶಾಸನ[೭೯] ಹಾಗೂ "ತೋಡದ ಬಾವಿಯಲ್ಲಿ ಮರಕಟ್ಟದ ಪೇರ್ಗ್ಗರೆಯಿಲ್ಲ ಲೀಲೆಯಂ" ಎಂಬ ಶಾಸನ ಈ ಎರಡೂ ಶಾಸನಗಳು ವಿಜಯನಗರ ಕಾಲದಲ್ಲಿನ ಸಾಮಾಜಿಕ ಕಾರ್ಯಗಳನ್ನು ಎತ್ತಿ ತೋರಿಸುವ ಆಕರಗಳಾಗಿವೆ.

ತುಂಗಭದ್ರಾ ನದಿಯ ಆಣೆಕಟ್ಟು, ವಿಜಯನಗರ ಪಟ್ಟಣದ ಪಕ್ಕವಿರುವುದರಿಂದ, ಈಗಲೂ ಕಾಮಲಾಪುರ ಈ ಪಟ್ಟಣದಲ್ಲಿ ಒಳಗೊಳ್ಳುವುದರಿಂದ ಈಗಲೂ ಉಪಯುಕ್ತ. ಚಿಂತಾಯಕ ದೇವಣ್ಣನು ತುರ್ತು ಕಾಲುವೆಯ ಆಣೆಕಟ್ಟನ್ನು ಕಟ್ಟಿಸಿದನೆಂದು, ಬೊಮ್ಮೋಜನು ಇದನ್ನು ಕಟ್ಟಿದನೆಂದು ಶಾಸನ ದಾಖಲಿಸಿದೆ.[೮೦] ಇದೇ ರೀತಿ ಬಾಗಿಲ ಬಸವಣ್ಣ ಅಣ್ಣ ಗುಂಡನ್ನು ಒಡೆಸಿ ವಿರುಪಾಕ್ಷ ಅರಸ ಆದೇಶದ ಮೇರೆಗೆ ಕಾಲುವೆಯನ್ನು ನಿರ್ಮಿಸಿದರ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ.[೮೧] ಪ್ರಸ್ತುತ ತುರ್ತು ಕಾಲುವೆಯ ಶಾಸನ, ಕಳಸಾಪುರದ ಮಾಗಣಿಯ ಸಲುವರೇವತಾಪುರ ಗ್ರಾಮದಲ್ಲಿ ಹಾಳು ಕಾಲುವೆಯನ್ನು ಉಲ್ಲೇಖಿಸುತ್ತದೆ.[೮೨] ಕೆರೆಗಳ ಕುರಿತು ಸಮಾಜ ಕಾರ್ಯಕ್ಕಾಗಿ ಜೀವ ತ್ಯಾಗ ಮಾಡಿದ ಜಾನಪದ ಉಲ್ಲೇಖವೊಂದು ದಾಖಲಿಸಲ್ಪಟ್ಟಿದೆ. ಜನಪದ ಗೀತೆಯೊಂದು (ಕೆರೆಗೆಹಾರ) ಗೌಡನ ಕಿರಿಯ ಸೊಸೆ ತನ್ನನ್ನು ಕೆರೆಗೆ ಆಹಾರವಾಗಿ ಅಥವಾ ಬಲಿಯಾಗಿ ಅರ್ಪಿಸಿಕೊಳ್ಳುತ್ತಾಳೆ.[೮೩] ಪ್ರವಾಸಿ ಕಥನದಲ್ಲಿ ಕೃಷ್ಣದೇವರಾಯ ವಿಜಯನಗರದಲ್ಲಿ ನಿರ್ಮಿಸಿದ ಕೆರೆಗಾಗಿ ೬೦ ಜನರ ಬಲಿ ನೀಡಲಾಗಿತ್ತೆಂಬ ಉಲ್ಲೇಖವಿದೆ.[೮೪] ಕ್ರಿ.ಶ.೧೩೮೦ ಶಾಸನವೊಂದು ಬೇಟೆಗಾರನ ಹೆಬ್ಬಾಗಿಲಿನ ಪೂರ್ವದಿಕ್ಕಿಗೆ ಒರತೆಯ ಮೈಲಾರ ದೇವರನ್ನು ಪ್ರತಿಷ್ಠಾಪಿಸಿ ವಾಯುವ್ಯ ದಿಕ್ಕಿಗೆ ಒರತೆಯ ಕೊಂಡವನ್ನು ನಿರ್ಮಿಸಿದನೆಂದಿದೆ.[೮೫]

ನರಸಿಂಹ ದೇವನ ಮಗ ದೇವರಾಯನು, ಬುಕ್ಕುರನ ಬಾವಿಯನ್ನು ಕಟ್ಟಿಸಿದಂತೆ ಕ್ರಿ.ಶ.೧೪೧೧ರ ಶಾಸನ ತಿಳಿಸುತ್ತದೆ.[೮೬] ಕ್ರಿ.ಶ.೧೪೩೯ರಲ್ಲಿ ಮಹಾರಾಯನ ಕಟಿಗೆಯ ಸೇವೆಯ ಅಹಮ್ಮದಖಾನನು, ರಾಜನಿಗೆ ಧರ್ಮವಾಗಬೇಕೆಂದು ಧರ್ಮಶಾಲೆ ಮತ್ತು ಬಾವಿಯನ್ನು ನಿರ್ಮಿಸಿದನೆಂದಿದೆ.[೮೭] ಕುಂತೂರ ಯತಿರಾಜ ದೇವನ ಮಗ ವಲ್ಲಭಯ್ಯ ಕಟ್ಟಿಸಿದ ನಾಡದ ಬಾವಿ, ಕೊಂಡಮರಸಯ್ಯ ಕಟ್ಟಿಸಿದ ಕಪಿಲೆಯ ಬಾವಿ ಉಲ್ಲೇಖ ಕ್ರಿ.ಶ.೧೫೩೧ರ ಶಾಸನದಲ್ಲಿದೆ.[೮೮] ಕ್ರಿ.ಶ.೧೫೩೯ರ ಶಾಸನವು ದೇವರ

ಪಲ್ಲಿಯ ಮುಮ್ಮಡಿ ಶೆಟ್ಟಿ ಎಂಬುವವನಿಗೆ ಪುಣ್ಯವಾಗಲಿ ಎಂದು ಬಾವಿ ಮತ್ತು ತೋಟದಾನ ನೀಡಿದ ವಿಚಾರ ಇದರಲ್ಲಿ ಉಲ್ಲೇಖಿತವಾಗಿದೆ.[೮೯] ಓಬಯ್ಯನು ದುರುಗುಂಟು ರಘುನಾಥ ದೇವರ ನೀರಿನ ಕೊಳವನ್ನು ಧರ್ಮಕ್ಕಾಗಿ ಕಟ್ಟಿಸಿದನು.[೯೦] ತಿರಿವಿದಿಬಿಟಿನಾಗಿನೇನಿಯ ಮಗ ಚೆನ್ನಪ್ಪನಾಯಂಡು ರಂಗನಾಥ ಬಾವಿಯನ್ನು ನಿರ್ಮಿಸಿದ್ದುನ್ನು ಶಾಸನವೊಂದು ವಿವರಿಸುತ್ತದೆ.[೯೧] ಕ್ರಿ.ಶ.೧೫ ಮತ್ತು ೧೬ನೇ ಶತಮಾನದ ಮತ್ತೊಂದು ಶಾಸನ ಲಿಂಗಬಾವಿಯನ್ನು[೯೨] ಸರಸ್ವತಿ ದೇವಾಲಯದ ಹತ್ತಿರವಿರುವ ಶಾಸನ ಉಲ್ಲೇಖಿಸಿವೆ.[೯೩]

ಹೀಗೆ ಇವು ಕೇವಲ ಉದಾಹರಣೆಗಳು ಮಾತ್ರ. ಒಟ್ಟಿನಲ್ಲಿ ಸಾಹಿತ್ಯಿಕ ಪುರಾವೆಗಳು ಹಾಗೂ ಶಾಸನಗಳು ಸಾಮಾಜಿಕ ಕಾರ್ಯಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನು ಒದಗಿಸಿದೆ. ಕಾಮಲಾಪುರದ ಶಾಸನಗಳ ಹೊರತಾಗಿ ಸುತ್ತ ಮುತ್ತ ಪರಿಸರದಲ್ಲಿನ ಶಾಸನಗಳೂ ಕೆರೆ, ತಟಾಕ, ಬಾವಿಗಳ ನಿರ್ಮಾಣ ಮತ್ತು ಸಾಮಾಜಿಕ ಕಾರ್ಯಗಳನ್ನು ಮಾಡಿದ್ದರ ಕುರಿತು ಶಾಸನಗಳು ಉಲ್ಲೇಖಿಸಿವೆ. ಪುಣ್ಯಾರ್ಜನೆಗಾಗಿ ದತ್ತಿಗಳನ್ನು ಬಿಡುವುದು ಕೂಡ ವೈಯಕ್ತಿಕ ಕಾರ್ಯ. ಒಟ್ಟಾರೆ ಪ್ರಸ್ತುತ ಸಾಮಾಜಿಕ ಕಾರ್ಯಗಳೆಲ್ಲವೂ ಸರ್ವಸಮ್ಮತವಾಗಿದೆ ಎಂಬುದನ್ನು ಈ ಎಲ್ಲಾ ಆಕರಗಳು ಧೃಡಪಡಿಸಿವೆ.

**ಆರ್ಥಿಕ ಪರಿಸ್ಥಿತಿ:**

**ಭೂಮಿ:** ಒಂದು ಪ್ರದೇಶದ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಆ ಪರಿಸರದ ನೈಸರ್ಗಿಕ ಸಂಪತ್ತು ಮೂಲಭೂತ ಸೌಕರ್ಯಗಳು ಮತ್ತು ಜನರ ದುಡಿಮೆ ಅವಲಂಬಿತವಾಗಿರುತ್ತದೆ. ಈ ವ್ಯವಸ್ಥೆಗೆ ಅನುಗುಣವಾಗಿ ಪ್ರದೇಶದ ಜನ-ಜೀವನ ಪದ್ದತಿ ನಿರ್ಧಾರವಾಗುತ್ತದೆ. ಈ ದೆಸೆಯಲ್ಲಿ ಹಂಪೆ ಕ್ಷೇತ್ರದಲ್ಲಿ ವಿಲೀನಗೊಂಡ ಕಾಮಲಾಪುರ ಪ್ರದೇಶ, ಅಂದಿನಿಂದ ಇಂದಿನವರೆಗೂ ವ್ಯವಸಾಯದ ಚಟುವಟಿಕೆಗಳ ಕೇಂದ್ರ. ಇದು ಅಲ್ಲಿನ ಜನರ ಜೀವನದ ಮೇಲೆ ನಿರ್ಧಾರವಗುತ್ತದೆ. ಈ ಪ್ರದೇಶದ ಆರ್ಥಿಕ ವ್ಯವಸ್ಥೆಯನ್ನು ಅರಿಯಲು ಪ್ರಮುಖ ಆಕರಗಳಲ್ಲಿ ಶಾಸನಗಳು ಬಹು ಮುಖ್ಯ ಪಾತ್ರವನ್ನು ನಿರ್ವಹಿಸಿವೆ. ಸಮಕಾಲೀನ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಭೂಮಿ ಪ್ರಮುಖ ಸ್ಥಾನ ಪಡೆದಿದೆ. ವಿಜಯನಗರದ ಅಚ್ಯುತದೇವರಾಯನ ಕಾಲದ ಕ್ರಿ.ಶ.೧೫೩೪ರ ಶಾಸನವೊಂದು ತೆಂಗು, ಹಲಸು, ಎಲೆ-ಬಳ್ಳಿ, ಹುಣಸೆ, ನಿಂಬೆ, ಮಾದಳ ಮೊದಲಾದವುಗಳನ್ನು ಸೋಮಲಾಪುರ ಸೀಮೆಯಲ್ಲಿ ಬೆಳೆಯುತ್ತಿದೆಂದು ತಿಳಿದು ಬರುತ್ತದೆ.[೯೪] ಕಾಮಲಾಪುರ ಇಲ್ಲಿನ ಭೂಮಿಯು ಕರಿಮಣ್ಣು, ಕೆಂಪು ಮಣ್ಣು ಮತ್ತು ಮಿಶ್ರಮಣ್ಣುಗಳಿಂದ ಆವೃತವಾಗಿದೆ. ವ್ಯವಸಾಯವೇ ಅಂದಿನ ಜನರ ಪ್ರಮುಖ ಉದ್ಯೋಗವಾಗಿತ್ತು. ಈ ಪ್ರದೇಶದಲ್ಲಿ ಒಣ ಬೇಸಾಯ ಭೂಮಿ (ಮಳೆ ಆಧಾರಿತ) ಮತ್ತು ನೀರಾವರಿ ಬೇಸಾಯ ಭೂಮಿಗಳೆರಡೂ ಕಂಡು ಬರುತ್ತವೆ.[೯೫] ಸ್ಥಳೀಯ ಶಾಸನಗಳು ಗದ್ದೆ ಮತ್ತು ತೋಟಗಳಿದ್ದ ಭೂಮಿಗಳನ್ನು ಹೆಸರಿಸಿವೆ.

**ನೀರಾವರಿ:** ಪ್ರಾಚೀನ ಕಾಲದಲ್ಲಿ ನೀರಾವರಿ ವ್ಯವಸ್ಥೆ ಮುಖ್ಯವಾಗಿ ನದಿ, ಬಾವಿ, ಕೆರೆಗಳನ್ನು ಅವಲಂಬಿತವಾಗಿತ್ತು. ಆಳರಸಾದಿಗಳು ಕೆರೆ, ಬಾವಿ, ಕಾಲುವೆಗಳನ್ನು ನಿರ್ಮಿಸುವುದು ಶ್ರೇಯಸ್ಕರವೆಂದು ಭಾವಿಸಿದ್ದರು. ಬಾವಿ, ಕೆರೆ, ಕಾಲುವೆಗಳಿಂದ ಭೂಮಿಗೆ ನೀರನ್ನು ಸಾಗಿಸುವ ವ್ಯವಸ್ಥೆಯನ್ನು

ಕಲ್ಪಿಸಲಾಗಿತ್ತು.[೯೬] ವಿಜಯನಗರ ಸಾಮ್ರಾಜ್ಯದಲ್ಲಿ ಆಣೆಕಟ್ಟುಗಳು, ಕುಂಠೆಗಳು, ಕೆರೆಬಾವಿಗಳನ್ನು ಮತ್ತು ಕಾಲುವೆಗಳನ್ನು ನಿರ್ಮಿಸುವುದು, ಸಾಮ್ರಾಜ್ಯದ ಪ್ರಮುಖ ನೀತಿಯಾಗಿತ್ತು. ವಿಜಯನಗರ ಕ್ಷೇತ್ರದ ಸುತ್ತ-ಮುತ್ತ ಪ್ರದೇಶವನ್ನು ಪರಿಶೀಲಿಸಿದರೆ ೫೫ ಕ್ಕೂ ಹೆಚ್ಚು ಕೆರೆಗಳು ವಿಜಯನಗರ ಕಾಲದಲ್ಲೇ ನಿರ್ಮಿತವಾದವು.[೯೭] ಕೆಲವು ಶಾಸನಗಳು ಈ ಕೆರೆಗಳನ್ನು ಕಟ್ಟೆ, ಸಾಗರ, ತಟಾಕ, ಸಮುದ್ರ, ಕೊಳ, ಕುಂಟೆ ಎಂದು ಹೆಸರಿಸಲಾಗಿದೆ. ಕೆರೆಗಳನ್ನು ಎರಡು ರೀತಿಯಾಗಿ ವಿಂಗಡಿಸಬಹುದು. ೧) ನದಿ ಆಶ್ರಿತ ಕೆರೆಗಳು, ೨) ಮಳೆ ಆಶ್ರಿತ ಕೆರೆಗಳು.[೯೮]

ಇವುಗಳಲ್ಲಿ ಕಾಮಲಾಪುರ ಕೆರೆ ಪ್ರಥಮ ಸ್ಥಾನಕ್ಕೆ ಇದ್ದು, ಮೊದಲ ಗುಂಪಿಗೆ ಅಂದರೆ ನದಿ ಆಶ್ರಿತ ಕೆರೆಯಾಗಿದೆ. ಕೆರೆ ಎಂದೊಡನೆ, ಮೊದಲು ನೆನಪಾಗುವುದು ಲಕ್ಷಿಧರಾಮಾತ್ಯನ ಶಾಸನ "ಕೆರೆಯಂ ಕಟ್ಟಿಸು, ಬಾವಿಯಂ ಸವೆಸು, ದೇವಾಗಾರವಂ ಮಾಡಿಸು" ಎಂಬ ವಿಜಯನಗರದ ಫ್ರೌಢಪ್ರತಾಪರಾಯನ ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಹಾಲುಣಿಸುವ ಸಂದರ್ಭದಲ್ಲಿ ಸಮಾಜ ಕಾರ್ಯದ ಜ್ಞಾನಾಂಶವನ್ನು ಮಗುವಿದ್ದಾಗಲೀ ಬಿತ್ತಿ ಉತ್ತುತ್ತಿರುವುದನ್ನು.[೯೯] ಈ ಶಾಸನದಿಂದ ಅರಿಯಬಹುದು. ವಿಜಯನಗರ ಕಾಲಕ್ಕೆ ಸಂಬಂಧಿಸಿದಂತೆ ಮೊದಲನೆಯ ಬುಕ್ಕರಾಯನು ಕೆರೆಗಳ ನಿರ್ಮಾಣ ಕಾರ್ಯಕ್ಕೆ ಭದ್ರ ಬುನಾದಿಯನ್ನು ಹಾಕಿದನು. ಪ್ರಸ್ತುತ ಅಧ್ಯಯನ ಕಾಮಲಾಪುರ ಗ್ರಾಮಕ್ಕೆ ಸೀಮಿತವಾಗಿರುವುದರಿಂದ ಕಾಮಲಾಪುರ ಗ್ರಾಮದಲ್ಲಿನ ಕೆರೆಗಳ ವಿಚಾರಗಳನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

**ಕಾಮಲಾಪುರ ಕೆರೆ:** ವಿಜಯನಗರ ಕಾಲದ ಕೆರೆಗಳಲ್ಲಿ ಒಂದಾಗಿದೆ. ಈ ಕೆರೆಯು ಕಾಮಲಾಪುರ ಗ್ರಾಮದ ಪಶ್ಚಿಮಕ್ಕೆ ಇದೆ. ಇದು ಮೂರು ಕಿ.ಮೀ ಉದ್ದವಿದೆ. ಈ ಕೆರೆಯನ್ನು ಅಚ್ಯುತರಾಯ ಮಹಾರಾಜನ ಮಗನಾದ ಫ್ರೌಡದೇವರಾಯ ಮಹಾರಾಜನು ನಿರ್ಮಿಸಿದನೆಂದು ಉಲ್ಲೇಖಿಸಿದೆ.[೧೦೦] ಈ ಕೆರೆಗೆ ನೀರು ತುಂಗಭದ್ರಾ ನದಿಯಿಂದ ಬಸವಣ್ಣ ಕಾಲುವೆ ಮತ್ತು ವಿಜಯನಗರ ಕಾಲುವೆ ಎಂಬ ಎರಡು ಕಾಲುವೆಗಳ ಮೂಲಕ ಶೇಖರವಾಗುತ್ತವೆ. ಈ ಕಾಲುವೆಗಳ ರಚನಾತ್ಮಕ ಶೈಲಿ ವಿಜಯನಗರ ಕಾಲದ ಶೈಲಿಯನ್ನೇ ಹೋಲುತ್ತವೆ.[೧೦೧]

**ಅಳ್ಳಿಕೆರೆಯ ಕೆರೆ:** ಇದು ಕಾಮಲಾಪುರ ಪೂರ್ವಕ್ಕೆ ಇರುವ ಪಾಪಿನಾಯಕ ಹಳ್ಳಿಗೆ ಹೋಗುವ ಮಾರ್ಗದಲ್ಲಿ ಎಡಕ್ಕೆ ಇದೆ. ಕಾಲಮಾನ ದೃಷ್ಟಿಯಿಂದ ವಿಜಯನಗರ ಕಾಲಕ್ಕೆ ಸೇರಿದೆ. ಇದರ ಉದ್ದ ೧.೫ ಕಿ.ಮೀ ಇದೆ. ಇದು ತಂಗಭದ್ರಾ ನದಿಯಾಶ್ರಿತವಾಗಿದೆ. ಈ ಕೆರೆ, ಕೃಷ್ಣದೇವರಾಯನ ಕಾಲದಲ್ಲಿ ನಿರ್ಮಾಣವಾಯಿತೆಂದು ಬಯಲುವೊದ್ದಿಗೆರೆಯಲ್ಲಿ ಪತ್ತೆಯಾದ ಶಾಸನ ತಿಳಿಸುತ್ತದೆ.[೧೦೨] ಕಾಮಲಾಪುರದಿಂದ ಸುಮಾರು ಮೂರು ಕಿ.ಮೀ ದೂರದಲ್ಲಿ ಬೆಟ್ಟಗಳ ಸಾಲಿನ ಮಧ್ಯೆ ಇದ್ದು, ಇದರ ಪ್ರಯೋಜನವನ್ನು ಪಾಪಿನಾಯಕನಹಳ್ಳಿ ಮತ್ತು ಕಾಮಲಾಪುರ ನಿವಾಸಿಗಳು ಪಡೆಯುತ್ತಿದ್ದಾರೆ. ಡ್ಯಾಮಿಂಗೋ ಫಯಾಜ್ ಶ್ರೀಕೃಷ್ಣದೇವರಾಯನ ಆಳ್ವಿಕೆಯಲ್ಲಿ (ಕ್ರಿ.ಶ.೧೫೦೯–೩೦) ವಿಜಯನಗರಕ್ಕೆ ಭೇಟಿ ನೀಡಿದ ತನ್ನ ಪ್ರವಾಸಿ ಕಥನದಲ್ಲಿ ಕೆರೆಯ ಹೆಸರನ್ನು ದಾಖಲಿಸಿದ್ದಾನೆ.[೧೦೩] ಈ ಕೆರೆಯು ಸುಮರು ೩೫೦ ಕ್ಕೂ ಹೆಚ್ಚು ಎಕರೆಗೆ ನೀರುಣಿಸುತ್ತದೆ.[೧೦೪] ವಿದೇಶಿ ಪ್ರವಾಸಿಗನಾದ ನ್ಯೂನಿಜ್‌ನ

ಪ್ರವಾಸೀ ಕಥನದಲ್ಲಿ ರಾಯರ ಕೆರೆ ಮತ್ತು ಈ ಕೆರೆಯನ್ನು ನಿರ್ಮಿಸಿದ ನಂತರ, ನೀರನ್ನು ಉಪಯೋಗಿಸುವ ವ್ಯವಸಾಯದ ಕುರಿತು ದಾಖಲಿಸಿದ್ದಾನೆ.[೧೦೫]

ವಿಜಯನಗರದ ಬಹುತೇಕ ಶಾಸನಗಳು ಕೆರೆಗಳ ಸಂರಕ್ಷಣೆ ಬಗ್ಗೆ ವಿಷಯಗಳನ್ನು ಒಳಗೊಂಡಿರುತ್ತವೆ. ಕೆರೆಯ ನೀರಾವರಿ ಪದ್ದತಿಗೆ ಪ್ರಾಮುಖ್ಯತೆಯನ್ನು ಎತ್ತಿ ತೋರಿಸಿದ ಸಾಮ್ರಾಜ್ಯ ವಿಜಯನಗರ ಸಾಮ್ರಾಜ್ಯ.[೧೦೬] ಇದಕ್ಕೆ ಆಕರವಾಗಿ ಶಾಸನಗಳು ಭೂಮಿಯನ್ನು ಬೇಸಾಯಕ್ಕೆ ಪರಿವರ್ತಿಸಿದ ಬಗ್ಗೆ ಅಧಿಕ ನೀರಾವರಿ ಸೌಲಭ್ಯಗಳ ಬಗ್ಗೆ, ಗ್ರಾಮ ಮತ್ತು ಉಪನಗರಗಳ ನಿರ್ಮಾಣದ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಕಾಮಲಾಪುರ ಮತ್ತು ಇದರ ಈ ಸುತ್ತ ಮುತ್ತಲಿನ ಪರಿಸರದಲ್ಲಿದ್ದ ಪಸರಿಸಿದ ಶಾಸನಗಳು ಈ ಕುರಿತಂತೆ ಉಲ್ಲೇಖಿಸುತ್ತವೆ. ಉದಾಹರಣೆಗಾಗಿ ಕ್ರಿ.ಶ.೧೫೬೧ರ ಶಾಸನವು ತುಂಡು ಭೂಮಿಯನ್ನು ಸಮತಲಮಾಡಿ, ವ್ಯವಸಾಯಕ್ಕೆ ಉಪಯೋಗಿಸಿದ್ದನ್ನು ತಿಳಿಸುತ್ತದೆ.[೧೦೭] ಈಗಿನ ತುರ್ತು ಕಾಲುವೆಯ ಆಣೆಕಟ್ಟನ್ನು ಚಿಂತಾಯಕ ದೇವಣ್ಣನು ನಿರ್ಮಿಸಿದನು.[೧೦೮] ಹೆಗಡೆ ಹಿತ ಬಾಗಿಲ ಬಸವಣ್ಣನು ಅರಸ ವಿರುಪಾಕ್ಷನ ಆಜ್ಞೆಯ ಮೇರೆಗೆ ಹಿರಿಯ ಕಾಲುವೆಯನ್ನು ನಿರ್ಮಿಸಿದನು.[೧೦೯] ಬುಕ್ಕ ಸಾಗರದಲ್ಲಿ ಅವಿಕಧವಿತರಸ ಮತ್ತೊಂದು ಕಾಲುವೆಯನ್ನು ನಿರ್ಮಿಸಿದನು.[೧೧೦] ಕ್ರಿ.ಶ. ೧೫೧೪ರ ಶಾಸನದಲ್ಲಿ ನಾಗೇನ ಹಳ್ಳಿಯಲ್ಲಿ ನಾಗಾಂಬಿಕಾ ಸಮುದ್ರದ ಕೆರೆಯನ್ನು ನಿರ್ಮಿಸಿದ ಕುರಿತು ವಿಷಯ ಪ್ರಸ್ತಾಪಿಸಲಾಗಿದೆ.[೧೧೧] ಕ್ರಿ.ಶ.೧೫೪೯ರ ಶಾಸನ ಸೀತಾರಾಮ ತಾಂಡದ ಹತ್ತಿರದ ಕೆರೆ ನಿರ್ಮಿಸಿದ ವಿಷಯವನ್ನು ದಾಖಲಿಸುತ್ತದೆ. ಕ್ರಿ.ಶ.೧೫೪೯ರ ಮತ್ತೊಂದು ಶಾಸನ, ಜೋಯಿ ಕೆರೆಯನ್ನು ನೆಲತಿಮ್ಮನು ನಿರ್ಮಿಸಿದ್ದನೆಂದಿದೆ.[೧೧೨] ಕ್ರಿ.ಶ.೧೫೭೦ರ ಶಾಸನದಲ್ಲಿ ಕಾಮಲಾಪುರದ ಕೆರೆ, ಮಾದಲಾಪುರದಕೆರೆ, ಅನಂತಾಪುರದ ಕೆರೆಯನ್ನು ಶಾಸನದಲ್ಲಿ ಉಲ್ಲೇಖಿಸಿದೆ.[೧೧೩] ಕ್ರಿ.ಶ.೧೬ನೇ ಶತಮಾನದ ಶಾಸನಗಳಲ್ಲಿ ಕೃಷ್ಣರಾಯ ಕೆರೆಯ ಉಲ್ಲೇಖಿಸುತ್ತದೆ.[೧೧೪]

**ಬಾವಿಗಳು:** "ಕೆರೆಯಂ ಕಟ್ಟಿಸು, ಬಾವಿಯಂ ಸವಿಸು, ದೇವಾಗಾರಮಂ ಮಾಡಿಸು ಜ್ವರೆಯೊಳ್ ಸಿಲ್ಕದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದರ್ಗರೆವಟ್ಟಾಗಿರು ಶಿಷ್ಯರಂ ಪೊರೆಯನ್ನುತ್ತಿಂತೆಲ್ಲವಂ ಪಿಂದೆ ತಾಯೆರೆದಲ್ವಾಲೆರವಂದು ತೊಟ್ಟು ಕಿವಿಯೊಳ್" ಲಕ್ಷ್ಮಿಧರಾಮಾತ್ಯನಾ ಎಂದು ಪ್ರೌಢದೇವರಾಯನ ಮಂತ್ರಿಗಳಲ್ಲಿ ಒಬ್ಬನಾದ ಲಕ್ಷ್ಮಿಧರಮಾತ್ಯನು ಮಗುವಾಗಿದ್ದಾಗ ಆತನ ತಾಯಿ ಈತನಿಗೆ ಹಾಲುಣಿಸುತ್ತ ಮುಂದೆ ಈತನು ಎಂತಹ ಗುಣಗಳನ್ನು ಅಳವಡಿಸಿಕೊಳ್ಳಲು ಹೇಳಿದಳೆಂಬುದನ್ನು ಉಲ್ಲೇಖಿಸಿದೆ.[೧೧೫] ಇಂತಹ ಉದಾತ್ತ ಗುಣಗಳ ಅರಸರು, ಉದಕ ದಾನದ ಮಹತ್ವವನ್ನು ತಿಳಿದು, ಬಾವಿಗಳನ್ನು ತೋಡಿಸಿ, ಉದಾರವಾಗಿ ದಾನ-ದತ್ತಿಗಳನ್ನು ಮಾಡಿದ ವಿಚಾರಗಳನ್ನು ಸಮಕಾಲೀನ ಶಾಸನಗಳು ಉಲ್ಲೇಖಿಸಿವೆ. ಇದರಿಂದ ಬಾವಿ ತೋಡಿಸುವುದು ಒಂದು ಪುಣ್ಯದ ಕಾರ್ಯವಾಗಿತ್ತೆಂದು ಸ್ಪಷ್ಟವಾಗುತ್ತದೆ. ಪ್ರಾಚೀನ ಕಾಲದಿಂದಲೂ ನೀರಿನ ಅವಶ್ಯಕತೆಗಾಗಿ ನೀರುಗಳನ್ನು ತೋಡಿಸಿ, ಅವುಗಳನ್ನು ಕಲಾತ್ಮಕವಾಗಿ ರಚಿಸುವುದು ರೂಢಿಗತವಾಗಿದೆ. ನೀರಿನ ಆಶ್ರಯ ಪ್ರಾಣಿ, ಪಕ್ಷಿ ಮತ್ತು ಮನುಷ್ಯರಿಗೆ ಮಾಡಿಕೊಡುವುದು ಪುಣ್ಯದ ಕೆಲಸವೆಂಬ ಮನೋಭಾವ ಹಿಂದಿನಿಂದಲೂ ಪ್ರಚಲಿತದಲ್ಲಿದೆ. ವಿಜಯನಗರ ಕಾಲದಲ್ಲಿ ಕೆಲವು ಶಾಸನೋಕ್ತ ಪ್ರಾಚೀನ ಬಾವಿಗಳ ಬಗ್ಗೆ ಇಲ್ಲಿ ಪ್ರಸ್ತಾಪಿಸಲಾಗಿದೆ.

ಕ್ರಿ.ಶ.೧೪೧೧ರ ಶಾಸನ ನರಸಿಂಹ ದೇವನ ಮಗ ದೇವರಾಯನು ಬುಕ್ಕುರನ ಬಾವಿಯನ್ನು ಕಟ್ಟಿಸಿದಂತೆ ತಿಳಿಸುತ್ತದೆ.[೧೧೬] ಕ್ರಿ.ಶ.೧೪೫೯ರ ಶಾಸನದಲ್ಲಿ ಅಹಮ್ಮದ್ ಖಾನನು ರಾಜನಿಗೆ ಧರ್ಮವಾಗಬೇಕೆಂದು ಬಾವಿ ಕಟ್ಟಿಸಿದ ಉಲ್ಲೇಖವಿದೆ.[೧೧೭] ಕ್ರಿ.ಶ.೧೫೩೧ರ ಕಾಮಲಾಪುರದ ಶಾಸನವು ೨ ವಿಧವಾದ ಬಾವಿಗಳನ್ನು ಸೂಚಿಸುತ್ತದೆ. ನಡಬಾವಿ, ಕಪ್ಪಿಲೆಬಾವಿ, ಇದು ಅಂದಿನ ಬಾವಿಗಳ ರಚನೆಯ ವಿಧಾನವನ್ನು ಸೂಚಿಸುತ್ತದೆ. ಮೊದಲನೆಯ ವಿಧವಾದ ಬಾವಿಯನ್ನು ತಮಿಳು ಭಾಷೆಯಲ್ಲಿ ನಡೈ ಬಾವಿ ಎಂದು ಕರೆಯಲಾಗಿದೆ. ಕನ್ನಡದಲ್ಲಿ ನಡೆ ಬಾವಿ ಅಂದರೆ ಸುತ್ತಲೂ ಪಾವಟಿಗೆ ಅಥವಾ ಸೋಪಾನಗಳ ಬಾವಿಯೆಂದೇ ತಿಳಿಯಬೇಕು. ಮತ್ತೊಂದು ವಿಧವಾದ ಕಪಿಲೆ ಬಾವಿಯಲ್ಲಿ ನೀರನ್ನು ಸಾಮಾನ್ಯವಾಗಿ ಯಂತ್ರದ ಸಹಾಯದಿಂದ ಮೇಲಕ್ಕೆ ಎತ್ತಲಾಗುವುದು, ಲಿಂಗ ಬಾವಿ, ಕಪಿಲೆ ಬಾವಿಯನ್ನು ಕೊಂಡಮಾರಸಯ್ಯನೂ, ನಾಡದ ಬಾವಿಯನ್ನು ವಲ್ಲಭಯ್ಯನು ನಿರ್ಮಿಸಿದರು. ಈ ವಿಷಯವನ್ನು ಈ ಶಾಸನದಿಂದ ತಿಳಿಯಬಹುದು.[೧೧೮] ಕ್ರಿ.ಶ.೧೫೫೯ರ ಶಾಸನ ನಾರಸಿ ಮಠದ ನಂಜದೇವನೆಂಬ ಗುರುವಿನ ಹೆಸರಿನಲ್ಲಿ ದೇವರಪಲ್ಲಿ ಮುಮ್ಮಡಿ ಶೆಟ್ಟಿ ಎಂಬ ವರ್ತಕನು ಬಾವಿಯನ್ನು ದಾನ ಮಾಡಿದ ಉಲ್ಲೇಖವಿದೆ.[೧೧೯] ರುಧಿರೋದ್ಗಾರಿ ಉಲ್ಲೇಖಿತ ಶಾಸನ ತಿರಿವಿದಿ ಚಿಟಿನಾಗಿನೇನಿಯ ಮಗ ಚಿನ್ನಪನಾಯಂಡು ರಂಗನಾಥ ಬಾವಿಯನ್ನು ಕಟ್ಟಿಸಿದುದನ್ನು ಉಲ್ಲೇಖಿಸುತ್ತದೆ.[೧೨೦] ಕ್ರಿ.ಶ.೧೫ ಮತ್ತು ೧೬ನೇ ಶತಮಾನದ ಶಾಸನ ಲಿಂಗ ಬಾವಿಯನ್ನು[೧೨೧] ಸರಸ್ವತಿ ದೇವಾಲಯದ ಹತ್ತಿರವಿರುವ ಶಾಸನ ಬಾವಿ ಕಟ್ಟಿಸಿದುದನ್ನು ಉಲ್ಲೇಖಿಸಿವೆ.[೧೨೨] ಒಟ್ಟಿನಲ್ಲಿ ಈ ಎಲ್ಲಾ ಬಾವಿಗಳು ನೀರಾವರಿ ಉಪಯೋಗಕಲ್ಲದೆ, ಮಾನವರ ಸಾಮಾಜಿಕ ಮತ್ತು ಧಾರ್ಮಿಕ ಜೀವನದ ಅಂಗಗಳಾಗಿದ್ದವು, ಅನೇಕ ವೇಳೆ ಅವು ದೇವಾಲಯದ ಹಾಗೂ ದೇವರಗಳ ವಿವಿಧ ಕಾರ್ಯಗಳಿಗೆಂದೇ ನಿರ್ಮಿಸಲಾಗಿದ್ದವು. ಇದಕ್ಕೆ ಪೂರಕವಾಗಿ ವಿಜಯನಗರದ ಲಕ್ಷ್ಮಿಧರಮಾತ್ಯನ ಶಾಸನವು ಬಾವಿಗಳನ್ನು ಕಟ್ಟಿಸುವುದು ಒಂದು ಪುಣ್ಯ ಕಾರ್ಯವೆಂದೇ ನಿರೂಪಿಸಿದೆ.

**ಬೆಳೆಗಳು:** ಭೂಮಿಯಲ್ಲಿ ನೀರು ನಿಲ್ಲುವಂತೆ ಕಟ್ಟೆಯನ್ನು ನಿರ್ಮಿಸಿ, ಅದನ್ನು ಗದ್ದೆಯನ್ನಾಗಿ ಪರಿವರ್ತಿಸಿ ಅದರಲ್ಲಿ ಪ್ರಮುಖ ನೀರಾವರಿ ಬೆಳೆಗಳಾದ ಭತ್ತ, ಕಬ್ಬು ಮತ್ತು ಬಾಳೆಗಳನ್ನು ಬೆಳೆಯಲಾಗುತ್ತಿತ್ತು. ಉದಾಹರಣೆಗೆ ಅನೇಕ ವಿದೇಶಿ ಪ್ರವಾಸಿಗರಾದ ಬಾರ್ಬೋಸ, ಗಯಾಸ್, ನ್ಯೂನಿಝ್‌ರವರು ತಮ್ಮ ಪ್ರವಾಸೀ ಕಥನಗಳಲ್ಲಿ ಪ್ರಮುಖ ಬೆಳೆಗಳಾದ ಭತ್ತ, ರಾಗಿ, ಜೋಳವನ್ನೂ ಬೆಳೆಯುವ ವಿಷಯ, ಕ್ಷೀರೋತ್ಪನ್ನ ಸಮೃದ್ಧವಾಗಿದ್ದ ಬಗ್ಗೆ, ವಿವಿಧ ಬಗೆಯ ಪುಷ್ಪದ ಬೆಳೆಗಾರಿಕೆ ಬಗ್ಗೆ ಮತ್ತು ಪಶು ಸಂಪತ್ತು, ಕೃಷಿಗೆ ಅನುಕೂಲ ಎಂಬ ವಿಷಯವನ್ನು ಪ್ರಸ್ತಾಪಿಸಲಾಗಿದೆ.[೧೨೩] ತುಂಗಭದ್ರಾ ನದಿಯ ಆಸು-ಪಾಸಿನಲ್ಲಿನ ನೀರಾವರಿ ಭೂಮಿಯಲ್ಲಿ, ವಾಣಿಜ್ಯ ಬೆಳೆಗಳಾದ ಕಬ್ಬು, ಭತ್ತ ಮತ್ತು ಬಾಳೆಯನ್ನು ಬೆಳೆಯುತ್ತಿದ್ದರು.[೧೨೪] ಒಣ ಬೇಸಾಯ ಭೂಮಿಗಳಲ್ಲಿ, ಜೋಳ, ನೆಲಗಡಲೆ, ಹತ್ತಿ, ತೆಂಗು, ಕಾಯಿಪಲ್ಯ, ಮೊದಲಾದ ಬೆಳೆಗಳನ್ನು ಬೆಳಿಯಲಾಗುತ್ತಿತ್ತು.[೧೨೫] ಕ್ರಿ.ಶ.೧೫೪೦ರ ಶಾಸನದಲ್ಲಿ ಬಾಳೆ, ತೆಂಗಿನಕಾಯಿ ಬೆಳೆ ಬಗ್ಗೆ ಪ್ರಸ್ತಾಪಿಸಲಾಗಿದೆ.[೧೨೬]

**ತೆರಿಗೆ ಪದ್ಧತಿ:** ಕೊಟ್ಟು-ಕೊಡಿಗೆ, ಕೆರೆ-ಕಟ್ಟು, ಮಾನ್ಯ ಕೆರೆಬಿತ್ತು, ವತ್ತ, ಇಂತಹ ಪದಗಳು ದಾನ ತೆರಿಗೆಗಳ ಮಾಹಿತಿ ತಿಳಿಸುತ್ತವೆ.[೧೨೭] ವಿವಿಧ ಮೂಲಗಳಿಂದ ಬರುವ ತೆರಿಗೆ ಹಣವನ್ನು ಸಂಗ್ರಹಿಸಿ

ಪ್ರಜಾಹಿತ ಕಾರ್ಯಗಳಿಗೆ ಉಪಯೋಗಿಸಿಕೊಳ್ಳುತ್ತಿದ್ದರು. ಏರಿ–ವಾರಿಯಂ, ಏರಿ–ಆಯಾ(ತಮಿಳು) ಚೆರವು–ಕುಂಚಲು(ತೆಲಗು) ನೀರಬಿರಾಡ, ಕೆರೆಬಂಧಿ ಇಂತಹ ತೆರಿಗೆಗಳು ರಾಜನ ಭಂಡಾರಕ್ಕೆ ಸೇರುವ ಬದಲಿಗೆ ಕೆರೆಯ ರಕ್ಷಣೆಗೆ ಮತ್ತು ಇತರ ಕಾರ್ಯಗಳಿಗೆ ಉಪಯೋಗಿಸಿಕೊಳ್ಳಲಾಗುತ್ತಿತ್ತು. ಒಟ್ಟಾರೆ ನೀರ್, ಕುಳಿ, ಚೆರವು, ಕುಂಚಲು, ಮೇರ ಕಾಲುವೆಯ ನೀರಬಿರಾಡ ವಿಭೂತಿ ಕಾಣಿಕೆ, ಜೋಡಿ ಬಿರಾಡ, ಸಲುವರಿ ಇಂತಹ ಶಬ್ದಗಳ ವಿಜಯನಗರ ಕಾಲದಲ್ಲಿನ ತೆರಿಗೆ–ಪದ್ದತಿಯನ್ನು ದಾಖಲಿಸುತ್ತವೆ.[೨೮]

**ಸಾರಿಗೆ ವ್ಯವಸ್ಥೆ:** ಸಿವಿಲ್, ವಿಜಯನಗರಕ್ಕೆ ಎರಡು ರಸ್ತೆಗಳಿವೆ ಎಂದು ಫಿರಿಸ್ತಾನನ್ನು ಉಲ್ಲೇಖಿಸಿ ಈ ರೀತಿ ಹೇಳುತ್ತಾನೆ. ಒಂದು ಸೈನ್ಯಗಳ ಸಾಗಾಣಿಕೆ ಯೋಗ್ಯವಾದುದು. ಇನ್ನೊಂದು ಅಸ್ತಾದುದು ಮತ್ತು ಕಠಿಣವಾದುದು.[೨೯] ಸಂಡೂರು ಗುಡ್ಡಗಳು ಮತ್ತು ವಿಜಯನಗರ ನಗರವನ್ನು ಸುತ್ತು ಗಟ್ಟುವ ಗುಡ್ಡಗಳ ನಡುವೆ ಇರುವ ಹಾಗೂ ಬಳ್ಳಾರಿಯಿಂದ ವಿಜಯನಗರಕ್ಕೆ ಈಗ ಹೋಗುತ್ತಿರುವ ಮುಖ್ಯ ರಸ್ತೆಯುಳ್ಳ ಕಣಿವೆ. ಈಗ ನಗರ ಪ್ರವೇಶ ಮಾರ್ಗಗಳಿರುವ ದ್ವಾರಗಳ ಮೂಲಕ ದಾರಿಗಳು ಹಾಯುವ ಸ್ಥಳಗಳನ್ನು ಹೊರತು ಪಡಿಸಿ ಗುಡ್ಡಗಳು ಪೂರ್ತಿ ಮುಚ್ಚಿವೆ ಎಂದು ಡೊಮಿಂಗೊ ಪ್ಯಾಯ್‌ನನ್ನು ಉಲ್ಲೇಖಿಸಿ ಹೇಳಿದ್ದಾನೆ.[೩೦] ಹೀಗೆ ಸಾರಿಗೆ ಮತ್ತು ರಸ್ತೆ ವ್ಯವಸ್ಥೆಗೆ ಸಂಬಂಧಿಸಿದಂತೆ ವಿಜಯನಗರ ಪಟ್ಟಣಕ್ಕೆ ಹೆದ್ದಾರಿಗಳನ್ನು ಸಂಪರ್ಕಿಸಲಾಯಿತು ಎತ್ತಿನ ಗಾಡಿಗಳು ಸಾರಿಗೆಯ ಸಂಪರ್ಕದ ವ್ಯವಸ್ಥೆಯಾಯಿತು. ಕುದುರೆ, ಎತ್ತು, ಕತ್ತೆ, ಹಡಗು, ಕಾವಡಿಗಳು, ಸರಕನ್ನು ಸಾಗಿಸುವ ಸಾಧನಗಳಾಗಿದ್ದವು.[೩೧] ಅಂದು ಉಪಯೋಗಿಸುವ ಹರಿಗೋಲು, ತೆಪ್ಪ, ದೋಣಿ ಮತ್ತು ನಾವೆಗಳನ್ನು ನದಿ ಸಾರಿಗೆಗೆ ಉಪಯೋಗಿಸುವ ಪದ್ದತಿ ಇಂದಿಗೂ ಇದೆ.

**ನಾಣ್ಯ ಪದ್ದತಿ:** ವಿಜಯನಗರದ ಅರಸರು ಟಂಕಿಸಿದ ಚಿನ್ನದ ಈ ನಾಣ್ಯಗಳ ವೈವಿಧ್ಯಪೂರ್ಣ, ಶ್ರೀಮಂತಿಕೆ, ವಿವಿಧ ದೇವ–ದೇವತೆಯರ ಚಿತ್ರಣ, ವಿವಿಧ ಲಿಪಿಗಳ ಸುಂದರ ಬರಹ ಹಾಗೂ ಈ ನಾಣ್ಯಗಳು ತಾಂತ್ರಿಕ ಹಿರಿಮೆಯಾಗಿದೆ. ಚಿನ್ನದ ನಾಣ್ಯಗಳ ನಾಣ್ಯ ಇತಿಹಾಸಕಾರರನ್ನು ಚಕಿತಗೊಳಿಸಿವೆ.[೩೨] ಈ ಪ್ರದೇಶದ ಆರ್ಥಿಕ ಪ್ರಗತಿ ಅವರ ನಾಣ್ಯಗಳಲ್ಲಿ ಬಿಂಬಿತವಾಗಿರುವುದು ಸುಲಭವಾಗಿ ಗುರುತಿಸಬಹುದಾದ ವಿಷಯ. ವೈವಿಧ್ಯ ಪೂರ್ಣ ಚಿನ್ನ, ಬೆಳ್ಳಿ ಮತ್ತು ತಾಮ್ರನಾಣ್ಯಗಳು ಅವುಗಳ ಲಭ್ಯತೆ, ಈ ನಾಣ್ಯಗಳು ವಿದೇಶೀಯಾತ್ರಿಕರನ್ನು ಆಕರ್ಷಿಸಿದೆ. ಇದರಿಂದ ವಿದೇಶಿಗಳೊಂದಿಗೆ ವ್ಯಾಪಾರ ಹೆಚ್ಚಿದಂತೆ ನಾಣ್ಯಗಳು ಪ್ರಮುಖ ಪಾತ್ರವಹಿಸಿದವು. ಇವೆಲ್ಲವುಗಳಿಂದ ವಿಜಯನಗರ ನಾಣ್ಯ ಅಧ್ಯಯನ ಆಕರ್ಷಕವೆನಿಸಿದೆ. ವಿಜಯನಗರ ನಾಣ್ಯಗಳು ದಕ್ಷಿಣ ಭಾರತದ ನಾಣ್ಯ ಪದ್ದತಿಯಲ್ಲಿ ಒಂದು ಹೊಸ ಬೆಳವಣಿಗೆಯನ್ನು ಆರಂಭಿಸಿದವು.[೩೩] ಈ ಕಾಲದಲ್ಲಿ ಟಂಕಿಸಿದ ನಾಣ್ಯಗಳ ಹೆಸರುಗಳು ಗದ್ಯಾಣ, ವರಹ, ಪೊನ್ ಪಗೋಟ, ಪ್ರತಾಪ, ಕಾಟಿ, ಪಣ, ಚಿನ್ನಮು, ಮಾಡ, ಹಾಗ ವೀಸ, ಬೇಳೆ, ರೂಕ, ತಾರ ಮತ್ತು ಕಾಸು, ಈ ರೀತಿಯಲ್ಲಿ ಮೂದಿಸಲಾಗಿದೆ. ಗದ್ಯಾಣ ಇದು ಚಿನ್ನದ ನಾಣ್ಯ. ಇದನ್ನು ವರಹ, ಪೊನ್ ಮತ್ತು ಪಗೋಡ ಎಂದೂ ಕರೆಯುತ್ತಿದ್ದರು. ಇದರ ತೂಕ ೫೨ ಗ್ರೇನ್‌ಗಳು,[೩೪] ಇದರ ಅಗಲ ಅರ್ಧ ಅಂಗುಲ ಇದರ ಮುಮ್ಮುಖದಲ್ಲಿ ದೇವ–ದೇವತೆಗಳ ಚಿತ್ರ, ಹಿಮ್ಮುಖದಲ್ಲಿ ನಾಗರೀ ಕನ್ನಡ ಅಥವಾ ತೆಲಗು ಲಿಪಿಯಲ್ಲಿ ರಾಜನ ಹೆಸರಿನ ಬರಹ ಇರುತ್ತದೆ.

೧ ವರಹ–೧ ಗದ್ಯಾಣ=೧ ಪೊನ್=೧ ಪಗೋಡ=೧ ಮಾಡೈ=೫೨ ಗ್ರೇನ್ ಕಾಮಲಾಪುರದ ವಸ್ತು ಸಂಗ್ರಹಾಲಯದಲ್ಲಿರುವ ನಾಣ್ಯಗಳ ಬಗ್ಗೆ ಸ್ಥೂಲವಾಗಿ ವಿವರಿಸಲಾಗಿದೆ. ಈ ಬಂಗಾರದ ನಾಣ್ಯಗಳಲ್ಲಿ ಉಮಾಮಹೇಶ್ವರ, ಲಕ್ಷ್ಮೀನಾರಾಯಣ, ಚಿತ್ರಗಳನ್ನು ಹೊಂದಿರುವ ನಾಣ್ಯಗಳು ಸಂಗಮರ ಕಾಲದಲ್ಲಿ ನಿರ್ಮಿತವಾದವೆಂದೂ ವೆಂಕಟೇಶ ಚಿತ್ರಗಳನ್ನು ಹೊಂದಿದ ನಾಣ್ಯಗಳ ತುಳು ಮತ್ತು ಅರವೀಡು ವಂಶದಲ್ಲಿ ನಿರ್ಮಿತವಾದವೆಂದು ಗುರುತಿಸಲಾಗಿದೆ. ಇಲ್ಲಿರುವ ಕೆಲವು ತಾಮ್ರದ ನಾಣ್ಯಗಳಲ್ಲಿ ಆನೆ ಚಿತ್ರ ಇರುವುದರಿಂದ, ಈ ನಾಣ್ಯಗಳು ಸಂಗಮ ಮತ್ತು ಅರವೀಡು ಕಾಲದಲ್ಲಿ ಪ್ರಚಲಿತದಲ್ಲಿದ್ದವು. ಗರುಡ ಚಿತ್ರವಿರುವ ತಾಮ್ರ ನಾಣ್ಯಗಳು ಸಂಗಮ, ತುಳು ಅರವೀಡು ವಂಶದ ಕಾಲದವಾಗಿದ್ದು, ಗಂಡಭೇರುಂಡ ತುಳುವಂಶದ್ದಾಗಿದೆ. ವರಹ ಹಾಗೂ ಗಣೇಶ ತಾಮ್ರ ಚಿತ್ರವಿರುವ ನಾಣ್ಯಗಳು ಅರವೀಡು ಮನೆತನ ಕಾಲದಲ್ಲಿ ಚಲಾವಣೆಯಲ್ಲಿದ್ದವು ಎಂಬುದನ್ನು ಸ್ಪಷ್ಟೀಕರಿಸುತ್ತವೆ. ಕೆಲವು ತಾಮ್ರ ನಾಣ್ಯಗಳು ಹನುಮಾನ್ ಮತ್ತು ಎರಡು ಶಿಖರಗಳ ಚಿತ್ರಗಳು ಹೊಂದಿದ್ದರಿಂದ ಇವು ಸಂಗಮ ಮತ್ತು ಅರವೀಡು ಮನೆತನದ ಕಾಲಾವಧಿಯಲ್ಲಿ ಪ್ರಚಲಿತದಲ್ಲಿದ್ದವು ಎಂಬುದನ್ನು ಖಚಿತಗೊಳಿಸುತ್ತವೆ.[೧೩೫]

**ಶಾಸನಗಳು:** ಕ್ರಿ.ಶ.೧೦೭೬ರ ಶಾಸನ ಮಹಾಪ್ರಧಾನ ದಂಡನಾಯಕ ಸೋಮೇಶ್ವರ ಭಟ್ಟೋಪಾಧ್ಯಾಯ ಪುರಾಣ ವ್ಯಾಖ್ಯಾಯ ಮಾಡುವ ಉಪಾಧ್ಯಾಯರಿಗೆ ೮೦ ಲೊಕ್ಕಿ ಗದ್ಯಾಣಗಳನ್ನು ಉಲ್ಲೇಖಿಸಿದೆ.[೧೩೬] ಕ್ರಿ.ಶ.೧೫೩೯ರ ಶಾಸನ ತೋಟದ ಬೆಳೆಗಳ ಹಸಿರು ವಾಣಿ–ಸುಂಕ, ೧೦೫೦ ಗದ್ಯಾಣಗಳೆಂದು ದಾಖಲಿಸಿದೆ.[೧೩೭] ಕ್ರಿ.ಶ.೧೪೪೧ರ ಶಾಸನ ಆರು ವರಹಗಳಿಗೆ ಮನೆ ಕ್ರಮ ಮಾಡಿದ ಉಲ್ಲೇಖವಿದೆ.[೧೩೮] ಹೀಗೆ ಶಾಸನಗಳು ಲೊಕ್ಕಿ ಗದ್ಯಾಣ, ವರಹಾ, ಗದ್ಯಾಣ ಇನ್ನೂ ಮೊದಲಾದ ನಾಣ್ಯಗಳ ಹೆಸರನ್ನು ಉಲ್ಲೇಖಿಸಿವೆ. ಇದರಿಂದ ಈ ನಾಣ್ಯ ಪದ್ಧತಿ ಕಾಮಲಾಪುರ ಪರಿಸರದಲ್ಲಿ ಪ್ರಚಲಿತದಲ್ಲಿತ್ತು ಎಂಬುದನ್ನು ಧೃಡಪಡಿಸುತ್ತವೆ.

ವಿಜಯನಗರದ ಅರಸ ೨ನೇ ಹರಿಹರನು ಜನರು ಕಂದಾಯವನ್ನು ನಾಣ್ಯರೂಪದಲ್ಲಿ ಕೊಡಬೇಕೆಂದು ನಿರ್ಧರಿಸಿದ್ದರಿಂದ ವಿವಿಧ ಪ್ರಮಾಣದ, ಪ್ರಕಾರದ ಲೋಹದ ನಾಣ್ಯಗಳನ್ನು ನಿರ್ಮಿಸುವುದು ಅನಿವಾರ್ಯವಾಯಿತು.[೧೩೯] ಒಟ್ಟಾರೆ ವರಹ, ಗದ್ಯಾಣ, ಪಣ, ವೀಸಾ, ಅಡ್ಡ, ದುಡ್ಡು, ಮೊದಲಾದ ನಾಣ್ಯಗಳ ಹೆಸರುಗಳು ಸಾಹಿತ್ಯಿಕ ಆಕರಗಳಿಂದ ಲಭ್ಯವಾಗಿವೆ.[೧೪೦] ಇತ್ತೀಚಿಗೆ ೫ ವರ್ಷಗಳ ಉತ್ಖನನ ಮಾಡಿದಾಗ ಕಾಮಲಾಪುರದ ಮಹಾನವಮಿ ದಿಬ್ಬದ ಎದುರುಗಡೆ, ಮೂರು ಚಿನ್ನದ ನಾಣ್ಯಗಳು ಲಭ್ಯವಾಗಿದ್ದು, ಗಮನಾರ್ಹ ಅಂಶ. ಈ ವರ್ಷದ ಉತ್ಖನನದ ಸಂದರ್ಭದಲ್ಲಿ ೩೦ಕ್ಕೂ ಹೆಚ್ಚು ಬಂಗಾರದ ನಾಣ್ಯಗಳು ದೊರಕಿವೆ.

**ವಿದೇಶಿಯಾತ್ರಿಕರ ಹೇಳಿಕೆ:**

ಅಬ್ದುಲ್ ರಜಾಕ್‌ನು ಸಾಮ್ರಾಜ್ಯದ ಎಲ್ಲಾ ಜನರು ಒಂದು ನಿಯಮಿತ ಸಮಯದಲ್ಲಿ ತಾವು ಸರಕಾರಕ್ಕೆ ಕೊಡಬೇಕಾದ ಹಣವನ್ನು ಟಂಕಶಾಲೆಯಲ್ಲಿ ಸಲ್ಲಿಸುತ್ತಿದ್ದರು. ತಮಗೆ ಬರಬೇಕಾದ ಹಣವನ್ನು ಟಂಕಶಾಲೆಯಿಂದ ಪಡೆಯುತ್ತಿದ್ದರು ಎಂಬುದನ್ನು ದಾಖಲಿಸಿದ್ದಾನೆ. ಸೀಸರ್ ಫ್ರೆಡರಿಕನ ಪ್ರಕಾರ ಪ್ರತಿಯೊಬ್ಬ ರಾಜ್ಯಪಾಲನ ರಾಜ್ಯಕ್ಕೆ ಮಾತ್ರ ತಾಮ್ರದ ನಾಣ್ಯಗಳು ಸೀಮಿತವಾಗಿದ್ದವು. ಬಾರ್ಬೋಸನ

ಪ್ರಕಾರ ಈ ನಾಣ್ಯಗಳಿಗೆ ಹಾಗೂ ಆ ನಾಣ್ಯಗಳನ್ನು ಟಂಕಿಸಿದ ರಾಜರುಗಳಿಗೆ ಗೌರವವನ್ನು ತಂದುಕೊಡುತ್ತವೆ. ಈ ಕಾಲದ ನಾಣ್ಯಗಳು ನಿಸ್ಸಂದೇಹವಾಗಿ ಚೊಕ್ಕವಾದವು ಎಂದು ಹೇಳಿದ್ದಾನೆ. ಒಟ್ಟಾರೆ ಕಾಮಲಾಪುರ ಪರಿಸರದಲ್ಲಿ ಲಭ್ಯವಾದ ಶಾಸನಗಳ ಸಾಹಿತ್ಯಿಕ ಮತ್ತು ವಿದೇಶಿ ಯಾತ್ರಿಕರಿಂದ ದೊರೆತ ನಾಣ್ಯಗಳ ವಿಚಾರದಿಂದ ಆಕಾಲದ ಆರ್ಥಿಕ ಸ್ಥಿತಿಗತಿಯ ಬಗ್ಗೆ ಸ್ಪಷ್ಟ ಮಾಹಿತಿಯನ್ನು ನೀಡಿದೆ.

**ಧಾರ್ಮಿಕ ವಿಶ್ಲೇಷಣೆ:** ಧರ್ಮ ಎಂದರೆ ದೈವಗಳು ಹಾಗೂ ಭಕ್ತರು. ಧರ್ಮದ ಅರ್ಥ "ಧೃ" ಎಂಬ ಧಾತುವಿಗೆ "ರ್ಮ" ಎಂಬ ಪ್ರತ್ಯಯವನ್ನು ಸೇರಿಸುವುದರಿಂದ ರೂಪಗೊಳ್ಳುತ್ತದೆ. ಧರ್ಮದ ಅರ್ಥವನ್ನು ಹುಡುಕಿದರೆ ಜಾತಿ-ಪಂಗಡಗಳಿಗೆ ಸೇರಿದ, ಆಚಾರ-ವಿಚಾರ ಹಾಗೂ ಭಕ್ತಿ ಔಚಿತ್ಯವೆಂಧರ್ಥವಾಗುತ್ತದೆ.[೧೪೧] ಆಂಗ್ಲ ಭಾಷೆಯ ರಿಲಿಜನ್ ಎಂಬ ಪದಕ್ಕೆ ಇಂಗ್ಲೀಷ್-ಕನ್ನಡ ನಿಘಂಟಿನಲ್ಲಿ "ಮಾನವನ ತಾನು ಒಂದು ಅತಿ ಮಾನುಷ ಶಕ್ತಿಯ ಅಧೀನನೆಂದೂ, ಮುಖ್ಯವಾಗಿ ತನ್ನ ವಿಧೇಯತೆಗಳು ಸಲ್ಲಿಸತಕ್ಕ ದೇವನೊಬ್ಬನು ಇದ್ದಾನೆಂದೂ ಇಟ್ಟುಕೊಂಡಿರುವ ತಿಳುವಳಿಕೆ ಅಥವಾ ನಂಬಿಕೆಯಾಗಿದೆ.[೧೪೨]

ಪ್ರಪಂಚದಾದ್ಯಂತ ಕಾಲ ದೇಶ ಪರಿಸರಗಳಿಗನುಗುಣವಾಗಿ ಹಲವಾರು ದರ್ಮಚರಣೆಗಳು ಬೆಳೆದುಬಂದಿವೆ. ಕೆಲವು ಧರ್ಮಗಳು ಕಾರಣಾಂತರಗಳಿಂದಾಗಿ ಕಳೆದುಕೊಂಡು ಕಾಲಗರ್ಭದಲ್ಲಿ ಲೀನವಾಗಿವೆ. ಇನ್ನು ಕೆಲವು ತಮ್ಮ ತತ್ವ ದರ್ಶನ ಆಚಾರ-ವಿಚಾರಗಳಲ್ಲಿ ಬಲಿಸಂವರ್ಧಿಸಿಕೊಂಡು ಸಮಕಾಲೀನ ಸಾಂಸ್ಕೃತಿಕ ಪರಿಸರಕ್ಕೆ ಒಗ್ಗಿಸಿಕೊಳ್ಳುತ್ತಾ ಜೀವಂತವಾಗಿ ಮುನ್ನಡೆದಿವೆ. ಇದು ಮಾನವನ ಸಹಜವಾದ ನೈತಿಕ ಪ್ರವೃತ್ತಿ ಬೆಳವಣಿಗೆ ಮತ್ತು ನಂಬಿಕೆಗಳ ಮೂಲ ಆಕರ. ಮಾನವ ಧರ್ಮ ಬಿಟ್ಟು ಬದುಕಲಾರ. ಜನ್ಮದಿಂದಲೇ ಅದರ ಜೊತೆಯಲ್ಲಿಯೇ ಬೆಳೆದು ಬಂದಿದ್ದಾನೆ. ಈ ಧರ್ಮದ ಉಗಮಕ್ಕೆ ಮುಖ್ಯವಾಗಿ ಜೀವನದ ಅಗತ್ಯ ಮತ್ತು ಬುದ್ಧಿ ಶಕ್ತಿಯ ಫಲ. ಇವರೆರಡರ ಸಮ್ಮಿಲನವೇಕಾರಣ. ಇದು ಸಂಸ್ಕೃತಿಯ ವಾಹಕ, ಇದರ ಮೂಲಕ ಜನ ಜೀವನಕ್ಕೆ ಒಂದು ಆಶಾದಾಯಕ ಹಾಗೂ ಸುಸಂಬದ್ದವಾದ ಸಾಮಾಜಿಕ ಪರಿಸರವನ್ನು ಒದಗಿಸಿಕೊಡುತ್ತದೆ. ಧರ್ಮ ಆಯಾ ನಾಡಿನ ಜನರ ಸಾಮಾಜಿಕ, ಆರ್ಥಿಕ ಜೀವನದ ಕಥನ[೧೪೩] "ಧರ್ಮೋರ್ರಕ್ಷತಿ ರಕ್ಷಿತ" ನಾವು ಧರ್ಮವನ್ನು ರಕ್ಷಿಸಿದರೆ ಧರ್ಮವು ನಮ್ಮನ್ನು ರಕ್ಷಿಸುತ್ತದೆ ಎಂದು ಎಲ್ಲಾ ಧರ್ಮಗಳು ಸಾರಿ ಹೇಳುತ್ತವೆ.[೧೪೪] ಇಲ್ಲಿ ಪ್ರಮುಖವಾಗಿ ಶೈವ, ವೈಷ್ಣವ, ಜೈನ, ಇಸ್ಲಾಂ ಧರ್ಮಗಳು ಪ್ರಚಲಿತದಲ್ಲಿವೆ.

ಹಿಂದು ಧರ್ಮದ ಮೂಲ ಉಗಮವನ್ನು ವೇದಗಳಲ್ಲಿ ಕಾಣುತ್ತೇವೆ. ಋಗ್ವೇದದಲ್ಲಿ ಆರ್ಯರು ಅಗ್ನಿ, ಇಂದ್ರ, ವರುಣ ಇತರ ದೇವತೆಗಳನ್ನು ಆರಾಧಿಸುತ್ತಿದ್ದರೆಂದು ತಿಳಿದುಬರುತ್ತದೆ. ಆದರೆ ಋಗ್ವೇದ ಕಾಲದಲ್ಲಿ ಗಂಡು ದೇವತೆಗಳಿಗೆ ದೊರೆತ ಪ್ರಾಧಾನ್ಯತೆ ಹೆಣ್ಣು ದೇವತೆಗಳಿಗೆ ದೊರೆಯಲಿಲ್ಲ.[೧೪೫] ಉತ್ತರ ವೇದಗಳ ಕಾಲದಲ್ಲಿ ವಿಷ್ಣು ಪ್ರಾಮುಖ್ಯತೆ ಪಡೆದುಕೊಂಡು, ಜನರನ್ನು ಕಾಪಾಡುವ ದೈವವಾಗಿ ಹುಟ್ಟಿಕೊಂಡನು. ಇವರಿಗೆ ರುದ್ರ ಮತ್ತು ವಿಷ್ಣು ಪ್ರಮುಖ ಆರಾಧ್ಯದೈವಗಳಾಗಿದ್ದವು. ಇದರ ಜೊತೆಗೆ ಕ್ರಿ.ಪೂ.೬ನೆ ಶತಮಾನದಲ್ಲಿ ಜೈನ ಮತ್ತು ಬೌದ್ಧ ಧರ್ಮ ಹುಟ್ಟಿಕೊಂಡಿವು. ಹೀಗೆ ಇಸ್ಲಾಂ ಧರ್ಮವೂ ಸಹ ಭಾರತದಲ್ಲಿ ಉಗಮವಾಗಿ ಧರ್ಮ ಪ್ರಸರಣ ಕಾರ್ಯದಲ್ಲಿ ತೊಡಗಿದವು. ವಿಜಯನಗರದ

ಅರಸರು ಈ ಎಲ್ಲಾ ಧರ್ಮಗಳಿಗೂ ಮಾನ್ಯತೆ ನೀಡಿ ಧಾರ್ಮಿಕ ಪುರೋಭಿವೃದ್ಧಿಗೆ ಸರ್ವಧರ್ಮ ಸಮನ್ವಯತೆಯಲ್ಲಿ ನಂಬಿಕೆ ಇರಿಸಿಕೊಂಡು ಬಂದರು. ಹೀಗೆ ಎಲ್ಲಾ ಧರ್ಮಗಳು ಉಳಿದು ಸೌಹಾರ್ಧತೆಯಿಂದ ಬಾಳಿ–ಮೆರೆದು ಇದು ಈ ನಾಡಿನ ಸಾಂಸ್ಕೃತಿಕ ಹಿರಿಮೆಗೆ ಒಂದು ಕೊಡುಗೆ ಎಂದೆನಿಸಿದೆ. ಕಾಲಾಂತರದಲ್ಲಿ ಆ ಧರ್ಮಗಳಲ್ಲಿ ಪರಸ್ಪರ ವಲಯಗಳ ವಿಸ್ತಾರ, ಮತಾಂತರ, ಧರ್ಮ ಪ್ರಸಾರ, ದೇವಾಲಯಗಳ ರೂಪಾಂತರ ನಾಶ ಮೊದಲಾದ ಕಾರಣಗಳಿಂದ ಮತೀಯ ಘರ್ಷಣೆಗಳು ಸಂಭವಿಸಿದರೂ[೧೪೬] ಚತುಸ್ಸಮಯ ದೀಪಕರಾದ ಅರಸರು ಪರಸ್ಪರ ಧರ್ಮೀಯರಲ್ಲಿ ಅನ್ಯೋನ್ಯತೆಯನ್ನು ಕಲ್ಪಿಸುತ್ತಲೇ ಬಂದಿರುವುದು ಸಮಕಾಲೀನ ಶಾಸನ ಪುರಾತತ್ವ ಮತ್ತು ಸಾಹಿತ್ಯಿಕ ಕುರುಹುಗಳಿಂದ ಮನದಟ್ಟಾಗುತ್ತದೆ. ಇದೇನೇ ಇದ್ದರೂ ಆ ಧರ್ಮಗಳು ಸ್ಥಳೀಯ ಸಂಸ್ಕೃತಿ, ಸಾಹಿತ್ಯ ವಾಸ್ತು ಶಿಲ್ಪ ಮೊದಲಾದ ಕ್ಷೇತ್ರಗಳಲ್ಲಿ ಸಲ್ಲಿಸಿದ ಕೊಡುಗೆಗಳು ಯಾವತ್ತಿಗೂ ಅಜಾರಾಮರವಾಗಿವೆ. ಈ ನಾಡಿನ ಸಂದರ್ಭದಲ್ಲಿ ಈ ಧರ್ಮಗಳು ಬೆಳೆದುಬಂದ ರೀತಿಯನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಈ ಪ್ರದೇಶದಲ್ಲಿ ಈ ಧರ್ಮಗಳ ಪ್ರಾಚೀನತೆ, ಪ್ರಸಾರ, ಬೆಳವಣಿಗೆ ಸ್ಥಳೀಯ ಸಾಹಿತ್ಯ ಹಾಗೂ ಶಾಸನಗಳ ಆಧಾರದಲ್ಲಿ ಸಂದರ್ಭಕ್ಕೆ ಅನುಸಾರವಾಗಿ, ಇತರೆಡೆಯ ಶಾಸನ ಮತ್ತು ಸಾಹಿತ್ಯಿಕ ಕುರುಹುಗಳನ್ನು ಪೂರಕವಾಗಿಟ್ಟುಕೊಳ್ಳಲಾಗಿದೆ.

**ಶೈವಧರ್ಮ:** ಭಾರತದಲ್ಲಿ ಶೈವ ಧರ್ಮವು ಅತೀ ಪ್ರಾಚೀನವಾದ ಧರ್ಮ. ಶಿವನನ್ನು ಆರಾಧಿಸುವ ಶೈವ ಧರ್ಮದ ಇತಿಹಾಸವು ವೇದ ಕಾಲಕ್ಕಿಂತಲೂ ಹಿಂದೆ ಹೋಗುತ್ತದೆ. ಕ್ರಿಪೂ.೩೦೦೦ ವರ್ಷಗಳ ಹಿಂದಿನ ಹರಪ್ಪಮೆಹಂಜೋದಾರೋ ಉತ್ಖನನದಲ್ಲಿ ದೊರೆತ ಪಳೆಯುಳಿಕೆಗಳು, ಶೈವ ಧರ್ಮದ ಇತಿಹಾಸವು ಪ್ರಪಂಚದಲ್ಲಿಯೇ ಅತ್ಯಂತ ಪ್ರಾಚೀನ ಧರ್ಮ ಎಂಬುದನ್ನು ವ್ಯಕ್ತಪಡಿಸುತ್ತದೆ.[೧೪೭] ಇಲ್ಲಿ ಕೊಂಬುಗಳಿರುವ ದೇವತೆಯ ಚಿತ್ರವಿರುವ ಲಿಂಗಗಳು ಲಭ್ಯವಾಗಿವೆ. ಇವುಗಳನ್ನು ಶೈವ ಧರ್ಮದ ಕುರುಹುಗಳೆಂದು ಸರ್ ಜಾನ್ ಮಾರ್ಷಲ್ ಅಭಿಪ್ರಾಯಪಟ್ಟಿದ್ದಾರೆ.[೧೪೮]

ಋಗ್ವೇದದಲ್ಲಿ ಪಶುಪತಿಯು ರುದ್ರನೆಂದು, ಪೂಜೆಗೊಳ್ಳುತ್ತಾನೆ.[೧೪೯] ಯುಜುರ್ವೇದ ಕಾಲಕ್ಕೆ ರುದ್ರನೆ ಶಿವನ ರೂಪ ಪಡೆದು ಶೈವರ ಅಧಿದೇವತೆಯಾದನೆಂದು ತಿಳಿದುಬರುತ್ತದೆ. ಈ ಕಾಲದಲ್ಲಿ ಶಿವನಿಗೆ ಶಂಕರ, ಮಹಾದೇವ ಹೀಗೆ ಹಲವು ಹೆಸರುಗಳು ಬಂದಿವೆ. ಪುರುಷ ಸೂಕ್ತ ಉಪನಿಷತ್ತುಗಳು, ಕೆಲವು ಪುರಾಣಗಳಲ್ಲಿ ಶಿವನ ವರ್ಣನೆಗಳಿವೆ.[೧೫೦]

ಕರ್ನಾಟಕಕ್ಕೆ ಸಂಬಂಧಿಸಿದಂತೆ ಈ ಧರ್ಮ ಕದಂಬ ಮನೆತನದ ಕಾಲದಿಂದಲೇ ಪ್ರಚಲಿತಗೊಂಡಿತು. ಈ ರೀತಿ ಶಿವನನ್ನು  ಪೂಜಿಸುವ ಆರಾಧಿಸುವ ಕ್ರಿಯೆಯ ಮೇಲೆ ಈ ಶೈವ ಮತಗಳಲ್ಲಿ ಅನೇಕ ಗುಂಪುಗಳನ್ನು ಮಾಡಲಾಗಿದೆ. ಆದರೆ ಪ್ರಸ್ತುತ ಅಧ್ಯಯನ ಶೈವ ಧರ್ಮಕ್ಕೆ ಕಾಮಲಾಪುರ ಪರಿಸರಕ್ಕೆ ಸೀಮಿತವಾಗಿದೆ. ಕಾಮಲಾಪುರ ಒಳಗೊಂಡ ಹಂಪಿ ಕ್ಷೇತ್ರ ಪ್ರಖ್ಯಾತ ಶೈವ ಕೇಂದ್ರ, ಪಂಪಾಪತಿ ಈ ಸಾಮ್ರಾಜ್ಯದ ಅಧಿದೈವ.[೧೫೧] ಹೀಗೆ ಈ ಧರ್ಮ ಉಪಪಂಥಗಳು ವಿಜಯನಗರ ಕಾಲಕ್ಕೆ ದೈವ, ಪಾಶುಪತ, ಕಾಳಮುಖ, ವೀರಶೈವ, ಹೀಗೆ ಹಲವು ಪಂಥಗಳು ಪ್ರಚಾರಗೊಂಡವು. ಇವುಗಳಿಗೆ ತಮ್ಮದೇ ಆದ ಶಿಷ್ಯ ಸಂಕುಲ, ಸಿದ್ದಾಂತ, ದರ್ಶನ ಮತ್ತು ಆಚಾರ–ವಿಚಾರಗಳು ಇವೆ.

ಹೀಗೆ ವಿಜಯನಗರದ ಅರಸರ ಕಾಲದಲ್ಲಿ ಈ ಧರ್ಮದ ಬೆಳವಣಿಗೆಯು ಸಮೃದ್ಧಿಯಾಗಿದೆ ಎಂಬುದಕ್ಕೆ ಸಾಹಿತ್ಯಿಕ ಹಾಗೂ ಶಾಸನ ಸ್ಮಾರಕಗಳ ಆಧಾರಗಳನ್ನು ಮೂಲ ಆಕರವಾಗಿ ಬಳಸಲಾಗಿದೆ.

**ಸಾಹಿತ್ಯಿಕ:** ವಿಜಯನಗರ ಕಾಲದಲ್ಲಿ ಜನರು ಹೊಸ ಚೈತನ್ಯ ಪಡೆದು ನಾನಾ ರೀತಿಯ ಸಾಹಿತ್ಯದ ಮಜಲುಗಳನ್ನು ವಿವಿಧ ಕೃತಿಗಳ ಮೂಲಕ ಹೊರಹೊಮ್ಮಿಸಿದ್ದಾರೆ. ಅರಸರು, ಮಾಂಡಲೀಕರು, ದಂಡನಾಯಕರು, ಸಾಮಂತರು ತಾವೇ ಸ್ವತಃ ವಿದ್ವಾಂಸರಾಗಿದ್ದರು.[೧೫೨] ಹರಿಹರನ ಗಿರಿಜಾ ಕಲ್ಯಾಣ, ಪಂಪಾಶತಕ, ರಕ್ಷಾಶತಕ, ಪುಷ್ಪರಗಳೆಯಲ್ಲಿ ಶಿವಾಚಾರ್ಯನ ಸಂಭ್ರಮ, ರಾಘವಾಂಕನ, ಸಿದ್ದರಾಮಚಾರಿತ್ರ್ಯ, ಸೋಮನಾಥ ಚಾರಿತ್ರೆ, ವೀರೇಶ್ವರ ಚರಿತ್ರೆ, ವಿರುಪಾಕ್ಷ ಪಂಡಿತರ ಚೆನ್ನಬಸವ ಪುರಾಣ, ಕರಸ್ಥಲದ ವೀರಣ್ಣೊಡೆಯ ಕಂದ, ಇಷ್ಟಲಿಂಗ ಚರಿತ್ರೆ, ಲಿಂಗಸೂತ್ರ ವಚನ, ಗುರು ಬಸವನ ಶಿವಯೋಗಾನಭೂಷಣ, ಸದ್ಗುರು ರಹಸ್ಯ, ಕಲ್ಯಾಣೇಶ್ವರ, ವೃಷಭಗೀತೆ, ಅವಧೂತರ ಗೀತೆ, ಭಕ್ತಿ ಭಂಡಾರ ಜಕ್ಕಣಾರ್ಯನ ನೂರೊಂದು ಸ್ಥಲ, ಚಾಮರಸನ ಪ್ರಭುಲಿಂಗಲೀಲೆಯಲ್ಲಿನ ಅರ್ಚನಾ ವೈಭವ[೧೫೩] ಚಂದ್ರಕವಿಯ ಶಂಕರ ಶತಕ ಇವು ಪ್ರಮುಖ ಸಾಹಿತ್ಯ ಆಕರಗಳಾಗಿದ್ದು, ಇವು ಅವರಲ್ಲಿ ಅಡಗಿದ್ದ ಸಾಹಿತ್ಯ ಪ್ರೌಢಿಮೆಯನ್ನು ಬಿಂಬಿಸುತ್ತದೆ. ಬುಕ್ಕರಾಯನ ಕಾಲದಲ್ಲಿನ ಸಂಚೆನ, ಸೋಮ, ಗುರುದೇವ, ಭೀಮಕವಿ, ಪದ್ಮಣಾಂಕ ಮತ್ತು ನೀಲಕಂಠ ಶಿವಾಚಾರ್ಯ್ಯ ಇವರೆಲ್ಲರೂ ವೀರಶೈವ ಕವಿಗಳು. ಪದ್ಮಣಾಂಕನ ಪದ್ಮರಾಜ ಪುರಾಣ, ಗುರುದೇವ ವೀರಶೈವ ಪಂಚಸ್ತೋತ್ರಗಳ ಪೀಠಿಕೆಗೆ ಕರ್ತೃ. ಮಲ್ಲಿಕಾರ್ಜುನ ಶೈವಧರ್ಮ ಸಾಹಿತ್ಯಕ್ಕೆ ಉತ್ತೇಜನ ನೀಡಿದರು.[೧೫೪] ಲಕ್ಕಣ್ಣ ದಂಡನಾಯಕ ಶಿವತತ್ವ ಚಿಂತಾಮಣಿಯನ್ನು, ಜಕ್ಕಣ್ಣನು ವೀರಶೈವಾಮೃತವನ್ನೂ ರಚಿಸಿದನು. ಕುಮಾರ ಬಂಕನಾಥ "ಷಟ್‌ಸ್ಥ ಲೋಪಾದೇಶ" ಎಂಬ ಕೃತಿಯನ್ನು ರಚಿಸಿದನು.[೧೫೫] ಬೊಮ್ಮರಸ "ಸೌಂದರ್ಯ ಪುರಾಣವನ್ನು", "ಷಟ್ಸ್ಥಲಜ್ಞಾನಾಮೃತ" ಎಂಬ ವಚನ ಕಾವ್ಯವು ಸಿದ್ದೇಶ್ವರನಿಂದ ರಚಿತಗೊಂಡಿತು. ದುರ್ಜತೆಯಿಂದ ಕಾಳಹಸ್ತೀಶ್ವರ ಶತಕಂ ಎಂಬ ಕೃತಿಯು ರಚಿತಗೊಂಡಿತು. ಅಪ್ಪಯ್ಯ ದೀಕ್ಷಿತ್ ಶಿವತತ್ವ ವಿವೇಕ ಎಂಬ ಕೃತಿಯನ್ನು ರಚಿಸಿದನು.[೧೫೬] ಮೊಗ್ಗೆಯ ಮಾಯಿದೇವ ಕವಿಯು ಶಿವಧನಶತಕ ಶಿವಾವಲ್ಲಭ ಶತಕ, ಮಹದೈಪುರೀಶ್ವರ ಶತಕ, ಶಿವಾನುಭವ ಸೂತ್ರ ಕೃತಿಗಳ ಇವರಿಂದ ರಚಿಸಲ್ಪಟ್ಟವು.[೧೫೭] ಈ ಎಲ್ಲಾ ಕವಿಗಳ ಕೃತಿಗಳು ಶೈವ ಧರ್ಮದ ಸಾಹಿತ್ಯದ ಪ್ರಗತಿ ಅಭಿವೃದ್ಧಿಯ ಪಥದಲ್ಲಿ ನಡೆಯುತ್ತಿತ್ತು ಎಂಬುದನ್ನು ಸ್ಪಷ್ಟೀಕರಿಸುತ್ತವೆ. ಈ ರೀತಿ ಶೈವ, ವೀರಶೈವ ಧರ್ಮ ಕಾಮಲಾಪುರ ಗ್ರಾಮವನ್ನು ಒಳಗೊಂಡು ಹಂಪಿ ಕ್ಷೇತ್ರದಲ್ಲಿತ್ತು ಎಂಬುದನ್ನು ನಿಖರಗೊಳಿಸುತ್ತವೆ.

ಸಾಹಿತ್ಯಿಕ ಆಕರಗಳ ಜೊತೆಗೆ ಶಾಸನಗಳೂ ಕೂಡ ಶೈವಧರ್ಮ ಇತಿಹಾಸ ರಚನೆಯಲ್ಲಿ ಮಹತ್ತರ ಪಾತ್ರವಹಿಸಿದೆ. ಕ್ರಿ.ಶ.೧೦೭೬ರ ಶಾಸನವೊಂದು ಮಠದಲ್ಲಿ ಪುರಾಣ, ವ್ಯಾಖ್ಯಾಯನ ಮಾಡುವ ಉಪಾಧ್ಯಾಯರಿಗೆ ಪ್ರತಿ ವರ್ಷ ೮೦ ಲೊಕ್ಕಿ ಗದ್ಯಾಣಗಳನ್ನು ದಾನಕೊಟ್ಟನೆಂದು ತಿಳಿಸುತ್ತದೆ.[೧೫೮] ಕ್ರಿ.ಶ.೧೩೩೬ರಲ್ಲಿ ಬುಕ್ಕರಾಯ ಒಡೆಯನು ಹಸ್ತಿನಾವತಿಯನ್ನು (ಆನೆಗೊಂದಿಯನ್ನು) ಆಳುತ್ತಿದ್ದಾಗ ಇವನ ಮಹಾಪ್ರಧಾನ ಬಸದೇ ದಂಡನಾಯಕನು ವಿರುಪಾಕ್ಷದೇವರ ಸೇವೆಗಾಗಿ ರಾಮಾಪುರದ ಕೆರೆಗೆ ಭೂಮಿಯನ್ನು ದಾನ ಮಾಡಿದನು.[೧೫೯] ಕ್ರಿ.ಶ.೧೩೮೦ ಶಾಸನ ಹರಿಹರರಾಯನ ಆಳ್ವಿಕೆಯ ಕಾಲದಲ್ಲಿ ಮಲಿಗೆ ನಾಯಕನ ಮಗ ಬದ್ಧೆಯ ನಾಯಕನು, ಬೇಟೆಗಾರನ ಹೆಬ್ಬಾಗಿಲಿನ ಪೂರ್ವದಿಕ್ಕಿನಲ್ಲಿ

ಒರತೆಯ ಮೈಲಾರ ದೇವರನ್ನು ಪ್ರತಿಷ್ಠಾಪಿಸಿದನು. ಅಲ್ಲದೇ ಈ ದೇವಾಲಯದ ವಾಯುವ್ಯಕ್ಕೆ ಒರತೆಯ ಕೊಳವನ್ನು ಮಾಡಿಸಿದ ವಿಷಯ ಶಾಸನಗಳಲ್ಲಿ ದಾಖಲಿಸಲ್ಪಟ್ಟಿದೆ.[೧೦] ಕ್ರಿ.ಶ.೧೪ನೇ ಶತಮಾನದ ಶಾಸನ ಸಂಖರದೇವರ ದಿಡ್ಡಿಯಬಾಗಿಲು,[೧೧] ಸೋಮ ದೇವರ ಕೊತ್ತಳ,[೧೨] ಶಂಕರ ದೇವರ ಕೊತ್ತಳದ,[೧೩] ಹೆಸರನ್ನು ಸೂಚಿಸುತ್ತದೆ. ಇದೇ ಕಾಲಕ್ಕೆ ಸೇರಿದ ಇನ್ನೊಂದು ಶಾಸನ ಹಂಪಾ ದೇವಿಯ ಹೆಸರಿನ ದಿಡ್ಡಿಯನ್ನು ಸೂಚಿಸಿದೆ.[೧೪] ಇದೇ ಕಾಲಕ್ಕೆ ಸೇರಿದ ಇನ್ನೊಂದು ಶಾಸನ ಶೈವ ಶಿವಯೋಗ ದೇವರ ಗವಿಯನ್ನು,[೧೫] ವಿರುಪಾಕ್ಷ ದೇವರ ಗದ್ದೆಯನ್ನು,[೧೬] ದಾನ ನೀಡಿದ್ದನ್ನು, ಸೆಟಿ ಮತ್ತು ಅವನ ದಾಯಾದಿಗಳ ತೋಟ ಮತ್ತು ಗದ್ದೆಯಲ್ಲಿನ ಉತ್ಪನ್ನದಲ್ಲಿ ರಾಮಚಂದ್ರ ದೇವರಿಗೆ ಮತ್ತು ವಿರುಪಾಕ್ಷ ದೇವರಿಗೆ ಅಮೃತ ಪಡಿಗೆ ನೀಡಿದ ವಿಷಯ ಪ್ರಸ್ತಾಪಿಸಲಾಗಿದೆ.[೧೭] ಕ್ರಿ.ಶ.೧೫೩೧ರಲ್ಲಿ ಕೃಷ್ಣರಾಜ ಅರಸು ತನ್ನ ತಂದೆ–ತಾಯಿಯವರಿಗೆ ಪುಣ್ಯವಾಗಲೆಂದು ಕನ್ನತಿಯ ಕಟೆ, ಬಂಕಾಪುರ ನಾಗಲಾಪುರ, ಗೌರಾಜಿಕೆರೆ ಮೂರು ತೋಟಗಳನ್ನು ಮತ್ತು ಅನೇಕ ಭೂಮಿಗಳನ್ನು ಪ್ರಸನ್ನ ವಿರುಪಾಕ್ಷ ದೇವರ ಸೇವೆಗಾಗಿ ದಾನ ನೀಡಿದರು.[೧೮] ಕ್ರಿ.ಶ.೧೫೪೯ರ ಶಾಸನವು ಬಾವಿ ಮತ್ತು ತೋಟವನ್ನು ತಂಮ್ಮಡಿ ನಂಜೇ ದೇವರ ನಿರಾಸಿ ಮಠಕ್ಕೆ ದಾನ ನೀಡಿದ್ದನ್ನು ಉಲ್ಲೇಖಿಸಿದೆ.[೧೯] ಕ್ರಿ.ಶ.೧೫೬೧ರ ಶಾಸನ, ವಿರುಪಾಕ್ಷ ದೇವರ, ಮಲ್ಲಿಕಾರ್ಜುನ ದೇವರ ಮತ್ತು ಬೆನಕನ ಗುಡಿಯ ಹೆಸರು ದಾಖಲಿಸಿದೆ.[೨೦] ಕ್ರಿ.ಶ.೧೫–೧೬ನೇ ಶತಮಾನದಲ್ಲಿ ಮಲ್ಲಿಕಾರ್ಜುನ ದೇವರಿಗೆ ದೀಪವನ್ನು ಉರಿಸಿದ್ದಕ್ಕಾಗಿ ಒಂದು ಅಂಗಡಿ ಮನೆಯನ್ನು ದಾನ ಮಾಡಿದನು.[೨೧] ಗಂಗಾಧರ ದೇವರ ಮಾನ್ಯದ[೨೨] (ಭೂಮಿಯ) ಗುರುನಾಥ ದೇವರಿಗೆ ಸೇರಿದ ಭೂಮಿಯ ಕುರಿತು,[೨೩] ಚೆನ್ನ ಸೋಮ ದೇವರ ಮಾನ್ಯದ[೨೪] ಕುರಿತು, ನಂದಿ ವಿಗ್ರಹ, ಸುಂಖ ದೇವಿಯ ಮಗ ಲಿಖಿ ದೇವನಿಗೆ ಸೇರಿದ್ದನ್ನು,[೨೫] ಕಾಳ ಹಸ್ತಿಲಿಂಗದ ಹೆಸರನ್ನು,[೨೬] ಭೈರವ ಮೂರ್ತಿಯನ್ನು,[೨೭] ಸೊಮಯ್ಯ ದೇವರ ಹೆಸರನ್ನು,[೨೮] ಸಂಗನ ಬಸವ ದೇವರ ಹೆಸರನ್ನು,[೨೯] ಕೋಟಿ ಶಂಕರ ದೇವರ ಬಾಗಿಲನ್ನು ಎಂದು ಉಲ್ಲೇಖಿಸಿದೆ.[೩೦] ಕ್ರಿ.ಶ.೧೪–೧೫ನೇ ಶತಮಾನದ ಶಾಸನಗಳಲ್ಲಿ ಕೋಟೆ ಶಂಕರ ದೇವರ ಬಾಗಿಲನ್ನು[೩೧] ವಿರುಪಾಕ್ಷ ದೇವರಿಗೆ ಸೂರೆ ದೇವಯ್ಯ ದಾನ ಕೊಟ್ಟಿದ್ದು,[೩೨] ಮಲ್ಲಿಕಾರ್ಜುನ ದೇವರಿಗೆ ದಾನ ಮಡಿದ ವಿಷಯಗಳು ದಾಖಿಲಿಸಲ್ಪಟ್ಟಿವೆ.[೩೩]

**ನಾಣ್ಯಗಳು:** ಕೃಷ್ಣದೇವರಾಯ ಕಾಲದಲ್ಲಿ ಚಲಾವಣೆಯಲ್ಲಿದ್ದ ಒಂದು ಚಿನ್ನದ ನಾಣ್ಯದ ಮುಂದಿನ ಭಾಗದಲ್ಲಿ ಕುಳಿತಿರುವ ಭಂಗಿಯಲ್ಲಿರುವ ಶಿವ ಅವನ ತೊಡೆಯ ಮೇಲೆ ಪಾರ್ವತಿ, ಶಿವನ ಬಲಗೈಯಲ್ಲಿ ತ್ರಿಶೂಲ, ಎಡಗೈಯು ಪಾರ್ವತಿಯ ಮೇಲೆ ಇದೆ. ದೊರೆ ಕೃಷ್ಣದೇವರಾಯ ವೈಷ್ಣವನಾದರೂ ಶೈವ ಧರ್ಮದಲ್ಲಿ ಸಮಾನ ಗೌರವ ಹೊಂದಿದ್ದನೆಂಬುದನ್ನು ಶಿವ–ಪಾರ್ವತಿಯರ ನಾಣ್ಯ ಧೃಡಪಡಿಸುತ್ತದೆ.[೩೪] ಮತ್ತೊಂದು ತಾಮ್ರದ ನಾಣ್ಯದ ಮೇಲೆ ನಂದಿಯ ಚಿತ್ರವಿರುವುದನ್ನು ಕಾಣಬಹುದು. ಇದು ಕೂಡ ಶೈವ ಧರ್ಮದ ಮೇಲಿನ ಗೌರವವನ್ನು ಸೂಚಿಸುತ್ತದೆ.[೩೫]

ಸಾಹಿತ್ಯ ಆಕರಗಳ ಜೊತೆಗೆ ಶಾಸನಗಳೂ ಕೂಡ ಅಷ್ಟೇ ಮಹತ್ವದ ಪಾತ್ರವಹಿಸಿದೆ. ಇವುಗಳ ಜೊತೆಗೆ ಇಲ್ಲಿನ ದೇವಾಲಯಗಳ ಪಾತ್ರವೂ ಅಷ್ಟೇ ಮಹತ್ವದ್ದಾಗಿದೆ. ಕಾಮಲಾಪುರದಲ್ಲಿನ, ಈಶ್ವರ ದೇವಾಲಯ, ನಗರೇಶ್ವರ ದೇವಾಲಯ, ವೀರಭದ್ರ ದೇವಾಲಯ, ಚಂದ್ರಶೇಖರ ದೇವಾಲಯ,

ಆನೆ ಸಾಲಿನ ಹಿಂಬದಿಯಲ್ಲಿರುವ ಶೈವ ದೇವಾಲಯ ಮಲ್ಲಿಕಾರ್ಜುನ ದೇವಾಲಯ ಈ ಎಲ್ಲಾ ದೇವಾಲಯಗಳು ಶೈವ ಧರ್ಮ ಈ ಪರಿಸರದಲ್ಲಿ ಪ್ರಚಲಿತಮಾನವಾಗಿತ್ತು ಎಂಬುದನ್ನು ಮತ್ತಷ್ಟು ಪುಷ್ಟಿಕೊಡುತ್ತವೆ. ಇಲ್ಲಿನ ಶಿವಲಿಂಗ, ಭೈರವ, ಭಿಕ್ಷಾಟನಾ ಮೂರ್ತಿ, ಚಂದ್ರಮೌಳೇಶ್ವರ, ವೀರಭದ್ರ, ಕಾರ್ತಿಕೇಯ, ಮಹೇಶ್ವರ, ವಿರುಪಾಕ್ಷ, ಉಮಾಮಹೇಶ್ವರ, ನಂದಿ ಇವು ಶೈವ ಪಂಥಕ್ಕೆ ಸೇರಿದ ಮೂರ್ತಿಶಿಲ್ಪಗಳಾಗಿವೆ. ಈ ಪಂಥಕ್ಕೆ ಸೇರಿದ ದೇವಾಲಯಗಳ ಮತ್ತು ಮೂರ್ತಿಶಿಲ್ಪಗಳ ಬಗ್ಗೆ ಪ್ರತ್ಯೇಕ ಅಧ್ಯಾಯದಲ್ಲಿ ಹೇಳಲಾಗಿದೆ.

**ಕಾಮಲಾಪುರ ಪ್ರದೇಶದ ಪ್ರಮುಖ ವೀರಶೈವ ಮಠಗಳು:**

ದಕ್ಷಿಣ ಭಾರತದಲ್ಲಿ ಪೂರ್ವ ಪರಂಪರೆಯಿಂದ ಬೆಳೆದು ಬಂದಿದ್ದ ಅವೈದಿಕ ಪಂಥಗಳೂ ಮಠಗಳ ಮೂಲಕ ಒಂದೂ ಧಾರ್ಮಿಕ ಪಂಥದ ಜನರ ಚಟುವಟಿಕೆಗಳಿಗೂ ಗಮನಕ್ಕೂ ಒಂದು ಕೇಂದ್ರವನ್ನು ಒದಗಿಸುತ್ತ ಬಂದದ್ದು ಗೋಚರವಾಗುತ್ತದೆ. ಈ ಹಿನ್ನಲೆಯಲ್ಲಿ ಶಂಕರಚಾರ್ಯರ ಮತ್ತು ತರುವಾಯದ ಅನೇಕ ಜನ ಆಚಾರ್ಯರೂ ಮಠಗಳನ್ನು ಸಂಘಟಿಸಿದ್ದನ್ನು ಕಾಣಬಹುದು. ಸನ್ಯಾಸಿಗಳು ವಾಸಿಸುವ ಸ್ಥಳ (ಕುಟೀರ)ವನ್ನು 'ಮಠ' ಎಂದು ಕರೆಯಲಾಗುತ್ತದೆ.[೧೮೬] ಈ ಮಠಗಳಲ್ಲಿ ಜ್ಞಾನದಾಸೋಹ ಮತ್ತು ಅನ್ನದಾಸೋಹ ಕಾರ್ಯಗಳು ನಿರಂತರವಾಗಿ ಜರುಗುತ್ತಿದ್ದವು.[೧೮೭] ಈ ಮಠಗಳು ಜ್ಞಾನಾನ್ವೇಷಣೆಯ ಧಾರ್ಮಿಕ ಕೇಂದ್ರವಾಗಿ ಕ್ರಮೇಣ ಆಶ್ರಯ, ಗುರುಮನೆ, ಗುರುಕುಲವಾಗಿ, ಕಾಲಕ್ರಮೇಣ ವಿದ್ಯಾಪ್ರಸಾರ, ಜ್ಞಾನ ಪ್ರಸಾರ, ಮತ ಪ್ರಸಾರದ ಕೇಂದ್ರವಾಗಿ ಬೆಳೆದುಬಂದಿದೆ. ನಾಡಿನ ಸಂಸ್ಕೃತಿಯನ್ನು ಪ್ರತಿನಿಧಿಸಬಲ್ಲ ಆಕರಗಳಲ್ಲಿ ಈ ಮಠಗಳ ಪಾತ್ರ ತುಂಬಾ ಮಹತ್ವದ್ದಾಗಿದೆ.[೧೮೮] ಬದುಕಿನ ಜ್ಞಾನ ಕೇಂದ್ರಗಳಾದ ಇವುಗಳಿಗೆ ಆಯಾ ಮತಧರ್ಮದ ಆಚಾರ್ಯರು ಚೈತನ್ಯ ತುಂಬುತ್ತಾರೆ. ಇವರು ಆಯಾಧರ್ಮದ ಸಮಾಜವನ್ನು ಸಂಸ್ಕಾರಗೊಳಿಸಿ, ದೈವೀ ಸಂಭೂತರೆನಿಸುತ್ತಾರೆ. ಇವರು ಜನಸಮುದಾಯದ ಪ್ರತಿನಿಧಿಗಳೂ ಹೌದು. ದಾಸರ ನುಡಿಯಂತೆ "ಕೆರೆಯ ನೀರನು ಕೆರೆಗೆ ಚೆಲ್ಲಿ" ಎಂಬಂತೆ ಸಮಾಜದಿಂದ ಮಠಕ್ಕೆ ಬಂದ ಆಸ್ತಿಯನ್ನು ಸಮಾಜದ ಪೋಷಣೆ, ಶಿಕ್ಷಣ ಮತ್ತು ಸಂಸ್ಕೃತಿಯ ಸಂವರ್ಧನೆಗೆ ವಿನಿಯೋಗಿಸಿದರು. ದೇವಾಲಯಗಳು ಪೂಜಾಸ್ಥಾನವಾದರೆ, ಮಠಗಳು ಸಂಸ್ಕೃತಿಯ ತಾಣವಾಗಿ ಗ್ರಾಮದ ಆಡಳಿತ ಕೇಂದ್ರಗಳಾದವು. ಊರಲ್ಲಿದ್ದ ಅನ್ನಛತ್ರ(ದಾಸೋಹ), ದಾರಿದಾರಿಗಿಟ್ಟ ಅರವಟ್ಟಿಗೆ ಮೊದಲಾದವುಗಳ ಮೇಲ್ವಿಚಾರಣೆ ಮಠಗಳದಾಯಿತು.[೧೮೯] ಮಠಗಳ ಪ್ರಮುಖ ಉದ್ದೇಶ ಅನ್ನದಾಸೋಹ. ಪ್ರಸ್ತುತ ಕಾಮಲಾಪುರ ಪರಿಸರದಲ್ಲಿ ಬೆಳೆದು ಬಂದ ಮಠಗಳು ಶೈವ ಮತ್ತು ವೈಷ್ಣವ ಧರ್ಮಕ್ಕೆ ಸಂಬಂಧಿಸಿದವುಗಳಾಗಿವೆ. ಇವು ಸಮಾಜದ ಪ್ರತಿಯೊಂದು ಕ್ಷೇತ್ರದ ಮೇಲೂ ತಮ್ಮ ಪ್ರಭಾವವನ್ನು ಬೀರುತ್ತಾ ಬಂದಿವೆ. ಹಂಪೆಯು ಮೊದಲಿನಿಂದಲೂ ಅನೇಕ ಧರ್ಮಗಳ ಆಶ್ರಿತ ಕೇಂದ್ರ, ವೀರಶೈವ ಮಠಗಳು ಇದ್ದುದರಿಂದ ಈ ಧರ್ಮದ ದಾರ್ಶನಿಕರು ಆಚಾರ್ಯರು, ಅನುಭಾವಿಗಳು, ನಿರಂತರ ಪರಿಶ್ರಮದಿಂದ ಈ ಧರ್ಮದ ಮತ ಹಾಗೂ ಸಾಹಿತ್ಯ ಸಮೃದ್ಧವಾಗಿ ಬೆಳೆಯಿತು.[೧೯೦] ಪ್ರಸ್ತುತ ಕಾಮಲಾಪುರ ಪ್ರದೇಶಕ್ಕೆ ಸೀಮಿತವಾದರೆ ಇಲ್ಲಿನ ವೀರಶೈವ ಮಠಗಳು ಸ್ಥಳೀಯ ಸಾಂಸ್ಕೃತಿಕ, ಶೈಕ್ಷಣಿಕ, ಆರ್ಥಿಕ, ಧಾರ್ಮಿಕ, ಸಾಹಿತ್ಯಿಕ ಮತ್ತು ಸಾಮಾಜಿಕ ಬೆಳವಣಿಗೆಗೆ ಮಹತ್ತರ ಸಾಧನೆ ಮಾಡಿವೆ.

**ಕಲ್ಲುಮಠ:** ಕ್ರಿ.ಶ.೧೫ನೇ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದ ಕಲ್ಲು ಮಠ ಹಂಪೆಯ ರಥ ಬೀದಿಯ ಎಡಪಕ್ಕದಲ್ಲಿದೆಯೆಂದು ಕೊಟ್ರಯ್ಯ ಸಿ.ಟಿ.ಎಂ ನವರು ತಿಳಿಸಿದ್ದಾರೆ.[೯೧] ಚಿದಾನಂದ ಮೂರ್ತಿ.ಎಂ ರವರು ವಿರುಪಾಕ್ಷ ದೇವಸ್ಥಾನದ ಹಿಂದೆ ಸುಮಾರು ಅರ್ಧ ಕಿ.ಮೀ ದೂರದಲ್ಲಿರುವ ಅರಸನ ಗವಿಯನ್ನೇ ಕಲ್ಲು ಮಠವೆಂದು ಅಭಿಪ್ರಾಯ ಪಡುತ್ತಾರೆ.[೯೨] ಕಲ್ಲು ಮಠದ ಪ್ರಭು ದೇವರ ವಾಸ ಬಹುಶಃ ಕಾಮಲಾಪುರದಲ್ಲಿರಬೇಕು ಏಕೆಂದರೆ ಸುಮಾರು ೫-೬ ವರ್ಷಗಳ ಹಿಂದೆ ಕಾಮಲಾಪುರದಲ್ಲಿ ಕಲ್ಲುಮಠವೆಂದೇ ಕರೆಸಿಕೊಳ್ಳುತ್ತಿದ್ದ ಹಾಳು ಮಂಟಪವಿದೆ. ಬಹುಶಃ ಇದೇ ಕಲ್ಲು ಮಠದ ಪ್ರಭುದೇವರ ಕಲ್ಲು ಮಠವಿರಬೇಕು.[೯೩] ಅದೇನೇ ಇದ್ದರೂ ಈ ಮಠ ಶಾಖಾ ಮಠವಾದರೂ ಆಗಿರಬೇಕು ಈ ಮಠದ ಅಧ್ಯಕ್ಷ ಪ್ರಭುದೇವರು. ಇವರು ಲಿಂಗಲೀಲಾ ವಿಲಾಸ ಚಾರಿತ್ರವೆಂಬ ವಚನ ಸಂಕಲನ ಕೃತಿಯನ್ನು ಬರೆದಿದ್ದಾರೆ. ಮಂತ್ರಗೋಪ್ಯಕ್ಕೆ ಟೀಕುವನ್ನು ರಚಿಸಿದ್ದಾರೆ. ಈತ ಸತ್ವಶಾಲಿ ಗ್ರಂಥ ಕರ್ತೃ. ಸಂಕಲನಕಲೆ, ನಿರೂಪಣಾ ಪ್ರತಿಭೆ ಹಾಗೂ ಅಗಾಧ ಪಾಂಡಿತ್ಯದಿಂದಾಗಿ ಒಬ್ಬ ಶಾಸ್ತ್ರಜ್ಞನಾಗಿದ್ದರು.

**ಹಿರೇಮಠ:** ಹಂಪೆಯ ಹಿರೇಮಠಕ್ಕೆ ಐತಿಹಾಸಿಕ ಮಹತ್ವವಿದೆ. ಕೃಷ್ಣಾಪುರ (ಈಗಿನ ತಳವಾರ ಘಟ್ಟ)ದಲ್ಲಿ ೬೦೦ ಕ್ಕಿಂತಲೂ ಹೆಚ್ಚು ಸ್ತಂಭಗಳಿಂದ ಆವೃತ್ತವಾದ ಈ ಮಠವನ್ನು ಈಗಲೂ ಕಾಣಬಹುದು. ಇದರ ಅಧ್ಯಕ್ಷ ಸಿದ್ದವಿರೇಶಯತಿ, ಈತನ ಶಿಷ್ಯ ವಿರುಪಾಕ್ಷ ಪಂಡಿತ ಇನ್ನೊಬ್ಬ ಶಿಷ್ಯ ಸಜ್ಜೆಯ ಸಿದ್ದಲಿಂಗ ಈತ ಮಳೆಯರಾಜ ಚಾರಿತ್ರ್ಯ ರಚಿಸಿದ. ಇದರ ಉಪಶಾಖಾ ಮಠವೇ ಕಾಮಲಾಪುರದ ಈಗಿನ ಹಳೇ ಬಸ್ ನಿಲ್ದಾಣದ ಹತ್ತಿರದ ಮಠ. ಸಜ್ಜೆಯ ಸಿದ್ದಲಿಂಗ ರಚಿಸಿದ ಮಳೆಯರಾಜ ಚರಿತ್ರ್ಯ ಇದೇ ಮುಂದೆ ಮಳೇಮಠವೆಂದು ಪ್ರಸಿದ್ಧಿಯಾಗಿದೆ. ಹಿರೇಮಠದ ಪರಂಪರೆಯಲ್ಲಿ ಚನ್ನಬಸವ ಪುರಾಣ ರಾಘವಾಂಕ ಚಾರಿತ್ರ್ಯ, ಗುರುರಾಜ ಚಾರಿತ್ರ್ಯ, ಮಳೆಯರಾಜ ಚಾರಿತ್ರಗಳಂಥ ಐತಿಹಾಸಿಕ ಕಾವ್ಯಗಳು ಸೃಷ್ಟಿಯಾದವು.[೯೪] ಈ ಮಠದ ಅವಶೇಷವೆಂದರೆ ಉದ್ದಾನ ವೀರಭದ್ರಸ್ವಾಮಿ ಮಂದಿರ ಈ ಮಠದ ಒಂದು ಭಾಗವಾಗಿದೆ.

**ಕಾಶೀಮಠ : (ಕರಿಸಿದ್ದೇಶ್ವರ ಮಠ)**

ಈ ಮಠವು ಹಂಪೆಯ ತೇರು ಬೀದಿಯ ಬಲಗಡೆಯ ಭಾಗದಲ್ಲಿ ಕಾಣುವ ಸಾಲು ಕಟ್ಟಡಗಳಲ್ಲಿ ಒಂದಾಗಿದೆ. ಅಲ್ಲದೆ ಹಂಪೆಯಲ್ಲಿ "ವೀರಶೈವ ಸಿಂಹಾಸನ ಪೀಠ" ಎಂಬ ಪ್ರಮುಖ ಮಠವೊಂದಿತ್ತು. ಇದು ಐದು ಶಾಖಾ ಮಠಗಳನ್ನು ಹೊಂದಿತ್ತು. ಆ ಶಾಖಾ ಮಠಗಳಲ್ಲಿ ಕಾಮಲಾಪುರದ ಹೊಸ ಬಸ್ ನಿಲ್ದಾಣದ ಬಲಗಡೆಯಲ್ಲಿನ ಉಪ ಶಾಖಾ ಮಠ ಸ್ಥಾಪಿತವಾದುದಾಗಿದೆ. ಮತ್ತೊಂದು ಬುಕ್ಕಸಾಗರ ಎಂಬ ಗ್ರಾಮದಲ್ಲಿ ಸ್ಥಾಪಿತವಾದುದಾಗಿತ್ತು. ಈ ವಿಷಯ ಕುರಿತು ಶಾಸನವೊಂದು "........... ಮಹಾ ವಾಹತ್ತಿನೊಳಗಾದ ಹಂಪೆಯ ಸಿಂಹಾಸನದ ಪಂಚಮಠ ಪಂಚಗೃಹದೊಳಗಾದ ಬುಕ್ಕಸಾಗರ ಮಠದಕರಿಸಿದ್ದದೇವರು..........." ಎಂದು ಉಲ್ಲೇಖಿಸಿರುವುದರಿಂದ ವೀರಶೈವ ಧರ್ಮ ಪ್ರಬುದ್ಧ ಮಾನವಾಗಿದ್ದ ಕಾಲದಲ್ಲಿ, ಹಂಪೆಯಲ್ಲಿ ಸ್ಥಾಪಿತವಾಗಿದ್ದ 'ಕಾಶೀಮಠ' ಜ್ಞಾನ ಸಿಂಹಾಸನವಾದ ಕಾಶೀಮಠದ ಒಂದು ಶಾಖೆಯಾಗಿರಬೇಕು.[೯೫]

**ಕೊಟ್ಟೂರು ಸ್ವಾಮಿ ಮಠ:** ತೋಟದ ಸಿದ್ಧಲಿಂಗೇಶ್ವರರು ಕೆಲವು ದಿನ ತಂಗಾಭದ್ರೆಯ ಪ್ರದೇಶದಲ್ಲಿ ಶಿವಯೋಗ ಸಾಧಕರಾಗಿದ್ದರು. ಇವರು ಪ್ರೌಢದೇವರಾಯ ದರ್ಶನ ಪಡೆದು ವಿರುಪಾಕ್ಷನ ರಥೋತ್ಸವದ ಕಾಲದಲ್ಲಿ ಶ್ರೀ ತೋಂಟದ ಸಿದ್ಧಲಿಂಗಯತಿಗಳ ಪರಂಪರೆಯ ಗುರುಗಳನ್ನು ಸನ್ಮಾನಿಸಿ ಅವರನ್ನು ಪ್ರತ್ಯೇಕ ರಥದಲ್ಲಿ ಮೆರೆಸಿದ ಪ್ರಸಂಗ ವಿರುಪಾಕ್ಷ ವಸಂತೋತ್ಸವ ಚಂಪೂ ಕೃತಿಯಿಂದ ತಿಳಿದು ಬಂದಿದೆ.[೧೯೬] ಈ ಮಠದ ಮೊದಲ ಪೀಠಾಧಿಪತಿ ಶ್ರೀ ಕಪ್ಪಿನ ಚನ್ನಬಸವ ಸ್ವಾಮಿಗಳು. ಈಗಿನ ಶ್ರೀಗಳಾದ ಸಂಗನ ಬಸವ ಸ್ವಾಮಿಗಳು "ಮಹಾಕವಿ ಹರಿಹರ ಸ್ಮಾರಕ ಸಂಶೋಧನ ಕೇಂದ್ರ"ವನ್ನು ಪ್ರಾರಂಭಿಸಿ ಈ ಮೂಲಕ ಪ್ರಾಚೀನ ವೀರಶೈವ ಸಾಹಿತ್ಯ, ಶಿವ-ಶರಣರ ಸಾಧನೆ ಐತಿಹಾಸಿಕ ಕೃತಿಗಳನ್ನು ಪ್ರಕಟಿಸುತ್ತಾ ಬಂದಿದ್ದಾರೆ. ಈ ಮಠವು ಹಂಪೆಯ ತುಂಗಭದ್ರಾ ನದಿದಂಡೆಯ ಮೇಲೆ ಉತ್ತರಾಭಿಮುಖವಾಗಿದೆ.[೧೯೭] ಕಾಮಲಾಪುರದಲ್ಲಿ ಉಪಶಾಖಾ ಮಠವಿದೆ. ಇದರ ಮುಖ್ಯ ಪ್ರವೇಶ ದ್ವಾರದ ಲಲಾಟಬಿಂಬದಲ್ಲಿ ಗಣೇಶನ ಶಿಲ್ಪವಿದೆ. ಒಳಭಾಗದಲ್ಲಿ ವೀರಭದ್ರ ಶಿಲ್ಪವಿದೆ. ಈಗ ಇದು ಶಾಲಾ ಕಟ್ಟಡವಾಗಿ ಮಾರ್ಪಟ್ಟಿದೆ.

**ಚಾಮರಸನ ಮಠ:** ಪ್ರಭುಲಿಂಗಲೀಲೆ ಕರ್ತೃ ಚಾಮರಸನ ಗವಿಯೆಂದು ಕರೆಯುತ್ತಾರೆ. ಕ್ರಿ.ಶ.೧೫ನೇ ಶತಮಾನದ ಶಾಸನವೊಂದು ಈ ರೀತಿ ಉಲ್ಲೇಖಿಸಿದೆ.[೧೯೮]

"ಶ್ರೀ ಗುರು ಗುಹೇಶ್ವರಾಶ್ರಮವೀ ಗುರು ಗಿರಿ ಯಿದರೊಳಗಿಪ್ಪದೈವಧ್ಯಾನೋ ।
ದ್ಯೋಗ ದೊಳಿರ್ಪ್ಪರ್ಗ್ಗೆಯ್ದುವುವಾಗಳ್ ಧರ್ಮಾರ್ಥಕಾಮಮೋಕ್ಷ ಫಲಂಗಳ್ ॥

ಶಾಸನೋಕ್ತ ಉಲ್ಲೇಖಿಸಿ, ಕವಿ ಚಾಮರಸನ ಮಠ ಇಲ್ಲವೇ ಗವಿ ಇರಬೇಕೆಂದು ನಿರ್ಧಾರವಾಗಿದೆ. ಈ ಮಠವು ಕಾಮಲಾಪುರ ಪರಿಸರದಲ್ಲಿ, 'ಹಂಪಾದೇವಿ ದಿಡ್ಡಿ' ಎಂಬ ಹೆಸರಿನ ಕೋಟೆಯ ಪ್ರವೇಶ ದ್ವಾರದ ಹತ್ತಿರದಲ್ಲಿದೆ. ಅದಕ್ಕೆ ಪೂರಕವಾಗಿ ಅಲ್ಲಿ ವೀರಶೈವ ಪ್ರಾಚೀನ ಅವಶೇಷಗಳಾದ ಶಿವಲಿಂಗ, ನಂದಿ, ವೀರಭದ್ರ ಮೂರ್ತಿ ಶಿಲ್ಪಗಳಿವೆ. ಈ ಹಂಪಾದೇವಿಯ ಹೆಸರಿನ ದಿಡ್ಡಿ ಹೆಸರಿನ ಶಾಸನವಿದೆ.

**ಜಡೆಶಂಕರ ಮಠ:** ಇಲ್ಲಿ ಜಡೆ ಶಂಕರ ದೇವರ ದೇವಸ್ತಾನವಿತ್ತು. ಈಗ ಅಕ್ಕ-ತಂಗಿಯರ ಕಲ್ಲುಗಳ ಹಿಂದೆ ಈ ಮಠವಿರಬೇಕೆಂದು ವಿದ್ವಾಂಸರ ಅಭಿಪ್ರಾಯ.[೧೯೯] ಕಾಮಲಾಪುರ ಪರಿಸರದಲ್ಲಿನ ಶಾಸನವೊಂದು ವೀರಶೈವ ಶಂಕರದಾಸಿಮಯ್ಯನ ಆರಾಧ್ಯ ದೈವವಾಗಿದ್ದ ಜಡೆಯ ಶಂಕರ ಲಿಂಗದ ಹೆಸರನ್ನು ತಿಳಿಸುತ್ತದೆ.[೨೦೦] ಹೀಗೆ ಕಾಮಲಾಪುರದ ಅಥವಾ ಹಂಪಿಯ ಸುತ್ತ-ಮುತ್ತಲಿನ ಪರಿಸರದಲ್ಲಿ ಅಂಜನಾದ್ರಿ, ಮತಂಗಾದ್ರಿ, ಹೇಮಕೂಟಾದ್ರ, ಮಾಲ್ಯವಂತಾದ್ರಿಗಳಲ್ಲಿ ಜಂಗಮರು ವಾಸವಾಗಿದ್ದರೆಂಬುದನ್ನು ಪ್ರಾಚೀನ ಕೃತಿಗಳಾದ ಶಿವತತ್ವ, ಚಿಂತಾಮಣಿ, ರಾಘವಾಂಕ ಚಾರಿತ್ರೆ, ಇನ್ನೂ ಮೊದಲಾದ ಕೃತಿಗಳಲ್ಲಿ ಕಾಣಬಹುದು. ಸಿದ್ದಯ್ಯನ ಮಠ, ಕುರುಗೋಡು ನೀಲಮ್ಮನ ಮಠ, ಕಂಪಲಿ ಸ್ವಾಮಿಮಠ, ಗಾಯತ್ರಿಪೀಠ ಹೀಗೆ ಅನೇಕ ಮಠಗಳಿರುವುದನ್ನು ಕಾಣಬಹುದು. ಈ ಎಲ್ಲಾ ಮಠಗಳು ಈ ಪ್ರದೇಶದ ಪರಿಸರದ ಜನರಿಗೆ ಜ್ಞಾನದೀವಿಗೆಯ ಆಕರದ ಕೇಂದ್ರಗಳಾಗಿವೆ.

**ವೈಷ್ಣವ ಧರ್ಮ:** ಶಿವನಿಗೆ ಒಂದು ಇತಿಹಾಸವಿರುವಂತೆ, ಹಿಂದೂ ಧರ್ಮದಲ್ಲಿ ಅವನಷ್ಟೇ ಪ್ರಬಲನಾದ ವಿಷ್ಣುವಿಗೂ ಒಂದು ಇತಿಹಾಸವಿದೆ. ವಿಷ್ಣುವಿನ ಆರಾಧನೆ ಜನಪ್ರಿಯವಾಗಿ

ಬೆಳೆದುಬಂದಿದೆ.[೨೦೧] ಋಗ್ವೇದದಲ್ಲಿ ವಿಷ್ಣು ತನ್ನ ಮೂರು ಹೆಜ್ಜೆಗಳಿಂದ ಇಡೀ ಸಮಸ್ತ ಲೋಕವನ್ನೇ ಅಳೆಯುವ ವಿಷಯವನ್ನು ಪ್ರಸ್ತಾಪಿಸಲಾಗಿದೆ.[೨೦೨] ವೈಷ್ಣವ ಧರ್ಮ ದಕ್ಷಿಣ ಭಾರತದಲ್ಲಿ ಕ್ರಿ.ಪೂ.ದಲ್ಲೇ ಇತ್ತೆಂಬ ಬಗ್ಗೆ ನಾನಾಘಟ್ ಶಾಸನ ಉತ್ತಮನಿದರ್ಶನವಾಗಿದೆ.[೨೦೩] ಶತಪಥ ಬ್ರಾಹ್ಮಣ ತೈತ್ತಿರೀಯ ಅರಣ್ಯಕ, ಮಹಾನಾರಾಯಣ, ಉಪನಿಷತ್ತು, ಮಹಾಭಾರತ, ಭಗವದ್ಗೀತೆ, ಬೌದ್ಧಾಯನನ ಧರ್ಮಸೂತ್ರ ಪಾಣನಿಯ ಅಷ್ಟಾಧ್ಯಾಯಿನಿ, ಕಾಳಿದಾಸನ ಶಾಕುಂತಲ ನಾಟಕ ಮೊದಲಾದ ಗ್ರಂಥಗಳಲ್ಲಿ ಹಾಗೂ ಸಮಕಾಲೀನ ಶಾಸನಗಳಲ್ಲೂ ವಿಷ್ಣುವಿನ ವಿವಿಧ ಹೆಸರುಗಳು, ರೂಪಗಳು ಅವತಾರಗಳು, ಈ ಧರ್ಮಕ್ಕೆ ಭಾಗವತ, ವೈಷ್ಣವ ಎಂಬ ಶಬ್ದಗಳು ಲಭ್ಯವಾಗಿವೆ.[೨೦೪] ಇದಲ್ಲದೆ ಇತರ ದೇವತೆಗಳೊಂದಿಗೆ ಮಾಡಿದ ಸಮೀಕರಣ ಸಿದ್ಧಾಂತ, ದರ್ಶನ ಆಚಾರ, ವಿಚಾರ ಮೊದಲಾದ ಸಂಗತಿಗಳು ಪ್ರಸ್ತಾಪವಾಗಿವೆ.[೨೦೫] ಈ ನಾಡಿನಲ್ಲಿ ಕ್ರಿಸ್ತಶಕಾರಂಭದಿಂದಲೂ ಮೇಲಿನ ಎರಡೂ ಪಂಥಗಳ ಪ್ರಭಾವ, ಗೋಚರಿಸುತ್ತದೆ. ಕನ್ನಡ ನಾಡಿನ ಹಲ್ಮಿಡಿಯ ಶಾಸನ (ಕ್ರಿ.ಶ.೪೫೦) ರ ಶಾಸನವು ಐತಿಹಾಸಿಕ ದೃಷ್ಠಿಯಿಂದ, ಈ ಧರ್ಮದ ಪ್ರಪ್ರಥಮ ಆಕರವಾಗಿದೆ. ಈ ನಾಡನ್ನಾಳಿದ ಕದಂಬ, ಚಾಲುಕ್ಯ, ಹೊಯ್ಸಳ, ವಿಜಯನಗರ ಮೊದಲಾದ ಅರಸು ಮನೆತನಗಳು ಈ ಧರ್ಮದ ಸರ್ವತೋಮುಖದ ಬೆಳವಣಿಗೆಗೆ, ಶ್ರಮಿಸಿದ ವಿಚಾರ ಪುರಾತತ್ವ ಕುರುಹುಗಳಿಂದ ಮನದಟ್ಟಾಗುತ್ತದೆ. ಕ್ರಿ.ಶ.೧೧ನೇ ಶತಮಾನದಿಂದೀಚೆಗೆ ರಾಮಾನುಜಾಚಾರ್ಯರು, ಈ ನಾಡಿನಲ್ಲಿ ಭಾಗವತ ಪಂಥದ ಹಿನ್ನಲೆಯ ಶ್ರೀವೈಷ್ಣವ ಧರ್ಮವನ್ನು ಪ್ರಸರಣ ಕೈಗೊಂಡರು, ನಂತರ ಮಧ್ವಾಚಾರ್ಯ, ಹರಿದಾಸರ ಪರಂಪರೆಯ ಮೂಲಕ ಮುಂದುವರಿಸಿಕೊಂಡು ಬಂದರು. ಕ್ರಿ.ಶ. ಆರಂಭದಿಂದ ೧೨ನೇ ಶತಮಾನವರೆಗೂ ಶೈವ ಮತ್ತು ವೈಷ್ಣವ ಧರ್ಮಗಳು ಪರಸ್ಪರ ಸಾಮರಸ್ಯದಿಂದ ಬೆಳೆದು ಬಂದಿವೆ.[೨೦೬] ಪ್ರಸ್ತುತ ಅಧ್ಯಯನವನ್ನು ಕಾಮಲಾಪುರ ಸೀಮಿತ ಮಾಡಿಕೊಂಡು ಪ್ರಸ್ತಾವನೆ ಮಾಡಲಾಗಿದೆ.

**ಸಾಹಿತ್ಯಿಕ ಕೃತಿಗಳು:** ಇದಕ್ಕೆ ಸಂಬಂಧಿಸಿದಂತೆ ಮಾಧವಚಾರ್ಯ ಎಂಬ ಕವಿಯ ಸೂಕ್ತಸಂಹಿತೆ, ಶ್ರೀರಾಮಭದ್ರಾಂಬೆಯ ರಘನಾಥಭ್ಯುಯಂ ಎಂಬ ಕಾವ್ಯ, ಸಯಣಾಚಾರ್ಯರ ವೇದಗಳ ಅಮೋಘ ಭಾಷ್ಯೆ. ಸಾಳುವ ನರಸಿಂಹರಾಯನ ರಾಮಾಭ್ಯುದಯಂ ಎಂಬ ಕಾವ್ಯ, ವಿಜಯನಗರ ಕಾಲದಲ್ಲಿನ ಪ್ರಮುಖ ಸಾಹಿತ್ಯ ಕೃತಿಗಳು, ಅಂದಿನ ಸಮಾಜದಲ್ಲಿ ವೈಷ್ಣವ ಧರ್ಮದ ಉನ್ನತಿಯನ್ನು ತಿಳಿಸುವ ಸಾಧನಗಳಾಗಿವೆ. ಕುಮಾರವ್ಯಾಸ ದಶಪರ್ವ ಮಹಾಭಾರತ ಕೃತಿ ರಚಿಸಿದ ಶ್ರೀವ್ಯಾಸರಾಯರು ಮತ್ತು ವಾದಿರಾಜರು ಅನೇಕ ಕೀರ್ತನೆಗಳನ್ನು ಹಾಡಿ ಸಾಹಿತ್ಯದ ಪ್ರೇರಕ ಶಕ್ತಿಗಳಾಗಿದ್ದರು, ಜಯದೇವ ಕವಿ ಗೀತಗೋವಿಂದ ನಾಟಕಕ್ಕೆ ಶೃತಿರಂಜಿನಿ ಎಂಬ ಟೀಕೆ ರಚಿಸಿದ ಅಪ್ಪಯ್ಯ ದೀಕ್ಷಿತರು, ಅದ್ವೈತ ಸಿದ್ಧಾಂತದ ದಿಗ್ದಂತಿ ಪರಿಮಳ ಗ್ರಂಥ, ಅದ್ವೈತ ತತ್ವದ ಸಮರ್ಥನೆ, ಜಟ್ಟಿಮೂರ್ತಿ ಹರಿಶ್ಚಂದ್ರ ನರಸಭೂಪಲೀಯಮು ಎಂಬ ಕಾವ್ಯ ರಚಿಸಿದ, ಎಕಾಮ್ರನಾಥನ ಜಾಂಬುವತೀ ಕಲ್ಯಾಣ, ತೆನಾಲಿ ರಾಮಕೃಷ್ಣನ ಪಾಂಡುರಂಗ ಮಹಾತ್ಮ ಘಟಿಕಾಚಲ ಮಹಾತ್ಮ್ಯಂ, ನರಹರಿಯ ತೊರವೆ ನಾರಾಯಣ[೨೦೭] ಅಲ್ಲಾಸಾನಿ ಪೆದ್ದನ್ನನ ಮನುಚಿರತ, ನಂದಿತಿಮ್ಮಣ್ಣನ ಪಾರಿಜಾತಪಹರಣಮು, ಪಿಂಗಳಿಸೂರನ ಕಳಾಪೂರ್ಣೋದಯಮು, ಪ್ರಭಾವತೀ ಪ್ರಮ್ಯುಮ್ನ ಬಟ್ಟಾಮೂರ್ತಿ, ಹರಿಶ್ಚಂದ್ರನಲೋಪಾಖ್ಯಾನ ಕೃಷ್ಣದೇವರಾಯನ ವಿಷ್ಣುಚಿತ್ತೇಯಮು(ಅಮುಕ್ತಮಾಲ್ಯ) ಬೋಗನಾಥರ ರಾಮೋಲ್ಲಾಸ, ಸಾಯಣನ

ಕೃಷ್ಣ ಯುಜುರ್ವೇದ.[೨೦೮] ಹೀಗೆ ಈ ಎಲ್ಲಾ ಕೃತಿಗಳು ವಿಜಯನಗರದ ಕಾಲದ ಸಾಹಿತ್ಯಿಕ ಸಾಮ್ರಾಜ್ಯದ ಹೊರನೋಟವೆನಿಸಿದರೂ, ಕಾಮಲಾಪುರ ಹಂಪಿ ಕ್ಷೇತ್ರಕ್ಕೆ ಒಳಪಡುವುದರಿಂದ, ಒಟ್ಟಾರೆ ಎಲ್ಲವೂ ಸಾಹಿತ್ಯಿಕ ಸೂಕ್ಷ್ಮ ದಾಖಲೆ ಇದಾಗಿದೆ.

ವೈಷ್ಣವ ಧರ್ಮಕ್ಕೆ ಸಂಬಂಧಿಸಿದಂತೆ ಶಾಸನಗಳೂ ಪೂರಕ ಮಾಹಿತಿ ನೀಡುತ್ತವೆ. ಕ್ರಿ.ಶ.೧೫೧೮ರಲ್ಲಿ ತಿರುಮಲಾದೇವಿಯಮ್ಮ ವಿಜಯನಗರದ ಬಳಿ ಇದ್ದ ಕುಮ್ಮಾರಗುಂಟೆ ಎಂಬ ಭೂಮಿಯನ್ನು ವಿಜಯನಗರದ ಕಿರಿಯ ತಿರುವೆಂಗಳ ನಾಥನಿಗೆ ಭೂದಾನ ನೀಡಿದ್ದು ವಿಠಲೇಶ್ವರ ದೇವರ ಸನ್ನಿಧಿಯಲ್ಲಿ ಎಂದು ಉಲ್ಲೇಖಿಸಿದೆ.[೨೦೯] ಕ್ರಿ.ಶ.೧೫೦೧ರಲ್ಲಿ ತಿಮ್ಮರಾಜು ಶ್ರೀರಾಮಚಂದ್ರ ದೇವರ ಭಂಡಾರಕ್ಕೆ ಮಹಾರಾಯನ ರಾಮಚಂದ್ರ ದೇವರ ಅಮೃತ ಪಡಿಯ ಸೇವೆಗಾಗಿ ದಾನ ಮಾಡಿದ್ದನ್ನು ಹಾಗೂ ದೇವರಿಗೆ ಮಾನ್ಯವಾಗಿ ಮತ್ತು ನೈವೇದ್ಯಕ್ಕಾಗಿ ಮಾಡಬೇಕಾದ ತಿನುಸುಗಳ ವಿವರ ದಾಖಲಿಸಲ್ಪಟ್ಟಿವೆ.[೨೧೦] ತಿರುವೆಂಗಳ ದೇವರ ಧೂಪ-ದೀಪ ನೈವೇದ್ಯಕ್ಕಾಗಿ ವಿಠಲದೇವರ ಸನ್ನಿಧಿಯಲ್ಲಿ ಕೃಷ್ಣದೇವರಾಯನ ಕೋಟೆಯ ನಡುವೆ ಇದ್ದ ಸ್ಥಳವನ್ನು ದಾನ ನೀಡಿದ್ದನ್ನು ಕ್ರಿ.ಶ.೧೫೨೨ರ ಶಾಸನವು ತಿಳಿಸುತ್ತದೆ.[೨೧೧] ಕ್ರಿ.ಶ.೧೫೨೫ರ ಶಾಸನ ಆದಿನಾರಾಯಣ ದೇವರಿಗೆ ಅಂಗಡಿಯನ್ನು ದಾನ ಮಾಡಿದ್ದನ್ನು ದಾಖಲಿಸುತ್ತದೆ.[೨೧೨] ರಾಮಚಂದ್ರ ದೇವರಿಗೆ ತೋಟ ಮತ್ತು ಗದ್ದೆಯಲ್ಲಿನ ಉತ್ಪನ್ನದಲ್ಲಿನ ಭಾಗವನ್ನು ಅಮೃತಪಡಿಯ ಸೇವೆಗಾಗಿ ನೀಡಿದ್ದನ್ನು ಕ್ರಿ.ಶ.೧೫೨೯ರ ಶಾಸನ ತಿಳಿಸುತ್ತದೆ.[೨೧೩] ಕ್ರಿ.ಶ.೧೫೩೧ರ ಶಾಸನವು ಅಚ್ಯುತದೇವರಾಯನ ಕಾಲಕ್ಕೆ ಸೇರಿದ್ದಾಗಿದ್ದು, ಲಕ್ಷ್ಮೀ ನರಸಿಂಹದೇವರ ದೀಪಾರಾಧನೆಗೆ ಕೊಂಡಮರಸಯ್ಯನು ಭೂಮಿಯನ್ನು ದಾನ ಮಾಡಿದ ವಿಷಯವನ್ನು ಪ್ರಸ್ತಾಪಿಸಿದೆ.[೨೧೪] ಇದೇ ಕಾಲಕ್ಕೆ ಸೇರಿದ ಇನ್ನೊಂದು ಶಾಸನ ರಾಮಚಂದ್ರದೇವರ ಸೇವೆಗಾಗಿ ಕುಟುಕನ ಹಳ್ಳಿ ಮತ್ತು ಜಾಯನೂರು ಗ್ರಾಮಗಳನ್ನು ದಾನ ಮಾಡಿದ್ದನ್ನು ದಾಖಲಿಸುತ್ತದೆ.[೨೧೫] ಅಚ್ಯುತರಾಯ ಮಲ್ಲಣ್ಣ ಅಯ್ಯನವರು ಕ್ರಿ.ಶ.೧೫೩೯ರಲ್ಲಿ ರಘುನಾಥ ದೇವರ ಸೇವೆಗಾಗಿ ಭೂ-ದಾನ ನೀಡಿದರು. ವರದಾದೇವಿ ಅಮ್ಮನವರು ಪಟ್ಟಣದಲ್ಲಿನ ರಘುನಾಥ ದೇವರ ಸೇವೆಗಾಗಿ ದೂರವಧಿ ಸೋಮಲಾಪುರದ ಸೀಮೆಯಲ್ಲಿನ ತೋಟದ ಬೆಳೆಗಳ ಹಸಿರು ವಾಣಿ ಸುಂಕವನ್ನು ೧೦೫೦ ಗದ್ಯಾಣಗಳ ಲೆಕ್ಕದಲ್ಲಿ ಕಂದಾಚಾರಕ್ಕೆ ನೀಡಿದರು.[೨೧೬] ತಿಮ್ಮ ರಾಜನು ಪೆನುಗೊಂಡ ಬಾಗಿಲ ಬಳಿ, ರಘುನಾಥ ದೇವರನ್ನು ಪ್ರತಿಷ್ಠಾಪಿಸಿ ದೇವರ ಅಮೃತ ಪಡಿಗೆ ಕ್ರಿ.ಶ.೧೫೪೦ರಲ್ಲಿ ದಾನ ಮಾಡಿದನು ಈ ದಾನವನ್ನು ಮುಮ್ಮಡಿ ದೀಕ್ಷಿತನಿಂದ ಪಡೆದು ರಘುನಾಥ ದೇವರಿಗೆ ಒಂದು ಖಂಡುಗ ಗದ್ದೆಯನ್ನು ದಾನ ನೀಡಲಾಯಿತು. ಶಾಸನದ ಅಂತ್ಯದಲ್ಲಿ, ರಘುನಾಥ ದೇವರ ಸ್ಥಾನಿಕ ಮುಳುವಾಗಿಲ ಕೇಶವ ದೇವರ ಸ್ಥಾನಿಕರ ಉಲ್ಲೇಖವಿದೆ.[೨೧೭]

ಕ್ರಿ.ಶ.೧೫೪೫ರ ಇನ್ನೊಂದು ಶಾಸನ ಸದಾಶಿವರಾಯನ ಕಾಲಕ್ಕೆ ಸೇರಿದ್ದಾಗಿದೆ. ಈ ಶಾಸನದಲ್ಲಿ ತಿಮ್ಮರಾಜನು ಮಾಧವ ದೇವರಿಗೆ ೨೧೫ ಅಂಕಣಗಳ ರಂಗಮಂಟಪವನ್ನು ಕಟ್ಟಿಸಿದನು.[೨೧೮] ಕ್ರಿ.ಶ.೧೫೪೮ರಲ್ಲಿ ರಘುನಾಥ ದೇವರಿಗೆ ದಾನ ನೀಡಿದನ್ನು ಹೇಳಿದೆ.[೨೧೯] ದುರುಗುಂಟು ರಘುನಾಥ ದೇವರ ನೀರಿನ ಕೊಳವನ್ನು ಧರ್ಮಕ್ಕಾಗಿ ಕ್ರಿ.ಶ.೧೫೫೨ರಲ್ಲಿ ಕಟ್ಟಿಸಿದ ಉಲ್ಲೇಖವಿದೆ.[೨೨೦] ಕ್ರಿ.ಶ.೧೫ ಮತ್ತು ೧೬ನೇ ಶತಮಾನದ ಶಾಸನವೊಂದು ಗೋವಿಂದ ಎಂಬ ಹೆಸರನ್ನು[೨೨೧] ಮತ್ತು ಜನಾರ್ಧನ ದೇವರ ಸೇವಕ ಬರುಲಿದೇವಕೊಂಡಯ್ಯನನ್ನು ಹೆಸರಿಸುತ್ತದೆ.[೨೨೨] ಇದೇ ಕಾಲದಲ್ಲಿ ರಾಮಚಂದ್ರ

ದೇವರ ದೇವಾಲಯದಲ್ಲಿ ಆಳ್ವಾರರ ಮೂರ್ತಿಯನ್ನು ಅರವೀಡು ವೆಂಗಳರಾಜು ಸ್ಥಾಪಿಸಿದನು.[೨೨೩] ಕ್ರಿ.ಶ.೧೬ನೇ ಶತಮಾನಕ್ಕೆ ಸೇರಿದ ಇನ್ನೂ ಕೆಲವು ಶಾಸನಗಳಲ್ಲಿ ರಂಗನಾಥ ದೇವರಿಗೆ ವರ್ತಕ ಸಮುದಾಯದವರು ರಂಗಮಂಟಪವನ್ನು ಕಟ್ಟಿಸಿದ್ದನ್ನು ಉಲ್ಲೇಖಿಸುತ್ತದೆ.[೨೨೪] ನರಸಿಂಹ ದೇವರಿಗೆ ಸದಾಶಿವರಾಯನು ಭೂಮಿದಾನ ಮಾಡಿದ್ದನ್ನು[೨೨೫] ಆನೆ ಸಾಲಿನ ಹತ್ತಿರವಿರುವ ನರಸಿಂಹ ದೇವರಿಗೆ ಕೊನಮರಸಯ್ಯ ಮಾಡಿದ ದಾನವನ್ನು ಶಾಸನಗಳಲ್ಲಿ ದಾಖಲಿಸಿದೆ.[೨೨೬] ಅಣ್ಣಲಾದೇವಿ ರಾಮಚಂದ್ರ ದೇವರಿಗೆ ಚಿನ್ನದ ಹರಿವಾಣ ಮತ್ತು ಬಟ್ಟಲನ್ನು ಸಮರ್ಪಿಸಿದಳು.[೨೨೭] ಕಾಲ ಉಲ್ಲೇಖವಿಲ್ಲದ ಇನ್ನೊಂದು ಶಾಸನ, ವಾಸು ದೇವನ ಹೆಸರನ್ನು ಹಾಗೂ ರಾಮ ಚಂದ್ರ ದೇವರಿಗೆ ವಂದಿಸಿದ್ದನ್ನು ದಾಖಲಿಸಿದೆ.[೨೨೮] ಒಟ್ಟಾರೆ ಕಾಮಲಾಪುರ ಗ್ರಾಮದಲ್ಲಿನ ಈ ಶಾಸನಗಳು ವೈಷ್ಣವ ಧರ್ಮ ಇತ್ತಂಬುದರ ಬಗ್ಗೆ ಸಾಕಷ್ಟು ಪುರಾವೆ ಒದಗಿಸಿವೆ. ಶಾಸನಗಳ ಜೊತೆಗೆ ಇಲ್ಲಿನ ಹಜಾರರಾಮ ದೇವಾಲಯ, ರಘುನಾಥ ದೇವಾಲಯ, ರಾಯರದೇವಾಲಯ, ಪಟ್ಟಾಭಿರಾಮದೇವಾಲಯ, ಆಂಜನೇಯ ದೇವಾಲಯಗಳು ವೈಷ್ಣವ ಪಂಥಕ್ಕೆ ಇನ್ನಷ್ಟು ಪೂರಕ ಸಾಕ್ಷಿ ಒದಗಿಸುತ್ತವೆ. ಇದಕ್ಕೆ ಪೂರಕವಾಗಿ ಇಲ್ಲಿನ ಮೂರ್ತಿಶಿಲ್ಪಗಳು, ವಿಷ್ಣು, ಗರುಡ, ವೇಣುಗೋಪಾಲ, ಆಂಜನೇಯ, ಲಕ್ಷ್ಮೀನಾರಾಯಣ, ಪದ್ಮಾಸೀನ ಉಗ್ರನರಸಿಂಹ, ಅಂಜಲಿಮುದ್ರೆಯಲ್ಲಿ ಗರುಡ, ಅನಂತಶಯನ, ವೆಂಕಟೇಶ, ಕೃಷ್ಣ, ರಾಮ, ಲಕ್ಷ್ಮಣ, ಸೀತೆ ಇನ್ನೂ ವಿವಿಧ ವೈಷ್ಣವ ಮೂರ್ತಿ ಶಿಲ್ಪಗಳ ಆರಾಧನೆಗೆ ಉದಾಹರಣೆಯಾಗಿವೆ. ಇಲ್ಲಿನ ಮೂರ್ತಿಶಿಲ್ಪಗಳು, ದೇವಾಲಯಗಳು ಹಾಗೂ ಶಾಸನಗಳು ಸುತ್ತಮುತ್ತಲಿನ ಪರಿಸರದಲ್ಲಿಯೇ ಇದ್ದುದರಿಂದ, ಇವು ವೈಷ್ಣವ ಧರ್ಮಕ್ಕೆ ಮುಖ್ಯ ಆಕರಗಳಾಗಿವೆ.

**ಜೈನ ಧರ್ಮ:** ಜೈನ ಧರ್ಮವು ಭಾರತದ ಇರಿಹಾಸದಲ್ಲಿ ತನ್ನದೇ ಆದ ಅಸ್ತಿತ್ವವನ್ನು ಹೊಂದಿತ್ತು. ವಿಜಯನಗರ ಕಾಲದಲ್ಲಿ ಜೈನ ಧರ್ಮವೂ ಒಂದು ಪ್ರಮುಖವಾದ ಧರ್ಮವಾಗಿತ್ತು. ಜಿನನಿಂದ ಬೋಧಿಸಲ್ಪಟ್ಟ ಧರ್ಮವೇ ಜೈನ ಧರ್ಮ.[೨೨೯] ಈ ಧರ್ಮದ ಪ್ರಮುಖ ಗುರಿ ಆತ್ಮವು ತನ್ನ ಸಹಜ ಶುದ್ಧತೆಯನ್ನು ಮರಳಿ ಪಡೆದುಕೊಂಡು ಜ್ಞಾನವನ್ನು ಪಡೆಯುವುದಾಗಿದೆ. ಆತ್ಮವು ಮೋಕ್ಷವನ್ನು ಪಡೆಯಬೇಕಾದರೆ ಪುಣ್ಯ-ಪಾಪಗಳೆರಡನ್ನೂ ಮೀರಿ ನಿಲ್ಲಬೇಕು. ಇದಕ್ಕೆ ಕಠಿಣ ಪರಿಶ್ರಮ ಅವಶ್ಯ. ಈ ಧರ್ಮದಲ್ಲಿ ಯೋಗಕ್ಕೆ ಪ್ರಮುಖ ಸ್ಥಾನವಿದೆ. ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನ ಧರ್ಮದ ಇತಿಹಾಸವೇ ಆಗಿದೆ.[೨೩೦] ಕರ್ನಾಟಕದಲ್ಲಿ ಜೈನ ಧರ್ಮವು ಕ್ರಿ.ಪೂ.೩೦೦ರ ವೇಳೆಗೆ ನೆಲೆಗೊಂಡಿತು.[೨೩೧] ದಕ್ಷಿಣ ಕರ್ನಾಟಕದಲ್ಲಿ ಜೈನ ಧರ್ಮವು ಶ್ರವಣಬೆಳಗೊಳ ಮತ್ತು ಉತ್ತರ ಕರ್ನಾಟಕದಲ್ಲಿ ಕೊಪ್ಪಳಗಳಲ್ಲಿ ಹೆಚ್ಚಾಗಿ ನೆಲೆನಿಂತಿತು. ಇವು ಪ್ರಸಿದ್ಧ ಜೈನಕೇಂದ್ರಗಳಾಗಿದ್ದವು.[೨೩೨] ಜೈನ ಧರ್ಮದಲ್ಲಿ ೨೪ ತೀರ್ಥಂಕರರನ್ನು ಪೂಜಿಸುತ್ತಿದ್ದರು. ಇವರಲ್ಲಿ ಕೊನೆಯ ತೀರ್ಥಂಕರ ಮಹಾವೀರ, ಈತನ ಹಿಂದೆ ೨೩ ನೇ ತೀರ್ಥಂಕರನಾದ ಪಾರ್ಶ್ವನಾಥನು ಕ್ರಿ.ಪೂ.೮ನೇ ಶತಮಾನದಲ್ಲಿ ಬಾಳಿ ಬದುಕಿದನು.[೨೩೩] ಈ ಧರ್ಮದ ಜನಸಂಖ್ಯೆ ವಿಜಯನಗರ ಕಾಲದಲ್ಲಿ ಕ್ಷೀಣಿಸಿತ್ತು. ಧರ್ಮದ ಚೌಕಟ್ಟಿಗೆ ಒಳಪಟ್ಟ ಜೈನಧರ್ಮೀಯರು ಜೈನಧರ್ಮವನ್ನು ಹೆಚ್ಚು ಜನಪ್ರಿಯಗೊಳಿಸಲು ಪ್ರಯತ್ನಿಸಿದರು. ಈ ಕಾಲದಲ್ಲಿ ಉದ್ದಾಮ, ಪಂಡಿತರು, ಸಾಹಿತಿಗಳು, ದಂಡನಾಯಕರುಗಳು, ಜೈನ ಧರ್ಮೀಯರಾಗಿದ್ದರು, ಇರುಗುಪ್ಪ ದಂಡನಯಕ ಮಧುರ, ನೇಮಿಚಂದ್ರ ಮತ್ತು ವಿದ್ಯಾನಂದ ಮುಂತಾದ ಪ್ರಮುಖ ಜೈನ

ಕವಿಗಳು ಇದ್ದರು.[೨೩೪] ಇವರು ಜೈನ ಸಾಹಿತ್ಯವನ್ನು ಮುಂದಿನ ತಲೆಮಾರಿಗೆ ಹೊತ್ತು ಒಯ್ದರು. ಇದರಿಂದ ಈ ಕಾಲದಲ್ಲಿ ಜೈನ ಧರ್ಮ ಸಾಹಿತ್ಯ ಹೆಚ್ಚು ಪುಷ್ಠಿಯಾಗಿ ಬೆಳೆಯಿತು. ವಿಜಯನಗರ ಕಾಲದಲ್ಲಿ ಅನೇಕ ಅರಸರು, ಸಾಮಂತರು ಜೈನ ಧರ್ಮವನ್ನು ಪ್ರೋತ್ಸಾಹಿಸಿ ಬೆಳೆಸಿದರು. ಇವರು ಸ್ವತಃ ಜೈನಧರ್ಮೀಯರಾಗಿದ್ದಲ್ಲದೇ ಜೈನ ಧರ್ಮಕ್ಕೆ ಉದಾರ ದಾನಗಳನ್ನು ನೀಡುವುದರ ಮುಖೇನ ಜೈನ ಧರ್ಮವನ್ನು ಬೆಳೆಸಿದರು.

**ಸಾಹಿತ್ಯಿಕ:** ಬಾಹುಲಬಲಿ ಪಂಡಿತನ ಧರ್ಮಪುರಾಣ,[೨೩೫] ಅಭಯಸೂರಿಯ "ಗೊಮ್ಮಟಸಾರ ಕರ್ನಾಟಕ ವೃತ್ತಿ" ಜೈನಕವಿ ಮಧುರನ "ಧರ್ಮನಾಥಪುರಾಣ" ಮತ್ತು ಗೊಮ್ಮಟ ಸ್ತುತಿ, ಚಂದ್ರಕೀರ್ತಿಯ ಪರಮಾಗಮಸಾರ, ರತ್ನಾಕರವರ್ಣಿ "ಭರತೇಶ್ವರ ಚರಿತ್ರೆ" ನಾಗರಾಜನ "ಪುಣ್ಯಶ್ರವ" ಮತ್ತು ವೃತ್ತೆ ವಿಲಾಸನ "ಧರ್ಮಪರೀಕ್ಷೆ" ಇವು ಮುಖ್ಯವಾದ ಸಾಹಿತ್ಯಿಕ ಆಕರಗಳಾಗಿವೆ. ಇವು ಜೈನದರ್ಮದ ತೀರ್ಥಂಕರರ ಲಕ್ಷಣ ಮತ್ತು ಸಾಹಿತ್ಯ ತಿಳಿಯುವುದಕ್ಕೆ ಸಹಕಾರಿಯಾಗಿವೆ. ಸಾಹಿತ್ಯಿಕ ಆಕರಗಳ ಜೊತೆಗೆ ಶಾಸನಗಳೂ ಕೂಡ ಅಷ್ಟೇ ಮಹತ್ವಪೂರ್ಣ. ಕ್ರಿ.ಶ.೧೩೮೦ರ ಶಾಸನವೊಂದು ಜೈನ ಮುನಿಗಳ ಪಟ್ಟಾವಳಿಗಳನ್ನು ನೀಡುತ್ತದೆ.[೨೩೬] ಈ ಶಾಸನ ಧರ್ಮಭೂಷಣ, ಭಟ್ಟಾರಕ, ಅವನ ನಂತರದ ಅಮರಕೀರ್ತಿ ಅಮರಕೀರ್ತಿಯ ಶಿಷ್ಯಸಿಂಹನಂದಿ, ಇವನ ಶಿಷ್ಯ ಧರ್ಮಭೂಷಣ ಹೀಗೆ ವಂಶಾವಳಿಯನ್ನು ಹೆಸರಿಸುತ್ತದೆ. ಅಲ್ಲದೆ, ಇರುಗುಪ್ಪ ದಂಡನಾಯಕು ಕುಂತಳ ದೇಶದ ವಿಜಯನಗರದಲ್ಲಿ, ಕುಂತನಾಥ ಜಿನಾಲಯವನ್ನು ನಿರ್ಮಿಸಿದ ವಿಷಯ ತಿಳಿಸುತ್ತದೆ.[೨೩೭]

ಪ್ರಸ್ತುತ ಈ ಜಿನಾಲಯ ಕಾಮಲಾಪುರ ಗ್ರಾಮಕ್ಕೆ ಒಳಪಡುತ್ತದೆ ಇಲ್ಲಿನ ಕ್ರಿ.ಶ.೧೪೨೬ರ ಶಾಸನವೊಂದು ದೇವರಾಯನ ಕಾಲಕ್ಕೆ ಸೇರಿದ್ದು ಬುಕ್ಕ, ಮಗ ಹರಿಹರ, ಮಗದೇವರಾಯ, ಮಗ ವಿಜಯ, ಮಗ ಅಭಿನವ ದೇವರಾಯನ ವಂಶಾವಳಿ ನಂತರ ಈ ರಾಜ ವಿಜಯನಗರದಲ್ಲಿ ಎಲೆ, ಅಡಿಕೆ, ಬೀದಿ ಕ್ರಮುಕ ಪರ್ಣಾಪಣಾಬೀದಿಯಲ್ಲಿ ಪಾರ್ಶ್ವನಾಥ ಚೈತ್ಯಾಲಯವನ್ನು ನಿರ್ಮಿಸಿದುದ್ದನ್ನು ತಿಳಿಸುತ್ತದೆ.[೨೩೮] ಶ್ರೀರಂಗರಾಜ ರಾಮರಾಜಅಯ್ಯನು ಚಿಕ್ಕ ದೇವರ ಬಸದಿಯ ಶಾಂತಿನಾಥ ಸ್ವಾಮಿಗೆ ಅಂಗಡಿಯಿಂದ ಅಯ್ಯನು ಚಿಕ್ಕದೇವರ ಬಸದಿಯ ಶಾಂತಿನಾಥ ಸ್ವಾಮಿಗೆ ಅಂಗಡಿಯಿಂದ ಬರುವ ಆದಾಯವನ್ನು ದಾನ ಮಾಡಿದ್ದನ್ನು. ಕ್ರಿ.ಶ.೧೫೫೭ರ ಶಾಸನ ವೀರಸದಾಶಿವರಾಯನ ಆಳ್ವಿಕೆಯ ಶಾಸನ ತಿಳಿಸುತ್ತದೆ.[೨೩೯] ಶಾಸನಗಳ ಆಧಾರದ ಜೊತೆಗೆ ದೇವಾಲಯಗಳು ಇನ್ನೊಂದು ಆಕರ. ಕಾಮಲಾಪುರ ಗ್ರಾಮದಲ್ಲಿ ಗಾಣಗಿತ್ತಿಬಸದಿ ಹಾಗೂ ಇಲ್ಲಿನ ತೀರ್ಥಂಕರರ ಶಿಲ್ಪಗಳು ಇಲ್ಲಿ ಜೈನ ಧರ್ಮ ಅಸ್ತಿತ್ವದಲ್ಲಿತ್ತು. ಎಂಬುದರ ಬಗ್ಗೆ ಪ್ರಮುಖ ನಿದರ್ಶನಗಳಾಗಿವೆ.

**ಇಸ್ಲಾಂ ಧರ್ಮ:** ದೇವರ ಇಚ್ಛಗೆ ಶರಣಾಗುವುದೇ "ಇಸ್ಲಾಂ" ಎಂದರ್ಥ. ಖುರಾನಿನಲ್ಲಿ ಈ ಧಮಕ್ಕೆ ಇಸ್ಲಾಂ ಎಂದು ಕರೆಯಲಾಗುತ್ತದೆ. ಶಾಂತಿಯನ್ನು ಉಂಟು ಮಾಡುವ ಧರ್ಮವೇ ಇಸ್ಲಾಂ ಎಂದರ್ಥ.[೨೪೦] ಈ ಧರ್ಮಕ್ಕೆ ಅಹಮ್ಮದೀಯ ಅಥವಾ ಮಹಮ್ಮದೀಯ ಧರ್ಮವೆಂತಲೂ ಕರೆಯುತ್ತಾರೆ.[೨೪೧] ಈ ಧರ್ಮ ದಕ್ಷಿಣ ಭಾರತದಲ್ಲಿ ಕಾಲಿಟ್ಟಿದ್ದು ಅಲ್ಲಾಉದ್ದೀನನ ಕಾಲದಲ್ಲಿ. ಪ್ರಸ್ತುತ ಅಧ್ಯಯನ ಹಂಪೆ-ಕಮಲಾಪುರ ಗ್ರಾಮಕ್ಕೆ ಸೀಮಿತವಾಗಿರುವುದರಿಂದ ಇಲ್ಲಿನ ಇಸ್ಲಾಂ ಧರ್ಮದ ಪ್ರಸ್ತಾವನೆಯನ್ನು ಮಾಡಲಾಗಿದೆ.

**ಮಸೀದೆಗಳು:** ಮುಸ್ಲಿಂ ಪರಂಪರೆಯ ವಾಸ್ತು ನಿರ್ಮಾಣವನ್ನು ಮುಸ್ಲಿಂ ವಾಸ್ತುಕಲೆ ಎಂಬ ಹೆಸರಿನಿಂದಲೇ ಕರೆಯಲಾಗಿದೆ. ಅದು ಸ್ವಲ್ಪ ಹಿಂದೂ ವಾಸ್ತು ಕಲೆಯ ಪ್ರಭಾವ ಬೀರಿದರೂ ತನ್ನದೇ ಆದ ಲಕ್ಷಣಗಳನ್ನು ಹೊಂದಿರುತ್ತವೆ. ಧಾರ್ಮಿಕ ದೃಷ್ಟಿಯಿಂದ ಇದನ್ನು ಪ್ರಾರ್ಥನಾ ಮಂದಿರವೆಂದೂ ಕರೆಯುವವಾಡಿಕೆ. ಈ ಮಸೀದೆ ಸಾಮಾನ್ಯವಾಗಿ ಮೆಕ್ಕಾದೆಡೆಗೆ ಅಭಿಮುಖವಾಗಿರುತ್ತದೆ. ಇದು ಅನೇಕ ಸ್ತಂಭಗಳನ್ನು ಹೊಂದಿದ್ದು ಹೊರಂಗಳ ಮತ್ತು ವಿಶಾಲವಾದ ಒಳಂಗಳದಿಂದ ಕೂಡಿರುತ್ತದೆ. ಹಿಂಭಾಗದ ಭಿತಿಯಲ್ಲಿ ಕಮಾನಿನಾಕಾರದ ರಚನೆ ಇರುತ್ತದೆ. ಇದನ್ನು ಮಿಹಿರಾಬ್ ಎಂದು ಕರೆಯಲಾಗುತ್ತದೆ. ಅದರ ಬಲಭಾಗದಲ್ಲಿ ಎತ್ತರವಾದ ಕಂಬದಾಕೃತಿಯ ಮಿನಾರ್ ಇದೆ. ಇದು ಮತ ಭಾಂದವರಿಗೆ ಪ್ರಾರ್ಥನೆಗೆ ಆಹ್ವಾನಿಸಲು ಏರ್ಪಡಿಸಿದ ವ್ಯವಸ್ಥೆಯಾಗಿದೆ. ಗರ್ಭಾಂಕಣದ ಮೇಲೆ ವರ್ತುಲಾಕಾರದ ಗುಮ್ಮಟವನ್ನು ನಿರ್ಮಿಸಲಾಗಿದೆ.[೨೪೨] ಪ್ರಸ್ತುತ ಕಾಮಲಾಪುರ ಪರಿಸರದಲ್ಲಿ ೧೪ನೇ ಶತಮಾನದಲ್ಲಿಯೇ ಈ ಮಸೀದಿಗಳು ನಿರ್ಮಾಣವಾಗಿದ್ದವು ಎಂಬುದಕ್ಕೆ ಶಾಸನಗಳು ಮುಖ್ಯ ಆಧಾರಗಳಾಗಿವೆ. ಕ್ರಿ.ಶ.೧೪೨೦ ಶಾಸನ ಬಸವ ಮತ್ತು ರಾಮನಾಯಕ ಎಂಬುವರು ಮಸೀದಿ ಗುಮ್ಮಟ ಮತ್ತು ಗೋಡೆಯನ್ನು ಕಟ್ಟಿಸಿದ್ದನ್ನು ಉಲ್ಲೇಖಿಸಿದೆ.[೨೪೩] ಕ್ರಿ.ಶ.೧೪೩೯ರ ಶಾಸನ ಅಹಮ್ಮದಖಾನನು ರಾಜನಿಗೆ ಧರ್ಮವಾಗಬೇಕೆಂದು ಧರ್ಮ ಶಾಲೆ ಅದಕ್ಕೆ ಬಾವಿ ನಿರ್ಮಿಸಿದ್ದನ್ನು ಉಲ್ಲೇಖಿಸುತ್ತದೆ.[೨೪೪] ಕ್ರಿ.ಶ.೧೪೭೨ರ ಶಾಸನ ದಾದನ ರಾಹುತನ ಮಗ ಸಕಲಾಭಿರಾಹುತನು ಗುಮ್ಮಟವನ್ನು ಕಟ್ಟಿಸಿದನೆಂದು ತಿಳಿಸುತ್ತದೆ.[೨೪೫]

ಮುಲ್ಲಾರಿ ಬೀದಿಯಲ್ಲಿರುವ ನೂರಾರಿ ಮಸೀದಿ, ಹಿರೇ ಮಸೀದಿ, ಇವು ಮುಖ್ಯವಾಗಿ ಹಬ್ಬದ ವೇಳೆಯಲ್ಲಿ ಪೀರು ದೇವರನ್ನು ಇಡಲು ಇದ್ದ ಮಸೀದಿಗಳಾಗಿವೆ ಇಲ್ಲಿವೆ. ಉದಾ: ಮುದುಗಲ್ ಮಸೀದಿ, ನೂರಾರಿ ಮಸೀದಿ, ಹಿರೇ ಮಸೀದಿ, ಮಸ್ತಾಪ ಮಸೀದಿ, ಪಂಜನ ಮಸೀದಿ, ಮಸ್ತಾನವಲಿ, ದರ್ಗಾ ಮಸೀದಿ, ಕುಂಟೆ ಮಸೀದಿ ಇವೆಲ್ಲಾ ಮಸೀದಿಗಳ ವಾಸ್ತುಶೈಲಿಗೆ ಉದಾಹರಣೆಯಾಗಿದೆ. ಇದಕ್ಕೆ ಪೂರಕವಾಗಿ ಕಾಮಲಾಪುರ ಗ್ರಾಮಕ್ಕೆ ಸೀಮಿತವಾದಂತೆ, ಇಂಡೋ ಇಸ್ಲಾಮಿಕ ಶೈಲಿಯ ವಾಸ್ತುಶೈಲಿಯೂ ಇಲ್ಲಿ ಸ್ಮಾರಕಗಳಲ್ಲಿ ಕಾಣಬಹುದು ಉದಾ: ಕಮಲ ಮಹಲ್, ಗಜಶಾಲೆ, ಗುಮ್ಮಟ ಪ್ರದೇಶದ್ವಾರ, ರಾಣಿ ಸ್ನಾನಗೃಹ.

**ದೇವಾಲಯ ವಿದ್ಯಾಕೇಂದ್ರವಾಗಿ:** ವಿದ್ಯೆ ಮನುಷ್ಯನ ಜೀವನದ ಅಂಗ, ವಿದ್ಯೆಯನ್ನು ಕಲಿಯುವ ಮುಖೇನ ವ್ಯಕ್ತಿ ಸಮಾಜದಲ್ಲಿ ಉನ್ನತ ಸ್ಥಾನವನ್ನು ಗಳಿಸಬಲ್ಲ ಎಂಬ ಅಚಲವಾದ ನಂಬಿಕೆ. ಪ್ರಾಚೀನ ಭಾರತೀಯ ವಿದ್ಯಾಭ್ಯಾಸವು ಬಹುಪಾಲು ಧಾರ್ಮಿಕ ಅಧ್ಯಯನಕ್ಕೆ ಪ್ರಾಶಸ್ತ್ಯ ನೀಡುತ್ತದೆ. ವಿದ್ಯಾಭ್ಯಾಸ ಎಂಬುದು ಮೋಕ್ಷಕ್ಕೆ ಒಂದು ಮಾರ್ಗ ಎಂಬ ಕಲ್ಪನೆ ಭಾರತೀಯರದಾಗಿದೆ.[೨೪೬] ಇದರಿಂದಾಗಿ ಆಧ್ಯಾತ್ಮಕ್ಕಾಗಿ, ವಿದ್ಯೆಯನ್ನು ಹೆಚ್ಚಾಗಿ ಪೋಷಿಸಿದರು. ವೈದಿಕ ಧರ್ಮದಲ್ಲಿ ಶಿಕ್ಷಣ ಮೌಖಿಕವಾಗಿ ರೂಢಿಯಲ್ಲಿತ್ತು. ಇದು ವಿದ್ಯಾಭ್ಯಾಸ ಪದ್ಧತಿಯ ಮೊದಲನೆಯ ಘಟ್ಟ ಎನ್ನಬಹುದು.[೨೪೭] ಇಲ್ಲಿ ಗುರುವಿನ ಮನೆಯೇ ಪಾಠಶಾಲೆ. ಇದನ್ನೇ ಗುರುಕುಲ ಶಿಕ್ಷಣ ಎಂದು ಕರೆಯಲಾಗುತ್ತಿತ್ತು.

ಕ್ರಿ.ಪೂ.೩ನೇ ಶತಮಾನದ ಅಶೋಕನ ಬೌದ್ಧಧರ್ಮವು ದೇವಾಲಯಗಳಿಗೆ ನಾಂದಿಯಾದಂತೆ, ಸ್ತೂಪಗಳ ರಚನೆ ಬೌದ್ಧ ವಿಹಾರಗಳ ರಚನೆ ನಿಧಾನವಾಗಿ, ಹಿಂದೂ ವಿಶ್ವವಿದ್ಯಾಲಯಗಳ ಮೇಲೆ

ಪ್ರಭಾವ ಬೀರಿರಬೇಕು. ಕ್ರಿ.ಶ.೯ನೇ ಶತಮಾನದ ಹೊತ್ತಿಗೆ ಭಾರತದಲ್ಲಿ ಅದರಲ್ಲೂ ಹೆಚ್ಚಾಗಿ ಕರ್ನಾಟಕದಲ್ಲಿ ವಿದ್ಯಾಕೇಂದ್ರಗಳು ರೂಪಿತಗೊಂಡಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಕರ್ನಾಟಕದಲ್ಲಿ ವ್ಯವಸ್ಥಿತವಾಗಿ ರೂಪಗೊಂಡ ಮೊದಲ ವಿದ್ಯಾಸಂಸ್ಥೆಯೇ ದೇವಾಲಯ.[೨೪೮] ಕರ್ನಾಟಕದಲ್ಲಿ ಪ್ರಪ್ರಥಮವಾಗಿ ದೇವಾಲಯಗಳನ್ನು ವಿದ್ಯಾಕೇಂದ್ರಗಳಾಗಿ ಬಳಸಿದವರು ಪಾಶುಪತರು. ಇವರ ಉಲ್ಲೇಖ ಪ್ರಪ್ರಥಮ ಕನ್ನಡದ ಹಲ್ಮಿಡಿ ಶಾಸನದಲ್ಲಿ ಕಾಣಬಹುದು. ಈ ಶಾಸನದಲ್ಲಿ ಮೂರು ಬಾರಿ ಪಾಶುಪತ ಎಂಬ ಹೆಸರು ಉಲ್ಲೇಖಗೊಂಡಿದೆ.[೨೪೯] ೯೫೬ರ ಬಾಗಳಿಯ ಶಾಸನ ಅಗ್ರಹಾರ ಬಾಳ್ಗಳಿ ಊರೊಡೆಯ ಪಶುಪತಿ ಭಟ್ಟರಿಗೆ ತೆರಿಗೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.[೨೫೦] ಇದರಿಂದ ಬಾಗಳಿ ಪ್ರಸಿದ್ದ ದೇವಾಲಯದ ಜೊತೆಗೆ ಅಗ್ರಹಾರವನ್ನು ಹೊಂದಿತ್ತು.

ಕ್ರಿ.ಶ. ೯–೧೦ನೇ ಶತಮಾನದಲ್ಲಿ ಪಾಶುಪತರ ದೇವಾಲಯಗಳು ವಿದ್ಯಾಕೇಂದ್ರಗಳಾಗಿ ರೂಪಗೊಂಡಿವೆ. ಇದಕ್ಕೆ ಸೂಕ್ತ ಉದಾ: ಬಾಗಳಿ ದೇವಾಲಯ, ಶಿಕ್ಷಣ ನೀಡುವ ಈ ಪವಿತ್ರ ಸೇವೆಯನ್ನು ಪಾಶುಪತರು, ಕಾಳಮುಖಾದಿ ಶೈವರು, ಕೈಗೊಂಡರು.[೨೫೧] ಪಾಶುಪತರು ದೇವಾಲಯಗಳಲ್ಲಿ ಸ್ಥಾನಪತಿಯಾಗಿ, ಮಠದಲ್ಲಿ ಸನ್ಯಾಸಿಯಾಗಿ ವಾಸಿಸುತ್ತಿದ್ದರು. ಆ ಕಾಲದಲ್ಲಿ ದೇವಾಲಯವೇ ಮಠವಾಗಿ, ಮಠವೇ ಶಾಲೆಯಾಗಿತ್ತು. ಮಠ ಎಂಬುದಕ್ಕೆ ಯತಿಗಳ ವಾಸಸ್ಥಳ ಎಂಬ ಅರ್ಥವಿದೆ. ಭಕ್ತರ ದೇವಾಲಯಕ್ಕೆ ದತ್ತಿ ಬಿಡುವುದರ ಜೊತೆಗೆ ವಿದ್ಯಾಭ್ಯಾಸಕ್ಕೆ ದಾನ–ದತ್ತಿಗಳನ್ನು ಕೊಡಲು ಆರಂಭಿಸಿದರು. ಇದರಿಂದ ದೇವಾಲಯ ವಿದ್ಯಾಕೇಂದ್ರವಾಗಿ ಮಾರ್ಪಟ್ಟಿತು. ವಿಜಯನಗರ ಕಾಲದಲ್ಲಿ ವಿದ್ಯಾಭ್ಯಾಸಕ್ಕೆ ವಿಶೇಷ ಸ್ಥಾನಕೊಡಲಾಗಿತ್ತು. ಶೈವ ವೀರಶೈವ ಮಠಗಳು, ಪಾಶುಪತ ದೇವಾಲಯಗಳು ಮತ್ತು ಜೈನರ ಅಗ್ರಹಾರಗಳು ಬಸದಿಗಳು ಅಂದಿನ ಕಾಲದ ಪ್ರಮುಖ ವಿದ್ಯಾಕೇಂದ್ರಗಳಾಗಿದ್ದವು. ಆಗಲೇ ವಿದ್ಯಾಭ್ಯಾಸ ಕ್ರಮ ಮತ್ತು ಪಠ್ಯ ವಿಷಯಗಳಲ್ಲಿ ಅನೇಕ ಬಗೆಯ ಬೆಳವಣಿಗೆ ಹೊಂದಿದ್ದವು. ಶಾಸ್ತ್ರಗಳ ಬಗೆಗಿನ ವ್ಯಾಸಂಗವನ್ನು ವೈಜ್ಞಾನಿಕ ದೃಷ್ಠಿಯಿಂದ ನೋಡುವ ವಾತಾವರಣ ನಿರ್ಮಾಣವಾಗಿತ್ತು. ವಿಜಯನಗರ ಕಾಲದಲ್ಲಿ ವೀರಶೈವ ಮತ್ತು ಪಾಶುಪತ ದೇವಾಲಯಗಳು ಮತ್ತು ಮಠಗಳು ವಿದ್ಯಾಕೇಂದ್ರಗಳಾಗಿ ಮುಂದುವರೆದವು. ಕಾಳಮುಖ ಪರಂಪರೆಯ ಗುರುಗಳ ವಿಜಯನಗರ ಸಂಗಮವಂಶದವರಿಗೆ ರಾಜಗುರುಗಳು. ವಿದ್ಯಾಭ್ಯಾಸಕ್ಕೆ ಹೆಚ್ಚು ಪ್ರೋತ್ಸಾಹ ನೀಡುತ್ತಿದ್ದರು. ಮಠಗಳು ಅಗ್ರಹಾರಗಳು ಪ್ರೌಢವಿದ್ಯೆಯ ಅಧ್ಯಯನಕ್ಕೆ ಅನುಕೂಲ ಕಲ್ಪಿಸಿಕೊಡುತ್ತಿದ್ದವು. ಈ ಪರಂಪರೆ ಹಿಂದಿನಿಂದಲೆಯೇ ಉಳಿದು ಬೆಳೆದುಬಂದಿವೆ.[೨೫೨]

ದೇವಾಲಯ ಮತ್ತು ಮಠಗಳ ಪರಂಪರೆ ವಿಜಯನಗರದ ಕಾಲಕ್ಕೆ ಸಾಕಷ್ಟು ಬೆಳೆದಿತ್ತು. ಅಂದಿನ ದೇವಾಲಯಗಳು, ಮಠಗಳು, ಧಾರ್ಮಿಕ ಸಂಸ್ಥೆಗಳಾಗಿರದೇ, ಬದಲಾಗಿ ಶೈಕ್ಷಣಿಕ ಘಟಕಗಳಾಗಿ ರೂಪ ತಾಳಿದವು. ದೇವಾಲಯಕ್ಕೆ ಹೊಂದಿಕೊಂಡಂತೆ ಅವುಗಳ ಅಂಗವಾಗಿ ಮಠವಿದ್ದಿತು. ಮಠಕ್ಕೆ ಪ್ರತ್ಯೇಕ ಅಸ್ತಿತ್ವವಿರಲಿಲ್ಲ. ಆದ್ದರಿಂದ ದೇವಸ್ಥಾನ ಮತ್ತು ಮಠ ಅಭಿನ್ನ.[೨೫೩] ವಿಜಯನಗರ ಕಾಲದ ದೇವಾಲಯಗಳು ಮಠಗಳಲ್ಲಿನ ವಿದ್ಯಾರ್ಥಿಗಳಿಗೆ ವಸತಿ ಮತ್ತು ಊಟದ ವ್ಯವಸ್ಥೆ ನೀಡಿದ್ದಲ್ಲದೆ ಜ್ಞಾನ ದಾರ್ಶನಿಕ ಚಟುವಟಿಕೆಗಳ ಕೇಂದ್ರವಾಗಿತ್ತು.[೨೫೪] ಇಂತಹ ಚಟುವಟಿಕೆಗಳು ವಿಜಯನಗರ ಸಾಮ್ರಾಜ್ಯದ ನಂತರವೂ ಸಣ್ಣ ಪ್ರಮಾಣದಲ್ಲಿ ಬಂದಿರುವುದನ್ನು ಇಂದಿಗೂ ಕಾಣಬಹುದು. ಉದಾ: ಕಾಮಲಾಪುರ

ಗ್ರಾಮದಲ್ಲಿ ಕೊಟ್ಟೂರು ಸ್ವಾಮಿ ಮಠ, ಮಳೀಮಠ, ಕಾಶಿಮಠ, ಕಲ್ಮಠ, ಹಿರೇಮಠ ಮುಂತಾದವು. ಜಡೆ ಶಂಕದೇವರ ದೇವಸ್ಥಾನ ಈಗ ಅಕ್ಕ-ತಂಗಿಯರ ಕಲ್ಲುಗಳ ಹಿಂಬದಿಯಲ್ಲಿ ಇದೆ. ಇಲ್ಲಿಯೇ ಒಂದು ಮಠ ವಿರಬೇಕು.[೨೫೫] ವೀರಶೈವ ಶಂಕರ ದಾಸಿಮಯ್ಯನ ಆರಾಧ್ಯ ದೈವಗಾಗಿದ್ದ "ಜಡೆಯ ಶಂಕರ ಲಿಂಗ"ನ ಹೆಸರನ್ನು ತಿಳಿಸುತ್ತದೆ.[೨೫೬] ಕ್ರಿ.ಶ.೧೫೩೯ರ ಶಾಸನ ನಂಜೇದೇವರ ನಿರಾಸಿ ಮಠಕ್ಕೆ ಬಾವಿ ಮತ್ತು ತೋಟವನ್ನು ಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ.[೨೫೭]

**ಅಗ್ರಹಾರಗಳು:** ಎಂದರೆ ಉನ್ನತ ವ್ಯಾಸಂಗದ ಕೇಂದ್ರಗಳು. ಇವು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ ಪ್ರದೇಶಗಳು ಇದರ ಪ್ರಭುಗಳು ಬ್ರಾಹ್ಮಣರೇ. ಇವರನ್ನು ಮಹಾ ಪ್ರಭುಗಳೆಂದು ಕರೆಯಲಾಗುತ್ತಿತ್ತು. ಇವು ವೈದಿಕ ಸಂಪ್ರದಾಯದ ವಿದ್ಯಾಕೇಂದ್ರಗಳು. ಇವು ದೇವಸ್ಥಾನದ ಅವಿಭಾಜ್ಯ ಅಂಗಗಳು. ವಿದ್ಯಾವಂತ ಬ್ರಾಹ್ಮಣರಿಗೆ ಮಾತ್ರ ಮೀಸಲಾಗಿದ್ದ ವಿಧ್ಯಾಭ್ಯಾಸದ ಕೇಂದ್ರವಾಗಿ ಅಗ್ರಹಾರ ರೂಪಗೊಂಡಿತು.[೨೫೮]

ದೇವಾಲಯಗಳಿಗೂ ಅಗ್ರಹಾರಕ್ಕೂ ನಿಕಟವಾದ ಸಂಬಂಧವಿತ್ತು. ಈ ಅಗ್ರಹಾರಗಳು ತಮ್ಮದೇ ಆದ ಒಂದು ಪ್ರಮುಖ ದೇವಾಲಯವನ್ನು ಹೊಂದಿರುತ್ತಿದ್ದವು. ಅನೇಕ ದೇವಾಲಯಗಳು ಅಗ್ರಹಾರದಲ್ಲಿ ನಿರ್ಮಾಣವಾಗಿರುತ್ತಿದ್ದವು. ಪ್ರಮುಖ ದೇವಾಲಯಗಳಲ್ಲಿ ಅಗ್ರಹಾರದ ಮಹಾಜನರ ಸಭೆ ಸೇರುತ್ತಿತ್ತು. ಈ ಮಹಾಜನಗಳ ಮುಖ್ಯ ಕರ್ತವ್ಯ ದೇವಸ್ಥಾನಕ್ಕೆ, ಮಠಕ್ಕೆ, ದತ್ತಿ ನೀಡುವುದಾಗಿತ್ತು. ಉದಾ: ಲಕ್ಷ್ಮೀಧರಾಮಾತ್ಯನಿಗೆ ನೀಡಿದ ಗ್ರಾಮವನ್ನು ವೃತ್ತಿಗಳನ್ನಾಗಿ ವಿಂಗಡಿಸಿ, ೩೦ ವೃತ್ತಿಗಳನ್ನು ತನ್ನ ಸ್ವಂತಕ್ಕೆ ಇಟ್ಟುಕೊಂಡು, ಉಳಿದವುಗಳನ್ನು ಬ್ರಾಹ್ಮಣರಿಗೆ ನೀಡಿದನು.[೨೫೯] ಕ್ರಿ.ಶ.೧೦೬೮ರ ಶಾಸನವೊಂದು ಬುಕ್ಕನ ಮಂತ್ರಿ ಮಾಧವನು ಒಂದು ಅಗ್ರಹಾರವನ್ನು ಸ್ಥಾಪಿಸಿದನೆಂದಿದೆ.[೨೬೦] ಕ್ರಿ.ಶ.೧೦೭೬ ಶಾಸನವು ಮಹಾಪ್ರಧಾನ ದಂಡನಾಯಕ ಸೋಮೇಶ್ವರ ಭಟ್ಟೋಪಾಧ್ಯಾಯ, ಲೊಕ್ಕಿ ದಗ್ಯಾಣಗಳನ್ನು ದಾನಕೊಟ್ಟನೆಂಬ ವಿಷಯವನ್ನು ಉಲ್ಲೇಖಿಸಿದೆ.[೨೬೧] ಎರಡನೇ ದೇವರಾಯನ ೧೪೨೪ರಲ್ಲಿ ಚಿತೆಯತ್‌ಪುರ ಅಗ್ರಹಾರ ಸ್ಥಾಪಿಸಿ ೮ ಜನ ಬ್ರಾಹ್ಮಣರಿಗೆ ದಾನ ನೀಡಿದ್ದನ್ನು ದಾಖಲಿಸಿದೆ. ನಾಟ್ಯಗಾರ್ತಿಯರು ಅಗ್ರಹಾರ ಸ್ಥಾಪಿಸಿದ ನಿದರ್ಶನವೂ ಇವೆ.[೨೬೨] ಕ್ರಿ.ಶ.೧೫೩೯ರ ಶಾಸನ, ಬ್ರಾಹ್ಮಣರಿಗೆ ಆನಂದ ನಿಧಿಯ ದಾನವನ್ನು ಉಲ್ಲೇಖಿಸಿದೆ.[೨೬೩]

ಬ್ರಹ್ಮಪುರಿಗಳು ವೈದಿಕ ಧರ್ಮದ ವಿದ್ಯಾಕೇಂದ್ರಗಳಾಗಿ, ದೇವಸ್ಥಾನಗಳಿಗೆ ಪೂರಕವಾಗಿ ಕೆಲಸ ಮಾಡುತ್ತಿದ್ದವು. ವೀರಶೈವ ಮಠ, ದೇವಾಲಯಗಳು ಅಗ್ರಹಾರಗಳು, ವಿಜಯನಗರ ಕಾಲದಲ್ಲಿ ವಿದ್ಯಾಕೇಂದ್ರಗಳಾಗಿ ಮುಂದುವರೆದವು. ರಾಜರು ವಿದ್ಯಾ ಪ್ರಸಾರಕ್ಕೆ ವಿದ್ಯೆಗೆ ಸಾಕಷ್ಟು ಪ್ರೋತ್ಸಾಹ ನೀಡುತ್ತಿದ್ದರು. ಅರಸರು ಮತ್ತು ಅಧಿಕಾರಿಗಳು ದೇವಸ್ಥಾನಗಳಿಗೆ, ಅಗ್ರಹಾರಗಳಿಗೆ ವಿಪುಲವಾದ ಸಂಪತ್ತನ್ನು ದಾನ ನೀಡಿದರು. ಇವರಲ್ಲದೆ ಶ್ರೀಮಂತರ ಪ್ರೇರಣೆಯಿಂದ, ಅನೇಕ ವಿದ್ಯಾನಿಲಯಗಳನ್ನು ಸ್ಥಾಪಿಸಿ ಅವುಗಳಿಗೆ ಸ್ಥಿರವಾಗಿ ಜೀವನವನ್ನು ಕಲ್ಪಿಸಿಕೊಡುತ್ತಿದ್ದರು.

ಉಪಾಧ್ಯಾಯರಿಗೆ ಸುಖಜೀವನ ಸಾಗಿಸುವ ಅನುಕೂಲವಿದ್ದು, ವಿದ್ಯಾದಾನ, ವ್ಯಾಸಂಗದಲ್ಲಿಯೇ ತಮ್ಮ ಜೀವನವನ್ನು ಸವೆಸುತ್ತಿದ್ದರು. ವಿದ್ಯೆಗಾಗಿ ವಿದ್ಯಾರ್ಥಿಗಳಿಗೆ ಶುಲ್ಕವಿಲ್ಲದೇ ಅವರಿಗೆ ಶಿಕ್ಷಣ

ನೀಡುತ್ತಿದ್ದರು. ಹೀಗಾಗಿ ಶಿಕ್ಷಣ ಭಾರವೆನಿಸುತ್ತಿರಲಿಲ್ಲ. ರಾಜನ ಆಸ್ಥಾನ ದೇವಾಲಯ, ಮಠ, ಮುಂತಾದೆಡೆಯಲ್ಲಿ ಪಂಡಿತರ ಸಮ್ಮೇಳನಗಳು, ವಿದ್ಯಾಗೋಷ್ಠಿಗಳು ನೆರೆದು ಕಾವ್ಯವಾಚನ, ಶಾಸ್ತ್ರ ಚರ್ಚೆಗಳು ನಡೆಯುತ್ತಿದ್ದವು. ದೇವಾಲಯ ಮತ್ತು ಅಗ್ರಹಾರಗಳು ಹೆಚ್ಚಾಗಿ ಉನ್ನತ ವರ್ಗದ ವಿದ್ಯಾರ್ಥಿಗಳಿಗಾಗಿಯೇ ಶಿಕ್ಷಣ ಕೇಂದ್ರಗಳಾಗಿದ್ದವು ಎಂಬುದನ್ನು ಗಮನಿಸಬೇಕಾದ ಅಂಶ.

**ನ್ಯಾಯತೀರ್ಮಾನದ ಕೇಂದ್ರವಾಗಿ:** ದೇವಸ್ಥಾನವು ಪ್ರಾಚೀನ ಕರ್ನಾಟಕದಲ್ಲಿ ನ್ಯಾಯ ತೀರ್ಮಾನದ ಹೊಣೆ ಹೊತ್ತುಕೊಂಡಿತ್ತು. ವಿಜಯನಗರ ಕಾಲದಲ್ಲಿ ಈ ಪದ್ಧತಿಯ ಮುಂದುವರೆದಿತ್ತು. ವಿಜಯನಗರ ಕಾಲದಲ್ಲಿ ಗ್ರಾಮ ಸಭೆಗಳು ಅಸ್ತಿತ್ವದಲ್ಲಿದ್ದವು.[೨೬೪] ಇವು ಹಲವಾರು ಸಾಮುದಾಯಿಕ ಅಭಿವೃದ್ಧಿಯ ಕಾರ್ಯಗಳನ್ನು ಗ್ರಾಮಗಳಲ್ಲಿ ಕೈಕೊಳ್ಳುತ್ತಿದ್ದವು. ಇವುಗಳಲ್ಲಿ ನ್ಯಾಯ ವಿತರಣೆಯ ಕೆಲಸವೂಕೂಡ ಒಂದಾಗಿದೆ. ಗ್ರಾಮ ಸಭೆ ಸೇರುವುದು ಸಾಮಾನ್ಯವಾಗಿ ದೇವಸ್ಥಾನದ ಸಭಾಂಗಣದಲ್ಲಿ ಎಂಬುದನ್ನು ಗಮನಿಸಬೇಕು.[೨೬೫] ಹಾಗಾಗಿ ದೇವಸ್ಥಾನವು ಜನಸಾಮಾನ್ಯರ ಗ್ರಾಮದ ನ್ಯಾಯಾಲಯವಾಗಿಯೂ ಕಾರ್ಯ ನಿರ್ವಹಿಸುತ್ತಿದ್ದವು. ಗ್ರಾಮ ಸಭೆಗಳು ಮತ್ತು ದೇವಸ್ಥಾನಗಳು, ನ್ಯಾಯಾಲಯದ ಸಮಸ್ತ ನ್ಯಾಯ ವಿತರಣೆ ಮತ್ತು ದಂಡಾಧಿಕಾರಿಯ ಅಧಿಕಾರವನ್ನು ಹೊಂದಿದ್ದವು. ದೇವಸ್ಥಾನಗಳಲ್ಲಿ ಸಭೆ ಸೇರುತ್ತಿದ್ದ ನ್ಯಾಯಾಲಯಗಳು ಇವು ವಿಧಿ ಬದ್ಧವಾಗಿದ್ದವಲ್ಲದೆ ದೇವಸ್ಥಾನದ ಧರ್ಮದರ್ಶಿಗಳು, ಶ್ರೇಣಿಗಳು ಮತ್ತು ಕೋಮುಗಳ ನಡುವೆ ಸಂಭವಿಸುವ ಜಗಳಗಳ ನ್ಯಾಯ ವಿತರಣೆ ಮಾಡುತ್ತಿದ್ದರು. ನಾಡ ಗೌಡನ ಹುದ್ದೆ ವಿಜಯನಗರ ಕಾಲದಲ್ಲಿ ವಂಶ ಪಾರಂಪರ್ಯವಾಗಿತ್ತು.[೨೬೬] ನಾಡು ಎಂಬ ವಿಭಾಗದ ಪ್ರಭು ಆಗಿದ್ದರಿಂದ ಆತನನ್ನು ನಾಡಗೌಡನೆಂದು ಕರೆಯಲಾಗುತ್ತಿದ್ದಿತು.[೨೬೭] ಈತನು ದೇವಸ್ಥಾನದಲ್ಲೇ ಕುಳಿತು ನಾಡಿಗೆ ಸಂಬಂಧಪಟ್ಟ ವಿಚಾರಗಳಿಗೆ ವಿವಾದಗಳಿಗೆ ನ್ಯಾಯ ವಿತರಣೆ ಮಾಡುವ ಹಕ್ಕನ್ನು ಹೊಂದಿದ್ದನು. ಹೀಗೆ ದೇವಾಲಯ ನ್ಯಾಯಾಂಗದ ಕೇಂದ್ರವಾಗಿ ಕಾರ್ಯನಿರ್ವಹಿಸುತ್ತಿತ್ತು.

**ಆರ್ಥಿಕ ಚಟುವಟಿಕೆಯ ಕೇಂದ್ರವಾಗಿ:** ಅಂದಿನ ಸಮಾಜವು ಆರ್ಥಿಕವಾಗಿ ಸಬಲವಾಗಲು ದೇವಾಲಯಗಳು ಅಂದಿನ ಕಾಲದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದವು ದೇವಸ್ಥಾನದ ಆರ್ಥಿಕ ಮೂಲಗಳು ಮುಖ್ಯವಾಗಿ

೧. ಗ್ರಾಮವನ್ನು ದತ್ತಿಯಾಗಿ ಸ್ವೀಕರಿಸುವುದು.

೨. ಭೂಮಿಯನ್ನು ದತ್ತಿಯಾಗಿ ಸ್ವೀಕರಿಸುವುದು.

೩. ಹಣದ ರೂಪದಲ್ಲಿ ರಾಜತ್ವ ಸಂಗ್ರಹ.

ದೇವಸ್ಥಾನವು ವಿಜಯನಗರ ಕಾಲದಲ್ಲಿ ಶೈಕ್ಷಣಿಕ ಚಟುವಟಿಕೆಯ ಕೇಂದ್ರವಾದುದಲ್ಲದೆ ನ್ಯಾಯ, ಆರ್ಥಿಕ ಚಟುವಟಿಕೆಯ ಕೇಂದ್ರವೂ ಆಗಿತ್ತು. ಈ ಕಾಲದ ದೇವಾಲಯಗಳು ತಮ್ಮದೇ ಆದ ಆರ್ಥಿಕ ಮೂಲವನ್ನು ಹೊಂದುವುದು ಅವಶ್ಯವಾಗಿತ್ತು. ಈ ಆರ್ಥಿಕ ಮೂಲವನ್ನು ರಾಜಪ್ರಭುತ್ವ ದಾನಗಳಿಂದ, ಪ್ರತಿಷ್ಠಿತ ವ್ಯಕ್ತಿಗಳಿಂದ, ಸಂಗ್ರಹಿಸಲಾಗುತ್ತಿತ್ತು. ರಾಜ–ರಾಣಿಯರು, ಸಾಮಂತರು, ದಂಡನಾಯಕರು, ಪ್ರಾಂತೀಯಾಧಿಕಾರಿಗಳು, ದೇವಾಲಯಗಳ ನಿರ್ಮಾಣ–ನಿರ್ವಹಣೆಗೆ ದಾನ–ದತ್ತಿಗಳನ್ನು

ಬಿಟ್ಟುಕೊಡುತ್ತಿದ್ದರು. ಇವೇ ದೇವಸ್ಥಾನದ ಆರ್ಥಿಕ ಮೂಲವಾಗಿದ್ದವು. ಈ ಆರ್ಥಿಕ ಮೂಲ, ಭೂಮಿ, ಗ್ರಾಮ, ಹಣ, ತೆರಿಗೆ ರೂಪದಲ್ಲಿ ಸಂಗ್ರಹಿಸಲಾಗುತ್ತಿತ್ತು. ಹೀಗೆ ಶೇಖರಣಗೊಂಡ ಹಣವನ್ನು ದೇವಸ್ಥಾನವು ಸಾಮಾಜಿಕ ಕಾರ್ಯಗಳಿಗೆ ಬಳಸುತ್ತಿತ್ತು. ವಿಜಯನಗರ ಕಾಲದ ದೇವಾಲಯಗಳಿಗೆ ಸಂಪತ್ತು ಧಾರಾಳವಾಗಿ ಹಾ ಬರುತ್ತಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ.

**ಗ್ರಾಮದತ್ತಿ:**

**ಆದಾಯ:** ದೇವಾಲಯದ ಆದಾಯ ಮೂಲಗಳಲ್ಲಿ ಮುಖ್ಯವಾದುದು ಗ್ರಾಮದತ್ತಿ. ದಾನಿಗಳು ದೇವಾಲಯ ನಿರ್ಮಾಣವನ್ನು ಕೈಗೊಂಡು ಅದರ ಪೂಜಾ ಸೇವೆಗಳಿಗಾಗಿ ಗ್ರಾಮಗಳನ್ನು ದತ್ತಿಯಾಗಿ ನೀಡುತ್ತಿದ್ದರು. ಅಂತಹ ಗ್ರಾಮಗಳಿಂದ ಬರುವ ಸಕಲ ಆದಾಯ, ತೆರಿಗೆ ಸುಂಕವನ್ನು ದೇವಾಲಯಗಳಿಗೆ ನೀಡಬೇಕಾಗಿತ್ತು ಅರಸರು ಗ್ರಾಮಗಳ ಹೆಸರನ್ನು ಪ್ರತಿ ನಾಮಕರಣ ಮಾಡಿ ಅವುಗಳನ್ನು ದೇವರ ಸೇವೆಗೆ ಕೊಡುತ್ತಿದ್ದರು. ದಾನಿಗಳು ಒಂದು ಗ್ರಾಮವನ್ನಲ್ಲದೆ ಹಲವು ಗ್ರಾಮಗಳನ್ನು ನೀಡುತ್ತಿದ್ದುದುಂಟು. ಹೀಗೆ ಗ್ರಾಮದಿಂದ ಬರುವ ಆದಾಯವು ದೊಡ್ಡ ಉತ್ಪನ್ನದ ಮೂಲವಾಗಿತ್ತು. ಉದಾ: ಕ್ರಿ.ಶ.೧೫೩೧ರಲ್ಲಿ ಕಳಸಾಪುರ ಮಾಗಣೆಯಲ್ಲಿನ ಒಳಕೋಟೆಗ್ರಾಮ, ಓಬಳದೇವ ಕಣಿವೆ ಹತ್ತಿರದ ಮುದ್ದಾಪುರ ಕೋಫಣ ಸೀಮೆಯಲ್ಲಿನ ಕುಟುಕನಹಳ್ಳಿ, ನಾರಿ ಸೀಮೆಯ ಜಾಯನೂರು ಗ್ರಾಮಗಳನ್ನು ದಾನ ಮಾಡಿದನು. ಇದು ರಾಮಚಂದ್ರ ದೇವರ ಸೇವೆಗೆ ನೀಡಿದ್ದಾಗಿದೆ.[೨೮]

ಪ್ರಾರಂಭ ಹಂತದಲ್ಲಿ ನಿರ್ಮಿಸಿದ ದೇವಾಲಯಗಳು ಈಗ ಉಳಿದಿಲ್ಲ. ಅಂದು ವಿಜಯನಗರಕಾಲದ ರಾಜರು ಅಥವಾ ಅರಸರು ಬಿಟ್ಟದಾನದ ವಿಷಯಗಳನ್ನು ತಿಳಿಸುವ ಕಾಮಲಾಪುರ ಪರಿಸರದಲ್ಲಿನ ಕೆಲವು ಶಾಸನಗಳು ಇಂದಿಗೂ ಉಳಿದಿವೆ. ಇಲ್ಲಿನ ಅಂದಿನ ದೇವಾಲಯಗಳು ಭಕ್ತರ ಭಕ್ತಿ ಮತ್ತು ನಿಷ್ಠೆಯ ಪ್ರತೀಕಗಳಾಗಿವೆ. ಇವು ಪೂಜಾಗೃಹವಾದರೂ ಹಲವಾರು ರೀತಿಯ ಪೂಜೆ, ಪುನಸ್ಕಾರಗಳು, ಹಬ್ಬಗಳು, ಜಾತ್ರೆಗಳು ಸಮಾಜದ ಜನಸಾಮಾನ್ಯರ ಮೇಲೆ ಪ್ರಭಾವ ಬೀರಿವೆ. ದೇವಾಲಯಗಳು ಜನರ ರಾಜಕೀಯ, ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಮಹತ್ವದ ಪಾತ್ರವಹಿಸಿವೆ.[೨೯] ಹಿಂದೊಮ್ಮೆ ದೇವಾಲಯಗಳಿಗೆ ದಾನ ನೀಡುವುದು ಜೀವನದ ಪರಮಧ್ಯೇಯವಾಗಿ ಪರಿಗಣಿಸಲಾಗಿತ್ತು. ಸಮಾಜದಲ್ಲಿ ಪ್ರಾರಂಭದಿಂದಲೂ ದಾನಕ್ಕೆ ವಿಶೇಷವಾದ ಸ್ಥಾನವಿದೆ. ಕೇವಲ ದೇವಾಲಯ ನಿರ್ಮಿಸಿದರೆ ಸಾಲದು ಅದರ ಪೂಜೆ, ಪುನಸ್ಕಾರಗಳು ನಡೆಯುತ್ತಾ ಊರ್ಜಿತವಾಗಬೇಕು. ಆದಕಾರಣ ದೇವಾಲಯ ನಿರ್ಮಿಸಿದ ವ್ಯಕ್ತಿಯೇ ಹೇರಳವಾಗಿ ದಾನ ನೀಡುತ್ತಿದ್ದನು. ಈ ಆಸ್ತಿಯೇ ದೇವಾಲಯದ ದೇವ ಭೋಗ. ಇಂತಹ ದಾನಗಳನ್ನು ಬಿಡುವಾಗ ದಾನದ ಉದ್ದೇಶವು ಶಾಸನಗಳಲ್ಲಿ ಬರೆಯಲ್ಪಡುತ್ತಿತ್ತು.[೩೦] ಉದಾ: ಧೂಪದೀಪ, ಗಂಧ–ನೈವೇದ್ಯ ಗೀತ–ನೃತ್ಯೋಪಹಾರ, ಖಂಡ ಸ್ಫುಟಿತ, ಜೀರ್ಣೋದ್ದಾರಾದಿಯತೇನಾಂ, ವಿದ್ಯಾರ್ಥಿನಾ, ಚಾಸತ್ರ, ನಿಮಿತ್ತಂ.[೩೧] ಈ ಹಿನ್ನಲೆಯಲ್ಲಿ ಕಾಮಲಾಪುರ ಗ್ರಾಮದ ಸುತ್ತಮುತ್ತಲಿನ ಪರಿಸರದ ದೇವಾಲಯಗಳಿಗೆ ಬಿಟ್ಟ ಭೂ ದಾನ–ದತ್ತಿ ವಿಚಾರಗಳನ್ನು ಪರಿಶೀಲಿಸಲು ಇಲ್ಲಿ ದೊರೆತ ಭೂ–ದಾನ ಶಾಸನಗಳು ಇದಕ್ಕೆ ಪೂರಕ ಮಾಹಿತಿಯನ್ನು ನೀಡುತ್ತವೆ.

ಕ್ರಿ.ಶ.೧೩೩೬ರ ಶಾಸನವು ಬಸವ ದಣ್ಣಯಕನು ವಿರುಪಾಕ್ಷದೇವರ ಸೇವೆಗಾಗಿ ರಾಮಪುರದ ಕೆರೆಯ ಕೆಳಗೆ ಭೂ–ದಾನವನ್ನು ಮಾಡಿದನು ಎಂದಿದೆ.[೩೨] ೧೪ನೇ ಶತಮಾನದ ಶಾಸನವು,

ಹರಿಹರನು ವಿರುಪಾಕ್ಷ ದೇವರಿಗೆ ಗದ್ದೆಯನ್ನು ದಾನವಾಗಿ ಮಾಡಿದ್ದನ್ನು ಉಲ್ಲೇಖಿಸಿದೆ. ವಿನಾಯಕ ದೇವರಿಗೆ ಭೂ-ದಾನ ಮಾಡಿದ ವಿಷಯ ಈ ಶಾಸನದಲ್ಲಿವೆ.[೨೭೩] ಕ್ರಿ.ಶ.೧೫೧೮ ರಲ್ಲಿನ ಶಾಸನ ಕೃಷ್ಣದೇವರಾಯನ ಪಟ್ಟಮಹಾದೇವಿ, ತಿರುಮಲಾದೇವಿ, ಕಮ್ಮಾರಗುಂಟೆ ಭೂಮಿಯನ್ನು ಅಂಜನಗಿರಿಯ ತಿರುವೆಂಗಳನಾಥನಿಗೆ ಭೂದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೨೭೪] ಕ್ರಿ.ಶ.೧೫೨೧ರಲ್ಲಿ ಚಿಕ್ಕತಿಮ್ಮಯ್ಯದೇವನ ಮಗ ತಿಮ್ಮರಾಜನು ರಾಮಚಂದ್ರ ದೇವರ ಭಂಡಾರಕ್ಕೆ ದಾನವನ್ನು ನೀಡಿದನು. ಸಂಡೂರು ಸೀಮೆಯ ತಾಳೂರಿನ ಪಶ್ಚಿಮಕ್ಕಿರುವ ಬೆಂಚೆಯೆಂಬ ಕುಂಟೆಯ ಕೆರೆಗೆ ಒಂದು ಖಂಡುಗ ಗದ್ದೆಯನ್ನು, ಮಾನ್ಯವಾಗಿ ಬಂದಿರುವ ಪಾಲನ್ನು ದೇವರ ದೇವಾಲಯದ ಉತ್ಸವ ಕಾರ್ಯಗಳಿಗಾಗಿ ದಾನ ಮಾಡಿದ ವಿಷಯವನ್ನು ಈ ಶಾಸನ ತಿಳಿಸುತ್ತದೆ.[೨೭೫] ಕ್ರಿ.ಶ.೧೫೨೫ರ ಶಾಸನವೊಂದು ಆದಿ ನಾರಾಯಣ ದೇವರಿಗೆ ಅಂಗಡಿಯೊಂದನ್ನು ದಾನ ಮಾಡಿದ್ದನ್ನು ಉಲ್ಲೇಖಿಸಿದೆ.[೨೭೬]

ಕ್ರಿ.ಶ.೧೫೨೯ರಲ್ಲಿ ಕನ್ನಿಸೆಟಿ ಮತ್ತು ಪಿಚಾರಿಸೆಟಿ ಮತ್ತು ಅವನ ದಯಾದಿಗಳು ಸೇರಿ ತೋಟ ಮತ್ತು ಗದ್ದೆಯಲ್ಲಿನ ಉತ್ಪನ್ನದಲ್ಲಿ, ರಾಮಚಂದ್ರ ದೇವರಿಗೆ ನೀಡಿ ಉಳಿದದ್ದನ್ನು ವಿರುಪಾಕ್ಷ ದೇವರ ಅಮೃತ ಪಡಿಗೆ ನೀಡಿದ್ದಾರೆ.[೨೭೭] ಕ್ರಿ.ಶ.೧೫೩೧ರಲ್ಲಿ ಕೃಷ್ಣರಾಯನು ತಂದೆ-ತಾಯಿಯರಿಗೆ ಪುಣ್ಯವಾಗಲೆಂದು ಕನ್ನಕಿಯಕಚೆ ಬಂಕಾಪುರ. ನಾಗಲಾಪುರ ಮತ್ತು ಗೌರಾಜಿಕೆರೆ ತೋಟಗಳನ್ನು ಭೂಮಿಗಳನ್ನು ಪ್ರಸನ್ನ ವಿರುಪಾಕ್ಷದೇವರ ಸೇವೆಗಾಗಿ ದಾನ ಮಾಡಿದನು.[೨೭೮] ಕ್ರಿ.ಶ.೧೫೩೧ರ ಶಾಸನವು ಲಕ್ಷ್ಮಿನರಸಿಂಹ ದೇವರ ದೀಪಾರಾಧನೆ ದಾನ ನೀಡಿದನೆಂದು ಪ್ರಸ್ತಾಪಿಸುತ್ತದೆ.[೨೭೯] ಕ್ರಿ.ಶ.೧೫೩೧ರ ಅಚ್ಯುತದೇವರಾಯರ ಕಾಲದಲ್ಲಿ ಅಚ್ಯುತರಾಯ, ಮಲ್ಲಪಣ್ಣ ಅಯ್ಯನವರು, ರಘುನಾಥದೇವರ ಸೇವೆಗಾಗಿ ಭೂದಾನ ನೀಡಿದನು.[೨೮೦] ಕ್ರಿ.ಶ.೧೫೪೦ರ ಶಾಸನ ರಘುನಾಥದೇವರ ಪ್ರತಿಷ್ಠೆ ಮಾಡಿಸಿ, ಅಮೃತಪಡಿಗಾಗಿ ದಾನ ನೀಡಿದ ವಿಷಯ ಗದ್ದೆಯ ಎಲ್ಲೆ ಉತ್ಪತ್ತಿಯ ಭಾಗ ಮತ್ತು ಕೆಲವು ತೆಂಗಿನ ಮರಗಳನ್ನು ದಾನ ಮಾಡಿದ್ದನ್ನು ಈ ಶಾಸನದಲ್ಲಿ ಉಲ್ಲೇಖಿಸ್ಪಟ್ಟಿದೆ.[೨೮೧] ಕ್ರಿ.ಶ.೧೫೫೪ರಲ್ಲಿ ರಘುನಾಥ ರಾಜನು ಕಥಾಲ ಪಾಲ್ಯಂನಲ್ಲಿ ಅಲಮೇಲಮಂಗಮ್ಮನ ದೇವಾಲಯವನ್ನು ನಿರ್ಮಿಸಿ, ಧೂಪ ದೀಪರಾಧನೆಗಾಗಿ ದಾನ ನೀಡಿದನು.[೨೮೨] ಕ್ರಿ.ಶ.೧೯ನೇ ಶತಮಾನದ ಶಾಸನ ಮಲ್ಲಿಕಾರ್ಜುನ ದೇವರಿಗೆ ದೀಪವನ್ನು ಉರಿಸುವುದಕ್ಕಾಗಿ ಅಂದು ಅಂಗಡಿ ಮನೆಯೊಂದನ್ನು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.[೨೮೩] ಅಣ್ಣಲದೇವಿಯು ರಾಮಚಂದ್ರ ದೇವರಿಗೆ ಚಿನ್ನದ ಹರಿವಾಣ ಮತ್ತು ಬಟ್ಟಲನ್ನು ಸಮರ್ಪಿಸಿದಳು.[೨೮೪] ಕ್ರಿ.ಶ.೧೬ನೇ ಶತಮಾನ ರಘುನಾಥ ದೇವರಿಗೆಂದು ಮಂಟಪವನ್ನು ವರ್ತಕ ಸಮುದಾಯದವರು ನಿರ್ಮಿಸಿದರು.[೨೮೫] ಕ್ರಿ.ಶ.೧೬ನೇ ಶತಮಾನದ ಇನ್ನೊಂದು ಶಾಸನ ನರಸಿಂಹ ದೇವರಿಗೆ ಭೂಮಿ ದಾನ ಮಾಡಿದನು ಸದಾಶಿವರಾಯನಿಗೆ ಪುಣ್ಯವಾಗಲೆಂದಿದೆ.[೨೮೬]

ಹೀಗೆ ದೇವಾಲಯಗಳ ಆದಾಯದ ಉತ್ಪನ್ನವು ಭೂಮಿ ದಾನದಿಂದಲೂ ಸಹ ಬರುತ್ತಿದ್ದುದು ಈ ಮೇಲಿನ ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ದಾನಿಗಳು ನೇರವಾಗಿ ಭೂಮಿಗಳನ್ನು ದೇವಾಲಯದ ಸ್ಥಾನಿಕರಿಗೆ ನೀಡಿ, ಅವರ ಜೊತೆ ಒಪ್ಪಂದ ಮಾಡಿಕೊಳ್ಳುತ್ತಿದ್ದರು. ಇಂತಹ ಭೂಮಿಗಳನ್ನು ಸಾಗುವಳಿ ಕೊಟ್ಟು ಬಂದ ಹಣದಲ್ಲಿ, ದಾನಿಗಳು ನಿಗದಿ ಪಡಿಸುವ ಸೇವೆಗಳನ್ನು ನೆರವೇರಿಸುತ್ತಿದ್ದರು.

**ತೆರಿಗೆ–ಹಣ–ಸುಂಕ:** ಆಯಾ ಗ್ರಾಮಗಳ ತೆರಿಗೆ ಮಾಕುಕಟ್ಟೆಗಳಲ್ಲಿನ ಧಾನ್ಯ–ಅಂಗಡಿಗಳಿಂದ ಬರುವ ಸುಂಕ ಹಾಗೂ ದಾನಿಗಳು ನೀಡುವ ಹಣದಿಂದ ಆದಾಯವು ಬರುತ್ತಿದ್ದುದು ಶಾಸನಗಳಿಂದ ಉಲ್ಲೇಖಿತವಾಗಿದೆ. ಸುಂಕಗಳಲ್ಲಿ ನಾನಾ ವಿಧಗಳಿದ್ದು ಅವುಗಳಲ್ಲಿ ಹಸಿರುವಾಣಿ ಸುಂಕ, ಸ್ಥಳ, ಎಮ್ಮೆ ಸುಂಕ, ಉತ್ಪನ್ನಸುಂಕ, ತಳವಾರಿಕೆ ಸುಂಕ, ಹೀಗೆ ನಾನಾ ಸುಂಕಗಳಿದ್ದವು ಇವುಗಳಿಂದ ಬರುವ ಆದಾಯವೂ ದೇವಾಲಯಗಳಿಗೆ ಸೇರುತ್ತಿತ್ತು.[೨೮೭] ಕ್ರಿ.ಶ.೧೦೭೬ರ ಶಾಸನವು ಮಹಾ ಪ್ರಧಾನ ದಂಡನಾಯಕ ಸೊಮೇಶ್ವರ ಭಟ್ಟೋಪಾಧ್ಯಾಯ ಪುರಾಣ ವ್ಯಾಖ್ಯಾನ ಮಾಡುವ ಉಪಾಧ್ಯಾಯರಿಗೆ ೮೦ ಲೊಕ್ಕಿ ಗದ್ಯಾಣ ಹಣರೂಪದಲ್ಲಿ ದಾನ ನೀಡಿದ್ದನ್ನು ಉಲ್ಲೇಖಿಸಿದೆ.[೨೮೮] ಕ್ರಿ.ಶ.೧೫೩೯ರ ಶಾಸನ ಅಚ್ಯುತರಾಯ ಮಲ್ಲಪ್ಪಣನು ವರದರಾಜಮ್ಮನವರ ಪಟ್ಟಣದ ರಘುನಾಥ ದೇವರ ನೈವೇದ್ಯಕ್ಕೆ ದೊರದಡಿ ಸೋಮಲಾಪುರ ಸೀಮೆಯಲ್ಲಿ ಸಂಗ್ರಹಿಸಿದ ತೋಟದ ಬೆಳೆಯ ಹಸಿರುವಾಣಿ ಸುಂಕದ ಆದಾಯವನ್ನು ೧೦೫೦ ವರಹಗಳಿಗೆ ದಾನ ಮಾಡಿದನೆಂದಿದೆ. ಹೀಗೆ ದೇವಾಲಯವು ಸಾಮಾಜಿಕ ಕಾರ್ಯಗಳಿಗಾಗಿ ಈ ಎಲ್ಲಾ ದಾನಗಳನ್ನು ಉಪಯೋಗಿಸಲ್ಪಡುತ್ತಿತ್ತು ಎಂಬುದು ಇಲ್ಲಿ ಪ್ರಮುಖವಾದ ಅಂಶವಾಗಿದೆ.

ಒಟ್ಟಿನಲ್ಲಿ ಈಕಾಲದ ದೇವಾಲಯಗಳು ಅಂದಿನ ಕಾಲದ ಜನರ ಭಕ್ತಿ ಮತ್ತು ನಿಷ್ಠೆಯ ಪ್ರತೀಕಗಳಾಗಿದ್ದವು. ಇವು ಅಂದಿನ ಕಾಲದ ಧಾರ್ಮಿಕ ಸಂಸ್ಥೆಯಾಗಿರುವುದರ ಜೊತೆಯಲ್ಲಿ ಸಾಮಾಜಿಕ ಜೀವನದಲ್ಲಿ ವಿಶಿಷ್ಟವಾದ ಗೌರವ ಸ್ಥಾನವನ್ನು ಪಡೆದುಕೊಂಡಿದ್ದವು. ಇದು ಧಾರ್ಮಿಕ ಕಾರ್ಯಗಳ ಕೇಂದ್ರವೂ ಆಗಿತ್ತು. ಹಾಗೆ ಇವು ವಿದ್ಯಾಶಾಲೆಗಳಾಗಿ, ನ್ಯಾಯಗೃಹಗಳಾಗಿ, ಆರ್ಥಿಕ ಮೂಲಗಳಾಗಿ ಹೀಗೆ ಸಾಮಾಜಿಕ ಕೇಂದ್ರಬಿಂದುವಾಗಿ ಕಾರ್ಯನಿರ್ವಹಿಸುತ್ತಿದ್ದವು. ಇವು ಅನೇಕ ಪಂಡಿತರ, ವಿದ್ವಾಂಸರ, ಧರ್ಮಜೀವಿಗಳ ಆಶ್ರಯ ಸ್ಥಾನವಾಗಿದ್ದಿತು. ವಿಜಯನಗರ ಕಾಲದಲ್ಲಿನ ದೇವಸ್ಥಾನಗಳು ಆರ್ಥಿಕ ಅಭಿವೃದ್ಧಿಯ ತಾಣಗಳಾಗಿ ದಾನ ದತ್ತಿ ಪಡೆಯುವ ಕೇಂದ್ರ ಬಿಂದುಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ದೇವಸ್ಥಾನಗಳು ಶೈವ ವೈಷ್ಣವ ಎಂಬ ಪಂಥೀಯ ಭೇದಗಳಿಲ್ಲದೆ ದೇವಸ್ಥಾನಗಳು ನಿರ್ಮಾಣಗೊಂಡವು, ಇದು ವಿಜಯನಗರ ಅರಸರ ಜಾತ್ಯಾತೀತ ಮನೋಭಾವನೆಯ ಪ್ರತೀಕ ಮತ್ತು ಸರ್ವಧರ್ಮ ಸಹಿಷ್ಣುತಾ ವಾದಿಗಳಾಗಿದ್ದರೆಂಬುದಕ್ಕೆ ಇವು ಆಧಾರ ಸ್ತಂಭಗಳಾಗಿವೆ.

ವಿಜಯನಗರ ಕಾಲದಲ್ಲಿ ಬಹುಮಟ್ಟಿಗೆ ಹನುಮಂತ ಶಿವಲಿಂಗ ವೀರಭದ್ರ ದೇವಾಲಯಗಳು ಹೆಚ್ಚಾಗಿ ಕಂಡು ಬರುತ್ತವೆ. ಕಾರಣ ವೈಷ್ಣವ ಧರ್ಮ ಹೆಚ್ಚು ಪ್ರಚಲಿತವಾಗಿದ್ದರಿಂದ ಹನುಮಂತ ದೇವಾಲಯಗಳು ಐತಿಹಾಸಿಕವಾಗಿ ವಿರುಪಾಕ್ಷನ ಆರಾಧನೆಯು ಹೆಚ್ಚಾಗಿರುವುದರಿಂದ ಶಿವಲಿಂಗ ದೇವಾಲಯಗಳು, ವೀರರ ಪ್ರತೀಕ ವೀರಭದ್ರನಾಗಿರುವುದರಿಂದ ವೀರಭದ್ರ, ದೇವಾಲಯಗಳು ಕಂಡು ಬರುತ್ತವೆ. ಇವು ಹೀಗೆ ವಿಜಯನಗರ ಕಾಲದ ಸಾಂಸ್ಕೃತಿಕ ವೈಭವವನ್ನು ಹೆಚ್ಚಿಸುವುದಕ್ಕೆ ಕಾರಣೀಭೂತವಾಗಿವೆ.

ಒಟ್ಟಾರೆಯಾಗಿ ಜೀವನದ ಪ್ರತಿಯೊಂದು ಹಂತದಲ್ಲೂ ದೇವಾಲಯವನ್ನು ತನ್ನ ಜೀವನದ ಅವಿಭಾಜ್ಯ ಅಂಗವೆಂದು ಪರಿಗಣಿಸಿದ ಅಂದಿನ ಸಮಾಜ ಅದನ್ನು ಪೋಷಿಸಿ ಬೆಳೆಸುತ್ತಾ ಬಂದಿತು. ಹೀಗೆ ಸಮಾಜದ ಅವಿಭಾಜ್ಯ ಅಂಗವಾಗಿ ನಮ್ಮ ಸಂಸ್ಕೃತಿ ಪರಂಪರೆಯ ದ್ಯೋತಕವಾಗಿ,

ವಿದ್ಯಾಸಂಸ್ಥೆಯಾಗಿ, ನ್ಯಾಯಾಲಯವಾಗಿ ಹಾಗೂ ಆದಾಯದ ಕೇಂದ್ರ ಚುಕ್ಕಾಣಿಯಾಗಿ ನಮ್ಮ ಸಮಾಜದ ಭಾವೈಕ್ಯತೆಯನ್ನು ಹೆಚ್ಚಿಸುವ ಸಾಮರಸ್ಯದ ಕೇಂದ್ರ ಬಿಂದುವಾಗಿ ನಮ್ಮ ವಾಸಕಲೆಗಳ ವಸ್ತು ಸಂಗ್ರಹಾಲಯವಾಗಿ ಅಂದಿನ ಕಾಲದ ದೇವಾಲಯಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ.



**ಅಡಿ ಟಿಪ್ಪಣಿ**

೧. ತಿಪ್ಪೇರುದ್ರಸ್ವಾಮಿ.ಎಚ್, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ೧೯೬೮, ಪು.೧೨-೧೫

೨. ರಾಮಕೃಷ್ಣ.ಕೆ.ಆರ್, ಟಿ.ಎಸ್.ಗಂಗಾಧರ, ವಾಸುದೇವನ್.ಸಿ.ಎಸ್, ವಿಜಯನಗರ, ಅಧ್ಯಯನ ಸಂ-೨, ೨೦೦೨, ಪು.೧೦೧

೩. ಕೆವಲಿ.ಜೆ.ಎ, ಕನ್ನಡ-ಕನ್ನಡ ಕಸ್ತೂರಿ ಕೋಶ, ೧೯೭೭, ಪು.೧೭೪-೫೭೬

೪. ಕಲ್ಬುರ್ಗಿ.ಎಂ.ಎಂ, ಕರ್ನಾಟಕದ ಕೈಫಿಯತ್ತುಗಳು, ೧೯೯೪, ಪು.೪೩೦

೫. ವೀಣಾ.ಎಂ.ಪಿ, ಮನೆ, ಸಮಾಜ ಮತ್ತು ಸಂಸ್ಕೃತಿ, ೨೦೦೨, ಪು.೨೨

೬. ಎಂ.ಕೋಟ್ರೇಶ್, ಕನ್ನಡ ವಿಶ್ವವಿದ್ಯಾಲಯದ ಐತಿಹಾಸಿಕ ಸ್ಥಳಗಳು, ೨೦೦೬, ಪು.೩

೭. ಎ.ಆರ್ (AR), ೧೯೦೪, ಪು.೨೨



೮. ಎ.ಆರ್ (AR), ೧೮೮೯, ಪು.೧೬

೯. ಕೆ.ಜಿ.ಭಟ್‌ಸೂರಿ, ವಿ.ಅ.ಸಂ-೯, "ಹಂಪಿಯ ಶಾಸನಗಳಲ್ಲಿ ವಿಜಯನಗರ ಕಾಲದ ಆಡಳಿತ ವಿಭಾಗಗಳು" ಪು.೩೧೪-೩೧೮

೧೦. Venkataramanayya.N, Studies in the History of third Dynasty of Vijayanagara, ೧೯೦೪, ಪು.೧೪೭

೧೧. ಇ.ಸಿ E.C III, NJ-35, EC XII CK 6 and 10

೧೨. Dixit.G.S. Early Vijayanagara Study in its History and Culture, ೧೯೮೮, ಪು.೬೭

೧೩. ದೀಕ್ಷಿತ್.ಜಿ.ಎಸ್. ಪೂರ್ವೋಕ್ತ ಪು.೫೯-೬೫

೧೪. Krishnaswamy, The Tamil Country under Vijayanagara, ೧೯೬೪, ಪು.೧೦೪

೧೫. ವೆಂಕಟರಮಣಯ್ಯ.ಎನ್, ಪೂರ್ವೋಕ್ತ, ಪು.೧೬೧

೧೬. Mahalingam.T.V, Economic Life in the Vijayanagara Empire, ೧೯೫೧, ಪು.೩೫೬೦

೧೭ ವೆಂಕಟರತ್ನ.ಎ.ವಿ, ಪೂರ್ವೋಕ್ತ, ಪು.೪೪-೪೬

೧೮. EC IX Ma No.11, ಪು.೪೪-೪೬

೧೯. EC XII Tp 60, MAR, 1938 No.73, MAR, 1928 No.56

೨೦. ವೆಂಕಟರತ್ನಂ.ಎ.ವಿ ಪೂರ್ವೋಕ್ತ ೧೯೭೪, ಪು.೬೯

೨೧. Madhavacharya parasara-Mahdava (Ed-Chandrakanta Tankalankra Voles 1-3 Calcutta 1890-2 III ಪು.೨೬೬

೨೨. Robert Swell, A Forgetten Empire, ೧೯೯೧, ಪು.೨೩೦

೨೩. ವಿಜ್ಞೇಶ್ವರ, ಮಿತಾಕ್ಷರ ನಂ.೧೬೭

೨೪. Robert Swell, ಪೂರ್ವೋಕ್ತ ಪು.೮೦

೨೫. ಅದೇ ಪು.೮೬-೮೮

೨೬. ಅದೇ ಪು.೩೪೫

೨೭. ಅದೇ ಪು.೨೪೬

೨೮. Longhesst.A.V, Hampi Ruins Described and Illustrated Madras, ೧೯೧೭, ಪು.೫೧

೨೯. South Indian Inscription IV, ಪು.೨೬೨

೩೦. Dixit.G.S, Early Vijayanagara Study in its History and Culture, ೧೯೮೮, ಪು.೧೫೬-೧೫೭

೩೧. Appadorai, KrishnaDevaraya A.D.1509-1529, ೧೯೪೯, ಪು.೩೮೬

೩೨. Mahalingam, Economic life in Vijayanagara empire, ೧೯೫೧, ಪು.೩೨

೩೩. SII IX (ii), ಪು.೪೧೧

೩೪. Mahalingam, ಪೂರ್ವೋಕ್ತ, ಪು.೬೮

೩೫. SII VIII, ಪು.೬೮

೩೬. SII XX, ಪು.೫೯೨ SII VII, ಪು.೧೦೩

೩೭. Venkataramanayya.N, Studies in the History of Third Dynasty of Vijayanagara, ೧೯೫೬, ಪು.೨೬೫

೩೮. ಚಿದಾನಂದ ಮೂರ್ತಿ.ಎಂ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೯, ಪು.೪೩೦-೪೩೧

೩೯. ಶ್ರೀಕಂಠಶಾಸ್ತ್ರಿ, ಭಾರತೀಯ ಸಂಸ್ಕೃತಿ, ೧೯೮೯, ಪು.೨೫೪

೪೦. ಚನ್ನಬಸಪ್ಪ ಪಾಟೀಲ, ಪೂರ್ವೋಕ್ತ, ಪು.೨೨

೪೧. ವಿನೋದ್ ಪಾಟೀಲ್, ಕರ್ನಾಟಕದ ಪರಂಪರೆ ಸಂ-೧, ೧೯೯೨, ಪು.೨೬೨

೪೨. ಶೀಲಾಕಾಂತ ಪತ್ತಾರ ೨೦೦೦ ಬಾದಾಮಿ-ಒಂದು ಸಾಂಸ್ಕೃತಿಕ ಅಧ್ಯಯನ ಪು.೬೧

೪೩. ಮಹಾಲಿಂಗಮ್.ಟಿ.ವಿ, ಪೂರ್ವೋಕ್ತ, ಪು.೩೩

೪೪. ಶ್ರೀಕಂಠಶಾಸ್ತ್ರಿ, ಪೂರ್ವೋಕ್ತ ಪು.೧೯೦

೪೫. ಶೀಲಾಕಾಂತ ಪತ್ತಾರ, ಬಾದಾಮಿ ಚಾಲುಕ್ಯರ ಸಾಂಸ್ಕೃತಿಕ ಅಧ್ಯಯನ, ೨೦೦೦, ಪು.೬೨

೪೬. ಶೇಷನವರತ್ನ(ಅನು), ಮನುಸ್ಮೃತಿ, ಅಧ್ಯಾಯ-೧, ೨೦೦೦, ಪು.೯೦

೪೭. ಶಿವರುದ್ರಸ್ವಾಮಿ.ಎಸ್.ಎನ್, ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, ೨೦೦೦, ಪು.೨೬೧

೪೮. ಶೇಷನವರತ್ನ(ಅನು), ಪೂರ್ವೋಕ್ತ, ಸಂಖ್ಯೆ-೯೧, ಪು.೨೦

೪೯. ಶಿವರುದ್ರಸ್ವಾಮಿ.ಎಸ್.ಎನ್, ಪೂರ್ವೋಕ್ತ, ಪು.೨೦೦

೫೦. ಚೆಲುವ ರಾಜು, ೨೦೦೦ ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಧ್ಯಯನ ಪು.೬೮

೫೧. ಅದೇ ಪು.೬೯

೫೨. ಶ್ರೀಕಂಠಶಾಸ್ತ್ರಿ, ಪೂರ್ವೋಕ್ತ, ಪು.೧೯೪

೫೩. ತಿಪ್ಪೇರುದ್ರಸ್ವಾಮಿ.ಎಚ್, ಪೂರ್ವೋಕ್ತ ಪು.೧೩೫.೧೩೯

೫೪. ಕಾಳಿದಾಸ, ಅಭಿಜ್ಞಾನ ಶಾಕುಂತಲಾ, ಪು.೪೨

೫೫. ಚಿದಾನಂದಮೂರ್ತಿ.ಎಂ, ಪೂರ್ವೋಕ್ತ, ಪು.೪೮

೫೬. ಪದ್ಮ.ಎಂ.ಬಿ, ವಿ.ಜ.ಅ.ಸಂ-೧. ೧೯೯೬, ಪು೭೬

೫೭. South Indian Inscription Volume-IV, ಪು.೨೯೫

೫೮. ಪದ್ಮ.ಎಂ.ಬಿ, ವಿ.ಜ.ಅ.ಸಂ-೧, ೧೯೯೬, ಪು.೧೮

೫೯. ಕೆ.ಎಸ್.ಸತೀಶ್, ವಿಜಯನಗರ ಕಾಲದ ಶೈವದೇವಾಲಯಗಳು (ಕೆ.ಪಿ.ಪ್ರಅಪ್ರಕಟಿತ), ೨೦೦೪, ಪು.೨೧೬

೬೦. IA-IX, ಕ್ರಿ.ಶ. ೭೭೮, ಪು.೧೨೪

೬೧. E.L-XV, ಕ್ರಿ.ಶ.೧೦೫೪

೬೨. K.L-V, ನಂ.೧೨೩, ಕ್ರಿ.ಶ.೧೫೬೩

೬೩. E.L-XV, ನಂ.ಎಫ್ ಕ್ರಿ.ಶ.೧೦೬೦

೬೪. ಕನಕದಾಸರ ರಾಜತರಂಗಿಣಿ, ೧೫೫೫, ಪು.೨೬೯

೬೫. ಚಿದಾನಂದಮೂರ್ತಿ.ಎಂ, ಪೂರ್ವೋಕ್ತ ಪು.೧೮೦

೬೬. ನಾಗೇಗೌಡ.ಎಚ್.ಎಲ್ (ಸಂ)ಪ್ರವಾಸಿ ಕಂಡ ಇಂಡಿಯಾ ಸಂ-೨, ೧೯೬೬ ಪು.೨೨, ೨೬೦

೬೭. ಅದೇ ಪು.೨೯೨

೬೮. ವಿರುಪಾಕ್ಷ ಪಂಡಿತ, ಚೆನ್ನಬಸವಪುರಾಣ, ೧೫೮೫ ಪು.೧೭೩

೬೯. ಸರಸ್ವತಿ.ಎನ್. ವಿ.ಅ.ಸಂ-೨. ೧೯೯೬, ಪು.೭, ೧೪, ೧೬, ೧೭, ೧೮

೭೦. E.C-VI KD 102 1141 A.D

೭೧. SI-IX 249 1141 A.D

೭೨. ಭೂಸನೂರ ಮಠ, ವಿಜಯಕಲ್ಯಾಣ, ೧೯೮೮, ಪು.೨೨೨

೭೩. V.P.R 1984-87 No.129

೭೪. V.P.R 1984-87 No.103

೭೫. ಗೋಪಾಲರಾವ್.ಎಚ್.ಎಸ್, ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು -ಒಂದು ಅಧ್ಯಯನ, ೧೯೯೩, ಪು.೧೭೭

೭೬. ಕಾಣೆ.ಪಿ.ವಿ, History of Dharmashastra, ೧೯೩೦, ಪು.೮೮೨

೭೭. AR, ೧೯೦೪, ನಂ.೧೫೦

೭೮. ವಿರುಪಾಕ್ಷ ಪುಜಾರಹಳ್ಳಿ , "ಕಾಮಲಾಪುರ ದಾದಾಪೀರ ಛತ್ರ ಸಾಪ್ತಹಿಕ ಪ್ರಭ ವಿಜಯ ಕರ್ನಾಟಕ", ೧೯೯೭, ಪು.೩

೭೯. SII Vol-IV No.267

೮೦. V.P.R 1984-87, ಸಂ-೧

೮೧. V.P.R 1984-87, ಸಂ-೭೩

೮೨. A.R 1889 No.16

೮೩. ತೀ.ನಂ.ಶ್ರೀಕಂಠಯ್ಯ, ಭಾರತೀಯ ಕಾವ್ಯ ಮಿಮಾಂಸೆ, ೧೯೯೫, ಪು.೯೫

೮೪. Robert Swell, ಪೂರ್ವೋಕ್ತ, ಪು.೧೬೩

೮೫. V.P.R 1984-87, ಸಂ-೧೦೫

೮೬. V.P.R 1983-84 No.15

೮೭. A.R 1904 No.150

೮೮. A.R 1902 No.22

೮೯. V.P.R 1984-87 No.98

೯೦. V.P.R 1984-87 No.128

೯೧. V.P.R 1984-87 No.110

೯೨. V.P.R 1984-87 No.108

೯೩. A.R.IE 1938-39 No.444

೯೪. ಸಿ.ಮಹಾದೇವ ಮತ್ತು ಇತರರು, ಹೊಸಪೇಟೆ ತಾಲೂಕು ದರ್ಶನ, ೨೦೦೨, ಪು.೩೪೯

೯೫. ಅದೇ ಪು.೩೪೮

೯೬. ಹಂಜೆ ಅಪ್ಪಣ್ಣ, ಶಿಗ್ಗಾಂವ ಪ್ರದೇಶದ ಪುರಾತತ್ವ, ೨೦೦೬, ಪು.೩೦೮

೯೭. ಸಿ.ಎಸ್.ವಾಸುದೇವನ್, ಹಂಪಿ ಪರಿಸರದ ಕೆರೆಗಳು, ೨೦೦೧, ಪು.೩೩.೩೪

೯೮. ಅದೇ ಪು.೩೩-೩೫

೯೯. SI I Vol-IV 1996 No.267

೧೦೦. ಕಲಬುರ್ಗಿ.ಎಂ.ಎಂ, ಪೂರ್ವೋಕ್ತ, ಪು.೫೧೭

೧೦೧. ಡಾಮಾನಿಕ್.ಜೆ, ಡೇವಿಸನ್ ಜನ್‌ಕಿನ್ ಪು.೪೯-೫೬

೧೦೨. ವಾಸುದೇವನ್.ಸಿ.ಎಸ್, ಪೂರ್ವೋಕ್ತ, ಪು.೬೦

೧೦೩. ಸಿವೆಲ್.ಆರ್, ಪೂವೋಕ್ತ, ಪು.೨೩೬-೯೦

೧೦೪. ವಾಸುದೇವನ್.ಸಿ.ಎಸ್, ಪೂರ್ಪೋಕ್ತ, ಪು.೬೧

೧೦೫. ರಾಬರ್ಟ್ ಸಿವಿಲ್, ಪೂರ್ವೋಕ್ತ, ಪು.೩೬೫

೧೦೬. ವಾಸುದೇವನ್.ಸಿ.ಎಸ್, ಪೂರ್ವೋಕ್ತ, ಪು.೭೬

೧೦೭. ವಿ.ಶಾ.ಸಂ.೧, ೧೯೯೬, ಸಂ.೭೭

೧೦೮. ವಿ.ಶಾ.ಸಂ.೧, ೧೯೯೬, ಸಂ.೫೬

೧೦೯. ವಿ.ಶಾ.ಸಂ.೧, ೧೯೯೬, ಸಂ.೨೬೭

೧೧೦. ವಿ.ಶಾ.ಸಂ.೧, ೧೯೯೬, ಸಂ.೫೪

೧೧೧. ವಿ.ಶಾ.ಸಂ.೧, ೧೯೯೬, ಸಂ.೧೪೧

೧೧೨. ವಿ.ಶಾ.ಸಂ.೧, ೧೯೯೬, ಸಂ.೪೧೨

೧೧೩. A.R, 1889, No.16

೧೧೪. V.P.R, 1984-87, No.129

೧೧೫. SII I Vol.IV, No.267

೧೧೬. V.P.R, 1983-84, No.15

೧೧೭. A.R, 1904, No.18

೧೧೮. A.R, 1904, No.22

೧೧೯. V.P.R, 1984-87, No.98

೧೨೦. V.P.R, 1984-87, No.110

೧೨೧. V.P.R, 1984-87, No.108

೧೨೨. A.R I.E, 1938, No.444

೧೨೩. ಶಿವರುದ್ರಸ್ವಾಮಿ.ಎಸ್.ಎನ್, ಪೂರ್ವೋಕ್ತ, ಪು.೨೫೮

೧೨೪. ವಾಸುದೇವನ್.ಸಿ.ಎಸ್, ಪೂರ್ವೋಕ್ತ, ಪು.೩೦

೧೨೫. ಸಿ.ಮಹಾದೇವ, ಪೂರ್ವೋಕ್ತ, ಪು.೩೪೯

೧೨೬. A.R 1889 No.16

೧೨೭. ವಾಸುದೇವನ್.ಸಿ.ಎಸ್, ಪೂರ್ವೋಕ್ತ, ಪು.೭೭

೧೨೮. A.R.S.I.E 1984-87 No.54

೧೨೯. ಸಿ.ಮಹಾದೇವ, ಪೂರ್ವೋಕ್ತ, ಪು.೩೯೨

೧೩೦. ಸದಾನಂದ ಕನವಳ್ಳಿ , ಮರೆತು ಹೋಗಿರುವ ಸಾಮ್ರಾಜ್ಯ, ೧೯೯೨, ಪು.೪೨

೧೩೧. ಎ.ಎಸ್.ನಂಜುಂಡಸ್ವಾಮಿ, ವಿಜಯನಗರ ಇತಿಹಾಸ, ೧೯೯೧, ಪು.೧೦೧

೧೩೨. ಎಂ.ವಿ.ಕೃಷ್ಣಪ್ಪ, ಚೆನ್ನಬಸಪ್ಪ ಪಾಟೀಲ, ವಿ.ಅ.ಸಂ–೫, ೨೦೦೦, ಪು.೯೮

೧೩೩. ಅದೇ ಪು.೧೦೦

೧೩೪. ಎಸ್.ಎನ್.ಶಿವರುದ್ರಸ್ವಾಮಿ, ಪೂರ್ವೋಕ್ತ, ಪು.೨೬೦

೧೩೫. ಸಿ.ಮಹಾದೇವ, ಪೂರ್ವೋಕ್ತ, ಪು.೧೯೩

೧೩೬. ARIE 1975-76 No.95

೧೩೭. V.P.R 1983-84 No.62

೧೩೮. A.R 1922 No.695

೧೩೯. ಮಹಾಲಿಂಗಮ್.ಟಿ.ವಿ, ಪೂರ್ವೋಕ್ತ, ಪು.೧೦೧

೧೪೦. ದೀಕ್ಷಿತ್.ಜಿ.ಎಸ್, ಪೂರ್ವೋಕ್ತ, ಪು.೨೩೧

೧೪೧. ಕನ್ನಡ–ಕನ್ನಡ ಕಸ್ತೂರಿ ಕೋಶ ಪು.೫೧೦

೧೪೨. ಇಂಗ್ಲೀಷ–ಕನ್ನಡ ನಿಘಂಟು, ಮೈಸೂರು ವಿಶ್ವವಿದ್ಯಾಲಯ, ೧೯೯೯ ಪು.೭೮೫

೧೪೩. ರಹಮತ್ ತರೀಕೆರೆ, ಕರ್ನಾಟಕ ಕನ್ನಡಿ, ೧೯೯೯ ಪು.೧೦೪

೧೪೪. ವೆಂಕಟೇಶ ಜೋಯಿಸ್.ಕೆ.ಜಿ. ವಿಜಯನಗರ ಚರಿತ್ರೆಯಲ್ಲಿ ಕೆಳದಿಯ ಅರಸರು, ೧೯೯೬, ಪು.೬೬

೧೪೫. ಅದೇ ಪು.೭೮

೧೪೬. ಕಲ್ಬುರ್ಗಿ.ಎಮ್.ಎಮ್, ಮಾರ್ಗ ಸಂ-೩, ೧೯೯೮, ಪು.೧೪-೫೫

೧೪೭. ಸತೀಶ.ಕೆ, ವಿಜಯನಗರ ಕಾಲದ ಶೈವ ದೇವಾಲಯಗಳು, ೨೦೦೪ ಪು.೫೧

೧೪೮. Sir.John Marshail Mohemjodaro and Indus Civilization - I P.52-54

೧೪೯. ಕಡಪಟ್ಟಿ.ಎಮ್.ಎನ್. ಪ್ರಾಚೀನ ಕರ್ನಾಟಕದಲ್ಲಿ ಶೈವ ಧರ್ಮ (ಅಪ್ರಕಟಿತ ಪಿ.ಎಚ್.ಡಿ. ಪ್ರಬಂಧ), ೨೦೦೫ ಪು.೧೩-೧೬

೧೫೦. ಅದೇ ಪು.೧೬-೧೯

೧೫೧. ಕೆ.ಶಿವಲೀಲಾ, ಕಾಮಲಾಪುರದ ಶಾಸನಗಳು ಮತ್ತು ದೇವಾಲಯಗಳು, ೨೦೦೩, ಪು.೨೩

೧೫೨. ರಾಘವೇಂದ್ರರಾವ್.ವಿ, ವಿಜಯನಗರ, ೧೯೪೯, ಪು.೯೩-೯೪

೧೫೩. ಶ್ರೀಕಂಠಶಾಸ್ತ್ರಿ.ಎಸ್, ಪೂರ್ವೋಕ್ತ, ಪು.೨೬೧

೧೫೪. ಶ್ರೀಕಂಠಯ್ಯ .ಕೆ, ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಜನಜೀವನ ಚರಿತ್ರೆ, ೧೯೮೩ಪು.೧೧-೧೫

೧೫೫. ರಾಜಶೇಖರ .ಎಸ್, Rashtrakuta Arts in Karnataka, 1991, P.93-98

೧೫೬. ರಾಘವೇಂದ್ರರಾವ್.ವಿ, ಪೂರ್ವೋಕ್ತ, ಪು.೯೩-೧೦೩

೧೫೭. ಮಹಾದೇವ.ಸಿ., ಸುಬ್ಬಣ್ಣ ರೈ, ಮಾಧವ ಪೇರಾಜೆ, ಪೂರ್ವೋಕ್ತ, ಪು.೨೦೦

೧೫೮. A.R.I.E, 1984-87, No.95

೧೫೯. V.P.R, 1984-87, No.89

೧೬೦. V.P.R, 1984-87, No.105

೧೬೧. V.P.R, 1983-84, No.04

೧೬೨. V.P.R, 1983-84, No.03

೧೬೩. V.P.R, 1984-87, No.08

೧೬೪. V.P.R, 1983-84, No.05

೧೬೫. V.P.R, 1983-84, No.54

೧೬೬. V.P.R, 1984-87, No.77

೧೬೭. V.P.R, 1984-87, No.125

೧೬೮. A.R.I.E , 1907-08, No.500

೧೬೯. V.P.R, 1984-87, No.98

೧೭೦. V.P.R, 1983-84, No.22

೧೭೧. V.P.R, 1984-87, No.82

೧೭೨. V.P.R, 1984-87,No.132

೧೭೩. V.P.R, 1984-87, No.131

೧೭೪. V.P.R, 1984-87, No.130

೧೭೫. V.P.R, 1991-92, No.03

೧೭೬. V.P.R, 1984-87, No.142

೧೭೭. V.P.R, 1984-87, No.111

೧೭೮. V.P.R, 1984-87, No.137

೧೭೯. V.P.R, 1983-84, No.32

೧೮೦. V.P.R, 1984-87, No.83

೧೮೧. V.P.R, 1984-87, No.84

೧೮೨. V.P.R, 1984-87, No.126

೧೮೩. V.P.R, 1983-87, No.43

೧೮೪. Nagaswamy.R, Tamil Coins, 1981, P.164

೧೮೫. ನರಸಿಂಹ ಮೂರ್ತಿ.ಎ.ವಿ, ವಿಜಯನಗರ ನಾಣ್ಯ ಸಂಪತ್ತು, ೧೯೯೬, ಪು.೮೮

೧೮೬. ಅಪ್ಪಣ್ಣ ಎನ್.ಹಂಜೆ. ಶಿಗ್ಗಾಂವ್ ಪ್ರದೇಶದ ಪುರಾತತ್ವ, ಪಿ.ಎಚ್.ಡಿ.ಪ್ರಬಂಧ, ೨೦೦೬ ಕ.ವಿ.ವಿ.ಧಾರವಾಡ, ಪು.೨೭೪

೧೮೭. ಕೃಷ್ಣಪ್ಪ.ಎಂ.ವಿ. ಚನ್ನಬಸಪ್ಪ.ಎಸ್.ಪಾಟೀಲ್, ವಿ.ಅ.ಸಂ-೫, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೧೯೯೯ ಪು.೧೩೦

೧೮೮. ಕೃಷ್ಣಪ್ಪ.ಎಂ.ವಿ. ಚನ್ನಬಸಪ್ಪ.ಎಸ್.ಪಾಟೀಲ್, ಪೂರ್ವೋಕ್ತ, ೧೯೯೯, ಪು.೧೩೧

೧೮೯. ಅಪ್ಪಣ್ಣ ಎನ್.ಹಂಜೆ, ಪೂರ್ವೋಕ್ತ, ಪು.೨೭೪

೧೯೦. ಕೃಷ್ಣಪ್ಪ, ಪೂರ್ವೋಕ್ತ, ಪು.೧೩೦

೧೯೧. ಬಸವರಾಜು ಮಲ್ಲಶೆಟ್ಟಿ ಎನಗಿಂತ ಕಿರಿಯರಿಲ್ಲ, ಸಿ.ಟಿ.ಎಂ.ಕೊಟ್ರಯ್ಯ ಹಂಪೆಯಲ್ಲಿ ವೀರಶೈವ ಪ್ರಾಚೀನ ಕುರುಹುಗಳು, ೧೯೯೮, ಪು.೨೯೪

೧೯೨. ಮೃತ್ಯುಂಜಯ ಹೊರಕೇರಿ (ಸಂ) ಪ್ರಭು ಪ್ರಕಾಶ, ಪು.೬೬

೧೯೩. ಅದೇ ಪು.೬೬

೧೯೪. ಸಿ.ಟಿ.ಎಂ.ಕೊಟ್ರಯ್ಯ ಪೂರ್ವೋಕ್ತ, ಪು.೨೧-೨೨

೧೯೫. ಬಸವರಾಜ ಮಲ್ಲಶೆಟ್ಟಿ ಪೊರ್ವೋಕ್ತ ಪು.೨೬೫-೨೬೬

೧೯೬. ಮೃತ್ಯುಂಜಯ ಹೊರಕೇರಿ, ಪೂರ್ವೋಕ್ತ, ಪು.೬೬

೧೯೭. ಎಂ.ವಿ.ಚನ್ನಬಸಪ್ಪ, ಎನ್.ಪಾಟೀಲ, ವಿಜಯನಗರ ಅಧ್ಯಯನ ಸಂ–೫, ೧೯೯೯, ಪು.೧೩೩

೧೯೮. ಕೃಷ್ಣಪ್ಪ ೧೯೯೯ ವಿ.ಅ.ಸಂ.–೫, ಪು.೧೩೩

೧೯೯. ಬಸವರಾಜ ಮಲ್ಲಶೆಟ್ಟಿ, ಪೂರ್ವೋಕ್ತ, ಪು.೨೭೭

೨೦೦. Vijayanagar Raja Progress Research 1985 Mysore P-23

೨೦೧. ಈ ಧರ್ಮದ ನಿರೂಪಣೆಯಲ್ಲಿ ಡಾ॥ ಎಂ.ಚಿದಾನಂದ ಮೂರ್ತಿ ಅವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ೧೯೬೬ ಡಾ॥ಎಸ್.ಕೆ.ರಾಮಚಂದ್ರ ರಾವ್ ಅವರ ಮೂರ್ತಿಶಿಲ್ಪ ನೆಲ–ಹಿನ್ನೆಲೆ ೧೯೭೫ ಮತ್ತು ಡಾ॥ ಶ್ರೀನೀವಾಸ ಪಾಡಿಗಾರ ಅವರ ವಿಷ್ಣು ಕಲ್ಪ ಇನ್ ಕರ್ನಾಟಕ ೧೯೯೬ ಕೃತಿಗಳಿಂದ ಉಪಕೃತನಾಗಿದ್ದಾನೆ.

೨೦೨. ಭಂಡಾರ್‌ಕರ್.ಆರ್.ಜಿ. ಪೂರ್ವಕ್ತ, ಪು.೪೭

೨೦೩. Radhakrishnan, Indian Philisophy, 1973, P-492-493

೨೦೪. ಚಿದಾನಂದ ಮೂರ್ತಿ, ಪೂರ್ವೋಕ್ತ, ಪು.೧೪೬

೨೦೫. ಅಪ್ಪಣ್ಣ.ಎನ್.ಹಂಜೆ ಪ್ರದೇಶದ ಪುರಾತತ್ವ, ಪೂರ್ವೋಕ್ತ, ಪು.೨೮೧

೨೦೬. ಶಿಗ್ಗಾಂವ್ ಪ್ರದೇಶದ ಪುರಾತತ್ವ, ಪೂರ್ವೋಕ್ತ, ಪು.೨೮೩

೨೦೭. ರಾಘವೇಂದ್ರ ರಾವ್.ವಿ. ೧೯೮೪ ಪು.೯೩–೧೦೩

೨೦೮. ಸಿ.ಮಹಾದೇವ ಮತ್ತು ಇತರರು, ಹೊಸಪೇಟೆ ತಾಲೂಕು ದರ್ಶನ, ಪೂರ್ವೋಕ್ತ, ಪು.೨೦೯

೨೦೯. A.R.I.E. 1992, No.679

೨೧೦. A.R.S.I.E, 1889, No.21

೨೧೧. A.R.I.E, 1989, No.20

೨೧೨. V.P.R, 1984-87, No.91

೨೧೩. V.P.R, 1984-87, No.125

೨೧೪. A.R.I.E, 1904, No.22

೨೧೫. A.R.I.E, 1889, No.24

೨೧೬. A.R.I, 1922, No.695

೨೧೭. A.R, 1889, No.16

೨೧೮. V.P.R, 1989, No.19

೨೧೯. V.P.R, 1984-87, No.65

೨೨೦. V.P.R, 1984-87, No.128

೨೨೧. V.P.R, 1984-87, No.134

೨೨೨. V.P.R, 1984-87, No.96

೨೨೩. V.P.R, 1983-84, No.67

೨೨೪. V.P.R, 1983-84, No.68

೨೨೫. V.P.R, 1984-87, No.95

೨೨೬. V.P.R, 1983-84, No.29

೨೨೭. A.R.S.I.E, 1988-89, No.32

೨೨೮. V.P.R, 1984-87, No.80

೨೨೯. ಕೈಲಾಸ ಚಂದ್ರ ಸ್ವಾಮಿ (ಅನು) ಭುಜಬಲಶಾಸ್ತ್ರಿ ಜೈನಧರ್ಮ ೧೯೮೧ ಪು.೭೫

೨೩೦. Saletore B.A. Mediaval Jainism P.2

೨೩೧. ಚಿದಾನಂದ ಮೂರ್ತಿ.ಎಮ್. ಪೂರ್ವೋಕ್ತ ಪು.೭೩

೨೩೨. ಷೇಕ್ ಅಲಿ.ಬಿ, ಪೂರ್ವೋಕ್ತ ಪು.೪೭೬

೨೩೩. Yocobi Encylopaedio of Religion and Ethics PP.No.465-466

೨೩೪. ಕರ್ನಾಟಕ ಪರಂಪರೆ ಸಂ-೨, ಕರ್ನಾಟಕ ಸರ್ಕಾರ ಪು.೯

೨೩೫. ನರಸಿಂಹಾಚಾರ್.ಆರ್, ಪೂರ್ವೋಕ್ತ ಪು.೮೨-೮೩

೨೩೬. ಅದೇ ಪು.೫೦೨-೫೧೦

೨೩೭. A.R.I.E. 1889 No.171

೨೩೮. ಕ.ವಿ.ಶಾ.ಸ. - ೩, ಪು.೩೪೭

೨೩೯. A.R., 1889, No.18

೨೪೦. ಕುರಾನ್ ಪು.೫

೨೪೧. ನಂದಿಮಠ.ಎಸ್.ವಿ, ಕರ್ನಾಟಕದ ಧರ್ಮಗಳು, ೧೯೮೩, ಪು.೩೫೧

೨೪೨. ರಂಗಸ್ವಾಮಯ್ಯ .ಜಿ.ಆರ್. ಮುಸ್ಲಿಂ ವಾಸ್ತು ಶಿಲ್ಪ ಅವಲೋಕನ ಕರ್ನಾಟಕ ಪರಂಪರೆಯ ಸಮೀಕ್ಷೆ, ೧೯೮೫, ಪು.೧೩೨

೨೪೩. V.P.R, 1884-87, No.118

೨೪೪. A.R, 1904, No.180

೨೪೫. V.P.R, 1884-87, No.120

೨೪೬. ಚಿದಾನಂದ ಮೂರ್ತಿ.ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೮೬, ಪು.೨೦೫

೨೪೭. ತಿಪ್ಪೇರುದ್ರ ಸ್ವಾಮಿ.ಎಚ್, ಪೂರ್ವೋಕ್ತ, ಪು.೨೧೮

೨೪೮. ಚಿದಾನಂದ ಮೂರ್ತಿ.ಎಂ, ಪೂರ್ವೋಕ್ತ ಪು.೨೦೭

೨೪೯. ಹಿರೇಮಠ. ಎಸ್.ಎಸ್. ಪಾಶುಪತ ದರ್ಶನ, ೨೦೦೩, ಪು. ೫೨

೨೫೦. South Indian Inscription Volume IX Part I No.137

೨೫೧. ಹಿರೇಮಠ. ಎಸ್.ಎಸ್. ಪೂರ್ವೋಕ್ತ ಪು. ೫೩

೨೫೨. ತಿಪ್ಪೇರುದ್ರಸ್ವಾಮಿ.ಎಚ್, ಪೂರ್ವೋಕ್ತ ಪು.೨೩೧

೨೫೩. ಚಿದಾನಂದ ಮೂರ್ತಿ.ಎಂ. ಪೂರ್ವೋಕ್ತ ಪು.೧೮೯

೨೫೪. ಬಸವರಾಜ ಮಲಶೆಟ್ಟಿ (ಸಂ), ಹಂಪೆಯಲ್ಲಿನ ವೀರಶೈವ ಪ್ರಾಚೀನ ಕುರುಹುಗಳು, ೧೯೮೮ ಪು.೨೭೭

೨೫೫. V.P.R, 1985, ಮೈಸೂರು ಪು.೨೩

೨೫೬. ತಿಪ್ಪೇರುದ್ರಸ್ವಾಮಿ.ಎಚ್, ಪೂರ್ವೋಕ್ತ, ಪು.೨೨೪

೨೫೭. V.P.R, 1985, ಮೈಸೂರು, ಪು.೨೩

೨೫೮. ಬಸವರಾಜ ಮಲಶೆಟ್ಟಿ (ಸಂ), ಪೂರ್ವೋಕ್ತ, ಪು.೨೨೪

೨೫೯. M.A.R 1914-15 P.108

೨೬೦. ವೆಂಕಟರತ್ನಂ.ಎ.ವಿ. ೧೯೭೪, ಪು.೫೮-೬೦

೨೬೧. A.R.I.E. 1975-76 No.95

೨೬೨. ವೆಂಕಟರತ್ನಂ.ಎ.ವಿ, ಪೂರ್ವೋಕ್ತ, ಪು.೫೮-೬೦

೨೬೩. A.R, 1904, No.20

೨೬೪. ವೆಂಕಟರತ್ನಂ.ಎ.ವಿ. ಪೂರ್ವೋಕ್ತ, ಪು.೫೨

೨೬೫. ಅದೇ ಪು.೩೨

೨೬೬. ಅದೇ ಪು.೯೦

೨೬೭. A.R, 1889, No.24

೨೬೮. ಮಹಾಲಿಂಗನ್.ಟಿ.ವಿ, ಪೂರ್ವೋಕ್ತ, ಪು.೩೭೨

೨೬೯. E.C.R No. P.60

೨೭೦. .E I Volume-I No.85

೨೭೧. V.P.R, 1984-87, No.89

೨೭೨. V.P.R. 1984-87, No.77,78,124

೨೭೩. V.P.R, 1984-87, No.89

୨୭୪. A.R, 1922, No.679

୨୭୫. A.R.S.I.E, 1989, No.2

୨୭୬. V.P.R, 1984-87, No.91

୨୭୭. V.P.R, 1984-87, No.125

୨୭୮. A.R.S.I.E, 1908, No.500

୨୭୯. A.R, 1904, No.22

୨୮୦. A.R, 1922, No.695

୨୮୧. A.R, 1889, No.16

୨୮୨. V.P.R, 1983-84, No.64

୨୮୩. V.P.R, 1983-84, No.43

୨୮୪. A.R.S.I.E, 1889, No.22

୨୮୫. V P.R, 1983-84, No.68

୨୮୬. V.P.R, 1983-84, No.92

୨୮୭. A.R.I.E, 1975-76, No.95

୨୮୮. A.R, 1922, No.695



# ಅಧ್ಯಾಯ-೩

## ವಾಸ್ತುಕಲೆ ಅರ್ಥ-ಮಹತ್ವ

"ಅಮರ್ತ್ಯಾಶ್ಚೈವ ಮರ್ತ್ಯಾಶ್ವಯತ್ರಯತ್ರ
ವಸಂತಿ ಹಿ ತದ್ವಸ್ತು ಇತಿಮತಃ"

ಎಂಬ ಮಹಮತ ಗ್ರಂಥದ ಈ ವಾಕ್ಯವು ವಾಸ್ತು ಶಬ್ದವನ್ನು ಎರಡು ಹಂತಗಳಲ್ಲಿ ವಿವರಿಸಿದೆ. ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ ವಾಸ್ತು ಎಂದು ಹೆಸರು. ವಾಸ್ತುವನ್ನು ಆಶ್ರಯಿಸಿದ್ದೇ ವಾಸ್ತು ಎಂದೆನಿಸಲ್ಪಡುತ್ತದೆ.[೧] 'ಪ್ರಸಾದಾದೀನಿ ವಾಸ್ತೂನಿ ವಸ್ತುತ್ವಾದ್ ವಸ್ತು ಸಂಶ್ರಯಾತ್' ಎಂದು ಅಮರಕೋಶದ ಸೂಚನೆಯಂತೆ ವಸ್ತುವಿನಿಂದ ರಚಿತವಾದ ವಾಸ ಯೋಗ್ಯವಾದ ವಾಸ್ತುವಿನ ಮೇಲೆ ರಚಿತವಾದ ಎಲ್ಲಾ ರಚನೆಗಳೇ ವಾಸ್ತುರಚನೆ. ಇದು ಮಾನವನ ನಾಗರೀಕತೆಗೆ ಮಾನ ದಂಡವಾಗಿ ಯುಗ-ಯುಗಾಂತರಗಳಿಂದ ಆತನ ಬುದ್ಧಿವಿಕಾಸದ ಬಗೆಯನ್ನು ಖಚಿತ ಪಡಿಸುವ ಪ್ರತ್ಯಕ್ಷ ಸಾಧನವಾಗಿದೆ.[೨] ಅರವತ್ತನಾಲ್ಕು ಕಲೆಗಳಲ್ಲಿ ಇದು ಒಂದಾಗಿದೆ. ಮಾನಸಾರ ಕೃತಿಯಲ್ಲಿದ್ದ ಬ್ರಹ್ಮನ ನಾಲ್ಕು ಮುಖಗಳಿಂದ ಜನಿಸಿದ ವಿಶ್ವಕರ್ಮ ಮಯ, ತ್ವಷ್ಟ್ರ ಮತ್ತು ಮನುವಿನ ಸುಪುತ್ರರಾದ ಸ್ಥಪತಿ ಸೂತ್ರಗ್ರಾಹಿ, ವರ್ಧಕಿ ಮತ್ತು ತಕ್ಷಕರಿಂದ ವಾಸ್ತುಕಲೆ ಬೆಳೆಯಿತು.[೩] ಶಿಲ್ಪರತ್ನ, ವಾಸ್ತುಚಂದ್ರಿಕ ಮೊದಲಾದ ಕೃತಿಗಳೂ, ಸುಪ್ರಭೇದ ಕಾರ್ಮಿಕ ಮೊದಲಾದ ಆಗಮಗಳೂ, ಮತ್ಸಪುರಾಣ ಇವೆಲ್ಲವೂ ವಾಸ್ತುಕಲೆಗೆ ದೈವಿಕವಾದ ಮೂಲವನ್ನೇ ಸೂಚಿಸಿವೆ. ವಾಸ್ತು ಪುರುಷನು ಆಕಾಶದಿಂದ ತನ್ನ ಕೈಕಾಲುಗಳನ್ನು ಮಡಚಿಕೊಂಡು ಈಶಾನ್ಯಕ್ಕೆ ತಲೆಯನ್ನು ಮಾಡಿ, ಭೂಮಿಯ ಮೇಲೆ ಬಿದ್ದಾಗ ಚತುಷ್ಕೋಣಾಕಾರವಾಗಿ, ವಾಸ್ತುಮಂಡಲ ನಿರ್ಮಾಣವಾಯಿತೆಂದೂ, ಅವನ ಹೃದಯದಲ್ಲಿ ಬ್ರಹ್ಮ ಮತ್ತು ಇತರ ಅಂಗಗಳಲ್ಲಿ ಎಲ್ಲ ದೇವತೆಗಳು ನೆಲಸಿದರು.[೪] ಈ ಪರಿಕಲ್ಪನೆಯ ಮೂಲ ಆಶಯವೇ ದೈವಿಕ ಶಕ್ತಿ ಕಾಣುವುದಾಗಿದೆ.

**ದೇವಾಲಯ:** ದೇವಾಲಯಗಳು ಮಾನವನ ಬದುಕಿನಲ್ಲಿ ಮಹತ್ತರ ಪಾತ್ರ ವಹಿಸಿವೆ. ಒಂದು ದೇವಾಲಯ ಎಂಬುದು ಸಾಮೂಹಿಕ ಪೂಜೆ ಪ್ರಾರ್ಥನೆಗಳನ್ನು ಸಲ್ಲಿಸಲು ಅನುಕೂಲವಿರುವ ಒಂದು ತಾಣ.[೫] ದೇವಾಲಯ ಎಂದರೆ ದೇವರ ಆಲಯ ಎಂದರ್ಥ. ಆಲಯ ಎಂದರೆ ಕಟ್ಟಡ. ದೇವರು ಇರತಕ್ಕ ಸ್ಥಾನ, ಎಡೆ, ಜಾಗ ಎಂದರ್ಥ.[೬] ದೇವಾಲಯ ಸಮಾಜದ ಧಾರ್ಮಿಕ ಶ್ರದ್ಧೆ

ಹಾಗೂ ಭಕ್ತಿಯ ಪ್ರತೀಕ.[೭] ಇದು ದೇವಾಲಯದ ಭವ್ಯ ಸಂಸ್ಕೃತಿಯ ಪರಂಪರೆಯ ನಾಡಿಯನ್ನು ಹಿಡಿದು ನಡೆಸುತ್ತಿದ್ದು ಸಾಂಸ್ಕೃತಿಕ ಕೇಂದ್ರ ಎಂದೆನಿಸಿದೆ.[೮]

**ಉಗಮ ಮತ್ತು ಬೆಳವಣಿಗೆ:** ಮಾನವ ತನ್ನ ಸುತ್ತಲಿನ ನಿಸರ್ಗದಲ್ಲಿ ನಡೆಯುವ ಬದಲಾವಣೆಗಳ ಹಿನ್ನಲೆಯಲ್ಲಿ ವೀಕ್ಷಿಸಿದಾಗ ತನ್ನನ್ನು ನಡೆಸಲು ಯಾವುದೋ ಒಂದು ಅನಂತ ಶಕ್ತಿ ಇದೆ ಎಂಬ ಅರಿವು ಉಂಟಾದಾಗ ಈ ಶಕ್ತಿಗೆ ಒಂದು ರೂಪಕೊಟ್ಟನು. ಈ ರೂಪಕ್ಕೆ ರಕ್ಷಣಾರ್ಥವಾಗಿ ಪ್ರತ್ಯೇಕ ಆಲಯ ನಿರ್ಮಿಸಲು ಪ್ರಾರಂಭಿಸಿದ. ಇದು ದೇವಾಲಯಗಳ ಹುಟ್ಟಿಗೆ ಕಾರಣವಾಯಿತು.[೯] ಆರಂಭದಲ್ಲಿ ದೇವರ ಪ್ರತಿಮೆ ಸ್ಥಾಪಿಸಲು ಚಿಕ್ಕ ಮಂಟಪ ಕಾಲಾನುಕ್ರಮದಲ್ಲಿ ಪೂಜಾವಿಧಿ–ವಿಧಾನಗಳು ಆಚರಣೆಗಳು ಹೆಚ್ಚಿದಂತೆ ದೇವಾಲಯವೂ ವಿಸ್ತಾರ ರೂಪ ಪಡೆಯಿತು. ಪ್ರಾರಂಭದಲ್ಲಿ ಗುಹಾಂತರ ದೇವಾಲಯಗಳನ್ನು ನಿರ್ಮಿಸುತ್ತಿದ್ದನು. ಇದಕ್ಕೆ ಸೂಕ್ತ ಸಾಕ್ಷಿ ಮಂಡಗಪಟ್ಟುವಿನ ಲಕ್ಷತಾಯನದ ಶಾಸನವು ಸಮಕಾಲೀನ ಗುಹಾಂತರ ದೇವಾಲಯಗಳ ಜೊತೆಗೆ ರಾಚನಿಕ ದೇವಾಲಯಗಳು ಪ್ರಚಲಿತದಲ್ಲಿದ್ದವೆಂದು ಉಲ್ಲೇಖೀಸಿದೆ.[೧೦] ಕ್ರಿಪೂ.೨ನೇ ಶತಮಾನದಲ್ಲಿ ಹೆಲಿಯೋಡೊರಸ್‌ನು ವೈಷ್ಣವ ಪಂಥದ ಪರಂಪರೆಯು ವಾಸುದೇವನ ದೇವಾಲಯಕ್ಕೆ ಪ್ರತಿಷ್ಠಾಪಿಸಿದ ಗರುಡ ಸ್ತಂಭವು ದೇವಾಲಯಗಳಿಗೆ ಸಂಬಂಧಿಸಿದಂತೆ ಅತೀ ಪ್ರಾಚೀನ ಆಕರ.[೧೧] ಕನ್ನಡ ನಾಡಿಗೆ ಸೀಮಿತವಾದಂತೆ ಅಂಕೋಲ ಬಳಿಯ ಬೋಳೆಯಲ್ಲಿ ಕ್ರಿಶ ಸುಮಾರು ೧ನೇ ಶತಮಾನದ ಇಟ್ಟಿಗೆ ದೇವಾಲಯ ಪತ್ತೆಯಾಗಿದೆ.[೧೨] ನರಗುಂದ ತಾಲೂಕಿನ ವಾಸದಲ್ಲಿದ್ದ ಶಿವಾಲಯ ಕುರಿತಾಗಿ ಕ್ರಿ.ಶ.೨ನೇ ಶತಮಾನದ ಶಾಸನವೊಂದು ಉಲ್ಲೇಖಿಸಿದೆ.[೧೩] ಬನವಾಸಿ ಕದಂಬ, ಮನೆತನದ ಕಾಲದಲ್ಲಿ ಶಿಲಾ ದೇಗುಲಗಳು ಗುಹಾಲಯದ ಮಾದರಿಯಲ್ಲಿ ಮತ್ತು ರಾಚನಿಕ ದೇವಾಲಯಗಳ ಮಾದರಿಯಲ್ಲಿ ಬೆಳೆದು ಬಂದ ಕಾಲಘಟ್ಟವನ್ನು ಶಿಲಾವಸ್ತುವಿನ ಆರಂಭವೆನ್ನಬಹುದು.[೧೪] ಉದಾ: (ಗೋವಾದ ಆರಮೇಲಂ) (ಹಲಸಿ, ತಾಳಗುಂದ, ಬನವಾಸಿ ಇತ್ಯಾದಿ) ಈ ನಾಡಿನ ವಿವಿಧ ಶೈಲಿ ಮತ್ತು ವಿನ್ಯಾಸಗಳನ್ನು ಅರಿಯಲು ಬಾದಾಮಿ ಚಲುಕ್ಯರಿಂದ ವಿಜಯನಗರ ಅರಸುಮನೆತನಗಳ ವಾಸ್ತು ಶೈಲಿಯಲ್ಲಿ ನೋಡಬಹುದು. ಕರ್ನಾಟಕ ದೇವಾಲಯದ ವಾಸ್ತು ಶೈಲಿ ಬನವಾಸಿ ಕದಂಬದಿಂದ ಹಿಡಿದು ಇದರ ಔನತ್ಯವನ್ನು ಬಾದಾಮಿ ಚಲುಕ್ಯ ಮತ್ತು ಮಾನ್ಯಖೇಟರ, ರಾಷ್ಟ್ರಕೂಟರ ಕಾಲದಲ್ಲಿ ಗಮನಿಸಬಹುದು. ಈ ಪರಂಪರೆಯನ್ನು ಕಲ್ಯಾಣಿ ಚಾಲುಕ್ಯ, ಹೊಯ್ಸಳ, ವಿಜಯನಗರದ ಅರಸರು ಪ್ರೋತ್ಸಾಹಿಸಿದರು. ಈ ಮೇಲೆ ಹೇಳಿದ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ದೇವಾಲಯಗಳು ಸ್ಥಳೀಯ ಪ್ರಭೇದಗಳನ್ನು ಬಳಸಿಕೊಂಡವು. ಇದರಿಂದ ಆಯಾ ಪ್ರದೇಶದಲ್ಲಿ ಉಗಮಗೊಂಡು ವಿಕಾಸಗೊಂಡ ಹಲವು ಶೈಲಿಯ ದೇವಾಲಯಗಳನ್ನು ಭಾರತ ಮತ್ತು ಕನ್ನಡ ನಾಡಿನಲ್ಲಿ ಕಾಣುತ್ತೇವೆ. ಕೆಲವೊಂದು ಶೈಲಿ ಲಕ್ಷಣಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ.

ಈ ಮೇಲೆ ಹೇಳಿದ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಈ ದೇವಾಲಯಗಳು ಸ್ಥಳೀಯ ಪ್ರಭೇಧಗಳನ್ನು ಬೆಳಸಿಕೊಂಡವು. ಇದರಿಂದ ಆಯಾ ಪ್ರದೇಶದಲ್ಲಿ ಉಗಮಗೊಂಡ ಹಲವು ಶೈಲಿಯ ದೇವಾಲಯಗಳನ್ನು ಭಾರತ ಮತ್ತು ಕನ್ನಡ ನಾಡಿನಲ್ಲಿ ಕಾಣುತ್ತೇವೆ. ಕೆಲವೊಂದು ಶೈಲಿಯ ಲಕ್ಷಣಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ.

**ದ್ರಾವಿಡ ಶೈಲಿ:** ಅಜಿತಾಗಮ ಕೃತಿಯಲ್ಲಿ ಕಂಠದಿಂದ ಮೇಲಕ್ಕೆ ಅಷ್ಟಾಸ್ತವಾಗಿರುವುದೇ ದ್ರಾವಿಡ ಶೈಲಿ ಎಂದು ಹೇಳಲಾಗಿದೆ.[೧೫] ಮೂಲದಿಂದ ಸ್ತೂಪಿಯವರೆಗೆ ಆರು ಅಥವಾ ಎಂಟು

ಕೋನವಾಗಿರುವುದು. ಈ ಶೈಲಿಯ ಶಿಖರವು ಬಹುಭುಜವುಳ್ಳದ್ದು ಅಂದರೆ ಆರರಿಂದ ಎಂಟು ಭುಜಗಳನ್ನು ಹೊಂದಿರುತ್ತವೆ. ಕೆಳಗೆ ಆರು ಅಥವಾ ಎಂಟು ಕೋನಗಳು ಮೇಲ್ಗಡೆ ಆಯತಾಕಾರ ಅಥವಾ ಎಂಟು ಕೋನಗಳು ಮೇಲ್ಗಡೆ ಆಯತಾಕಾರ ಅಥವಾ ಎಂಟು ಕೋನವಾಗಿರುತ್ತದೆ. ಇವು ಈ ಶೈಲಿಯ ದೇವಾಲಯದ ಲಕ್ಷಣವಾಗಿದೆ.[೧೬] ಈ ಶೈಲಿಯ ಶಿಖರವು ಮೇಲಕ್ಕೆ ಹೋದಂತೆ ಕ್ರಮೇಣ ಮೆಟ್ಟಿಲಾಗಿಕಿರಿದಾದ ಅಂತಸ್ತುಗಳಿರುತ್ತದೆ. ಪ್ರತಿಯೊಂದು ಅಂತಸ್ತನ್ನು ಪ್ರತಿನಿಧಿಸಲು ಬಾಗು ಕಪೋತಗಳಿರುತ್ತವೆ.[೧೭] ಪ್ರತಿಯೊಂದು ಅಂತಸ್ತನ್ನು ವಿಭಾಗಿಸಲು ದುಂಡು ಕಪೋತಗಳು ಹಾಗೂ ಮೇಲಂತಸ್ತುಗಳ ಸುತ್ತಲೂ ಇರುವ ಇಕ್ಕಟ್ಟಾದ ತೆರೆದ ಅಂಕಣಗಳು ಈ ಶೈಲಿಯ ದೇವಾಲಯಗಳಲ್ಲಿ ಪ್ರಮುಖವಾಗಿರುವ ಅಂಶಗಳಾಗಿವೆ. ಇವು ಈ ಶೈಲಿಯ ಲಕ್ಷಣಗಳಾಗಿವೆ.

**ನಾಗರ ಶೈಲಿ:** ಇದು ತಲವಿನ್ಯಾಸದಲ್ಲಿ ಚಚ್ಚೌಕವಾಗಿದ್ದು ಮೇಲಣ ರೂಪದಲ್ಲಿ ಸಣ್ಣದಾಗುತ್ತಾ ಹೋಗುತ್ತದೆ. ಶಿಖರ ಊರ್ದ್ವಗಾಮಿಯಾದುದು. ಆರಂಭಕ್ಕೆ ಈ ಶೈಲಿಯಲ್ಲಿ ಒಂದೇ ಶಿಖರವನ್ನು ಹೊಂದಿದ ದೇವಾಲಯಗಳು ಕಂಡು ಬರುತ್ತವೆ. ದೇವಾಲಯದ ಮೇಲ್ಕಂಡವನ್ನು ಶಿಖರ ಅಥವಾ ಶೃಂಗ ಎಂದು ಗುರುತಿಸಲಾಗಿದೆ. ಆದರೆ ವಸ್ತು ವಿನ್ಯಾಸದಲ್ಲಿ ಪ್ರಗತಿ ಹೊಂದುತ್ತಾ ಹೋದಂತೆ ನಾಗರ ಶೈಲಿಯ ಇನ್ನೊಂದು ವಿಧವು ಹುಟ್ಟಿಕೊಂಡಿತ್ತು. ಅದೇ "ಶೇಖರೀ ಶೈಲಿ". ಶೇಖರೀ ಶೈಲಿಯಲ್ಲಿ ಒಂದಕ್ಕಿಂತ ಹೆಚ್ಚು ಶಿಖರಗಳನ್ನು ಕಾಣಬಹುದು. ಉಪಶಿಖರಗಳು ಮಧ್ಯ ಶಿಖರಕ್ಕಿಂತ ಚಿಕ್ಕದಾಗಿರುತ್ತವೆ ಮತ್ತು ಮುಖ್ಯ ಶಿಖರವನ್ನು ಸುತ್ತುವರೆದಿರುತ್ತವೆ.[೧೮] ಅಜಿತಾಗಮ ಕೃತಿಯಲ್ಲಿ ಭೂಮಿಯಿಂದ ಸ್ತೂಪಿಯವರೆಗೆ ಚತುರಸವಾಗಿರುವುದು ಎಂದಿದೆ. ಇದು ಕೆಳಗಿನಿಂದ ಮೇಲಕ್ಕೆ ಬಾಗಿದ ರೇಖೆಯಂತಹ ರಚನೆಯಾಗಿರುವುದರಿಂದ ಇದನ್ನು 'ರೇಖಾ ನಾಗರ ಶೈಲಿ' ಎಂತಲೂ ಕರೆಯುತ್ತಾರೆ.ಈ ಶೈಲಿಯ ದೇವಾಲಯದ ಹೊರಭಾಗ ಪೀಠ, ಭಿತ್ತಿ, ಶಿಖರ ಅಮಲಸಾರ, ಕಳಸವನ್ನೊಳಗೊಂಡಿರುತ್ತದೆ. ಶಿಖರದ ಮೂಲೆಯಲ್ಲಿ ಹಂತ-ಹಂತಗಳ ಕೂಟದಂತಹ ರಚನೆಯಿದ್ದು. ಶಿಖರ ಚಪ್ಪಟೆ, ವೃತ್ತಾಕಾರ ಅಂಚುಗಳನ್ನು ಅರೆಗೋಳ ವಿನಾಕಾರದಲ್ಲಿ ಕಂಡರಿಸಿದ ಅಮೂಲಕಗಳನ್ನು ಒಳಗೊಂಡ ಲಕ್ಷಣಗಳಿರುತ್ತವೆ. ಉದಾ: ಪಟ್ಟದ ಕಲ್ಲಿನ ಸಂಗಮೇಶ್ವರ ದೇವಾಲಯ.[೧೯]

**ವೇಸರ ಶೈಲಿ:** ಇದನ್ನು ಮಿಶ್ರ ಶೈಲಿ ಎಂದೂ ಕರೆಯುತ್ತಾರೆ. ಅಂದರೆ ನಾಗರ ಮತ್ತು ದ್ರಾವಿಡ ಶೈಲಿಗಳ ಮಿಶ್ರಣದ ಫಲವೇ ವೇಸರ ಶೈಲಿ. ಇದು ವಿಂದ್ಯ ಪರ್ವತದಿಂದ ಕೃಷ್ಣಾ ನದಿಯವರೆಗೆ ಹರಡಿಕೊಂಡಿದೆ ಎಂಬುದು ಸ್ಟೆಲ್ಲಾಕ್ರಾಮರಿಶ್ ಅವರ ಅಭಿಪ್ರಾಯ.[೨೦] ಇದರ ಲಕ್ಷಣಗಳ ಬಗ್ಗೆ ಅಜಿತಾಗಮ ಕೃತಿಯಲ್ಲಿ ಕಂಠದಿಂದ ಮೇಲಕ್ಕೆ ವೃತ್ತಾಕಾರವಾಗಿರುತ್ತದೆ ಎಂದು ಹೇಳಲಾಗಿದೆ. ಕಾಶ್ಯಪ ಶಿಲ್ಪಕೃತಿಯು ಕಂಠ ಹಾಗೂ ಶಿಖರ ಭಾಗ ವೃತ್ತಾಕಾರವಾಗಿದ್ದಲ್ಲಿ ಅದು ವೇಸರ ಶೈಲಿ ಎಂದಿದ್ದಾರೆ. ಮಾನಸಾರ ಕೃತಿ ಕೆಳಭಾಗ ವೃತ್ತಾಕರ ಕಂಠದಿಂದ ಮೇಲಕ್ಕೆ ಚತುರಸ್ರ ರಚನೆಯೇ ವೇಸರ ಶೈಲಿ ಎನ್ನಲಾಗಿದೆ.[೨೧] ಈ ಮೂರು ಶೈಲಿಗಳಲ್ಲದೆ ಇನ್ನೂ ಅನೇಕ ಶೈಲಿಗಳಿವೆ.

ಕಳಿಂಗ ಶೈಲಿ ಇದು ಒರಿಸ್ಸಾ ಪ್ರದೇಶದಲ್ಲಿ ಹೆಚ್ಚಾಗಿ ಪ್ರಚಲಿತದಲ್ಲಿದ್ದುದು ಕಂಡು ಬರುತ್ತದೆ. ಕರ್ನಾಟಕದಲ್ಲಿ ಕದಂಬ ನಾಗರಶೈಲಿ ಹೆಚ್ಚು ಪ್ರಚಲಿತವಿದೆ.

ಈ ಹಿನ್ನಲೆಯನ್ನು ಆಧರಿಸಿ ಈ ಅಧ್ಯಾಯದಲ್ಲಿ ಕಾಮಲಾಪುರ ಪರಿಸರ ಸೀಮಿತವಾಗಿಸಿಕೊಂಡು ದೇವಾಲಯಗಳ ವಾಸ್ತು ಶೈಲಿಯನ್ನು ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಕಾಮಲಾಪುರ ಗ್ರಾಮದಲ್ಲಿದ್ದ ದೇವಾಲಯಗಳು ೪೬ ಕ್ಕೂ ಹೆಚ್ಚಿವೆ. ಹೆಚ್ಚಿನ ದೇವಾಲಯಗಳು ವಿಜಯನಗರ ಕಾಲಕ್ಕೆ ಸೇರಿವೆ. ಇವುಗಳಲ್ಲಿ ವೈಷ್ಣವ, ಶೈವ, ಶಕ್ತಿ, ಗಾಣಪತ್ಯ ಮತ್ತು ಜೈನ ದೇವಾಲಯಗಳೆಂದು ಅಧ್ಯಯನದ ದೃಷ್ಟಿಯಿಂದ ವಿಂಗಡಿಸಲಾಗಿದೆ. ಇವುಗಳ ವಾಸ್ತು ವಿಶೇಷತೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಕಾಮಲಾಪುರದಲ್ಲಿನ ಸ್ಮಾರಕಗಳ ವಾಸ್ತು ವಿಶೇಷತೆ:** ವಿಜಯನಗರ ಪ್ರದೇಶದಲ್ಲಿ ಆಳ್ವಿಕೆ ಕೈಗೊಂಡಿದ್ದ ಅರಸು, ಮಹಾಮಂಡಳೇಶ್ವರ, ಮಹಾಸಾಮಂತ, ಮೊದಲಾದ ಮನೆತನಗಳು ಈ ಪ್ರದೇಶದ ಸಾಂಸ್ಕೃತಿಕ ಪರಂಪರೆಯನ್ನು ಬೆಳೆಸುವ ನಿಟ್ಟಿನಲ್ಲಿ ಪ್ರಾಮಾಣಿಕವಾದ ಪ್ರಯತ್ನವನ್ನು ಮಾಡಿವೆ. ಅರಸರು ಶ್ರೀಮಂಡಲಾಧಿಕಾರಿಗಳು. ಸಮಾಜದವರು ದೇವಾಲಯಗಳನ್ನು ನಿರ್ಮಿಸಿರುವುದು ಸ್ಥಳೀಯ ಶಾಸನಗಳಿಂದ ಸ್ಪಷ್ಟವಾಗುತ್ತದೆ. ಈ ಪ್ರದೇಶದಲ್ಲಿ ಹೆಚ್ಚಿನ ದೇವಾಲಯಗಳು ವಿಜಯನಗರ ಕಾಲಕ್ಕೆ ಸೇರಿದವು. ಉಳಿದವು ವಿಜಯನಗರೋತ್ತರ ದೇವಾಲಯಗಳು. ಆದರೆ ಕೆಲವು ದೇವಾಲಯಗಳು ಹಾಳಾಗಿವೆ ಇನ್ನೂ ಕೆಲವು ದೇವಾಲಯಗಳು ಜೀರ್ಣಾವಸ್ಥೆಯಲ್ಲಿವೆ. ಬೆರಳಣಿಕೆಯಷ್ಟು ದೇವಾಲಯಗಳು ಮಾತ್ರ ಮೂಲ ಸ್ವರೂಪದಲ್ಲಿವೆ. ತುಲನಾತ್ಮಕ ಅಧ್ಯಯನ ಮಾಡಿ ನೋಡಿದ್ದಲ್ಲಿ ಇಲ್ಲಿ ಹೆಚ್ಚಿನವು ವೈಷ್ಣವ ಪಂಥಕ್ಕೆ ಸೇರಿದ ದೇವಾಲಯಗಳಾಗಿವೆ. ಹೆಚ್ಚಿನ ದೇವಾಲಯಗಳು ಆಯತಾಕಾರದಲ್ಲಿವೆ. ಶೈವ ದೇವಾಲಯಗಳು ಮಾತ್ರ ಹೆಚ್ಚಿನ ಮಟ್ಟಿಗೆ ಆಕಾರದಲ್ಲಿ ಚೌಕಾಕಾರ ಹೊಂದಿದ್ದು ಅಷ್ಟೇ ಮಹತ್ವದ್ದು. ಗಾಣಪತ್ಯ ಮತ್ತು ಶಕ್ತಿ ಪಂಥ ದೇವಾಲಯಗಳೂ ಆಯತಾಕಾರದಲ್ಲಿದೆ. ಜೈನ ಪಂಥದ ಬಸದಿಗಳು ಕಡಿಮೆ ಇದ್ದರೂ ವಾಸ್ತು ವಿಶೇಷಣದಿಂದ ಕಡೆಗಣಿಸುವಂತಿಲ್ಲ. ವಿಜಯನಗರ ಕಾಲದ ಹೆಚ್ಚಿನ ವಿಶಾಲವಾದ ಪ್ರಾಕಾರ, ಗರ್ಭಗೃಹ, ಪ್ರದಕ್ಷಿಣಾಪಥ, ಅಂತರಾಳ, ಅರ್ಧಮಂಟಪ, ಮೂರು ಪ್ರವೇಶ ದ್ವಾರ ಹೊಂದಿದೆ. ಸಭಾಮಂಟಪ ತೆರೆದ ಮಹಾ ಮಂಟಪ ಸಾಮಾನ್ಯ ಲಕ್ಷಣ. ಸುತ್ತಲೂ ನಿರ್ದಿಷ್ಠ ಪಡಿಸಿದ ಪರಿವಾರ ದೇವತೆಗಳಿಗಾಗಿ ಚಿಕ್ಕ ಚಿಕ್ಕ ಗುಡಿಗಳಿವೆ. ಚಿಕ್ಕ ಚಿಕ್ಕ ರಥೋತ್ಸವ ಮಂಟಪ, ಕನ್ನಡಿ ಮಂಟಪ ಉತ್ಸವ ಮಂಟಪವಿದ್ದು ಪ್ರಕಾರಕ್ಕೆ ಎರಡು ಅಥವಾ ಮೂರು ಗೋಪುರಗಳನ್ನು ಹೊಂದಿದ ಪ್ರವೇಶದ್ವಾರಗಳಿರುತ್ತವೆ ಮತ್ತು ವಿಶಾಲವಾದ ಪ್ರಾಕಾರದ ಸುತ್ತಲೂ ಎತ್ತರವಾದ ಭಿತ್ತಿಯಿರುತ್ತದೆ. ಉದಾ:– ಪಟ್ಟಾಭಿರಾಮ ದೇವಾಲಯ. ಹಜಾರರಾಮ ದೇವಾಲಯ. ಈ ದೇವಾಲಯ ಉಯ್ಯಾಲೆ ಮಂಟಪ, ವಸಂತ ಮಂಟಪ, ಕನ್ನಡಿ ಮಂಟಪ, ರಂಗ ಮಂಟಪ ಮತ್ತು ಉತ್ಸವ ಮಂಟಪಗಳನ್ನು ಹೊಂದಿರುವುದು ವಿಶೇಷತೆ. ಇದು ವಿಜಯನಗರ ಕಾಲದಲ್ಲಿದ್ದ ಅಂದಿನ ವೈಶಿಷ್ಟ್ಯತೆ.[೨೨] ಕ್ರಿ.ಶ.೧೫೩೧ರಲ್ಲಿ ಕೃಷ್ಣದೇವರಾಯನ ಅಧಿಕಾರಿಯೊಬ್ಬನು ಹಜಾರರಾಮನ ದೇವಾಲಯದಲ್ಲಿ ಉತ್ಸವ ಮಂಟಪವನ್ನು ಕಟ್ಟಿಸಿದ.[೨೩] ಎತ್ತರವಾದ ಅಧಿಷ್ಠಾನದ ಮೇಲೆ ನಿರ್ಮಿತವಾದ ಈ ದೇವಾಲಯಗಳು ಚೌಕಾಕಾರ ಅಥವಾ ಸಮಚತುಷ್ಕೋನಾಕಾರದ ಗರ್ಭಗೃಹ ಹೊಂದಿವೆ. ಇಂತಹ ದೊಡ್ಡ ಗಾತ್ರದ ದೇವಾಲಯಗಳಲ್ಲಿ ಕಾಣಬರುವ ಲಕ್ಷಣಗಳಲ್ಲಿ ಗರ್ಭಗೃಹದ ಪ್ರದಕ್ಷಿಣಾಪಥ ಒಂದು. ನಂತರ ಗರ್ಭಗೃಹಕ್ಕೆ ಹೊಂದಿಕೊಂಡು ಮುಚ್ಚಿದ ಪ್ರದಕ್ಷಿಣಾ ಪಥಕ್ಕೆ ಸೋಪಾನಗಳ ಮೂಲಕ ಕೆಳಗಿಳಿಯುವ ವ್ಯವಸ್ಥೆ ಇರುತ್ತದೆ. ಗರ್ಭಗೃಹ ಮತ್ತು ಪ್ರದಕ್ಷಿಣಾ ಪಥಕ್ಕೂ ನಡುವೆ ಎರಡು ಅಡಿ

ಖಾಲಿ ಜಾಗ ಇರುತ್ತದೆ. ವಿಜಯನಗರ ಕಾಲಕ್ಕಿಂತ ಮುಂಚಿತ ದೇವಾಲಯಗಳಲ್ಲಿ ಪ್ರದಕ್ಷಿಣಾ ಪಥ ಗರ್ಭಗೃಹದ ಭಿತ್ತಿಗೆ ಹೊಂದಿಕೊಂಡಿರುವುದರಿಂದ ವಿಜಯನಗರ ಕಾಲದ ಪ್ರದಕ್ಷಿಣಾ ಪಥ ಸಂಪೂರ್ಣವಾಗಿ ಮುಚ್ಚಲ್ಪಟ್ಟಿರುತ್ತದೆ. ಗರ್ಭಗೃಹಕ್ಕೆ ಗಾಳಿ, ಬೆಳಕು ಬರಲು ಜಾಲಂಧ್ರಗಳನ್ನು ಇರಿಸಲಾಗಿದೆ. ಗರ್ಭಗೃಹ ಮತ್ತು ಅಂತರಾಳಗಳ ಅಧಿಷ್ಠಾನ ಪ್ರಾಕಾರಕ್ಕಿಂತಲೂ ಸ್ವಲ್ಪ ಕೆಳಮಟ್ಟದಲ್ಲಿದ್ದು ಅಧಿಷ್ಠಾನ ಕುಮುದ, ಪದ್ಮಭಾಗಗಳನ್ನು ಹೊಂದಿರುತ್ತದೆ. ಭಿತ್ತಿ ಚಿಕ್ಕ ದೇವಾಲಯಗಳಲ್ಲಿ ಸರಳವಾಗಿ ಅಲಂಕಾರದಿಂದ ಕೂಡಿದ್ದರೆ ದೊಡ್ಡದೇವಾಲಯಗಳ ಭಿತ್ತಿಯ ಮೇಲೆ ಕುಂಭ ಪಂಜರ, ದೇವಕೋಷ್ಠ, ತೋರಣ ಮತ್ತು ಮೂರ್ತಿ ಶಿಲ್ಪಗಳಿರುತ್ತವೆ. ಹೊರ ಭಿತ್ತಿಗಳನ್ನು ಸಮ ಮಟ್ಟದಲ್ಲಿ ವಿಂಗಡಿಸಿರುತ್ತಾರೆ. ಇಂತಹ ರಚನೆ ಪಟ್ಟಾಭಿರಾಮ ದೇವಾಲಯದಲ್ಲೂ ಕಂಡು ಬರುತ್ತದೆ. ಇವುಗಳಲ್ಲಿ ಅತಿ ಪ್ರಮುಖ ಲಕ್ಷಣವೆಂದರೆ ಕುಂಭ ಪಂಜರ, ಕುಂಭ ಪಂಜರ ದ್ರಾವಿಡ ದೇವಾಲಯಗಳಲ್ಲಿ ಕಂಡು ಬರುವ ವಿಶಿಷ್ಠ ಅಲಂಕರಣ. ಈ ಕುಂಭಗಳ ಮೇಲ್ಭಾಗದಿಂದ ಅರ್ಧ ಕಂಬಗಳು ಉಗಮವಾಗಿ ಮೇಲಕ್ಕೆ ಹೊರ ಸೂಸಿವೆ. ಅರ್ಧ ಕಂಭದ ತುದಿಯಲ್ಲಿ ಎಲೆಗಳ ಗೊಂಚಲನ್ನು ಬಿಡಿಸಲಾಗಿದೆ. ದ್ರಾವಿಡ ಶೈಲಿಯಲ್ಲಿ ಹೆಚ್ಚಾಗಿ ಭಿತ್ತಿಯ ಅಲಂಕರಣಕ್ಕೆ ಇದನ್ನು ಉಪಯೋಗಿಸಲಾಗಿದೆ.[೨೨] ಇಲ್ಲಿನ ಶಿಲ್ಪಗಳು ಪುರಾಣ ಮತ್ತು ಮಹಾಕಾವ್ಯಗಳಲ್ಲಿನ ಪ್ರಸಂಗಗಳನ್ನು ಪ್ರತಿನಿಧಿಸುತ್ತವೆ. ಉದಾ:- ಹಜಾರರಾಮ ದೇವಾಲಯದ ಹೊರ ಭಿತ್ತಿಗಳ ಮೇಲೆ ರಾಮಾಯಣಕ್ಕೆ ಸಂಬಂಧಿಸಿದ ದೃಶ್ಯಗಳ ಕೆತ್ತನೆ ಇದೆ. ಈ ದೇವಾಲಯಗಳ ನವರಂಗಗಳಲ್ಲಿ ನಾಲ್ಕು ಸ್ತಂಭಗಳು ಹಾಗೂ ಎರಡೂ ಬದಿಯಲ್ಲಿ ಕೈ ಶಾಲೆಗಳಿವೆ. ಸ್ತಂಭದ ಕಾಂಡ ಭಾಗದಲ್ಲಿ ಮೂರು ಚಚ್ಚೌಕ ಭಾಗಗಳಿದ್ದು ಮಧ್ಯ ಎಂಟು, ಹದಿನಾರು ಮುಖ ಭಾಗಗಳಿರುತ್ತವೆ. ಇದನ್ನು "ಬ್ರಹ್ಮಭಾಗ ವಿಷ್ಣು ಭಾಗವೆಂತಲೂ ಕರೆಯುತ್ತಾರೆ. ಮೂರು ಚಚ್ಚೌಕದ ಚತುರ್ಮುಖಗಳಲ್ಲಿ ಉಬ್ಬು ಶಿಲ್ಪಗಳಿರುತ್ತವೆ. ಕಂಬಗಳ ಕೆಳಗಿನ ಚಚ್ಚೌಕ ಭಾಗದ ಮೇಲ್ಭಾಗದಲ್ಲಿ ನಾಗಬಂಧಗಳಿವೆ. ಈ ಭಾಗದಲ್ಲಿ ಕಂಡುಬರುವ ಮೂರ್ತಿ ಶಿಲ್ಪಗಳೆಂದರೆ ಕಾಳಿಂಗ ಮರ್ಧನ, ಕೃಷ್ಣ, ಬಾಲಕೃಷ್ಣ, ಬೇಡರ ಕಣ್ಣಪ್ಪ, ವಿಷ್ಣುವಿನ ದಶಾವತಾರಗಳು, ಶಿವಲಿಂಗ, ಗರುಡ, ಹನುಮ, ನರಸಿಂಹ, ಕೋಲಾಟ ಆಡುವವರು, ಮುದ್ದಳೆ ಬಾರಿಸುವವರು ಮತ್ತು ನೃತ್ಯಗಾರರು ಕಂಬದ ಮೇಲ್ಭಾಗದಲ್ಲಿ ಪುಷ್ಪ ಬೋದುಗೆಗಳು ಇರುತ್ತವೆ. ಹೆಚ್ಚಿನ ಮಟ್ಟಿಗೆ ವೈಷ್ಣವ ಮೂರ್ತಿ ಶಿಲ್ಪಗಳು ಇಲ್ಲಿ ಪ್ರತಿಬಿಂಬಿತವಾಗಿವೆ. ಮಹಾಮಂಟಪದಲ್ಲಿ ದೊಡ್ಡ ಗಾತ್ರದ ಚೌಕಾಕಾರದ ಕಂಬಗಳು ಈ ಸ್ತಂಭಗಳು ಗಾತ್ರದಲ್ಲಿ ದೊಡ್ಡ ಮತ್ತೊಂದು ಬಗೆಯವು. ಚಿಕ್ಕ-ಚಿಕ್ಕ ಪ್ರಮಾಣದ ಎರಡು-ನಾಲ್ಕು-ಎಂಟು ಉಪಕಂಬಗಳನ್ನು ಅಥವಾ ಮುಂದಿನ ಭಾಗದಲ್ಲಿ ಎರಡೂ ಕಾಲುಗಳನ್ನೆತ್ತಿ ಮುನ್ನುಗ್ಗುತ್ತಿರುವ ಕುದುರೆಯಾಕಾರದ ಇಲ್ಲವೆ ಸಿಂಹದಾಕಾರವಾಗಿಯೂ ಇರುತ್ತವೆ. ಕೆಲವು ಸಲ ಈರೀತಿ ಹಿಂಗಾಲೂ ಮೇಲೆ ನಿಂತ ಪ್ರಾಣಿಗಳ ದೃಶ್ಯವನ್ನು ಕೆತ್ತಿರುತ್ತಾರೆ. ಉದಾ:- ಪಟ್ಟಾಭಿರಾಮದೇವಾಲಯದ ಮುಖ ಮಂಟಪದಲ್ಲಿ ಇಂತಹ ಉಪಕಂಬಗಳನ್ನು ಕಾಣಬಹುದು. ನಿಂತ ಸಿಂಹಗಳು ಇಲ್ಲಿಯ ಸ್ತಂಭಗಳನ್ನು ಹೊತ್ತುನಿಂತಿವೆ. ಕೆಲವು ಸ್ತಂಭಗಳು ಪುಷ್ಪ ಬೋದಿಗೆಗಳನ್ನು ಹೊಂದಿವೆ. ಇವು ದ್ರಾವಿಡ ದೇವಾಲಯಗಳ ಸ್ತಂಭಗಳಿಂದ ಪ್ರಭಾವಿತವಾಗಿವೆ. ಚೋಳ, ಪಾಂಡ್ಯರ ಕಾಲದಲಿದ್ದ ವಿನ್ಯಾಸಗಳಲ್ಲಿ ಬದಲಾವಣೆಯಾಗಿ ಮತ್ತು ಪ್ರಗತಿಯುಂಟಾಗಿ ಕೊನೆಗೆ ವಿಜಯನಗರ ಕಾಲದಲ್ಲಿ ಕೊನೆಯ ಹಂತವನ್ನು ಕಾಣುತ್ತೇವೆ. ದ್ರಾವಿಡ ಶೈಲಿಯ ಪರಾಕಾಷ್ಠೆಯನ್ನು ವಿಜಯನಗರ ಕಾಲದ ದೇವಾಲಯಗಳಲ್ಲಿ ಕಾಣಬುಹುದು.

ಎತ್ತರವಾದ ಅಧಿಷ್ಠಾನದ ಮೇಲೆ ನಿರ್ಮಾಣವಾದ ದೇವಾಲಯಗಳಿಗೆ ಮೇಲಕ್ಕೆ ಹತ್ತಲು ಸೋಪಾನ ರಚಿಸಿರುವುದು ಇನ್ನೊಂದು ಪ್ರಮುಖ ಲಕ್ಷಣ. ಈ ಸೋಪಾನಗಳ ಎರಡು ಬದಿಗೆ ಆನೆಗಳು ಇಲ್ಲವೇ ಸುರುಳ್‌ಯಾಳಿಗಳ ಶಿಲ್ಪಗಳನ್ನು ನಿಲ್ಲಿಸಿರುವುದು ಸಾಮಾನ್ಯ ಲಕ್ಷಣಗಳಲ್ಲಿ ಒಂದು. ವಿಜಯನಗರ ಕಾಲದ ದೇವಾಲಯಗಳಲ್ಲಿಯ ದ್ರಾವಿಡ ಶೈಲಿಯ ಶಿಖರಕ್ಕೆ ಸಂಬಂಧಿಸಿದಲ್ಲ. ಗರ್ಭಗೃಹದ ಶಿಖರದ ಮೇಲ್ಭಾಗದಲ್ಲಿ ವೃತ್ತಾಕಾರದ ಇಲ್ಲವೆ ಅಷ್ಟಕೋನಾಕಾರ ಮೇಲ್ಭಾಗದಲ್ಲಿ ಕಳಸದ ಮೇಲೆ ಸ್ತೂಪಿ ಇರುತ್ತದೆ. ಉದಾ:- ಹಜಾರರಾಮ ದೇವಾಲಯ. ದ್ರಾವಿಡ ಶಿಖರ ಪ್ರಾಕಾರದಲ್ಲಿ ಎತ್ತರವಾದ ವೇದಿಕೆಯ ಮೇಲೆ ನಿರ್ಮಾಣವಾದ ಮಂಟಪಗಳ ಮಧ್ಯದಲೊಂದು ಪೀಠ. ಸುತ್ತಲಿನ ಸಂಯುಕ್ತ ಕಂಬಗಳ ಮೇಲೆ ಹಾಗೂ ತಳಪಾಯ ಪಟ್ಟಿಯಲ್ಲೂ ಬಳ್ಳಿಗಳು ಪ್ರಾಣಿಗಳು ಮುಂತಾದವುಗಳಿಂದ ಅಲಂಕೃತವಾಗಿರುತ್ತದೆ. ಪ್ರಾಕಾರದ ಭಿತ್ತಿಯ ಹೊರಭಾಗದಲ್ಲಿ ಪ್ರಾಣಿ ಹಾಗೂ ವಿವಿಧ ಸಾಮಜಿಕ ಲೌಕಿಕ ಶಿಲ್ಪಗಳಿರುತ್ತವೆ. ಉದಾ:- ಹಜಾರರಾಮದೇವಾಲಯದ ಹೊರ ಮತ್ತು ಒಳ ಭಿತ್ತಿಯ ಮೇಲೆ ಶಿಲ್ಪಗಳಿವೆ. ಒಳಗೋಡೆಯ ಮೇಲೆ ರಾಮಾಯಣಕ್ಕೆ ಸಂಬಂಧಿಸಿದ ಶಿಲ್ಪಗಳನ್ನು ಕೆತ್ತಿದ್ದರೆ. ಹೊರಭಾಗದಲ್ಲಿ ಪ್ರಾಣಿ, ಶಿಲ್ಪ ಆನೆ, ಕುದರೆ, ಒಂಟೆಗಳ ಸಾಲುಗಳನ್ನು ಕಾಣಬಹುದು. ವಿಶಾಲವಾದ ದ್ವಾರ ಮಂಟಪಗಳು ಇಕ್ಕೆಲುಗಳಲ್ಲಿ ಗಂಗೆಯಮುನೆಯರು ಅಲ್ಲದೆ ಅಪ್ಸರೆಯರ ಶಿಲ್ಪಗಳು ಹೊಂದಿರುತ್ತವೆ. ಗೋಪುರದಲ್ಲಿ ಗಾರೆ ಶಿಲ್ಪ ಅರ್ಧಗಂಬಗಳು ದೇವಕೋಷ್ಠಕಗಳನ್ನು ಅಳವಡಿಸಲಾಗಿರುತ್ತದೆ.[೨೫] ವಿಜಯನಗರ ಪೂರ್ವದಲ್ಲಿ ನಿರ್ಮಾಣವಾದ ದೇವಾಲಯಗಳ ಗೋಪುರ ಅಷ್ಟೇನು ಎತ್ತರವಾಗಿಲ್ಲ. ಆದರೆ ವಿಜಯನಗರ ಅರಸರ ಅದರಲ್ಲೂ ತುಳುವಂಶದ ಅರಸರ ಕಾಲದಲ್ಲಿ ಬೃಹದಾಕಾರದ ಗೋಪುರಗಳು ನಿರ್ಮಾಣವಾದವು. ಉದಾ:- ಪಟ್ಟಾಭಿರಾಮದೇವಾಲಯ, ನಲ್ಲಾಪುರ ರಸ್ತೆಯ ಬದಿಯಲ್ಲಿರುವ ವಿಷ್ಣು ದೇವಾಲಯ. ಒಟ್ಟಾರೆ ಗಾರೆ ಶಿಲ್ಪ, ಶಿಖರ, ಕುಂಭಪಂಜರ, ದೇವಕೋಷ್ಟಕ, ಪ್ರದಕ್ಷಿಣಾಪಥ, ಎತ್ತರ ಗೋಪುರ, ಉತ್ಸವ ಮಂಟಪ, ಕಲ್ಯಾಣ ಪಂಟಪ ರಚನೆಗೆ ಹೆಚ್ಚಿನ ಒತ್ತು ನೀಡಿದರು. ಈ ಹಿನ್ನಲೆಯಲ್ಲಿ ಕಮಲಾಪುರ ವೈಷ್ಣವ ಪಂಥ, ಶೈವ ಪಂಥ, ಶಾಕ್ತ ಪಂಥ ಮತ್ತು ಜೈನ ದೇವಾಲಯಗಳ ದಾಖಲಾತಿಯನ್ನು ಇಲ್ಲಿ ಮಾಡಲಾಗಿದೆ.

**ವೈಷ್ಣವ ದೇವಾಲಯ**

ಹೆಸರು :- ಹಜಾರರಾಮ ದೇವಾಲಯ[೨೬, ೨೭]

ಸ್ಥಳ :- ಮಹಾನವಮಿ ದಿಬ್ಬದ ವಾಯುವ್ಯ ಭಾಗ ಕಾಮಲಾಪುರ.

ಕಾಲ :- ೧೪-೧೫ನೇ ಶತಮಾನ

ರಾಜವಂಶ :- ವಿಜಯನಗರ

ದಿಕ್ಕು :- ಪೂರ್ವಾಭಿಮುಖ

ವಸ್ತು :- ಬೆಣಚುಕಲ್ಲುಶಿಲೆ

ದೇವಾಲಯದ ಈ ಹೆಸರಿನ ಬಗ್ಗೆ ವಿವಾದಾಸ್ಪದ ಹೇಳಿಕೆಗಳಿವೆ. ಅರಮನೆಯ ಹಜಾರದ ಸಮೀಪದಲ್ಲಿದ್ದುದರಿಂದ ಈ ಹೆಸರು ಬಂದಿರಬೇಕು. ವಿಷ್ಣುವಿನ ಅವತಾರಗಳಲ್ಲಿ ಒಂದಾದ ರಾಮನಿಗೆ

ಸಂಬಂಧಿಸಿದ್ದರಿಂದ ರಾಮನ ಶಿಲ್ಪಗಳೊಂದಿಗೆ ರಾಮಾಯಣ ಮಹಾ ಕಾವ್ಯವನ್ನು ಪ್ರತಿಬಿಂಬಿಸುವ ಅನೇಕ ಚಿತ್ರಣಗಳು ಇಲ್ಲಿರುವುದರಿಂದ ಈ ದೇವಾಲಯವನ್ನು ಹಜಾರರಾಮ ದೇವಾಲಯ ಎಂಬ ಹೆಸರು ಬಂದಿತೆಂಬ ಪ್ರತೀತಿಯೂ ಇದೆ. ಹಜಾರ ಎಂದರೆ ಸಾವಿರ. ರಾಮ ವಿಷ್ಣುವಿನ ಅವತಾರಗಳಲ್ಲಿ ಒಂದು. ಈ ಶಬ್ದ ಸಾವಿರ ರಾಮರು ಎಂಬ ಅರ್ಥ. ಬಹುಶಃ ರಾಮನ ಶಿಲ್ಪವನ್ನು ಚಿತ್ರಿಸುವ ಹಲವಾರು ಶಿಲ್ಪಗಳು ಇಲ್ಲಿರುವುದರಿಂದ ಇದಕ್ಕೆ ಹಜಾರ ರಾಮ ಎಂಬ ಹೆಸರು ಬಂದಿರಬಹುದು. ಈ ದೇವಾಲಯದ ಉದ್ದಗಲ ೩೫.೫x೬೧ ಮೀ ವಿಸ್ತೀರ್ಣದ ಪ್ರಾಕಾರವನ್ನು ಒಳಗೊಂಡಿದೆ. ಈ ದೇವಾಲಯ ಗರ್ಭಗೃಹ, ಅಂತರಾಳ, ಅರ್ಧಮಂಟಪ, ನವರಂಗ, ತೆರೆದ ಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹದ ಪ್ರವೇಶ ದ್ವಾರ ಸರಳಕೆತ್ತನೆಯಿಂದ ಕೂಡಿದೆ. ಗರ್ಭಗೃಹದ ಪ್ರವೇಶ ದ್ವಾರದ ಎಡಬಲದಲ್ಲಿ ಶಂಖ, ಚಕ್ರ, ಗದೆ ಹಿಡಿದು ನಿಂತ ಭಂಗಿಯಲ್ಲಿದ್ದು ವೈಷ್ಣವ ದ್ವಾರ ಪಾಲಕರಿದ್ದಾರೆ. ಗರ್ಭಗುಡಿಯ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಆಸೀನಳಾಗಿದ್ದಾಳೆ. ಪ್ರವೇಶ ದ್ವಾರ ಭಿತ್ತಿಗೆ ಕುಂಭ ಪುಷ್ಪಗಳ ಸೂಕ್ಷ್ಮ ಕೆತ್ತನೆ ಇದೆ. ಇದರ ಮೇಲ್ಛಾವಣೆಯಲ್ಲಿ ಕಮಲದ ಮೊಗ್ಗು ಅಲಂಕೃತವಾಗಿದೆ. ಅಂತರಾಳದ ಪ್ರವೇಶದ್ವಾರದಲ್ಲಿ ಸ್ತಂಭಗಳು, ಪುಷ್ಪ ಬೋದಿಗೆಗಳಿಂದ ಅಲಂಕೃತವಾಗಿವೆ. ಅಂತರಾಳದ ಮೇಲ್ಛಾವಣೆ ತೆರೆದ ಕಮಲವನ್ನು ಒಳಗೊಂಡಿದೆ. ಪ್ರದಕ್ಷಿಣಾ ಪಥವಿದ್ದು ಇದೊಂದು ಸಾಂಧಾರ ದೇವಾಲಯ.ಅಂತರಾಳ ಮತ್ತು ಮಂಟಪಗಳಲ್ಲಿ ದೇವಕೋಷ್ಠಕಗಳು, ಕುಂಭಪಂಜರಗಳು, ದೇವಾಲಯದ ಮಹತ್ವವನ್ನು ಮತ್ತಷ್ಟು ಹೆಚ್ಚಿಸಿವೆ. ಸಭಾಮಂಟಪದ ಮೇಲ್ಛಾವಣೆ ಅಷ್ಟಕೋನಾಕೃತಿ ಮಧ್ಯೆ ಭುವನೇಶ್ವರಿಯಿಂದ ಅಲಂಕೃತವಾಗಿದೆ. ಭಿತ್ತಿಯಲ್ಲಿ ಮಂಗಗಳ ಚಿತ್ರಣ ಇದೆ. ನವರಂಗದ ಮಧ್ಯೆ ಕಪ್ಪು ಬೆಣಚುಕಲ್ಲಿನ ಸ್ತಂಭಗಳಿವೆ. ಸ್ತಂಭಗಳು ಚೌಕಾಕಾರವಾಗಿದ್ದು ಅಡ್ಡ ಪಟ್ಟಿಕೆ, ಮೇಲ್ಭಾಗ ಪುಷ್ಪ ಬೋದಿಗೆಗಳನ್ನು ಒಳಗೊಂಡಿದೆ. ನಾಲ್ಕು ಸ್ತಂಭಗಳಲ್ಲಿ ವಿಷ್ಣುವಿನ ಇಪ್ಪತ್ನಾಲ್ಕು ಅವತಾರಗಳು ಇರುವುದು ವೈಶಿಷ್ಟ್ಯತೆಗಳಲ್ಲಿ ಒಂದು. ರಾಮ, ಲಕ್ಷ್ಮಣ, ಸೀತೆ, ಅಂಜಲಿ ಮುದ್ರೆಯಲ್ಲಿದ್ದ ಭಕ್ತ, ವೇಣುಗೋಪಾಲ, ಶಂಖ, ಚಕ್ರ, ಸ್ತ್ರೀ, ಪುರುಷ ಶಿಲ್ಪ, ತಪಸ್ವಿನಿ ಲಕ್ಷ್ಮೀನರಸಿಂಹ ಮುಂತಾದ ಮೂರ್ತಿಶಿಲ್ಪಗಳು, ಇಲ್ಲಿ ಪ್ರತಿ ಬಿಂಬಿತವಾಗಿವೆ. ಒಟ್ಟಾರೆ ಇಲ್ಲಿ ಹೆಚ್ಚಿನ ಮೂರ್ತಿಶಿಲ್ಪಗಳು ವೈಷ್ಣವ ಪಂಥಕ್ಕೆ ಸೇರಿವೆ. ಮುಖ ಮಂಟಪದಲ್ಲಿ ಎರಡು ಸ್ತಂಭಗಳ ಮೇಲೆ ಕೋಲಾಟದ ದೃಶ್ಯ, ವಾಲಿ ಸುಗ್ರೀವರ ಹೋರಾಟ. ಅಂಜಲಿಮುದ್ರೆಯಲ್ಲಿದ್ದ ಗರುಡ ಮುಖ ಮಂಟಪದಲ್ಲಿ ನಾಲ್ಕು ಸ್ತಂಭಗಳು ಚೌಕಾಕಾರವಾಗಿದ್ದು ಮೇಲ್ಭಾಗದಲ್ಲಿ ಪುಷ್ಪ ಬೋದಿಗೆಗಳನ್ನು ಒಳಗೊಂಡಿದೆ. ಹನುಮಂತ, ಗರುಡ, ಉಗ್ರನರಸಿಂಹ, ಲಕ್ಷ್ಮೀ, ನಾಗಕನ್ನಿಕೆಯರು, ಮುಂತಾದ ಮೂರ್ತಿಶಿಲ್ಪಗಳು ಕೆತ್ತನೆಗೊಂಡ ಸ್ತಂಭಗಳು ದೇವಾಲಯದ ಮೆರಗನ್ನು ಹೆಚ್ಚಿಸಿವೆ. ದೇವಾಲಯದ ಹೊರಭಾಗದ ಇನ್ನೊಂದು ವೈಶಿಷ್ಟ್ಯವೆಂದರೆ ಹೊರಭಿತ್ತಿ ರಾಮಾಯಣದ ವಿವಿಧ ದೃಶ್ಯಗಳನ್ನು ಒಳಗೊಂಡಿದೆ. ಪುತ್ರಕಾಮೇಷ್ಠಿಯಾಗ, ರಾಮ-ಲಕ್ಷ್ಮಣರು, ರಾಮ ಹನುಮಂತನ ಮಿಲನ, ಸೀತೆಯನ್ನು ಅಪಹರಿಸುವ ದೃಶ್ಯ, ರಾಮ ರಾವಣರ ಯುದ್ಧ ಇವೆಲ್ಲವೂ ನೋಡಲು ನಿಜಕ್ಕೂ ಸುಂದರ. ಅಲ್ಲಲ್ಲಿ ಕಲಾಕೃತಿಯಿಂದ ಒಳಗೂಡಿದ ಕುಂಭ ಪಂಜರಗಳು, ರಾಮಾಯನದ ಕಥಾನಕಗಳು ಶಿಲ್ಪಿಯ ಕಲಾ ನೈಪುಣ್ಯಕ್ಕೆ ಸಾಕ್ಷಿಯಾಗಿವೆ. ಹೊರ ಭಿತ್ತಿಯಲ್ಲಿ ಆನೆ, ಕುದುರೆ, ಒಂಟೆಗಳು, ಸೈನಿಕರ ಸಾಲುಗಳು ನರ್ತನ ವೈವಿಧ್ಯತೆ ಇವೆಲ್ಲವೂ ಚೆನ್ನಾಗಿ ಪ್ರತಿಬಿಂತವಾಗಿವೆ.

ಇದರ ಪಕ್ಕದಲ್ಲಿರುವುದು ಅಮ್ಮನವರ ದೇವಾಲಯ, ದೇವಾಲಯದ ಆವರಣದಲ್ಲಿ ಈಶಾನ್ಯಕ್ಕೆ ಕಲ್ಯಾಣ ಮಂಟಪವಿದೆ. ಇದು ವಿಜಯನಗರ ಕಾಲದ ವೈಶಿಷ್ಟ್ಯತೆಯಾಗಿದೆ. ಇದರ ನಿರ್ಮಾಣ ಕೃಷ್ಣದೇವರಾಯನ ಕಾಲದಲ್ಲಿ. ಅಧಿಷ್ಠಾನದ ಮೇಲೆ ಎತ್ತರವಾದ ಮಂಟಪವಿದ್ದು ಹನ್ನೆರಡು ಸ್ತಂಭಗಳಿಂದ ಆವೃತ್ತವಾಗಿದೆ. ಪ್ರತಿಯೊಂದು ಸ್ತಂಭ ಚೌಕಾಕಾರವಾಗಿದ್ದು ಸ್ತಂಭದ ಮೇಲ್ಗಡೆ ಪುಷ್ಪಬೋದಿಗೆಗಳಿಂದ ಅಲಂಕೃತವಾಗಿದೆ. ಮೇಲ್ಛಾವಣೆಯಲ್ಲಿ ತೆರೆದ ಕಮಲದ ಹೂ ಅದರ ಸುತ್ತಲೂ ನವಿಲುಗಳೂ, ನೃತ್ಯ ಮಾಡುವ ಸ್ತ್ರೀಯರ ಶಿಲ್ಪ, ಕಲ್ಯಾಣ ಮಂಟಪದ ಮೆರಗನ್ನು ಹೆಚ್ಚಿಸಿವೆ. ಮಂಟಪದ ಮಧ್ಯೆ ಎತ್ತರವಾದ ವೇದಿಕೆಯಿದ್ದು ನಾಲ್ಕು ಸ್ತಂಭಗಳಿಂದ ಅಲಂಕೃತವಾಗಿದೆ. ಅಧಿಷ್ಠಾನದ ಸುತ್ತಲೂ ಆನೆಗಳ ಸಾಲನ್ನು ಕಾಣಬಹುದು. ಪ್ರವೇಶ ದ್ವಾರದ ಮೇಲ್ಭಾಗದ ಪಟ್ಟಿಕೆಯಲ್ಲಿ ದೇವಿ ಆನೆ ಚಿತ್ರಣ ದ್ವಾರ ತೋರಣಗಳಿಂದ ಅಲಂಕೃತವಾಗಿದೆ. ಕೆಳಭಾಗದಲ್ಲಿ ಆನೆ, ಸಿಂಹ, ವಿವಿಧ ಭಂಗಿಯಲ್ಲಿನ ಸ್ತ್ರೀ ಚಿತ್ರಣ, ನವಿಲು, ಪುಷ್ಪಗಳು ಮತ್ಸ್ಯ, ಸ್ತ್ರೀ, ಆನೆ ಮತ್ತು ಎತ್ತು ಈ ಎಲ್ಲಾ ಮೂರ್ತಿ ಶಿಲ್ಪಗಳು ಚಿತ್ರಿತವಾಗಿರುವುದು ಇದೊಂದು ವೈಶಿಷ್ಟ್ಯತೆಯೇ ಸರಿ. ದೇವಾಲಯದ ಮುಖ್ಯದ್ವಾರದ ಬಲಭಿತ್ತಿ, ರಾಮಾಯಣದ ಚಿತ್ರಣ ರಾಮ, ಲಕ್ಷ್ಮಣ, ಸೀತೆ, ನದಿಯನ್ನು ದಾಟುವ ಚಿತ್ರಣ, ವಾಲಿ–ಸುಗ್ರಿವನೊಂದಿಗೆ ಇರವುದು, ರಾವಣನ ಆಸ್ಥಾನದಲ್ಲಿದ್ದ ಹನುಮಂತನ ಚಿತ್ರಣ, ಆನೆ, ಒಂಟೆ, ಕುದರೆಯ ಸಾಲುಗಳ ಚಿತ್ರಣ, ಯುದ್ಧಕ್ಕೆ ಸಿದ್ದರಾದ ಯೋಧರು, ನೃತ್ಯ, ಸಂಗೀತಗಾರರು ಹೀಗೆ ಈ ಮೂರ್ತಿ ಶಿಲ್ಪಗಳ ಚಿತ್ರಣ ಒಂದು ತುಲನಾತ್ಮಕ ಅಧ್ಯಯನ ಮಾಡಿನೋಡಿದರೆ ಇದೊಂದು ಪರಕಾಷ್ಠತೆಯ ಕಾಲವೆಂದು ಹೇಳಬಹುದು.

**ಉತ್ಸವ ಮಂಟಪ:** ಈ ಮಂಟಪದ ಆವರಣ ಹಜಾರರಾಮ ದೇವಾಲಯದ ಉತ್ತರಕ್ಕಿದೆ. ಮಧ್ಯದಲ್ಲಿ ಎತ್ತರವಾದ ವೇದಿಕೆ, ನಾಲ್ಕು ಸ್ತಂಭಗಳು, ಪುಷ್ಪ ಬೋದಿಗೆಗಳನ್ನು ಒಳಗೊಂಡಿದ್ದು, ಮೇಲ್ಛಾವಣೆ ಅಷ್ಟಕೋನಾಕೃತಿಯಿಂದ ಕೂಡಿದ್ದು, ಮಧ್ಯದಲ್ಲಿ ಅರಳಿದ ಹೂ ಶಿಲ್ಪ ಅದರ ಸುತ್ತಲೂ ಕೀರ್ತಿ ಮುಖದ ಚಿತ್ರಣದಿಂದ ಅಲಂಕೃತವಾಗಿದೆ. ಉತ್ತರ ಮತ್ತು ಪೂರ್ವ ಭಿತ್ತಿಯಲ್ಲಿ ರಾಮಾಯಣದ ಕಥಾನಕಗಳು ಹೆಣೆಯಲ್ಪಟ್ಟಿವೆ. ಕುಂಭಗಳ ಮೇಲೆ ಹನುಮಂತ ವಿಷ್ಣು, ಕೋಳಿ, ಶಂಖ, ರಾಮ, ನರ್ತಕಿ, ಕಾಮಧೇನು, ನವಿಲು, ಆಕಳು, ಕರು, ಉಗ್ರನರಸಿಂಹ, ಶಿವಲಿಂಗ, ಮುಂತಾದ, ಶಿಲ್ಪಗಳೂ ಇಲ್ಲಿವೆ. ಮಂಟಪದಲ್ಲಿ ಹತ್ತು ಸ್ತಂಭಗಳಿದ್ದು, ಮಂಟಪದ ಪ್ರವೇಶದ್ವಾರ ಸುಂದರ ಕೆತ್ತನೆಯಿಂದ ಒಳಗೊಂಡಿದೆ.

ಹೆಸರು :– ವಿಷ್ಣು ದೇವಾಲಯ

ಸ್ಥಳ :– ಸೀತಾರಾಮ ತಾಂಡ ನಲ್ಲಾಪುರ ರಸ್ತೆಯಲ್ಲಿ ಹೋಗುವಾಗ ಎಡಭಾಗ

ಕಾಲ :– ೧೫ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಪೂರ್ವಾಭಿಮುಖ

ವಸ್ತು :– ಬೆಣಚುಕಲ್ಲು ಶಿಲೆ.

ಇದೊಂದು ದೊಡ್ಡದಾದ ಸಂಕೀರ್ಣ ಪ್ರಸ್ತುತ ಪಾಳುಬಿದ್ದಿದೆ. ಈ ದೇವಾಲಯದ ಗರ್ಭಗೃಹ,

ಅಂತರಾಳ ಅರ್ಧ ಮಂಟಪ ಮತ್ತು ನವರಂಗ, ಮುಖಮಂಟಪವನ್ನು ಒಳಗೊಂಡಿದೆ. ಗರ್ಭಗುಡಿಯಲ್ಲಿ ಮೂರ್ತಿಶಿಲ್ಪವಿಲ್ಲ. ಪಾಣಿ ಪೀಠ ಮಾತ್ರ ಉಳಿದಿದೆ. ಪಾಣಿ ಪೀಠಕ್ಕೆ ತಾಗಿ ಪ್ರಣಾಳಿಕೆಯೂ ಇದೆ. ಅಂತರಾಳದ ಪ್ರವೇಶದ್ವಾರದಲ್ಲಿ ವೈಷ್ಣವ ದ್ವಾರ ಪಾಲಕರಿದ್ದಾರೆ. ಪ್ರವೇಶ ದ್ವಾರದ ಲಲಾಟ ಬಿಂಬದಲ್ಲಿ ಪುಷ್ಪ ಚಿತ್ರಿತವಾಗಿದೆ. ಅರ್ಧಮಂಟಪದಲ್ಲಿ ಮೇಲ್ಛಾವಣಿ ಉದ್ದವಾಗಿ ಹಾಸಲ್ಪಟ್ಟಿದೆ. ನವರಂಗದಲ್ಲಿ ನಾಲ್ಕು ಸ್ತಂಭಗಳಿವೆ ಮೇಲ್ಛಾವಣಿಯಲ್ಲಿ ಅರಳಿದ ಕಮಲವಿದೆ. ಈ ಸ್ತಂಭಗಳು ಚೌಕಾಕಾರವಾಗಿದ್ದು, ಮೇಲಿನ ಬೋದಿಗೆಗಳು ಪುಷ್ಪಾಲಂಕೃತವಾಗಿವೆ. ಈ ಸ್ತಂಭಗಳಲ್ಲಿ ಅಂಜಲಿ ಮುದ್ರೆಯಲ್ಲಿದ್ದ ಗರುಡ, ವಿಷ್ಣು, ಹನುಮಂತ, ಶಂಖ, ಶೇಷ ಹಿಡಿದ ವಿಷ್ಣು, ಹಣ್ಣು ತಿನ್ನುವ ಮಂಗ, ಸ್ತ್ರೀಯರ ವಿವಿಧ ಭಂಗಿಗಳು, ಶ್ರೀವೈಷ್ಣವ ಚಿಹ್ನೆಗಳು, ಇಲ್ಲಿನ ಸ್ತಂಬಗಳಲ್ಲಿ ಚಿತ್ರಿತವಾಗಿರುವುದು ವೈಶಿಷ್ಟ್ಯತೆಯಾಗಿದೆ. ನವರಂಗದಲ್ಲಿ ಪೂರ್ವ-ಉತ್ತರ-ದಕ್ಷಿಣ ದಿಕ್ಕಿಗೆ ಪ್ರವೇಶದ್ವಾರವಿದ್ದು ದ್ವಾರದ ಇಕ್ಕೆಲುಗಳಲ್ಲಿ ವೈಷ್ಣವ ದ್ವಾರ ಪಾಲಕರಿದ್ದರೆ. ಮುಖ ಮಂಟಪ ಶಿಖರವನ್ನು ಒಳಗೊಂಡಿದ್ದು ಮುಂದಿನ ಸುಖನಾಸಿಯಲ್ಲಿ ಯಾವುದೇ ಮೂರ್ತಿಶಿಲ್ಪವಿಲ್ಲ. ಅನೇಕ ಕೋಷ್ಠಕಗಳು, ಸ್ತಂಭಗಳು ಇವುಗಳಿಂದ ರಚಿತವಾದ ಮಂಟಪವಿದೆ. ಸ್ತಂಭಗಳ ಮುಂಭಾಗದಲ್ಲಿ ಹಾಗೂ ಮಂಟಪದಲ್ಲಿನ ಸ್ತಂಭಗಳಲ್ಲಿ ವಿಷ್ಣುವಿನ ಅವತಾರಗಳು, ಕೀರ್ತಿ ಮುಖ, ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ವೈಷ್ಣವ ದ್ವಾರಪಾಲಕರ, ಮೂರ್ತಿಶಿಲ್ಪವಿದೆ. ಹೊರಭಾಗ ಅಧಿಷ್ಠಾನ ಭಿತ್ತಿ, ಶಿಖರ, ಕಪೋತವನ್ನು ಒಳಗೊಂಡಿದೆ. ಎತ್ತರವಾದ ಅಧಿಷ್ಠಾನದ ಮೇಲೆ ಭಿತ್ತಿಯ ರಚನೆಯಾಗಿದೆ. ಭಿತ್ತಿಯ ಸುತ್ತಲೂ ಪುಷ್ಪಕಂಭಗಳು, ಕೋಷ್ಟಕಗಳು ಇವೆ. ಕಪೋತ ಸಪಾಟಾಗಿದ್ದು ಮೇಲ್ಭಾಗದ ಶಿಖರ ಇಟ್ಟಿಗೆ ಗಾರೆಗಳಿಂದ ನಿರ್ಮಾಣವಗಿದೆ. ಪ್ರಾಕಾರವು ಈ ದೇವಾಲಯದ ಸುತ್ತಲೂ ಇದ್ದು ಪೂರ್ವ ಪ್ರವೇಶದ ಇಕ್ಕೆಲುಗಳಲ್ಲಿ ತೆರೆದ ಮಂಟಪಗಳಿವೆ. ಇಲ್ಲಿನ ಸ್ತಂಭಗಳಲ್ಲಿ ಬುಡಭಾಗ, ಚೌಕಾಕಾರ, ಮಧ್ಯಭಾಗ ಷೋಡಾಂಶ್ರ, ಪಟ್ಟಿಕೆಗಳ ರಚನೆ ಅಮಾಲಕ ಮತ್ತು ಬೋದಿಗೆಗಳ ರಚನೆಯನ್ನು ಒಳಗೊಂಡಿದೆ. ಮುಖಮಂಟಪದ ಬಲಗಡೆ ಇನ್ನೊಂದು ಪಾಳು ಬಿದ್ದ ದೇವಾಲಯವಿದ್ದು ಗರ್ಭಗೃಹ, ಅಂತರಾಳ ಮತ್ತು ಮುಖ ಮಂಟಪ ಹೊಂದಿದೆ.

ಇಲ್ಲಿ ಹನ್ನೆರಡು ಸ್ತಂಭಗಳು ಚೌಕಾಕಾರವಾಗಿದ್ದು ಯಾವುದೇ ಅಲಂಕಾರಕ್ಕೆ ಪ್ರಾಧಾನ್ಯತೆ ಇರದೇ ಮೂಲ ರೂಪಕ್ಕೆ ಪ್ರಾಧ್ಯಾನ್ಯತೆ ನೀಡಿದಂತಿದೆ. ಅಧಿಷ್ಠಾನ ಎತ್ತರದಲ್ಲಿದ್ದು ಇದರ ಮೇಲೆ ಭಿತ್ತಿ ರಚನೆಯಾಗಿ ಇದರ ಸುತ್ತಲೂ ಗೂಡು ಮತ್ತು ಕುಂಭ ಪಂಜರಗಳಿವೆ.

ಹೆಸರು :- ಪಟ್ಟಾಭಿರಾಮದೇವಾಲಯ[೨೮, ೨೯]

ಸ್ಥಳ :- ಕಾಮಲಾಪುರದಿಂದ ಪೂರ್ವಕ್ಕೆ ಹೊಸಪೇಟೆ(ತಾ)

ಕಾಲ :- ೧೫ನೇ ಶತಮಾನ

ರಾಜವಂಶ :- ವಿಜಯನಗರ ಇಮ್ಮಡಿ ಬುಕ್ಕರಾಯ

ದಿಕ್ಕು :- ಉತ್ತರಾಭಿಮುಖ

ವಸ್ತು :- ಬೆಣಚುಕಲ್ಲು ಶಿಲೆ

ಇದರ ನಿಜವಾದ ಹೆಸರು ರಘುನಾಥದೇವಾಲಯ, ಇಲ್ಲಿರುವ ಶಿಲಾ ಶಾಸನ ಅಚ್ಯುತರಾಯನ

ಪತ್ನಿ ವರದರಾಜಮ್ಮ ಹೆಸರಿನಲ್ಲಿ ಪಟ್ಟಣವನ್ನು ನಿರ್ಮಿಸಿದನೆಂದು ಉಲ್ಲೇಖಿಸುತ್ತದೆ.

ಇಲ್ಲಿರುವ ಶಾಸನದ ಆಧಾರದಲ್ಲಿಕ್ರಿ.ಶ.೧೫೩೪ರ ಮೊದಲು ಈ ದೇವಾಲಯ ಇತ್ತೆಂಬುದಾತೂ ಸ್ಪಷ್ಟ. ಪಟ್ಟಾಭಿರಾಮ ದೇವಾಲಯ ಆಯತಾಕಾರದಲ್ಲಿದೆ. ಇದು ಮಹಾಮಂಟಪ ಮತ್ತು ಕಲ್ಯಾಣ ಮಂಟಪವನ್ನು ಒಳಗೊಂಡಿದೆ. ಜಗತಿಯ ಮೇಲೆ ಈ ದೇವಾಲಯ ನಿರ್ಮಾಣವಾಗಿದೆ. ಈ ದೇವಾಲಯ ಗರ್ಭಗೃಹ ಅಂತರಾಳ. ತೆರೆದ ಮಂಟಪ ಸಭಾಮಂಟಪ ಮತ್ತು ಮಹಾಮಂಟಪಗಳಿಂದ ಕೂಡಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯ ತ್ರಿತಳ ವಿಮಾನಗಳಿಂದ ಒಳಗೊಂಡಿದೆ. ಗರ್ಭಗುಡಿಯ ಮೇಲ್ಛಾವಣಿಯು ಅಷ್ಟಕೋನಾಕೃತಿಯಿಂದ ಅಲಂಕೃತವಾಗಿದೆ. ಗರ್ಭಗುಡಿಯ ಪ್ರವೇಶದ್ವಾರಗಳು ಚೌಕಾರದ ಪಟ್ಟಿಕೆಗಳನ್ನು ಒಳಗೊಂಡಿದೆ. ಪ್ರವೇಶದ್ವಾರದಲ್ಲಿ ದ್ವಾರಪಾಲಕರಿದ್ದಾರೆ. ಅಕ್ಕ ಪಕ್ಕ ಭಿತ್ತಿಯ ಮೇಲೆ ಕುಂಭ ಪಂಜರಗಳಿವೆ. ಅಂತರಾಳ ಮತ್ತು ಅರ್ಧಮಂಟಪದಲ್ಲಿ ಪ್ರವೇಶದ್ವಾರದಲ್ಲಿ ಎರಡು ಸ್ತಂಭಗಳಿದ್ದು, ಸ್ತಂಭಗಳ ಮೇಲೆ ನವಿಲು, ಕಾಳಿಂಗಮರ್ಧನ, ಕೃಷ್ಣ, ಪದ್ಮ, ಚಕ್ರ, ಹನುಮಂತ, ಉಗ್ರನರಸಿಂಹ ಮುಂತಾದ ಕೆತ್ತನೆಗಳಿವೆ. ಮತ್ತೊಂದು ಸ್ತಂಭದ ಮೇಲೆ ಮೀನಿನ ಮೇಲೆ ಕುಳಿತ ಅಂಜಲಿ ಮುದ್ರೆಯಲ್ಲಿದ್ದ ಮನುಷ್ಯ, ಸ್ತ್ರೀಯರ ವಿವಿಧ ಭಂಗಿಗಳನ್ನು ಕಾಣಬಹುದು. ಸಭಾಮಂಟಪದಲ್ಲಿ ಒಟ್ಟು ಇಪ್ಪತ್ತಾರು ಸ್ತಂಭಗಳು ಇದ್ದು ಸ್ತಂಭಗಳಲ್ಲಿ ವಿವಿಧ ಪುಷ್ಪಗಳ ಶಿಲ್ಪ, ಶಂಖ, ಚಕ್ರ, ಪದ್ಮ,ಗಣೇಶ, ಸ್ತ್ರೀಯರು ಹನುಮಂತ, ಧನುರ್ಧಾರಿ, ಬಿಂದಿಗೆ ಹೊತ್ತ ಮಹಿಳೆ, ಶಂಖ, ಹಂಸ, ಪಕ್ಷಿ ಚಿತ್ರಗಳಿವೆ. ನವರಂಗದ ಬಾಗಿಲುದ್ವಾರದಲ್ಲಿ ಲಲಾಟ ಬಿಂಬವಿದ್ದು, ದಕ್ಷಿಣ ಉತ್ತರ ದ್ವಾರಗಳನ್ನು ಪ್ರವೇಶಿಸುವಾಗ, ಸೋಪಾನ ಇಕ್ಕೇಲುಗಳಲ್ಲಿ ಸುರುಳಿ ಸುತ್ತಿಕೊಂಡ ಯಾಳಿಗಳಿವೆ. ಸಭಾಮಂಟಪದ ಮೇಲ್ಛಾವಣಿ ಭುವನೇಶ್ವರಿಯನ್ನು ಒಳಗೊಂಡಿದೆ. ಮಹಾಮಂಟಪದಲ್ಲಿ ಐವತ್ತೆಂಟು ಸ್ತಂಭಗಳಿದ್ದು ಚೌಕಾಕೃತಿಯಲ್ಲಿದೆ. ಇದರಲ್ಲಿ ಏಳು ಸಾಲಿನ ಸ್ತಂಭಗಳು ತುಂಬಾ ಕಲಾತ್ಮಕವಾಗಿವೆ. ಸ್ತಂಭಗಳ ಮೇಲೆ ಲತಾ ಸ್ತ್ರೀಯರ ವಿವಿಧ ಭಂಗಿ ಅಂಜಲಿ ಮುದ್ರೆ, ಶಂಖ, ಪದ್ಮ, ಚಕ್ರ ಶಂಕವನ್ನು ಊದುತ್ತಿರುವ ಮಹಿಳೆ, ಉಗ್ರ ನರಸಿಂಹ, ನರ್ತಕಿಯರ ವಿವಿಧ ಭಂಗಿಗಳು, ಧನುರ್ದಾರಿ, ವಿಷ್ಣು ಶಿವಲಿಂಗಕ್ಕೆ ಹಾಲೆರೆಯುತ್ತಿರುವ ಕಾಮಧೇನು, ಶ್ರೀ ವೈಷ್ಣವ ಚಿಹ್ನೆ, ಗರುಡ, ವಿವಿಧ ಭಂಗಿಯಲ್ಲಿ ಸಿಂಹ ಹೀಗೆ ಅನೇಕ ಮೂರ್ತಿಶಿಲ್ಪಗಳು ಚಿತ್ರಿತವಾಗಿವೆ. ಮುಖಮಂಟಪದ ಮೇಲ್ಛಾವಣೆ ಮಧ್ಯೆ, ಕಮಲದಿಂದ ಅಲಂಕೃತವಾಗಿದೆ. ಪ್ರತಿಯೊಂದು ಸ್ತಂಭದ ಮೇಲ್ಭಾಗದಲ್ಲಿ ಎರಡು ಪುಷ್ಪ ಬೋದಿಗೆಗಳು ಇವೆ. ಮಕರ ಸಿಂಹಗಳ ಹೊತ್ತು ನಿಂತ ಉಪಸ್ತಂಭಗಳ ನಿರ್ಮಾಣ ಚಿತ್ರಣ ನೋಡಲು ಆಕರ್ಷಣೀಯ. ಮುಖಮಂಟಪದ ದ್ವಾರಸ್ತಂಭಗಳು ಕೀರ್ತಿಮುಖ ಆನೆಯ ಕೋರೆಹಲ್ಲು ಸೊಂಡಿಲುಗಳು ಇರುವ ಕಾಲ್ಪನಿಕ ಪ್ರಾಣಿ ಚಿತ್ರ ಕೆಳಭಾಗ ಹೂ ಬಳ್ಳಿಯಿಂದ ಆವೃತವಾಗಿವೆ. ದೇವಾಲಯದ ಭಿತ್ತಿ ಕುಡ್ಯ ಸ್ತಂಭವನ್ನು ಒಳಗೊಂಡಿದೆ. ಗರ್ಭಗೃಹದ ಶಿಖರ ದ್ರಾವಿಡ ಮಾದರಿಯದು. ಕರ್ಣಕೂಟಗಳು ಪಂಜರಗಳು ಶಿಖರದ ಮೆರಗನ್ನು ಇನ್ನೂ ಹೆಚ್ಚಿಸಿವೆ. ಪಟ್ಟಾಭಿರಾಮದ ಪಕ್ಕದಲ್ಲಿ ಅಮ್ಮನವರ ಗುಡಿಯೂ ಇದೆ. ಇದು ದ್ವಿತಲವಿಮಾನವನ್ನು ಹೊಂದಿದ್ದು ಚೌಕಾರದ ಸ್ತಂಭಗಳಿಂದ ಆವೃತ್ತವಾಗಿದೆ.

ಹೆಸರು :- ವಿಷ್ಣು ದೇವಾಲಯ[೩೦]

ಸ್ಥಳ :– ಕಮಲಾಪುರ ಚಂದ್ರಶೇಖರ ದೇವಾಲಯದ ಉತ್ತರಕ್ಕೆ

ಕಾಲ :– ೧೫ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ದಕ್ಷಿಣಾಭಿಮುಖ

ವಸ್ತು :– ಬೆಣಚುಕಲ್ಲು

ಕ್ರಿ.ಶ ೧೫೫೪ರ ಶಾಸನವೊಂದು, ಇದು ತಿರುವೆಂಗಳ ನಾಥದೇವಾಲಯವೆಂದು ತಿಳಿಸುತ್ತದೆ. ಪ್ರಸ್ತುತ ಇದು ಸರಸ್ವತಿ ದೇವಾಲಯವೆಂದೂ ಕರೆಯಲ್ಪಟ್ಟಿದ್ದರೂ ಮೂಲತಃ ಇದು ವೈಷ್ಣವ ದೇವಾಲಯ. ದೇವಾಲಯದ ಸುತ್ತಲೂ ವೈಷ್ಣವ ಸಂಪ್ರದಾಯದ ಮೂರ್ತಿಶಿಲ್ಪಗಳು ಇದ್ದುದರಿಂದ ಇದು ವೈಷ್ಣವ ಪಂಥಕ್ಕೆ ಸೇರಿದ ದೇವಾಲಯದ ಎಂಬುದು ಸ್ಪಷ್ಟ. ಈ ದೇವಾಲಯದ ಗರ್ಭಗುಡಿ, ಅಂತರಾಳ, ಅರ್ಧಮಂಟಪ ಮತ್ತು ನವರಂಗ ಮಂಟಪಗಳನ್ನು ಒಳಗೊಂಡಿದೆ. ದೇವಾಲಯದ ದಕ್ಷಿಣ ದಿಕ್ಕಿಗೆ ಮುಖವಾಗಿರುವುದು ಇದೊಂದು ವಿಶೇಷತೆ. ದೇವಾಲಯದ ಗರ್ಭಗೃಹದಲ್ಲಿ ಪಾಣಿಪೀಠವಿದೆ. ಪಾಣಿಪೀಠದ ಮುಂಭಾಗದಲ್ಲಿ ಅಂಜಲಿಮುದ್ರೆಯಲ್ಲಿದ್ದ ಗರುಡನಿದ್ದಾನೆ. ಪ್ರಸ್ತುತ ಪೀಠದ ಮೇಲೆ ಮೂರ್ತಿ ಶಿಲ್ಪ ಇಲ್ಲ. ಅಂತರಾಳದ ಮೇಲ್ಭಾವಣಿಯಲ್ಲಿ ತೆರೆದ ಕಮಲವಿದೆ. ಗರ್ಭಗೃಹದ ಬಾಗಿಲವಾಡಮೇಲೆ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಇದೆ. ಇದರ ಇಕ್ಕೆಲುಗಳಲ್ಲಿ ಆನೆಗಳ ಚಿತ್ರಣ, ಪ್ರವೇಶದ್ವಾರದ ಎರಡೂ ಕಡೆ ಹೂ ಬಳ್ಳಿಗಳಿಂದ ಅಲಂಕೃತಗೊಂಡಿದೆ. ಅರ್ಧಮಂಟಪದ ಮೇಲ್ಭಾವಣಿ ಕಮಲದ ಹೂವಿನಿಂದ ಅಲಂಕೃತವಾಗಿದೆ. ಮಧ್ಯೆ ನಾಲ್ಕು ಸ್ತಂಭಗಳು ಮತ್ತು ಬೋದಿಗೆಗಳು ಚೌಕಾಕಾರ ಶಂಖ ಹೂ ಸಿಂಹ ಮುಖ ಹನುಮಂತ, ಮೂರು ನಾಮ ಚಿಹ್ನೆ, ತಪಸ್ವಿ, ಕುಳಿತದೇವಿ, ಅಂಜಲಿಮುದ್ರೆಯಲ್ಲಿದ್ದ ಸ್ತ್ರೀ, ಕೃಷ್ಣ, ಆಮೆಗಳ ಚಿತ್ರಣ ಇಲ್ಲಿಯ ಮೂರ್ತಿಶಿಲ್ಪಕ್ಕೆ ಮೆರಗನ್ನು ನೀಡುವಂತಿದೆ. ನವರಂಗದ ಮಂಟಪದಲ್ಲಿ ಸ್ತಂಭಗಳಿದ್ದು, ಸ್ತಂಭಗಳು ಚೌಕಾಕಾರವಾಗಿದ್ದು. ಮೇಲೆ ಪುಷ್ಪ ಬೋದಿಗೆಗಳಿವೆ. ಮಂಟಪದ ಮೇಲ್ಭಾವಣಿ ಭುವನೇಶ್ವರಿಯನ್ನು ಒಳಗೊಂಡಿದೆ. ಇಲ್ಲಿನ ವಿಷ್ಣು, ನಂದಿ, ಕೀರ್ತಿಮುಖ, ಹನುಮಂತ, ದೇವಿ, ಗರುಡ, ವಾಮನ, ನವಿಲು, ಆಯುಧಧಾರಿ, ಚಾಮರಧಾರಿಣಿ, ಡೋಲುವಾದಕ, ಪುರುಷ ಮತ್ತು ಸ್ತ್ರೀಯರ ವಿವಿಧ ಭಂಗಿ, ಈಟಿ ಹಿಡಿದ ಮನುಷ್ಯ, ಸ್ಥಾನಿಕ ಭಂಗಿಯಲ್ಲಿ ಸ್ತ್ರೀ, ಆನೆ ಕಿನ್ನರ, ಗಣೇಶ, ಸಿಂಹ ಕೃಷ್ಣ ಮತ್ತು ಗೋಪಿಕಾ ಸ್ತ್ರೀಯರು ಮುಂತಾದ ಮೂರ್ತಿಶಿಲ್ಪಗಳು ಈ ಸ್ತಂಭಗಳಲ್ಲಿ ಮೂಡಿವೆ. ದೇವಾಲಯದ ಹೊರಭಾಗ ಅಧಿಷ್ಠಾನ ಭಿತ್ತಿ ಮತ್ತು ಶಿಖರವನ್ನು ಒಳಗೊಂಡಿದೆ. ಅಧಿಷ್ಠಾನ ಮಂಚಬಂಧ ಮಾದರಿಯಲ್ಲಿದೆ. ಭಿತ್ತಿ ಸಪಾಟಾಗಿದೆ, ಗರ್ಭಗುಡಿಯ ಹೊರಭಾಗದಲ್ಲಿ ಹಾವು ಆಮೆ, ಮೀನುಗಳು ಚಿತ್ರಿತವಾಗಿವೆ. ಭಿತ್ತಿಯ ಹೊರ ಭಾಗದಲ್ಲಿ ಗೂಡುಗಳಿದ್ದು ಪ್ರಸ್ತುತ ಯಾವುದೇ ಮೂರ್ತಿಶಿಲ್ಪವಿಲ್ಲ. ಗರ್ಭಗುಡಿಯ ಹೊರಭಾಗದಲ್ಲಿ ಅಭಿಷೇಕದ ನೀರು ಹೊರಗಡೆ ಹೋಗಲು ಸಿಂಹ ಮುಖದ ಪ್ರಣಾಳಿಕೆ ಇದೆ. ಗರ್ಭಗುಡಿಯ ಮೇಲಿನ ಶಿಖರದಲ್ಲಿ ಕರ ಜೋಡಿಸಿ ನಿಂತಿರುವ ಹನುಮಂತ ಹಾಗೂ ಅಂಜಲಿಮುದ್ರೆಯಲ್ಲಿದ್ದು ಸ್ತ್ರೀ ಮುಂತಾದ ಮೂರ್ತಿಶಿಲ್ಪಗಳು ಗಾರೆಯಿಂದ ಮಾಡಲ್ಪಟ್ಟಿದೆ.

ಹೆಸರು :– ವಿಷ್ಣು ದೇವಾಲಯ

ಸ್ಥಳ :– ಪಾಪಿನಾಯಕನ ಹಳ್ಳಿಯ ರಸ್ತೆಯ ಪಕ್ಕ ಸಿದ್ದೇಶ್ವರ ಗದ್ದೆಯಲ್ಲಿ

ಕಾಲ :– ೧೫ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಪೂರ್ವಾಭಿಮುಖ

ವಸ್ತು :– ಬೆಣಚುಕಲ್ಲು

ಈ ದೇವಾಲಯವು ೧೫.೨೦ x ೯.೨೦ ಉದ್ದಅಗಲವಿದೆ. ಈ ದೇವಾಲಯವು ಇಮ್ಮಡಿ ಬುಕ್ಕರಾಯನ ಕಾಲದ್ದಾಗಿದೆ. ಪ್ರಸ್ತುತ ದೇವಾಲಯ ಶಿಥಿಲವಾಗಿದೆ. ಈ ದೇವಾಲಯವು ಗರ್ಭಗೃಹ ಅಂತರಾಳ, ನವರಂಗ ಮತ್ತು ಮುಖಮಂಟಪವನ್ನು ಒಳಗೊಂಡಿದೆ. ಗರ್ಭಗೃಹದ ಬಾಗಿಲುವಾಡದ ಲಲಾಟಬಿಂಬದಲ್ಲಿ ಗರುಡನ ಶಿಲ್ಪವಿದೆ. ಅಂತರಾಳದ ಎರಡು ಬಾಗಿಲ ಬಳಿಗೆ ವೈಷ್ಣವ ದ್ವಾರಪಾಲಕರಿದ್ದಾರೆ. ದ್ವಾರದ ಸುತ್ತ ಲತೆಗಳ ಚಿತ್ರಣವಿದೆ. ಮೇಲ್ಭಾಗದ ಪಟ್ಟಿಕೆಯಲ್ಲಿ ಗಜಲಕ್ಷ್ಮಿ ಪದ್ಮಾಸೀನಗಳಾಗಿದ್ದಾಳೆ. ನವರಂಗ ಮಂಟಪದ ಮೇಲ್ಛಾವಣಿ ಅಷ್ಟಕೋನಾಕೃತಿಯಿಂದ ಅಲಂಕೃತವಾಗಿದೆ. ಇಲ್ಲಿ ಭುವನೇಶ್ವರಿ ಇರುವುದು ಸಾಮಾನ್ಯ ಲಕ್ಷಣಗಳಲ್ಲಿ ಒಂದು. ಮಧ್ಯ ನಾಲ್ಕು ಸ್ತಂಭಗಳಿದ್ದು ಈ ಸ್ತಂಭಗಳು ಚೌಕಕಾರವಾಗಿವೆ. ಸ್ತಂಭ ಚೌಕಕಾರ ಅಷ್ಟಕೋನಾಕೃತಿ, ಅಮಾಲಕ ಮತ್ತು ಮೇಲೆ ಚೌಕಾಕಾರದ ಬೋದಿಗೆಗಳನ್ನು ಒಳಗೊಂಡಿದೆ. ಈ ಸ್ತಂಭಗಳ ಮೇಲೆ ವಿಷ್ಣುವಿನ ಅವತಾರ, ಉಗ್ರನರಸಿಂಹ, ಕೂರ್ಮಾವತಾರ, ವಿಷ್ಣು, ಧನುರ್ಧಾರಿ, ಪುರುಷ, ಸ್ತ್ರೀಯರ ನೃತ್ಯಭಂಗಿ, ಬ್ರಹ್ಮ, ಗಣಪ, ಕಾಮಧೇನು, ಕುಳಿತ ವಿಷ್ಣು, ಕಾಳಿಂಗ ಮರ್ಧನ, ಕೃಷ್ಣ, ಹನುಮಂತ ದಶಾವತಾರ, ಚಕ್ರ, ಶಂಖ, ಪದ್ಮ, ತಪಸ್ವಿನಿ, ತ್ರಿನಾಮ, ನವಿಲು, ಉಗ್ರನರಸಿಂಹ ಮೂರ್ತಿಶಿಲ್ಪಗಳು ಇಲ್ಲಿ ಚಿತ್ರಿತವಾಗಿದ್ದು ಕಲಾತ್ಮಕತೆಯಿಂದ ಕೂಡಿದೆ. ದೇವಾಲಯದ ಹೊರಭಾಗ ಅಧಿಷ್ಠಾನ, ಭಿತ್ತಿ, ಕಪೋತವನ್ನು ಒಳಗೊಂಡಿದೆ. ಪ್ರಸ್ತುತ ಅಧಿಷ್ಠಾನ ಮಂಚಬಂದ ಮಾದರಿ. ಕಲ್ಯಾಣಮಂಟಪ ಮಹಾಮಂಟಪಗಳಿದ್ದು, ಅವುಗಳ ಆಗ್ನೇಯ ದಿಕ್ಕಿಗಿರುವ ಕಲ್ಯಾಣಮಂಟಪಕ್ಕೆ ಎರಡು ಒತ್ತು ಗೋಡೆಗಳನ್ನು ನಿರ್ಮಿಸಿದ್ದಾರೆ. ಆವರಣದ ಪ್ರಾಕಾರದ ಭಿತ್ತಿಗಳು ೭.೬ ಮೀ ಎತ್ತರವಿದ್ದು ಒಟ್ಟಾರೆ ವಾಸ್ತುಶೈಲಿಯನ್ನು ಗಮನಿಸಿದರೆ ವಿಠಲದೇವಾಲಯದ ಮಾದರಿಯನ್ನು ಹೋಲುತ್ತದೆ.

ಹೆಸರು :– ಹನುಮಂತ ದೇವಾಲಯ

ಸ್ಥಳ :– ಅಕ್ಕ–ತಂಗಿಯರ ಗುಡ್ಡ ಪಕ್ಕದಲ್ಲಿ

ಕಾಲ :– ೧೫ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ದಕ್ಷಿಣಾಭಿಮುಖ

ವಸ್ತು :– ಬೆಣಚುಕಲ್ಲು

ಈ ದೇವಾಲಯವು ಗರ್ಭಗೃಹ ಮತ್ತು ಮಂಟಪವನ್ನು ಮಾತ್ರ ಒಳಗೊಂಡಿದೆ. ಗರ್ಭಗುಡಿಯ

ಮೇಲ್ಛಾವಣೆ ಅಷ್ಟಕೋನಾಕೃತಿ ಮಧ್ಯದಲ್ಲಿ ಅರಳಿದ ಕಮಲವಿದೆ. ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ಹೆಡೆ ಬಿಚ್ಚಿದ ನಾಗಗಳಿವೆ. ಲಲಾಟಬಿಂಬದಲ್ಲಿ ಅರಳಿದ ಪುಷ್ಪಗಳಿವೆ. ಮುಖಮಂಟಪದ ಬಲಗಡೆ ಅಂಜಲಿಮುದ್ರೆಯಲ್ಲಿದ್ದ ನಾಗಕನ್ಯೆಯ ಚಿತ್ರಣವಿದೆ. ಇದರ ಮೇಲ್ಛಾವಣೆಯಲ್ಲಿ ವಿಸ್ತೃತವಾಗಿ ಬಂಡೆಗಳು ಹಾಸಲ್ಪಟ್ಟಿವೆ. ಭಿತ್ತಿ ವಿಸ್ತೃವಾಗಿ ಕಟ್ಟಲ್ಪಟ್ಟಿದೆ. ಮುಂಭಾಗದ ಎರಡು ಸ್ತಂಭಗಳು ಚೌಕಾಕಾರದ ಅಷ್ಟಕೋನ ಪುನಃ ಚೌಕಕಾರ ಮತ್ತು ಚೌಕ ಬೋದಿಗೆಗಳನ್ನು ಒಳಗೊಂಡಿವೆ. ಬಂಡೆಗಲ್ಲಿನಿಂದ ಕಪೋತವನ್ನು ಹಾಸಿರುವುದು ಇಲ್ಲಿನ ಮತ್ತೊಂದು ವೈಶಿಷ್ಟ್ಯತೆ. ಮೇಲ್ಛಾವಣೆಯನ್ನು ಜೀರ್ಣೋದ್ಧಾರ ಮಾಡಲಾಗಿದ್ದು ಪ್ರಸ್ತುತ ಶಿಖರವಿಲ್ಲದೆ ಗಾರೆಯಿಂದ ಮಾಡಲ್ಪಟ್ಟಿದೆ.

ಹೆಸರು :– ಗಾರಿಭಾವಿ ಆಂಜನೇಯ ದೇವಾಲಯ

ಸ್ಥಳ :– ಕನ್ನಡ ವಿಶ್ವವಿದ್ಯಾಲಯಕ್ಕೆ ಹೋಗುವ ರಸ್ತೆಯ ಎಡಭಾಗದಲ್ಲಿ

ಕಾಲ :– ೧೫ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಉತ್ತರಾಭಿಮುಖ

ವಸ್ತು :– ಬೆಣಚುಕಲ್ಲು

ಈ ದೇವಾಲಯವು ಗರ್ಭಗೃಹ, ತೆರೆದ ಮಂಟಪ ಮತ್ತು ಮುಖಮಂಟಪವನ್ನು ಒಳಗೊಂಡಿದೆ. ಮೇಲ್ಛಾವಣೆಯ ಬಂಡೆಗಳು ಉದ್ದವಾಗಿ ಹಾಸಲ್ಪಟ್ಟಿದೆ. ಭಿತ್ತಿಯ ಕಲ್ಲು ವಿಸ್ತೃತವಾಗಿದೆ. ಗರ್ಭಗೃಹದಲ್ಲಿ ಹನುಮಂತನ ಮೂರ್ತಿಶಿಲ್ಪವಿದೆ. ಇದರ ಪ್ರವೇಶದ್ವಾರದ ಲಲಾಟ ಬಿಂಬದಲ್ಲಿ ಹೂವಿನ ಚಿತ್ರಣವಿದೆ. ಇಲ್ಲಿನ ಮುಖಮಂಟಪವು ಒಂಬತ್ತು ಅಂಕಣಗಳಿಂದ ಹತ್ತು ಸ್ತಂಭಗಳಿಂದ ರಚಿತವಾಗಿದೆ. ಈ ಸ್ತಂಭಗಳು ಚೌಕಕಾರವಾಗಿದ್ದು ಮೂಲರೂಪದಲ್ಲಿರುವುದೇ ಇದರ ವೈಶಿಷ್ಟ್ಯತೆ. ಈ ಸ್ತಂಭಗಳ ಮೇಲ್ಭಾಗದಲ್ಲಿ ಚೌಕಾಕಾರದ ಪುಷ್ಪ ಬೋದಿಗೆಗಳನ್ನು ಒಳಗೊಂಡಿದೆ. ಮುಖಮಂಟಪದ ಮುಂಭಾಗದಲ್ಲಿ ಮುಂಚಾಚಿತ ಕಪೋತವಿದೆ.

ಹೆಸರು :– ವೈಷ್ಣವ ದೇವಾಲಯ

ಸ್ಥಳ :– ವರದರಾಜಮ್ಮ ಪಟ್ಟಣ (ಎಚ್.ಪಿ.ಸಿ) ರಸ್ತೆಯ ಎಡಬದಿಯಲ್ಲಿ

ಕಾಲ :– ೧೫ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಪೂರ್ವಾಭಿಮುಖ

ವಸ್ತು :– ಬೆಣಚುಕಲ್ಲು

ಲೋಕಾರೂಢಿಯಲ್ಲಿ ಇದನ್ನು ಹೊಂಡದ ದೇವಾಲಯ ಎಂತಲೇ ಕರೆಯುತ್ತಾರೆ. ಇದು ಹೊಂಡದ ಮಧ್ಯ ಭಾಗದಲ್ಲಿದೆ. ಈ ದೇವಾಲಯವು ಚಚ್ಚೌಕಕಾರವಾಗಿದೆ. ನಾಲ್ಕು ಸ್ತಂಭಗಳಿಂದ

ಕೂಡಿದೆ. ಮೇಲ್ಛಾವಣಿಯ ಬಂಡೆಗಳನ್ನು ಅಡ್ಡಲಾಗಿ ಹಾಸಲಾಗಿದೆ. ಮೇಲ್ಭಾಗದ ಶಿಖರವು ಶಿಥಿಲವಾಗಿದೆ. ಕಪೋತವು ಪದ್ಮ ಬಂಧದಿಂದ ಕೂಡಿದೆ. ಶಿಖರವನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ. ಸ್ತಂಭಗಳ ಭಿತ್ತಿಯ ಮೇಲೆ ಅನೇಕ ಉಬ್ಬು ಶಿಲ್ಪಗಳಿವೆ. ಸ್ತಂಭಗಳ ನಾಲ್ಕು ಕಡೆಗೂ ಪುಷ್ಪ ಬೋದಿಗೆಗಳಿವೆ. ಈ ಸ್ತಂಭಗಳ ಮೇಲೆ ಶಂಖ, ಕುಬೇರ, ಸಿಂಹ, ಚಕ್ರ ನರ್ತಕಿ, ಮಂಗ, ಹಂಸ, ತ್ರಿನಾಮ, ಹಸು, ವಿಷ್ಣು, ಸ್ಥಾನಿಕ ಭಂಗಿಯಲ್ಲಿ ವಿಷ್ಣು, ಉಗ್ರನರಸಿಂಹ ಪುಷ್ಪ.ಉಬ್ಬು ಶಿಲ್ಪಗಳಿವೆ. ಈ ದೇವಾಲಯವು ಬೃಹತ್ ಪ್ರಕಾರದ ಭಿತ್ತಿಯನ್ನು ಹೊಂದಿದ್ದು, ಮೂರು ದಿಕ್ಕುಗಳಲ್ಲಿ ಪ್ರವೇಶ ದ್ವಾರದ ಮೆಟ್ಟಿಲುಗಳಿವೆ. ಪ್ರಾಕಾರದ ಸುತ್ತಲೂ ಮಂಟಪಗಳಿವೆ. ನಾಲ್ಕು ಕಡೆಗೂ ೨೧ರಂತೆ ಮಂಟಪಗಳಿವೆ. ಉತ್ತರ ದಕ್ಷಿಣಕ್ಕೆ ಮಾತ್ರ ೨೧-೨೧ ಮಂಟಪಗಳಿವೆ. ಒಂದೊಂದು ಮಂಟಪದಲ್ಲಿ ಚೌಕಾಕಾರದ ನಾಲ್ಕು ಸ್ತಂಭಗಳಿವೆ. ದೇವಾಲಯದ ಮುಂದೆ ವೈಷ್ಣವ ದ್ವಾರಪಾಲಕರಿರುವ ಉಬ್ಬ ಶಿಲ್ಪಗಳ ಸ್ತಂಭದ ಮೇಲಿವೆ.

ಹೆಸರು :- ರಂಗನಾಥ ದೇವಾಲಯ (ಮಾಧವ)[೩೧]

ಸ್ಥಳ :- ಜನಾನ ಪ್ರಕಾರದ ಹೊರಗೆ ಆಗ್ನೇಯ ಮೂಲೆ (ಕಮಲಾಪುರ)

ಕಾಲ :- ೧೫ನೇ ಶತಮಾನ

ರಾಜವಂಶ :- ವಿಜಯನಗರ

ದಿಕ್ಕು :- ದಕ್ಷಿಣಾಭಿಮುಖ

ವಸ್ತು :- ಬೆಣಚುಕಲ್ಲು

ಈ ದೇವಾಲಯ ಕ್ರಿಶ ೧೫೪೫ರ ಶಾಸನದ ಮಾಧವ ದೇವಾಲಯ ಎಂದು ಉಲ್ಲೇಖಿಸಿದೆ. ಪ್ರಸ್ತುತ ರಂಗನಾಥ ದೇವಾಲಯವೆಂದೇ ಕರೆಯಲ್ಪಡುತ್ತದೆ. ಜನಾನ ಪ್ರಾಕಾರದ ಹೊರಗೆ ಆಗ್ನೇಯ ಮೂಲೆಯಲ್ಲಿರುವ ಸಣ್ಣ ದೇವಾಲಯವಿದು. ಈ ದೇವಾಲಯದ ಸಂಕೀರ್ಣದಲ್ಲಿ ಪಶ್ಚಿಮಕ್ಕೆ ಮಾಧವ ದೇವಾಲಯ. ಪೂರ್ವಕ್ಕೆ ದೇವಿ ದೇವಾಲಯವಿದೆ. ಈ ಮಾಧವ ದೇವಾಲಯದ ತಳವಿನ್ಯಾಸದಲ್ಲಿ ಗರ್ಭಗೃಹ, ಸುಖನಾಸಿ, ಹದಿನೆಂಟು ಸ್ತಂಭಗಳನ್ನು ಒಳಗೊಂಡ ಮುಖಮಂಟಪವಿದೆ. ಸುಖನಾಸಿಯ ಮುಂಭಾಗದಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಮುಖ ಮಂಟಪದ ಉತ್ತರ ಗೋಡೆಗೆ ಆಧಾರ ಮಾಡಿಕೊಂಡು ನಿಂತಿರುವ ಮೂರು ಮೀಟರ್ ಎತ್ತರದ ಹನುಮಂತ ದೇವರ ಮೂರ್ತಿ ಇದೆ. ಈ ದೇವಾಲಯದಲ್ಲಿರುವ ಶಾಸನವ ಇಲ್ಲಿಯ ರಂಗಮಂಟಪವನ್ನು ಮಾಧವ ದೇವಾಲಯದಲ್ಲಿ ಸಂಗೀತ ಮತ್ತು ನೃತ್ಯ ಕಾರ್ಯಕ್ರಮಕ್ಕಾಗಿ ಅರಸು ಸದಾಶಿವರಾಯನ ಕಾಲದಲ್ಲಿ ಕ್ರಿ.ಶ. (ಹದಿನೈದು ನೂರ ನಲವತ್ತೈದು) ೧೫೪೫ರಲ್ಲಿ ವಲ್ಲಭರಾಜುವಿನ ಪುತ್ರ ತಿಮ್ಮರಾಜನು ಕಟ್ಟಿಸಿದನೆಂದು ತಿಳಿಸುತ್ತದೆ. ಈ ರಂಗ ಮಂಟಪದ ಸ್ತಂಭಗಳ ಮೇಲೆ ವೈವಿದ್ಯಮಯ ಶಿಲ್ಪಗಳನ್ನು ಕಾಣಬಹುದು. ಕೃಷ್ಣಲೀಲೆ, ವಿಷ್ಣುವಿನ ದಶಾವತಾರಗಳ ಉಬ್ಬುಶಿಲ್ಪಗಳು, ವಿಠಲ, ಶ್ರೀನಿವಾಸ, ಗರುಡ, ಸೂರ್ಯ, ಹನುಮಂತ, ಆಳ್ವರು, ಕುಬೇರ, ವಿಷ್ಣು,ಯಾಳಿ ದೇವಿ, ಹನುಮಂತ, ನಾಟ್ಯಸ್ತ್ರಿ, ಬೆಣ್ಣೆ ಕೃಷ್ಣ, ಅಭಯ ಹಸ್ತಭಕ್ತ, ಧನುರ್ಧಾರಿ, ಸಿಂಹ ಹೂವಿನಚಿತ್ರ, ಮತ್ಸಾವತಾರ, ಶಂಖ ಊದುತ್ತಿರುವ ಮಹಿಳೆ, ಅಂಜಲಿ ಮುದ್ರೆಯಲ್ಲಿದ್ದ ಭಕ್ತ, ತ್ರಿನಾಮ, ಶಂಖು, ಚಕ್ತ ಚಿಹ್ನೆಗಳು, ಪುಷ್ಪಗುಚ್ಚ ಹಿಡಿದ ಆಂಜನೇಯ,

ಮಿಥುನ ಶಿಲ್ಪಗಳಿವೆ.

ಹೆಸರು :- ಹೇಮಗಿರಿ ಆಂಜನೇಯ ದೇವಾಲಯ

ಸ್ಥಳ :- ಕಾಮಲಾಪುರದ ಕೆರೆ ಕಟ್ಟೆಯಿಂದ ೧ ಕಿ.ಮೀ. ದೂರದಲ್ಲಿ

ಕಾಲ :- ೧೫-೧೬ನೇ ಶತಮಾನ

ರಾಜವಂಶ :- ವಿಜಯನಗರ

ದಿಕ್ಕು :- ಉತ್ತರ-ದಕ್ಷಿಣ

ವಸ್ತು :- ಬೆಣಚುಕಲ್ಲು

ಈ ದೇವಾಲಯವು ೫.೭೦ ಮೀ ಅಗಲ ಮತ್ತು ೧೦.೧೫ ಮೀ. ಉದ್ದವಿದೆ. ಈ ದೇವಾಲಯವು ಗರ್ಭಗೃಹ. ಮುಖ ಮಂಟಪವನ್ನು ಒಳಗೊಂಡಿದೆ. ಗರ್ಭಗೃಹದ ಮೇಲ್ಛಾವಣೆಯು ಅಷ್ಟಕೋನಾಕೃತಿಯನ್ನು ಒಳಗೊಂಡಿದ್ದು ಅದರ ಮಧ್ಯೆ ಅರಳಿದ ಪದ್ಮವಿದೆ. ಗರ್ಭಗೃಹದಲ್ಲಿ ಏಕಶಿಲಾ ಆಂಜನೇಯ ಮೂರ್ತಿ ಇದೆ. ಮುಖ ಮಂಟಪವನ್ನು ಇತ್ತೀಚೆಗೆ ನವೀಕರಿಸಲಾಗಿದೆ. ಮುಖ ಮಂಟಪವು ಮೂರು ಅಂಕಣಗಳಿಂದ ಕೂಡಿದೆ. ನಾಲ್ಕು ಸ್ತಂಭಗಳಿಂದ ಆವೃತ್ತವಾಗಿದೆ. ಮೇಲ್ಛಾವಣೆಯ ಬಂಡೆಗಲ್ಲನ್ನು ಅಡ್ಡಲಾಗಿ ಹಾಸಲಾಗಿದೆ. ಸ್ತಂಭಗಳು ಸರಳ ಬೋದಿಗೆಗಳನ್ನು ಒಳಗೊಂಡಿದೆ. ಈ ದೇವಾಲಯದ ಬಲಗಡೆ ಶಾಸನವೊಂದಿದೆ. ಈ ಶಾಸನದಲ್ಲಿ ಶ್ರೀ ಗುರು ಹೇಮಗಿರಿ ಪ್ರಸನ್ನ ಎಂದಿದೆ. ಈ ದೇವಾಲಯದ ಗೋಪುರವನ್ನು ಇತ್ತೀಚೆಗೆ ನವೀಕರಿಸಲಾಗಿದೆ. ಈ ದೇವಾಲಯದ ಎದುರುಗಡೆ ಗರುಡ ಸ್ತಂಭವಿದೆ. ಪಶ್ಚಿಮ ದಿಕ್ಕಿಗೆ ಸಣ್ಣ ಮಂಟಪವಿದೆ.

ಹೆಸರು :- ವೈಷ್ಣವ ದೇವಾಲಯ

ಸ್ಥಳ :- ರಾಮನಗರದ ಬಸ್‌ನಿಲ್ದಾಣದ ಎಡಗಡೆ ಎತ್ತರದ ಬೆಟ್ಟದ ಮೇಲೆ

ಕಾಲ :- ೧೫-೧೬ನೇ ಶತಮಾನ

ರಾಜವಂಶ :- ವಿಜಯನಗರ

ದಿಕ್ಕು :- ಪಶ್ಚಿಮಾಭಿಮುಖ

ವಸ್ತು :- ಬೆಣಚುಕಲ್ಲು

ದೇವಾಲಯವು ೧೨.೨೦ ಮೀ ಉದ್ದ ಮತ್ತು ೬.೮೦ ಮೀ ಅಗಲವಿದೆ. ದೇವಾಲಯವು ಗರ್ಭಗೃಹ. ಅಂತರಾಳ, ನವರಂಗ, ಮುಖಮಂಟಪ ಹಾಗೂ ಪ್ರವೇಶದ್ವಾರವನ್ನು ಒಳಗೊಂಡಿದೆ. ಗರ್ಭಗೃಹದ ಮೇಲ್ಛಾವಣಿ ಅಷ್ಟ ಕೋನಾಕೃತಿಯಿಂದ ಕೂಡಿದೆ. ಬಂಡೆಗಳನ್ನು ಮೇಲ್ಛಾವಣೆಯಲ್ಲಿ ಅಡ್ಡಲಾಗಿ ಹಾಸಲಾಗಿದೆ. ಗರ್ಭಗೃಹದ ಪ್ರವೇಶ ಲಲಾಟ ಬಿಂಬದಲ್ಲಿ ಅರಳಿದ ಪುಷ್ಪವಿದೆ. ಅಂತರಾಳದ ಮೇಲ್ಛಾವಣೆಯ ಬಂಡೆಗಳನ್ನು ಉದ್ದವಾಗಿ ಹಾಸಲಾಗಿದೆ. ದ್ವಾರದ ಇಕ್ಕೆಲುಗಳಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ.

ನವರಂಗದ ಮೇಲ್ಛಾವಣಿ ಅಷ್ಟಕೋನಾಕೃತಿಯಿಂದ ಕೂಡಿದ್ದು ಅದರಲ್ಲಿ ಅರಳಿದ ಪುಷ್ಪವಿದೆ. ನವರಂಗದಲ್ಲಿ ಸ್ತಂಭಗಳಿದ್ದು ಇವು ಮಿಶ್ರಕ ಸ್ತಂಭಗಳಾಗಿವೆ. ಇವು ಚೌಕಾಕಾರದ ಪುಷ್ಪ ಬೋದಿಗೆಗಳನ್ನು ಒಳಗೊಂಡಿದೆ. ಮುಖ ಮಂಟಪವು ೨೦ ಸ್ತಂಭಗಳಿಂದ ಕೂಡಿದ್ದು ೧೨ ಅಂಕಣಗಳಿಂದ ಆವೃತ್ತವಾಗಿದೆ. ಮೇಲ್ಛಾವಣಿಯ ಬಂಡೆಗಳನ್ನು ಅಡ್ಡಲಾಗಿ ಹಾಸಲಾಗಿದೆ. ಮಿಶ್ರಿತ ಸ್ತಂಭಗಳು ಬೋದಿಕೆ, ವೃತ್ತ ನಾಸಿಗಳನ್ನು ಒಳಗೊಂಡಿದೆ. ಪ್ರವೇಶದ್ವಾರ ಇಟ್ಟಿಗೆ ಗಾರೆಯಿಂದ ನಿರ್ಮಿತವಾಗಿದೆ. ಗೋಪುರವು ಕಮಾನು ಆಕಾರದಿಂದ ಕೂಡಿದ್ದು, ಪ್ರಸ್ತುತ ಶಿಥಿಲವಾಗಿದೆ.

ಹೆಸರು :– ಹನುಮಂತ ದೇವಾಲಯ

ಸ್ಥಳ :– ರಾಮನಗರದ ಬಸ್ ನಿಲ್ದಾಣದ ಬಲಗಡೆ ಎತ್ತರದ ಬೆಟ್ಟದ ಮೇಲೆ

ಕಾಲ :– ೧೫–೧೬ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಉತ್ತರ–ದಕ್ಷಿಣ

ವಸ್ತು :– ಬೆಣಚುಕಲ್ಲು

ಈ ದೇವಾಲಯವು ೨.೭೫ ಮೀ ಉದ್ದ ಮತ್ತು ೫.೬೦ ಮೀ ಅಗಲ ಹೊಂದಿದೆ. ದೇವಾಲಯವು ಗರ್ಭಗೃಹ ಮತ್ತು ಮುಖ ಮಂಟಪವನ್ನು ಹೊಂದಿದೆ. ಗರ್ಭಗುಡಿಯ ಮೇಲ್ಛಾವಣಿಯು ಸಪಾಟಾಗಿದ್ದು, ಬಂಡೆಗಳನ್ನು ಅಡ್ಡಲಾಗಿ ಹಾಸಲಾಗಿದೆ. ಗರ್ಭಗೃಹದಲ್ಲಿ ಆಂಜನೇಯ ಶಿಲ್ಪವಿದೆ. ಮುಖ ಮಂಟಪವು ೪ ಚೌಕಾಕಾರದ ಸ್ತಂಭಗಳಿಂದ ಆವೃತ್ತವಾಗಿದ್ದು, ಚೌಕಾಕಾರದ ಬೋದಿಗೆಗಳನ್ನು ಒಳಗೊಂಡಿದೆ. ದೇವಾಲಯದ ಎದುರುಗಡೆ ಗರುಡ ಸ್ತಂಭವಿದೆ.

ಹೆಸರು :– ಆಂಜನೇಯ ದೇವಾಲಯ

ಸ್ಥಳ :– ದೇವಿ ದೇವಾಲಯದ ಹಿಂಬದಿಯಲ್ಲಿ

ಕಾಲ :– ೧೫–೧೬ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಉತ್ತರಾಭಿಮುಖ

ವಸ್ತು :– ಬೆಣಚುಕಲ್ಲು

ಈ ದೇವಾಲಯವು ೭.೬೦ ಮೀ ಉದ್ದ ಮತ್ತು ೭.೧೦ ಮೀ ಅಗಲವಿದೆ. ಈ ದೇವಾಲಯವು ೨ ಗರ್ಭಗೃಹ ಮತ್ತು ಒಂದು ಅಂತರಾಳವನ್ನು ಒಳಗೊಂಡಿದೆ. ಮೊದಲನೆಯ ಗರ್ಭಗೃಹದಲ್ಲಿ ಆಂಜನೇಯ ಮೂರ್ತಿ ಇದೆ. ಗರ್ಭಗೃಹ ಹಾಗೂ ಅಂತರಾಳದ ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ವೈಷ್ಣವ ದ್ವಾರರಪಾಲಕರಿದ್ದಾರೆ. ದ್ವಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಆಸೀನಳಾಗಿದ್ದಾಳೆ. ಮುಖ ಮಂಟಪವು ಆರು ಅಂಕಣಗಳಿಂದ ಕೂಡಿದ್ದು ಮೇಲ್ಛಾವಣಿಯ ಬಂಡೆಗಳನ್ನು ಉದ್ದವಾಗಿ ಹಾಸಲಾಗಿದೆ. ಚೌಕಾಕಾರದ ಸ್ತಂಭಗಳು ಇದಕ್ಕೆ ತಕ್ಕಂತೆ ಚೌಕಾಕಾರದ ಬೋದಿಗೆಗಳನ್ನು ಒಳಗೊಂಡಿದೆ.

ಹೆಸರು :– ಆಂಜನೇಯ ದೇವಾಲಯ

ಸ್ಥಳ :– ರಾಮನಗರದ ಮುಖ್ಯರಸ್ತೆಯ ಬಸ್ ನಿಲ್ದಾಣದ ಬಲಗಡೆ

ಕಾಲ :– ೧೬ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಪೂರ್ವಾಭಿಮುಖ

ವಸ್ತು :– ಬೆಣಚುಕಲ್ಲು

ಈ ದೇವಾಲಯವು ೩.೧೦ ಮೀ ಉದ್ದ ಮತ್ತು ೫.೧೦ ಸೆಂ.ಮೀ ಅಗಲವಾದ ವಿಸ್ತೀರ್ಣ ಹೊಂದಿದೆ. ಈ ದೇವಾಲಯ ಕಮಲಾಪುರದಿಂದ ಉತ್ತರ ದಿಕ್ಕಿಗೆ ೨ ಕಿ.ಮೀ ಅಂತರದಲ್ಲಿದೆ. ಗುಡ್ಡ ಬೆಟ್ಟಗಳ ಮಧ್ಯೆ ಗರ್ಭಗೃಹವಿದೆ. ಗರ್ಭಗೃಹದಲ್ಲಿ ಬೆಣಚುಕಲ್ಲಿನ ಏಕಶಿಲೆಯಲ್ಲಿ ಆಂಜನೇಯ ಶಿಲ್ಪವಿದೆ. ಈ ಮಂಟಪದ ಪ್ರವೇಶದ್ವಾರದಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ದ್ವಾರದ ಮೇಲ್ಭಾಗದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಪದ್ಮಾಸನದಲ್ಲಿ ಆಸೀನಳಾಗಿದ್ದಾಳೆ. ದ್ವಾರದ ಮೇಲ್ಭಾಗದಲ್ಲಿ ಅರಳಿದ ಪುಷ್ಪವಿದೆ.

ಹೆಸರು :– ವಿಷ್ಣು ದೇವಾಲಯ[೨೩]

ಸ್ಥಳ :– ಸಿಂಗಾರದ ಬಾಗಿಲಿನ ಸಮೀಪ, ಕಮಲಾಪುರ

ಕಾಲ :– ೧೬ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಉತ್ತರಾಭಿಮುಖ

ವಸ್ತು :– ಬೆಣಚುಕಲ್ಲು

ಈ ದೇವಾಲಯದ ಉದ್ದ ೧೫.೨೫ x ಅಗಲ ೮.೨೦ ಸೆಂ.ಮೀ ಇದೆ. ಒಳಭಾಗ ಗರ್ಭಗುಡಿ ಅಂತರಾಳ, ಸಭಾಮಂಟಪವನ್ನು ಒಳಗೊಂಡಿದೆ. ಗರ್ಭಗುಡಿಯ ಮೇಲ್ಭಾವಣೆ ಅಷ್ಟಕೋನಾಕೃತಿಯನ್ನು ಒಳಗೊಂಡಿದೆ. ಗರ್ಭಗುಡಿಯಲ್ಲಿ ಎತ್ತರದ ಪಾಣಿಪೀಠವಿದೆ. ಗರ್ಭಗುಡಿಯ ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಪದ್ಮಾಸೀನಳಾಗಿದ್ದಾಳೆ. ಗರ್ಭಗುಡಿಯ ಮುಂದಿನ ಭಾಗ ಅಂತರಾಳ. ಇಲ್ಲಿ ಪ್ರವೇಶದ್ವಾರದಲ್ಲಿ ವೈಷ್ಣವ ದ್ವಾರಪಾಲಕರು ಸ್ಥಾನಿಕ ಭಂಗಿಯಲ್ಲಿದ್ದಾರೆ. ಸಭಾಮಂಟಪದ ಮೇಲ್ಭಾವಣೆ ಅಷ್ಟಕೋನಾಕೃತಿ ಮಧ್ಯೆ ಭುವನೇಶ್ವರಿಯನ್ನು ಒಳಗೊಂಡಿದೆ. ಸಭಾಮಂಟಪದಲ್ಲಿ ೪ ಚೌಕ ಶಿಲಾಸ್ತಂಭಗಳು ಬೋದಿಗೆಯನ್ನು ಒಳಗೊಂಡಿದೆ. ಅಂಜಲಿ ಮುದ್ರೆ ಭಕ್ತ, ಸಿಂಹ, ಹನುಮಂತ ಕೃಷ್ಣ ತಪಸ್ವಿ, ಶ್ರೀ ವೈಷ್ಣವ ಚಿಹ್ನೆ ಮತ್ಸ್ಯಾವತಾರಿ. ಆಮೆ, ದೇವಿ, ಬಾತುಕೋಳಿ, ವೇಣುಗೋಪಾಲ, ವಿಷ್ಣುವಿನ ಅವತಾರಗಳು ಉಬ್ಬು ಶಿಲ್ಪದ ಮೂಲಕ ಹೊರ ಹೊಮ್ಮಿದೆ. ದೇವಾಲಯದ ಹೊರಭಾಗ ಅದಿಷ್ಠಾನ, ಭಿತ್ತಿ, ಕಪೋತ ಮತ್ತು ಶಿಖರವನ್ನು ಒಳಗೊಂಡಿದೆ. ಶಿಖರದ ಮುಂಭಾಗದಲ್ಲಿ ಸುಖನಾಸಿ ಇದ್ದು, ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಿಸಲ್ಪಟ್ಟಿದೆ.

ಹೆಸರು :– ಹನುಮಂತ ದೇವಾಲಯ

ಸ್ಥಳ :– ಸಿಂಗಾರದ ಬಾಗಿಲಿನ ಬಲಭಾಗ, ಕಮಲಾಪುರ

ಕಾಲ :– ೧೬ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಉತ್ತರಾಭಿಮುಖ

ವಸ್ತು :– ಬೆಣಚುಕಲ್ಲು

ಈ ದೇವಾಲಯದ ಉದ್ದ ೧೦.೬೦ ಸೆಂ.ಮೀ ಅಗಲ ೬.೨೦ ಸೆಂ.ಮೀ ಇದೆ. ಈ ದೇವಾಲಯ ಗರ್ಭಗೃಹ ಮತ್ತು ಮುಖ ಮಂಟಪವನ್ನು ಒಳಗೊಂಡಿದೆ. ಗರ್ಭಗುಡಿಯ ಮೇಲ್ಛಾವಣಿ ಅಷ್ಟಕೋನಾಕೃತಿ ಇಂದ ಕೂಡಿದ್ದು ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಈ ಕಟ್ಟಡದ ಪೂರ್ವಕ್ಕೆ ಮತ್ತೊಂದು ಗರ್ಭಗೃಹ ಇದೆ. ಇದರ ಮೇಲ್ಛಾವಣಿಯು ಅಷ್ಟಕೋನಾಕೃತಿಯಲ್ಲಿದೆ. ಮುಖ ಮಂಟಪದಲ್ಲಿ ನಾಲ್ಕು ಶಿಲಾಸ್ತಂಭಗಳಿವೆ. ಎರಡು ಸ್ತಂಭಗಳು ಚೌಕಾಕಾರವಾಗಿದ್ದು ಈ ಸ್ತಂಭಗಳಲ್ಲಿ ಪುಷ್ಪ, ಭೈರವ, ಗಣಪತಿ, ಸಿಂಹ, ಕೋತಿ, ಬಾಲಕೃಷ್ಣ ಮೂರ್ತಿ ಶಿಲ್ಪಗಳು ಪ್ರತಿಬಿಂಬಿತವಾಗಿವೆ. ಉಳಿದ ಎರಡು ಸ್ತಂಭಗಳು ಚೌಕಾಕಾರವಾಗಿದ್ದು, ಯಾವುದೇ ಅಲಂಕಾರತೆಗೆ ಪ್ರಾಧಾನ್ಯತೆ ನೀಡದೆ ಮೂಲ ರೂಪದಲ್ಲಿರುವುದೇ ಇದರ ಇನ್ನೊಂದು ವೈಶಿಷ್ಯತೆ. ಈ ದೇವಾಲಯದ ಹೊರಭಾಗದ ಅಧಿಷ್ಠಾನದಲ್ಲಿ ಪದ್ಮಬಂದ, ಭಿತ್ತಿ, ಶಿಖರ ಮತ್ತು ಕಪೋತಗಳನ್ನು ಹೊಂದಿದೆ.

ಹೆಸರು :– ವಿಷ್ಣು ದೇವಾಲಯ[೩೪]

ಸ್ಥಳ :– ಗಜಶಾಲೆಯ ಹಿಂಭಾಗ, ಕಮಲಾಪುರ

ಕಾಲ :– ೧೬ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಪೂರ್ವಾಭಿಮುಖ

ವಸ್ತು :– ಬೆಣಚುಕಲ್ಲು

ದೇವಾಲಯದ ಉದ್ದ ೩೦ ಮೀ ಅಗಲ ೧೫ ಮೀ ವಿಸ್ತೀರ್ಣ ಹೊಂದಿದೆ. ಒಳಭಾಗ ಗಭೃಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖ ಮಂಟಪವನ್ನು ಒಳಗೊಂಡಿದೆ. ಗರ್ಭಗೃಹ. ಪ್ರದಕ್ಷಿಣಾ ಪಥವನ್ನು ಒಳಗೊಂಡಿದೆ. ಅಂದರೆ ಇದು ಸಾಂಧಾರ ದೇವಾಲಯ. ಗರ್ಭಗೃಹದಲ್ಲಿ ಪ್ರಸ್ತುತ ಮೂರ್ತಿ ಶಿಲ್ಪವಿಲ್ಲ. ಅಂತರಾಳದ ಪ್ರವೇಶದ್ವಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದ್ದು, ಬಾಗಿಲು ದ್ವಾರದ ಇಕ್ಕೆಲುಗಳಲ್ಲಿ ದ್ವಾರಪಾಲಕರಿದ್ದಾರೆ. ಸಭಾಮಂಟಪದ ಮೇಲ್ಛಾವಣಿಗೆ ಹಾಸುಗಲ್ಲು ವಿಸ್ತೃತವಾಗಿ ಹಾಸಲ್ಪಟ್ಟಿದೆ ಸಭಾ ಮಂಟಪದಲ್ಲಿನ ನಾಲ್ಕು ಸ್ತಂಭಗಳು ಚೌಕಕಾರವಾಗಿದ್ದು, ಪುಷ್ಪ ಬೋದಿಗೆಗಳನ್ನು ಒಳಗೊಂಡಿದೆ. ಸ್ತಂಭಗಳ ಮೇಲೆ ಗರುಡ, ವಿಷ್ಣು, ಬಿಂದಿಗೆ ಹೊತ್ತ ಮಹಿಳೆ, ಮತ್ಸ್ಯಾವತಾರ, ಹೂವಿನ ಗುಚ್ಛ ಹಿಡಿದ ಮಹಿಳೆ, ಚಾಮರಧಾರಿಣಿ, ನವಿಲು, ಧ್ಯಾನ ಮಗ್ನ ಮನುಷ್ಯ,

ಸಂಜೀವಿನಿ ಪರ್ವತ ಹಿಡಿದ ಆಂಜನೇಯ, ಬಾಲಕೃಷ್ಣ, ಅಂಜಲಿ ಮುದ್ರೆಯಲ್ಲಿದ್ದ ಹನುಮಂತ, ಕಾರ್ತಿಕೆಯ ಮುಂತಾದ ಮೂರ್ತಿಶಿಲ್ಪಗಳಿವೆ. ಮೇಲ್ಛಾವಣೆಯ ಸುತ್ತಲೂ ಒಳಮುಖದಲ್ಲಿ ಕುಳಿತ ಎಂಟು ಕೀರ್ತಿ ಮುಖಗಳಿವೆ. ಇವುಗಳ ಮಧ್ಯೆ ಸ್ತ್ರೀಯರ ಕೋಲಾಟದ ವಿವಿಧ ಭಂಗಿಗಳು ಇಲ್ಲಿವೆ. ಪೂರ್ವ ಪಶ್ಚಿಮ ದಿಕ್ಕಿಗೆ ತೆರೆದ ಮಂಟಪಗಳಿವೆ. ಇಲ್ಲಿ ಎರಡು ಸ್ತಂಭಗಳಿದ್ದು ಚೌಕಕಾರವಾಗಿ ಪುಷ್ಪ ಬೋದಿಗೆಗಳನ್ನು ಒಳಗೊಂಡಿದೆ.

ಮುಖ ಮಂಟಪದ ಮೇಲ್ಛಾವಣೆ ಉದ್ದವಾಗಿ ಬಂಡೆಗಳು ವಿಸ್ತ್ರುತವಾಗಿ ಹಾಸಲ್ಪಟ್ಟಿವೆ. ನಾಲ್ಕು ಸ್ತಂಭಗಳಿದ್ದು ಕೆಳಭಾಗ ಚೌಕಾಕಾರ, ಮೇಲ್ಭಾಗ ವರ್ತುಲಾಕಾರ ಮತ್ತು ಷೋಡಾಶ್ರ ಪೆಟ್ಟಿಗೆಗಳಿವೆ. ಅಕ್ಕ–ಪಕ್ಕ ಸ್ತಂಬಗಳ ಮೇಲೆ ಪುಷ್ಪ ಬೋದಿಗೆಗಳಿವೆ. ನಾಗಬಂಧ, ಮನುಷ್ಯ, ಕಹಳೆ ಊದುತ್ತಿರುವ ಮನುಷ್ಯ, ಬ್ರಹ್ಮ, ಹನುಮಂತ, ಇಬ್ಬರು ಮಹಿಳೆಯರು ನಿಂತ ಮೂರ್ತಿಶಿಲ್ಪ ಬಿಂಬಿಸಿವೆ. ಮುಖ ಮಂಟಪದಲ್ಲಿ ಒಳಮುಖ ದ್ವಾರಪಾಲಕರ ಮೂರ್ತಿಶಿಲ್ಪಗಳಿವೆ. ಈ ಮಂಟಪ ಭಿತ್ತಿ, ಪುಷ್ಪ ಕುಂಭ, ಪಂಜರ, ಕೋಷ್ಟಕಗಳಿಂದ ಅಲಂಕೃತವಾಗಿವೆ. ಭಿತ್ತಿಯ ಎರಡೂ ತುದಿಗಳಲ್ಲಿ ಕೀರ್ತಿಮುಖ, ಗರುಡ, ವಿಷ್ಣು, ಕಾಳಿಂಗ ಮರ್ಧನ, ಕೃಷ್ಣ, ಆನೆ, ನವಿಲು ಮುಂತಾದ ಮೂರ್ತಿಶಿಲ್ಪಗಳಿವೆ. ಭಿತ್ತಿಗೆ ಕಲ್ಲು ವಿಸ್ತೃತವಾಗಿ ಹಾಸಲ್ಪಟ್ಟಿದೆ. ಗೋಪುರ, ಇಟ್ಟಿಗೆ, ಗಾರೆಗಳಿಂದ ನಿರ್ಮಿತವಾಗಿದೆ.

ಹೆಸರು :– ಶ್ರೀ ರಾಮ ದೇವಾಲಯ

ಸ್ಥಳ :– ಗುಂಡುರಾವ್ ದೇಸಾಯಿ ಸಮೀಪ, ಕಾಮಲಾಪುರ

ಕಾಲ :– ೧೬ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಪೂರ್ವಾಭಿಮುಖ

ವಸ್ತು :– ಬೆಣಚುಕಲ್ಲು

ಈ ದೇವಾಲಯದ ಉದ್ದ ೧೧.೮೦ ಸೆಂ.ಮೀ x ಅಗಲ ೧೦ ಮೀ ೫೦ ಸೆಂ.ಮೀ. ದೇವಾಲಯ ಗರ್ಭಗುಡಿ ಮತ್ತು ಮುಖ ಮಂಟಪ ಒಳಗೊಂಡಿದೆ. ಗರ್ಭಗೃಹದಲ್ಲಿ ರಾಮ, ಲಕ್ಷ್ಮಣ, ಸೀತೆಯರ ಮೂರ್ತಿ ಶಿಲ್ಪಗಳಿವೆ. ಗರ್ಭಗೃಹದ ಮೇಲ್ಛಾವಣೆ ಅಷ್ಟಕೋನಾಕೃತಿ ಇದರ ಮಧ್ಯೆ ತೆರೆದ ಕಮಲವಿದೆ. ಗರ್ಭಗೃಹದ ಪ್ರವೇಶದ್ವಾರ ಸಪಾಟವಾಗಿದ್ದು ಅಲಂಕಾರತೆಗೆ ಹೆಚ್ಚು ಪ್ರಾಧಾನ್ಯತೆ ನೀಡಿಲ್ಲ. ಮುಖ ಮಂಟಪದಲ್ಲಿ ಎಂಟು ಸ್ತಂಭಗಳಿದ್ದು ಮಧ್ಯೆದಲ್ಲಿ ಅಷ್ಟ ಪಟ್ಟಿಕೆಯನ್ನು ಒಳಗೊಂಡಿದೆ. ಹೂ, ನಾಗಬಂಧ, ಚಕ್ರ, ಗದೆ ಹಿಡಿದು ಕುಳಿತ ಆಂಜನೇಯ, ಕೀರ್ತಿಮುಖ, ಶ್ರೀವೈಷ್ಣವ ಚಿಹ್ನೆ, ಗಣಪತಿ, ಬಾಲಕೃಷ್ಣ, ಅಂಜಲಿ ಮುದ್ರೆ ಭಕ್ತ, ಕಾಳಿಂಗ ಮರ್ಧನ ಕೃಷ್ಣ ಆಂಜನೇಯ, ಚಕ್ರ, ಶಂಖ ಊದುತ್ತಿರುವ ಮಹಿಳೆ, ಸ್ತ್ರೀಯರ ವಿವಿಧ ನೃತ್ಯ ಭಂಗಿ, ಅಂಜಲಿ ಮುದ್ರೆಯಲ್ಲಿದ್ದ ಗರುಡ, ಗಡ್ಡದಾರಿ, ಶಿವಲಿಂಗಕ್ಕೆ ಹಾಲುಣಿಸುತ್ತಿರುವ ಕಾಮಧೇನು, ತಪಸ್ವಿ, ನಂದಿ, ಕಾಮಧೇನು, ಗೋವರ್ಧನ ಗಿರಿಯನ್ನು ಎತ್ತಿದ ಕೃಷ್ಣ ಬೆಣ್ಣೆ ಕೃಷ್ಣ ಮೂರ್ತಿ ಶಿಲ್ಪಗಳು ಸ್ತಂಭಗಳ ಮೇಲೆ ಬಿಂಬಿತವಾಗಿವೆ. ದೇವಾಲಯದ ಮುಂದೆ ಗರುಡ ಸ್ತಂಭವಿದೆ. ಈ ದೇವಾಲಯದ ಹೊರಭಾಗ ಅಧಿಷ್ಠಾನ, ತೆರೆದ ಮಂಟಪ, ಕಪೋತ

ಶಿಖರವನ್ನು ಒಳಗೊಂಡಿದೆ. ಕಪೋತದ ಮೇಲ್ಭಾಗ ಪೂರ್ತಿಯಾಗಿ ಜೀರ್ಣೋದ್ಧಾರವಾಗಿದೆ.

ಹೆಸರು :– ಪ್ರಸನ್ನ ಆಂಜನೇಯ ದೇವಾಲಯ

ಸ್ಥಳ :– ಹೆಚ್.ಪಿ.ಸಿಯಲ್ಲಿ (ಹಂಪಿ ಪವರ್ ಹೌಸ್)

ಕಾಲ :– ೧೬–೧೭ನೇ ಶತಮಾನ

ರಾಜವಂಶ :– ವಿಜಯನಗರೋತ್ತರ

ದಿಕ್ಕು :– ದಕ್ಷಿಣ

ವಸ್ತು :– ಬೆಣಚುಕಲ್ಲು

ದೇವಾಲಯ ಗರ್ಭಗೃಹವನ್ನು ಹೊಂದಿದೆ ನವರಂಗ ಮತ್ತು ಮುಖಮಂಟಪವನ್ನು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಲಾಗಿದೆ. ಗರ್ಭಗೃಹದ ಹಿಂಬದಿಯ ಹೊರಭಿತ್ತಿ ಮೇಲೆ ಗರುಡ ಪಕ್ಷಿಯ ಉಬ್ಬು ಶಿಲ್ಪದ ಕೆತ್ತನೆ ಗರ್ಭಗುಡಿಯಲ್ಲಿ ಏಕಶಿಲಾ ವಿಗ್ರಹ ಆಂಜನೇಯ ಶಿಲ್ಪವಿದೆ. ದೇವಾಲಯದ ಸುತ್ತಲು ಅನೇಕ ಸ್ತಂಭಗಳು ಪಾಳು ಬಿದ್ದಿವೆ. ದೇವಾಲಯದ ಎದುರುಗಡೆ ಗರುಡ ಸ್ತಂಭವಿದೆ. ಸ್ತಂಭದ ಕೆಳಭಾಗದಲ್ಲಿ ಗರುಡನ ಶಿಲ್ಪ, ಎಡಗಡೆ ಮುಖ ಮಾಡಿಕೊಂಡಿವೆ. ಇನ್ನೊಂದು ದಿಕ್ಕಿಗೆ ಅಂಜಲಿ ಮುದ್ರೆಯಲ್ಲಿ ವೈಷ್ಣವ ಭಕ್ತ ಸ್ಥಾನಿಕ ಭಂಗಿಯಲ್ಲಿದ್ದಾನೆ.

ಹೆಸರು :– ವಿಷ್ಣು ದೇವಾಲಯ

ಸ್ಥಳ :– ವೇಣುಗೋಪಾಲ ದೇವಾಲಯದ ಎದುರಿಗೆ ಕಾಮಲಾಪುರ

ಕಾಲ :– ೧೬–೧೭ನೇ ಶತಮಾನ

ರಾಜವಂಶ :– ವಿಜಯನಗರೋತ್ತರ

ದಿಕ್ಕು :– ಪಶ್ಚಿಮಾಭಿಮುಖ

ವಸ್ತು :– ಬೆಣಚುಕಲ್ಲು

ದೇವಾಲಯದ ಉದ್ದ ೮ ಮೀ ೪೫ ಸೆ.ಮೀ x ಅಗಲ ೧೫ ಮೀ ೪೦ ಸೆ.ಮೀ ಇದೆ. ಈದೇವಾಲಯ ವಿಷ್ಣು ದೇವಾಲಯವೆಂದು ಹೇಳಲ್ಪಟ್ಟರೂ ಪ್ರಸ್ತುತ ರಾಯರ ದೇವಾಲಯವೆಂದು ಕರೆಯುವ ವಾಡಿಕೆಯಿದೆ. ದೇವಾಲಯ ಗರ್ಭಗೃಹ ಅಂತರಾಳ ಮತ್ತು ಮಂಟಪವನ್ನು ಒಳಗೊಂಡಿದೆ. ಗರ್ಭಗೃಹದ ಮೇಲ್ಛಾವಣಿ ಅರಳಿದ ಪುಷ್ಪದಿಂದ ಅಲಂಕೃತವಾಗಿದೆ. ಗರ್ಭಗೃಹದ ಪ್ರವೇಶದ್ವಾರದಲ್ಲಿ ಸ್ತ್ರೀ ವೈಷ್ಣವದ್ವಾರ ಪಾಲಕರಿದ್ದಾರೆ. ಲಲಾಟ ಬಿಂಬದಲ್ಲಿ ಗಜ ಲಕ್ಷ್ಮಿ ಪ್ರತಿಬಿಂಬಿತವಾಗಿದೆ. ನವರಂಗ ಮಂಟಪದ ಪ್ರವೇಶದಲ್ಲಿ ವೈಷ್ಣವ ದ್ವಾರ ಪಾಲಕರಿದ್ದು ಪ್ರವೇಶದ ಬಾಗಿಲು ಅಲಂಕರಣೆ ಇಲ್ಲದೆ ಮೂಲ ರೂಪದಲ್ಲಿದೆ. ಇಲ್ಲಿನ ಹತ್ತು ಸ್ತಂಭಗಳು ಚೌಕಾಕಾರದ ಬೋದಿಗಳನ್ನು ಒಳಗೊಂಡಿವೆ. ಒಂಬತ್ತು ಅಂಕಣಗಳಲ್ಲಿ ಹಾಸಗಲ್ಲು ವಿಸ್ತೃತವಾಗಿ ಹಾಸಲ್ಪಟ್ಟಿದೆ. ಮೇಲ್ಛಾವಣೆ ಭುವನೇಶ್ವರಿಯನ್ನು

ಒಳಗೊಂಡಿವೆ. ಗಣಪತಿ, ವೇಣುಗೋಪಾಲ, ಎರಡು ಹಸುಗಳು, ಚತುರ್ಭುಜದೇವಿ, ನಂದಿ ಕಾಮಧೇನು, ಹಸು ಲಿಂಗಕ್ಕೆ ಹಾಲೆರೆಯುತ್ತಿರುವ ಕಾಮಧೇನು. ಪಾಣಿಪೀಠ, ವೀರಭದ್ರ, ದಕ್ಷಬ್ರಹ್ಮ, ಬೇಡರಕಣ್ಣಪ್ಪ ವೀರಾಂಜನೇಯ ಗರುಡ, ತಪಸ್ವಿ, ಮೀನು, ಚಕ್ರ, ನವಿಲು, ಆಮೆ, ವಿಷ್ಣು, ಸಿಂಹ, ಕಾರ್ತಿಕೇಯ, ನವಿಲು, ಲಕ್ಷ್ಮೀನರಸಿಂಹ, ಬಾಲಕೃಷ್ಣ ಮುಂತಾದ ಮೂರ್ತಿಶಿಲ್ಪಗಳು ದೇವಾಲಯದ ಒಳಭಾಗದ ಸ್ತಂಭಗಳಲ್ಲಿ ಬಿಂಬಿತವಾಗಿದೆ. ಮುಖಮಂಟಪದಲ್ಲಿ ನಾಲ್ಕುಸ್ತಂಭ, ತಳಭಾಗ, ಚೌಕಾಕಾರ, ಷೋಡಾಶ್ರಪಟ್ಟಿಕೆ ಮೇಲ್ಭಾಗ ೨ ಬೋದಿಗೆಗಳು ಇವೆ. ಈ ದೇವಾಲಯ ಹೊರಭಾಗ ಪೂರ್ತಿಯಾಗಿ ನವೀಕರಿಸಲ್ಪಟ್ಟಿದೆ.

ಹೆಸರು :- ಗೋಪಾಲಕೃಷ್ಣ ದೇವಾಲಯ

ಸ್ಥಳ :- ಕೋಟೆಯ ಹಿಂಬದಿಯಲ್ಲಿ

ಕಾಲ :- ೧೬-೧೭ನೇ ಶತಮಾನ

ರಾಜವಂಶ :- ವಿಜಯನಗರೋತ್ತರ

ದಿಕ್ಕು :- ದಕ್ಷಿಣಾಭಿಮುಖ

ವಸ್ತು :- ಬೆಣಚುಕಲ್ಲು

ಈ ದೇವಾಲಯದ ಉದ್ದ ೧೪ ಮೀ ೨೫ ಸೆ.ಮೀ x ಅಗಲ ೮ಮೀ ೫೦ ಸೆಂಟಿಮೀಟರ್ ಇದೆ. ಈ ದೇವಾಲಯ ಗರ್ಭಗೃಹ ಅಂತರಾಳ ಮತ್ತು ಸಭಾಮಂಟಪವನ್ನು ಒಳಗೊಂಡಿದೆ. ಗರ್ಭಗೃಹದ ಮೇಲ್ಛಾವಣಿ ಚತುಶ್ಕೋನಾಕೃತಿಯಲ್ಲಿ ಅಲಂಕೃತಗೊಂಡಿದ್ದು. ಉದ್ದವಾಗಿ ಬಂಡೆಗಲ್ಲುಗಳು ಹಾಸಲ್ಪಟ್ಟಿವೆ. ಗರ್ಭಗೃಹದಲ್ಲಿ ಕೊಳಲನ್ನು ಊದುತ್ತಿರುವ ವೇಣುಗೋಪಾಲ ಮೂರ್ತಿ ಶಿಲ್ಪವಿದೆ. ಅಂತರಾಳ ಸರಳವಾಗಿದ್ದು ಇಲ್ಲಿನ ಪ್ರವೇಶದ್ವಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಪದ್ಮಾಸೀನಳಾಗಿದ್ದಾಳೆ. ಎಡ ಬಲಗಳಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ನವರಂಗದಲ್ಲಿ ನಾಲ್ಕು ಸ್ತಂಭಗಳಿದ್ದು ಚೌಕಾಕಾರ ಅಷ್ಟ ಪಟ್ಟಿಕೆ, ಚೌಕಾಕಾರ ಪುನಃ ಅಷ್ಟಪಟ್ಟಿಕೆ ಮೇಲೆ ಚೌಕಾರದ ಬೋದಿಗೆಯನ್ನು ಒಳಗೊಂಡಿದೆ. ಶಂಖ, ಚಕ್ರ ಶ್ರೀವೈಷ್ಮವ ಚಿಹ್ನೆ ಪುಷ್ಪ ಕಾಳಿಂಗ ಮರ್ಧನ, ಬಾಲಕೃಷ್ಣ, ನವಿಲು, ಸಿಂಹಮುಖ, ಸರ್ಪಧಾರಿ ಅಭಯ ಮುದ್ರೆಯಲ್ಲಿ ಕೃಷ್ಣ, ಹಾವನ್ನು ಹಿಡಿದ ನವಿಲು, ವೀರಾಂಜನೆಯ, ರಾಮಾನುಜಾಚಾರ್ಯರು, ಗಣಪ, ಗರುಡ, ಖಂಜರವನ್ನು ಹಿಡಿದ ಬಾಲಕಿ, ಆಮೆ, ಮಗುವನ್ನು ಎತ್ತಿಕೊಂಡು ನಿಂತ ಭಂಗಿಯಲ್ಲಿದ್ದ ಕೃಷ್ಣ, ಇವು ಸ್ತಂಭದ ಮೇಲೆ ಚಿತ್ರಿತವಾಗಿವೆ. ಮೇಲ್ಛಾವಣಿ ಅಷ್ಟಕೋನಾಕೃತಿಯಲ್ಲಿ ಅರಳಿದ ಕಮಲದೊಂದಿಗೆ ಅಲಂಕೃತವಾಗಿವೆ. ಪ್ರವೇಶದ್ವಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಪದ್ಮಾಸೀನಳಾಗಿದ್ದಾಳೆ. ಬಾಗಿಲುದ್ವಾರದ ಎರಡು ಕಡೆಗೆ ವೈಷ್ಣವ ದ್ವಾರಪಾಲಕರು ನಿಂತ ಭಂಗಿಯಲ್ಲಿದ್ದಾರೆ. ಪ್ರವೇಶದ್ವಾರದ ಲಲಾಟಬಿಂಬದ ಗಜಲಕ್ಷ್ಮಿ ಬಿಂಬಿತವಾಗಿದೆ. ದೇವಾಲಯದ ಹೊರಭಾಗವನ್ನು ಪೂರ್ತಿಯಾಗಿ ಪುನರ್ ನವೀಕರಿಸಲಾಗಿದೆ. ದ್ವಾರಸ್ತಂಭಗಳು, ಪೀಠಭಾಗ, ಗೋಪುರ ಮತ್ತು ಪ್ರಧಾನ ದ್ವಾರಗಳು ಜೀರ್ಣೋದ್ಧಾರವಾಗಿವೆ.

ಹೆಸರು :- ವೇಣುಗೋಪಾಲ ದೇವಾಲಯ

ಸ್ಥಳ :– ರಾಯರಗುಡಿಯ ಎದುರು ಕಾಮಲಾಪುರ, ಹೊಸಪೇಟೆ

ಕಾಲ :– ೧೬–೧೭ನೇ ಶತಮಾನ

ರಾಜವಂಶ :– ಮಾಂಡಲೀಕ ವಿಜಯನಗರ

ದಿಕ್ಕು :– ಉತ್ತರಾಭಿಮುಖ

ವಸ್ತು :– ಬೆಣಚುಕಲ್ಲು

ದೇವಾಲಯದ ಉದ್ದ ೭ ಮೀ ೯೦ ಸೆಂ.ಮೀ x ಅಗಲ ೧೩ ಮೀ ೮೫ ಸೆಂ.ಮೀ ಇದೆ. ದೇವಾಲಯ ಗರ್ಭಗೃಹ ಮತ್ತು ಮಂಟಪವನ್ನು ಒಳಗೊಂಡಿದೆ. ಗರ್ಭಗುಡಿಯ ಮೇಲ್ಛಾವಣೆ ಷೋಡಕೋನಾಕೃತಿಯಿಂದ ಒಳಗೊಂಡಿದ್ದು ಮಧ್ಯದಲ್ಲಿ ಅರಳಿದ ಕಮಲವಿದೆ. ಗರ್ಭಗುಡಿಯಲ್ಲಿ ವೇಣುಗೋಪಾಲನ ಮೂರ್ತಿ ಇದ್ದು, ಪ್ರಸ್ತುತ ಪೂಜೆಗೊಳ್ಳುತ್ತಲಿದೆ. ಪ್ರವೇಶದ್ವಾರದಲ್ಲಿ ಎರಡು ಕಲಶಗಳ ಉಬ್ಬುಶಿಲ್ಪಗಳಿವೆ. ಹೊಸ್ತಲಿನ ಒಳಭಾಗ ಕೀರ್ತಿಮುಖವನ್ನು ಒಳಗೊಂಡಿದೆ. ಇದು ಸಾಂಧಾರ ದೇವಾಲಯ. ದೇವಾಲಯಕ್ಕೆ ಪೂರ್ವ ಪಶ್ಚಿಮಕ್ಕೂ ಪ್ರವೇಶದ್ವಾರಗಳಿದ್ದು ಮುಂಭಾಗದ ಪಟ್ಟಿಕೆಯಲ್ಲಿ ಹೂವಿನ ಚಿತ್ರಣವಿದೆ. ಮಂಟಪದಲ್ಲಿ ಒಟ್ಟು ಹನ್ನೆರಡು ಸ್ತಂಭಗಳಿದ್ದು, ಈ ಸ್ತಂಭಗಳು ಚೌಕ ಮತ್ತು ಚೌಕಾಕಾರದ ಬೋದಿಗೆಗಳನ್ನು ಒಳಗೊಂಡಿದೆ. ಸ್ತಂಭಗಳಲ್ಲಿ ನಕ್ಷತ್ರ, ಮರ, ಪುಷ್ಪ, ಶಂಖ, ಹನುಮಂತ, ಬಾಲಕೃಷ್ಣ, ಹಸು ಕರುವಿಗೆ ಹಾಲು ಉಣಿಸುತ್ತಿರುವುದು ಶ್ರೀ ವೈಷ್ಣವ ಚಿಹ್ನೆ, ಗಣಪ, ತಪಸ್ವಿನಿ, ಕಾಮಧೇನು ಕಾಳಿಂಗ ಮರ್ಧನ ಕೃಷಣ, ಮತ್ಸ್ಯಾವತಾರ, ಆನೆಯ ಮೇಲೆ ನರ್ತಿಸುವ ಕೃಷ್ಣ ಶಂಖನಾದ ಗೈಯುತ್ತಿರುವ ಕೃಷ್ಣ, ಆಮೆ, ಕೃಷ್ಣ ನೃತ್ಯ, ಘೀಳಿಡುತ್ತಾ, ಸೊಂಡಿಲೆತ್ತಿ ಓಡುತ್ತಿರುವಂತೆ ಕಾಣುವ ಆನೆ, ಪ್ರಸನ್ನ ಆಂಜನೇಯ, ಸ್ತ್ರೀಮುಖ ಕಾಮಧೇನು, ನವಿಲು, ಕೀರ್ತಿಮುಖ ವಿಠಲ, ಈ ಮೂರ್ತಿಶಿಲ್ಪಗಳು ದೇವಾಲಯದ ಮೆರಗನ್ನು ಹೆಚ್ಚಿಸಿದೆ. ಮುಖಮಂಟಪದ ಇಕ್ಕೆಲುಗಳಲ್ಲಿ ದೀಪ ಸ್ತಂಭಗಳಿವೆ. ಮೆಟ್ಟಿಲುಗಳ ಎರಡೂ ಕಡೆಗೆ ೨ ಆನೆಗಳ ಕಟಾಂಜನವಿದೆ. ಪ್ರವೇಶದ್ವಾರದಲ್ಲಿ ವೈಷ್ಣವ ದ್ವಾರಪಾಲಕರಿದ್ದು ಲಲಾಟಬಿಂಬದ ಮೇಲೆ ಗಜಲಕ್ಷ್ಮಿ ಪ್ರತಿಬಿಂಬಿತವಾಗಿದೆ. ಹೊರಭಾಗ ಆಧಿಷಾವಿನ, ಭಿತ್ತಿ ಒಳಗೊಂಡಿದ್ದು, ಶಿಖರ ಶಿಥಿಲವಾಗಿದೆ. ಮುಂಭಾಗದಲ್ಲಿ ಸುಖನಾಸಿ ಇದೆ. ಹೊರಭಿತ್ತಿ ಜೀರ್ಣೋದ್ಧಾರವಾಗಿದೆ. ಒಟ್ಟಾರೆ ೧೬– ೧೭ನೇ ಶತಮಾನಕ್ಕೆ ಸೇರಿದ ದೇವಾಲಯದ ಲಕ್ಷಣಗಳನ್ನು ಹೊಂದಿದೆ.

ಹೆಸರು :– ಆಂಜನೇಯ ದೇವಾಲಯ

ಸ್ಥಳ :– ವಾಮನಚಾರ್ ಮನೆಯ ಹತ್ತಿರ, ಕಾಮಲಾಪುರ, ಹೊಸಪೇಟೆ ತಾ.

ಕಾಲ :– ೧೬–೧೭ನೇ ಶತಮಾನ

ರಾಜವಂಶ :– ಮಾಂಡಲೀಕರು: ವಿಜಯನಗರೋತ್ತರ

ದಿಕ್ಕು :– ಪೂರ್ವಾಭಿಮುಖ

ವಸ್ತು :– ಬೆಣಚುಕಲ್ಲು

ದೇವಾಲಯದ ಉದ್ದ ೬ ಮೀ ೪೦ ಸೆಂ.ಮೀ x ಅಗಲ ೭ ಮೀ ౨೫ ಸೆಂ.ಮೀ ಇದೆ.

ದೇವಾಲಯ ಪೂರ್ತಿಯಾಗಿ ಜೀರ್ಣೋದ್ಧಾರವಾಗಿದೆ. ದೇವಾಲಯ ಗರ್ಭಗುಡಿ ಮತ್ತು ಹೊರಮಂಟಪವನ್ನು ಒಳಗೊಂಡಿದೆ. ಗರ್ಭಗುಡಿಯಲ್ಲಿ ಆಂಜನೇಯ ಮೂರ್ತಿಯಿದ್ದು. ಇದರ ಮೇಲ್ಛಾವಣಿ ಅಷ್ಟಕೋನಾಕೃತಿ ಇದರ ಮಧ್ಯೆದಲ್ಲಿ ಅರಳಿದ ಕಮಲವಿದೆ. ಗರ್ಭಗೃಹದ ಪ್ರವೇಶದ್ವಾರದಲ್ಲಿ ವೈಷ್ಣವ ದ್ವಾರಪಾಲಕ ಲಲಾಟ ಬಿಂಬದಲ್ಲಿ ಉಗ್ರನರಸಿಂಹ ಮೂರ್ತಿ ಬಿಂಬಿತವಾಗಿದೆ ಹೊರ ಮಂಟಪದಲ್ಲಿ ೪ ಸ್ತಂಭಗಳು ಚೌಕಾಕಾರವಾಗಿದ್ದು, ಮೇಲ್ಭಾಗ ಚೌಕಾಕಾರ ಬೋದಿಗೆಗಳನ್ನು ಒಳಗೊಂಡಿದೆ. ಮಂಟಪದ ಮಧ್ಯಭಾಗ ಷೋಡರ ಕೋನಾಕೃತಿಯನ್ನು ಒಳಗೊಂಡಿದ್ದು. ಅರಳಿದ ಕಮಲ ಇಲ್ಲಿ ಬಿಂಬಿತವಾಗಿವೆ. ದೇವಾಲಯದ ಹೊರಭಾಗ ಅಧಿಷಾವಿನ ಬಿತ್ತಿ, ಕಪೋತ ಮತ್ತು ಶಿಖರವನ್ನು ಒಳಗೊಂಡಿದೆ. ದೇವಾಲಯದ ಮುಂಭಾಗ ಹೊಸದಾಗಿ ಕಬ್ಬಿಣದ ಸರಳುಗಳಿಂದ ಆವೃತವಾಗಿದ್ದರೂ ಎಡ ಬಲ ಮತ್ತು ಹಿಂಭಾಗದ ಭಿತ್ತಿ ಮತ್ತು ಶಿಖರದ ಭಾಗ ಹೊಸದಾಗಿ ನಿರ್ಮಿತವಾಗಿವೆ. ಕಪೋತ ಮುಂಚಾಚಿದೆ.

ಹೆಸರು :- ಬೆಟ್ಟದ ಆಂಜನೇಯ

ಸ್ಥಳ :- ವರದ ರಾಜಮ್ಮ ಪಟ್ಟಣದ ಕಾಲುವೆಯ ಹತ್ತಿರ

ಕಾಲ :- ೧೬-೧೭ನೇ ಶತಮಾನ

ರಾಜವಂಶ :- ಮಾಂಡಲೀಕರು: ವಿಜಯನಗರೋತ್ತರ

ದಿಕ್ಕು :- ಪೂರ್ವ-ಪಶ್ಚಿಮಾಭಿಮುಖ

ವಸ್ತು :- ಬೆಣಚುಕಲ್ಲು

ಈ ದೇವಾಲಯವು ೨.೨೦ ಮೀ ಉದ್ದ ಮತ್ತು ೧.೯೦ ಮೀ ಅಗಲವಿದೆ. ಈ ದೇವಾಲಯವನ್ನು ಇತ್ತೀಚೆಗೆ ಜೀರ್ಣೋದ್ಧಾರ ಮಾಡಲಾಗಿದೆ. ದೇವಾಲಯವು ಕಪೋತ ಬಂಧ ಅಧಿಷ್ಠಾನವನ್ನು ಹೊಂದಿದೆ. ಬೆಟ್ಟದ ಮೇಲೆ ಸ್ಥಾಪಿಸಲಾಗಿದೆ. ದೇವಾಲಯ ಗರ್ಭಗೃಹವನ್ನು ಮಾತ್ರ ಒಳಗೊಂಡಿದೆ. ಶಿಖರವನ್ನು ಇತ್ತೀಚೆಗೆ ನವೀಕರಿಸಲಾಗಿದೆ.

ಹೆಸರು :- ಕೋಟೆ ಆಂಜನೇಯ [೩೫]

ಸ್ಥಳ :- ನಗರೇಶ್ವರ ದೇವಾಲಯಪೂರ್ವಕ್ಕೆ, ಕಾಮಲಾಪುರ

ಕಾಲ :- ೧೭-೧೮ನೇ ಶತಮಾನ

ರಾಜವಂಶ :- ವಿಜಯನಗರೋತ್ತರ

ದಿಕ್ಕು :- ದಕ್ಷಿಣಾಭಿಮುಖ

ವಸ್ತು :- ಬೆಣಚುಕಲ್ಲು

ದೇವಾಲಯದ ಉದ್ದ ೨೯ ಮೀ ೧೦ ಸೆಂ, ಮೀ ಮತ್ತು ಅಗಲ ೧೩ ಮೀ, ೩೦ ಸೆಂ, ಮೀ

ಇದೆ ಈ ದೇವಾಲಯವನ್ನು ದೊರೆ ಮಲ್ಲಿಕಾರ್ಜುನನ ಸೇವಕರಾದ ಶ್ರೀರಂಗ ಎಂಬುವನು ನಿರ್ಮಿಸಿದನೆಂದು ಪ್ರಸ್ತಾಪಿಸಲಾಗಿದೆ. ದೇವಾಲಯ ಗರ್ಭಗೃಹ ಸಭಾಮಂಟಪವನ್ನು ಹೊಂದಿದ್ದು, ದೇವಾಲಯದ ಪ್ರವೇಶದ್ವಾರ ಪೂರ್ವದಿಕ್ಕಿಗೆ ಇದೆ. ಗರ್ಭಗೃಹದ ಮೇಲ್ಛಾವಣಿ ಉದ್ದವಾಗಿ ಹಾಸಲ್ಪಟ್ಟಿದ್ದು, ಭಿತ್ತಿಗೆ ಹಾಸುಗಲ್ಲು ವಿಸ್ತೃತವಾಗಿ ಹಾಸಲ್ಪಟ್ಟಿದೆ. ಪ್ರವೇದ್ವಾರದ ಲಲಾಟ ಬಿಂಬದಲ್ಲಿ ಹೂವಿನ ಚಿತ್ರಣವಿದೆ. ನವರಂಗದಲ್ಲಿ ಆರು ಸ್ತಂಭಗಳಿದ್ದು ಚೌಕಾಕಾರ ಅಮೂಲಕ ಮತ್ತು ಬೋದಿಗೆಗಳನ್ನು ಒಳಗೊಂಡಿದೆ. ನವರಂಗದಲ್ಲಿನ ಎರಡು ಸ್ತಂಭಗಳಲ್ಲಿ ವಿವಿಧ ಪುಷ್ಪಗಳು, ಸ್ತ್ರೀಯರ ನೃತ್ಯಭಂಗಿ, ಆಂಜನೇಯ ಮೂರ್ತಿಶಿಲ್ಪವನ್ನು ಕಾಣಬಹುದು. ದೇವಾಲಯದ ಎದುರಿಗೆ ಗರುಡ ಸ್ತಂಭ ಬಲಿಪೀಠ ಇದೆ. ಪ್ರವೇಶದ್ವಾರದ ಎರಡೂ ಕಡೆಗೆ ಆನೆಯ ಕಟಾಂಜನವಿದೆ. ಹೊರಭಾಗ ಅಧಿಷ್ಠಾನ, ಭಿತ್ತಿ ಮತ್ತು ಸುಖನಾಸಿಯನ್ನು ಒಳಗೊಂಡಿದೆ, ದೇವಾಲಯದ ಪ್ರವೇಶ ದ್ವಾರದಲ್ಲಿ ಶೈವ ದ್ವಾರಪಾಲಕರ ಲತಬಳ್ಳಿಗಳಿವೆ. ಒಟ್ಟಾರೆ ದೇವಾಲಯ ವಿಜಯನಗರೋತ್ತರದ ಲಕ್ಷಣಗಳನ್ನು ಒಳಗೊಂಡಿದೆ.

ಹೆಸರು :– ಆಂಜನೇಯ ದೇವಾಲಯ

ಸ್ಥಳ :– ಪಟಗಿ ಶ್ರೀನಿವಾಸರಾವ್ ಮನೆಯ ಪೂರ್ವಕ್ಕೆ, ಕಾಮಲಾಪುರ

ಕಾಲ :– ೧೭ ೧೮ ನೇ ಶತಮಾನ

ರಾಜವಂಶ :– ವಿಜನಗರೋತ್ತವ

ವಸ್ತು :– ಬೆಣಚುಕಲ್ಲು

ದೇವಾಲಯದ ಉದ್ದ ೧೨ ಮೀ x ಮತ್ತು ಅಗಲ ೧೦ ಮೀ, ೨೦ ಸೆಂ, ಮೀ ಇದೆ. ಈ ದೇವಾಲಯ ಗರ್ಭಗೃಹ, ಮುಖಮಂಟಪವನ್ನು ಒಳಗೊಂಡಿದೆ. ಮೇಲ್ಛಾವಣಿಯ ಬಂಡೆಗಳು ಉದ್ದವಾಗಿ ಹಾಸಲ್ಪಟ್ಟಿದ್ದು ಭಿತ್ತಿಗೆ ಕಲ್ಲು ವಿಸ್ತೃತವಾಗಿ ಹಾಸಲ್ಪಟ್ಟಿವೆ. ಗರ್ಭಗೃಹದಲ್ಲಿ ಹನುಮಂತನ ಮೂರ್ತಿಶಿಲ್ಪವಿದೆ. ಇದರ ಪ್ರವೇಶದ್ವಾರದ ಲಲಾಟ ಬಿಂಬದಲ್ಲಿ ಪುಷ್ಪ, ಮೇಲ್ಭಾಗದಲ್ಲಿ ಕೀರ್ತಿ ಮುಖವಿದೆ. ಇಲ್ಲಿನ ಮುಖಮಂಟಪದಲ್ಲಿ ಒಂಭತ್ತು ಅಂಕಣಗಳಿಂದ ಕೂಡಿದ್ದು, ೧೬ ಸ್ತಂಭಗಳಿಂದ ರಚಿತವಾಗಿದೆ. ಸ್ತಂಭಗಳು ಚೌಕಾಕಾರ, ಅಷ್ಟಕೋನ, ಚೌಕಾಕಾರ ಮತ್ತು ಚೌಕಾಕಾರದ ಬೋದಿಗೆಯನ್ನು ಒಳಗೊಂಡಿದೆ. ಮಧ್ಯದ ಆರು ಸ್ತಂಭಗಳ ಮೇಲೆ ಕಾಳಿಂಗ ಮರ್ಧನ ಕೃಷ್ಣ, ಸಿಂಹಮುಖ, ಪುಷ್ಪ, ನವಿಲು, ಬಿಲ್ಲುಹಿಡಿದ ಕಾರ್ತಿಕೇಯ, ವೇಣುಗೋಪಾಲ, ಬ್ರಹ್ಮ ಚತುರ್ಮುಖ ಬ್ರಹ್ಮ, ವರಹಾ, ನವಿಲು, ಗೋಪಿಕಾ, ಸ್ತ್ರೀಯರೊಂದಿಗೆ ಗೋಪಾಲ ಕೃಷ್ಣ, ಗಡ್ಡದಾರಿ, ವೀರಭದ್ರ, ಹಾವನ್ನು ಹಿಡಿದ ನವಿಲು, ಕಾಮಧೇನು ಚಿತ್ರಿತವಾಗಿದೆ.

ಮುಖಮಂಟಪದ ಪ್ರವೇಶದ್ವಾರದ ಎರಡು ಸ್ತಂಭಗಳಲ್ಲಿ ನಾಲ್ಕು ಪುಷ್ಪ ಬೋದಿಗೆಗಳಿವೆ. ಬಲಿಪೀಠವಿದ್ದುದು, ಮೇಲೆ ಗೋಚರ, ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ದ್ವಾರ ಪಾಲಕರು, ಮೇಲ್ಪಟ್ಟಿಕೆಯಲ್ಲಿ ಹೂ ಮುಂಚಾಚಿದ ಕಪೋತವಿದೆ. ಹೊರ ಆವರಣ ಪೂರ್ತಿಯಾಗಿ ಜೀರ್ಣೋದ್ಧಾರವಾಗಿ ಮುಂಭಾಗದಲ್ಲಿ ಇತ್ತೀಚಿಗೆ ಮಾಡಲ್ಪಟ್ಟ ಕಕ್ಷಾಸನವಿದೆ. ಗರ್ಭಗುಡಿಯ ಭಿತ್ತಿಗೆ ಕಲ್ಲು ವಿಸ್ತೃತವಾಗಿ

ಹಾಸಲ್ಪಟ್ಟಿದೆ. ಮೇಲೆ ಮುಂಚಾಚಿದ ಬಂಡೆ ಕಲ್ಲಿನ ಕಪೋತವಿದೆ, ಕಪೋತನ ಮೇಲ್ಭಾಗ ಇತ್ತೀಚಿಗೆ ಸಿಮೆಂಟಿನಿಂದ ಆವೃತವಾಗಿದೆ.

## ವೈಷ್ಣವ ದೇವಾಲಯಗಳ ವಾಸ್ತು ಶೈಲಿ

ದೇವಾಲಯಗಳು ಹೆಚ್ಚಿನ ಮಟ್ಟಿಗೆ ಆಯತಾಕಾರದಲ್ಲಿದ್ದು ಗರ್ಭಗೃಹ ಮಾತ್ರ ಚೌಕಾಕಾರ. ಅದರ ಮಧ್ಯೆ ಪೀಠಭಾಗ ಮಾತ್ರ ಉಳಿದಿದೆ. ಗರ್ಭಗೃಹದ ಮೇಲ್ಛಾವಣಿಗೆ ವಿಸ್ತೃತ ಕಲ್ಲನ್ನು ಬಳಸಲಾಗಿದ್ದು ಛಾವಣಿಯ ಮಧ್ಯ ಕಮಲದ ಮೊಗ್ಗು ಇದೆ. ಕೆಲವೊಂದು ಬೃಹತ್ ವೈಷ್ಣವ ದೇವಾಲಯಗಳಲ್ಲಿ ಮಾತ್ರ ಸುಖನಾಸಿ ಇದ್ದು ದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬು ಶಿಲ್ಪವಿರುತ್ತದೆ. ಇದಕ್ಕೆ ಸೂಕ್ತ ಉದಾ (ಹಜಾರರಾಮ ದೇವಾಲಯ) ಅಂತರಾಳ ವಿದ್ದು ಅಂತರಾಳದ ಬಾಗಿಲುವಾಡಗಳು ಸರಳ ರೀತಿಯಲ್ಲಿದ್ದು ಹೂಗಳಿಂದ ಅಲಂಕೃತಗೊಂಡಿದೆ. ಅಂತರಾಳದ ಮುಂದಿನ ಭಾಗವೇ ಪ್ರದಕ್ಷಿಣಾಪಥ ನಂತರ ಅರ್ಧಮಂಟಪದ ಲಲಾಟಬಿಂಬದಲ್ಲಿ ವೈಷ್ಣವ ಸ್ತ್ರೀ–ಪುರುಷ ದೇವತೆಗಳ ಶಿಲ್ಪಗಳಿವೆ. ಬಾಗಿಲು ವಾಡದ ಅಕ್ಕ–ಪಕ್ಕದಲ್ಲಿ ಸಾಂಧಾರ ಶೈಲಿಯ ಬಾಗಿಲು ಇದ್ದು, ಸ್ಥಾನಿಕ ಭಂಗಿಯಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಮಂಟಪದ ಸ್ತಂಭಗಳ ಮೇಲೆ ವಿಷ್ಣುವಿನ ಅವತಾರದ ವೈವಿಧ್ಯಮಯ ಶಿಲ್ಪಗಳನ್ನು ಕೆತ್ತಲಾಗಿದೆ. ನವರಂಗ ಚೌಕಾಕಾರವಾಗಿದ್ದು, ಅದರ ಮಧ್ಯದಲ್ಲಿ ಎತ್ತರವಾದ ವೇದಿಕೆವಿದೆ. ನವರಂಗದ ಮೇಲ್ಛಾವಣೆಯ ಮಧ್ಯದಲ್ಲಿರುವ ಕೆತ್ತನೆಗೆ ಭುವನೇಶ್ವರಿ ಎಂದು ಕರೆಯಲಾಗುತ್ತದೆ. ನವರಂಗ ಸ್ತಂಭಗಳ ಮೇಲೂ ವಿಷ್ಣುವಿನ ವಿವಿಧ ಅವತಾರದ ಉಬ್ಬು ಶಿಲ್ಪಗಳಿದ್ದು ನವರಂಗಕ್ಕೆ ೩ ದಿಕ್ಕುಗಳಿಗೂ ಬಾಗಿಲು ವ್ಯವಸ್ಥೆ ಇದೆ. ಉದಾ : ಪಟ್ಟಾಭಿರಾಮದೇವಾಲಯ, ಮುಖಮಂಟಪವಿದ್ದು ಅದರ ಎದುರು ಬಲಿಪೀಠವಿರುತ್ತದೆ. ಮುಖ ಮಂಟಪದ ಅಕ್ಕ–ಪಕ್ಕ ಸಿಂಹಯ್ಯಾಳಿ ಶಿಲ್ಪಗಳನ್ನು ಕಾಣಬಹುದು. ಉದಾ: (ಪಟ್ಟಾಭಿರಾಮ ದೇವಾಲಯ) ಮುಖಮಂಟಪಗಳಲ್ಲಿನ ಸ್ತಂಭಗಳು ಚಿತ್ರಕಾಂಡ, ಮಿಶ್ರಕ, ಚೌಕ ಸ್ತಂಭಗಳಿಂದ ಅಲಂಕರಿಸುವುದನ್ನು ಕಾಣಬಹುದು. ಒಂದೇ ಪ್ರವೇಶದ್ವಾರವಿದ್ದ ದೇವಾಲಯಗಳು, ಎರಡು ಪ್ರವೇಶದ್ವಾರ ವಿರುವ ದೇವಾಲಯಗಳೂ ಇವೆ. ಪ್ರವೇಶ ದ್ವಾರದ ಇಕ್ಕೆಲುಗಳಲ್ಲಿ ಎತ್ತರ ವೇದಿಕೆಗಳಿದ್ದು ಇವು ಸ್ತಂಭಗಳಿಂದ ಆವೃತ್ತವಾಗಿವೆ. ಅಲ್ಲದೇ ಪ್ರವೇಶದ ಮುಂಭಾಗದ ಭಿತ್ತಿಯ ಮೇಲೂ ಉಬ್ಬು ಶಿಲ್ಪಗಳನ್ನು ಕಾಣಬಹುದು. ಇವು ವೈಷ್ಣವ ಧರ್ಮಕ್ಕೆ ಸಂಬಂಧಿಸಿದವುಗಳಾಗಿವೆ. ಶಿಖರ ಪಟ್ಟಿಕೆಗಳು ಗರ್ಭಗೃಹದ ಶಿಖರದ್ವಾರ ಗೋಪುರಗಳು ಬಹಳ ಪ್ರಾಮುಖ್ಯತೆಯನ್ನು ಪಡೆದಿವೆ. ಈ ಗೋಪುರಗಳು ವಿಜಯನಗರ ಮಹಾತ್ವಾಕಾಂಕ್ಷೆಯ ಹೆಗ್ಗುರುತುಗಳು ಬೃಹತ್ ವೈಷ್ಣವ ದೇವಾಲಯದ ಹೊರಬದಿಯ ಲಕ್ಷಣಗಳಲ್ಲಿ ಷಡ್ವರ್ಗದ ಮಾದರಿಯಾಗಿರುತ್ತವೆ. ಕೆಳಭಾಗ ಅಧಿಷ್ಠಾನದಲ್ಲಿ ಉಪಾನ ಪದ್ಮ, ಕಂಪ, ಜಗತಿ ತ್ರಿಪಟ, ಕುಮುದ ಭಾಗಗಳಿಂದ ಕೂಡಿವೆ. ಉದಾ: ಹಜಾರರಾಮದೇವಾಲಯ, ವೈಷ್ಣವ ದೇವಾಲಯ ಹೊರ ಭಿತ್ತಿಯ ಮೇಲೆ ವಿವಿಧ ದೇವ–ದೇವತೆಗಳ ಉಬ್ಬುಶಿಲ್ಪಗಳ ಕೋಷ್ಟಕಗಳಲ್ಲಿ ಮೂರ್ತಿಶಿಲ್ಪಗಳು ಇರುವುದಿಲ್ಲ. ವಿಮಾನವನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿರುವುದು ವಿಜಯನಗರದ ವಾಸ್ತು ವಿಶೇಷತೆಯಾಗಿದೆ.

**ಶೈವ ದೇವಾಲಯಗಳು:** ಶೈವ ಧರ್ಮದ ಪ್ರಾಚೀನತೆಯನ್ನು ಸಿಂಧೂ ನಾಗರೀಕತೆಯ ಹರಪ್ಪ ಮೆಹೆಂಜೋದಾರೋ ಕಾಲಿಬಂಗಾನ್ ಮೊದಲಾದ ನೆಲೆಗಳಲ್ಲಿ ದೊರೆತ ಶಿವಲಿಂಗದಂಡೆ ಕಾಣುವ ಕುರುಹುಗಳು. ಪಶುಪತಿ ಮುದ್ರೆಗಳು ವೈಧಿಕ ಸಾಹಿತ್ಯದ ಮಂತ್ರಗಳಲ್ಲಿ ಪ್ರಸ್ತಾಪಿತವಾದ ರುದ್ರ, ಪಶುಪತಿ, ಶಿವ, ವೃಷಭ, ಮೀಢವ, ಶಪರ್ದಿನ್ ಮೊದಲಾದ ಶಬ್ದಗಳು, ಮಹಾಕಾವ್ಯ, ಪುರಾಣಗಳು[೩೬] ಮೊದಲಾದ ಸಾಹಿತ್ಯದಲ್ಲಿ ಪ್ರಸ್ತಾಪಿಸಿದ ವಿಚಾರಧಾರೆಗಳಿಂದ ಗುರುತಿಸಬಹುದು. ಇದಲ್ಲದೆ ಈ ಧರ್ಮದ ಧಾರ್ಮಿಕ ನಿರ್ಮಾಣಗಳು ಶಾತವಾಹನ, ಚುಟುಇಕ್ಷ್ವಾಕು, ಅಭೀರ ಅರಸು ಮನೆತನಗಳ ಆಳ್ವಿಕೆ ಕಾಲಾವಧಿಯಿಂದೀಚೆಗೆ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ಕನ್ನಡ ನಾಡಿನಲ್ಲಿ ನರಗುಂದ ತಾಲೂಕಿನ ವಾಸವ ಮತ್ತು ಶಿಕಾರಿಪುರ ತಾಲ್ಲೂಕಿನ ಮಳವಳ್ಳಿಯಲ್ಲಿ ಕ್ರಿ.ಶ ೩ನೇ ಶತಮಾನದ ಶಾಸನೋಕ್ತ ಶಿವ ದೇವಾಲಯಗಳ ಉಲ್ಲೇಖಗಳೇ ಅತ್ಯಂತ ಪ್ರಾಚೀನವಾಗಿವೆ.[೩೭] ನಂತರ ಬನವಾಸಿ ಕದಂಬರು (ತಾಳಗುಂದ, ಶಿರಸಿ, ಪಾರೆ, ಇಂಗುಣ, ಆರವೇಲಂಗಳಲ್ಲಿ) ಬಾದಾಮಿ ಚಲುಕ್ಯರು (ಬಾದಾಮಿ, ಮಹಾಕೂಟ, ಐಹೊಳೆ, ಪಟ್ಟದಕಲ್ಲು, ಆಲಂಪುರ ಇತ್ಯಾದಿ) ರಾಷ್ಟ್ರಕೂಟರು, ಕಲ್ಯಾಣದ ಚಲುಕ್ಯರು, ಹೊಯ್ಸಳರು, ವಿಜಯ ನಗರದ ಅರಸರು ಈ ಎಲ್ಲಾ ಮನೆತನಗಳ ಅರಸರು, ಮಹಾಮಂಡಳೇಶ್ವರರು, ಮಹಾಸಾಮಂತರುಗಳ ಆಶ್ರಯ ಪ್ರೋತ್ಸಾಹದಿಂದ ಈ ಧರ್ಮದ ದೇವಾಲಯಗಳ ನಿರ್ಮಾಣ ಬೆಳೆದು ಬಂದಿವೆ.

ಪ್ರಸ್ತುತ ಕಮಲಾಪುರದಲ್ಲಿನ ಶೈವ ದೇವಾಲಯಗಳಿಗೆ ಸಂಬಂಧಿಸಿದಂತೆ ಈ ಕಾಲದ ದೇವಾಲಯಗಳು ಹೆಚ್ಚಾಗಿ ಚೌಕಾಕಾರವಾಗಿವೆ. ಪ್ರಸ್ತುತ ಕಾಮಲಾಪುರ ಪ್ರದೇಶದ ಸುತ್ತ ಮುತ್ತ ಪರಿಸರದಲ್ಲಿ ನಿರ್ಮಿತವಾದ ಎಂಟು ಶೈವ ದೇವಾಲಯಗಳ ಕಾಲ ಮಾಧ್ಯಮ ಮತ್ತು ವಿಶೇಷ ವಾಸ್ತು ವಿವರಣೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಹೆಸರು :– ಪ್ರಸನ್ನ ವಿರುಪಾಕ್ಷ ದೇವಾಲಯ[೩೮]

ಸ್ಥಳ :– ಮಹಾನವಮಿದಿಬ್ಬದ ಸಮೀಪ ಪಶ್ಚಿಮ ದಿಕ್ಕಿಗೆ ಕಾಮಲಾಪುರ

ಕಾಲ :– ೧೪–೧೫ನೇ ಶತಮಾನ (೧೩–೧೪ನೇ)

ರಾಜವಂಶ :– ಮಾಂಡಲೀಕರು: ವಿಜಯನಗರ

ದಿಕ್ಕು :– ಪೂರ್ವಾಭಿಮುಖ

ವಸ್ತು :– ಬೆಣಚುಕಲ್ಲು

ಕ್ರಿ.ಶ. ೧೩೩೬ರ ದಾನ ಶಾಸನವೊಂದು ಈ ದೇವಾಲಯಕ್ಕೆ ಸ್ವಲ್ಪ ಹತ್ತಿರವಿದ್ದು ವಿರುಪಾಕ್ಷದೇವರಿಗೆ ದಾನ ನೀಡಿದ ಉಲ್ಲೇಖಿಸುತ್ತದೆ. ಇದರಿಂದ ಈ ದೇವಾಲಯ ಮೊದಲೇ ನಿರ್ಮಾಣವಾಗಿತ್ತೆಂದು ಸೂಚಿಸಿರುತ್ತದೆ.ಸಂಗಮರ ಕಾಲದ ದೇವಾಲಯ ಆವರಣದಲ್ಲಿನ ಈ ದೇವಾಲಯವು ಈಗಿನ ಭೂಮಿಯ ಮೇಲ್ಮೈಯಿಂದ ಕೆಳಭಾಗದಲ್ಲಿದೆ. ಆದ್ದರಿಂದ ಇದನ್ನು ನೆಲಮಾಳಿಗೆ ಅಥವಾ ಪಾತಾಳೇಶ್ವರ ದೇವಾಲಯ "under ground temple" ಎಂತಲೂ ಕರೆಯಲಾಗುತ್ತದೆ. ಇದು ಶಿವಾಲಯವಾಗಿದ್ದು ಹೆಚ್ಚು

ಕಡಿಮೆ ಹಾಳಾಗಿದೆ. ಪೂರ್ವದ ಮಹಾದ್ವಾರದಲ್ಲಿ ಎರಡು ಅಂತಸ್ತಿನ ಗೋಪುರವಿದ್ದು ಬಹುಭಾಗ ನಶಿಸಿದೆ. ಪೂರ್ವದಲ್ಲಿನ ಪ್ರವೇಶದ್ವಾರವು ಅಧಿಷಾವಿನ, ಭಿತ್ತಿ ಕುಮುದ, ಕಪೋತವನ್ನು ಒಳಗೊಂಡಿದೆ. ಕಪೋತವು ಸ್ವಲ್ಪ ಭಾಗಿದೆ ಭಿತ್ತಿಯ ಸುತ್ತ, ಪಟ್ಟಿಕೆಗಳು ಇದ್ದು ಅವುಗಳ ಮೇಲೆ ಕುಂಭ ಪಂಜರವಿರುವುದು ವಿಶೇಷ ಲಕ್ಷಣಗಳಲ್ಲಿ ಒಂದಾಗಿದೆ. ದೇವಾಲಯದ ಒಳಭಾಗ ಗರ್ಭಗೃಹ, ಅಂತರಾಳ, ನವರಂಗವನ್ನು ಒಳಗೊಂಡಿದೆ. ದೇವಾಲಯದಲ್ಲಿರುವ ಶಿಲಾ ಶಾಸನದ ಪ್ರಕಾರ ಇದು ಪ್ರಸನ್ನ ವಿರುಪಾಕ್ಷ ದೇವಾಲಯ. ಕೃಷ್ಣದೇವರಾಯ ಕ್ರಿ.ಶ. ೧೫೩೧ರಲ್ಲಿ ಅನೇಕ ದೇವಾಲಯಗಳಿಗೆ ಕೊಟ್ಟದಾನಗಳಲ್ಲಿ ಇದು ಒಂದು. ಗರ್ಭಗೃಹದಲ್ಲಿ ಪ್ರಸ್ತುತ ಶಿವಲಿಂಗವಿಲ್ಲ. ಗರ್ಭಗೃಹವು ಯಾವಾಗಲೂ ನೀರಿನಿಂದ ಆವೃತ್ತವಾಗಿರುತ್ತದೆ. ಗರ್ಭಗೃಹದ ಬಾಗಿಲುವಾಡದ ಲಲಾಟ ಬಿಂಬದಲ್ಲಿ ಯಾವುದೇ ಅಲಂಕಾರತೆ ಇಲ್ಲದೇ ಮೂಲ ರೂಪಕ್ಕೆ ಪ್ರಾಧಾನ್ಯತೆ ನೀಡಲಾಗಿದೆ. ಪ್ರದಕ್ಷಿಣಾ ಪಥ ವಿರುವುದು ಈ ದೇವಾಲಯದ ಮತ್ತೊಂದು ವಿಶೇಷತೆ. ಪೂರ್ವಕ್ಕೆ ಏಳು ಸಾಲಿನ ಕಂಬಗಳ ಮಹಾಮಂಟಪವಿದೆ. ನವರಂಗದಲ್ಲಿ ನಂದಿ, ಗರ್ಭಗೃಹಕ್ಕೆ ಮುಖ, ಮಾಡಿ ಕುಳಿತಿದೆ. ಮಧ್ಯೆ ನಾಲ್ಕು ಸ್ತಂಭಗಳಿವೆ. ಇವರ ಮೇಲ್ಛಾವಣಿ ಷಟ್‌ಕೋನಾಕೃತಿಯಲ್ಲಿದ್ದು ಮಧ್ಯ ಅರಳಿದ ಕಮಲವಿದೆ. ಸ್ತಂಭಗಳು ಚೌಕಾಕಾರವಾಗಿದ್ದು ಮೇಲೆ ಬೋದಿಗೆಗಳು ಇವೆ. ಸ್ತ್ರೀಯರ ವಿವಿಧ ಭಂಗಿ, ನವಿಲು, ಶಂಖ, ಹೂವಿನ ಚಿತ್ರಗಳನ್ನು ಕೆತ್ತಲಾಗಿದೆ. ನವರಂಗದ ಮುಂದಿನ ಭಾಗದಲ್ಲಿ ಎರಡು ಮಂಟಪಗಳಿದ್ದು ಪ್ರತ್ಯೇಕ ಪ್ರವೇಶದ್ವಾರವಿದೆ. ಪ್ರವೇಶದ್ವಾರದ ಬಾಗಿಲು ವಾಡದಲ್ಲಿ ಶೈವ ದ್ವಾರಪಾಲಕರು ತ್ರಿಶೂಲ, ಡಮರುಗ, ಗಧೆ ಹಿಡಿದಿದ್ದಾರೆ. ನಂದಿ, ಶಂಖ, ಕಹಳೆ ಊದುವ ಚಿತ್ರ, ನರ್ತಕಿಯರ ವಿವಿಧ ಭಂಗಿಗಳು ಕಾಮಧೇನು, ಈಶ್ವರ ಲಿಂಗಕ್ಕೆ ಹಾಲೆರೆಯುತ್ತಿರುವ ಹಸು, ದೇವಿ, ಗಣಪತಿ, ಶಿವ, ಈಟಿಧಾರಿ, ಲತಾ ಸುರುಳಿ, ಮುಂತಾದ ಮೂರ್ತಿಶಿಲ್ಪಗಳನ್ನು ಸ್ತಂಭಗಳ ಮೇಲೆ ಕಡೆಯಲಾಗಿದೆ. ಮೇಲ್ಛಾವಣಿಯ ಮೇಲೆ ಭುವನೇಶ್ವರಿ ಇದೆ. ಪ್ರವೇಶದ್ವಾರದ ಸ್ತಂಭಗಳಲ್ಲಿ ಪುಷ್ಪ ಬೋದಿಗೆಗಳು ಇವೆ. ಪಶ್ಚಿಮ ದಿಕ್ಕಿನಲ್ಲಿ ಎತ್ತರವಾದ ಧ್ವಜ ಸ್ತಂಭವು ಛಾವಣಿಯ ಮಧ್ಯದಿಂದ ಹೊರಬಂದಿದೆ. ಧ್ವಜ ಸ್ತಂಭಗಳ ಮುಂದೆ ಬಲಿಪೀಠವಿದೆ. ಬಲಿ ಪೀಠದ ಮುಂಭಾಗದಲ್ಲಿ ಮಂಟಪಗಳಿದ್ದು ಇಲ್ಲಿನ ಸ್ತಂಭಗಳು ಅಷ್ಟಕೋನಾಕೃತಿಯಲ್ಲಿದ್ದು ಮೇಲ್ಭಾಗದಲ್ಲಿ ಬೋದಿಗೆಗಳಿವೆ. ಪ್ರವೇಶದ್ವಾರದ ಎರಡೂ ಕಡೆಗೆ ಎರಡು ಅಂತಸ್ತಿನ ಮಂಟಪಗಳಿವೆ. ಇದು ಆಯತಾಕಾರದಲ್ಲಿವೆ. ಸ್ತಂಭಗಳು ಚೌಕಾಕಾರವಾಗಿ ಎರಡೆರಡು ಬೋದಿಗೆಗಳನ್ನು ಒಳಗೊಂಡಿವೆ. ಮುಖ ಮಂಟಪದಲ್ಲಿ ದ್ವಾರದ ಇಕ್ಕೆಲುಗಳಲ್ಲಿ ದ್ವಾರಪಾಲಕರಿದ್ದಾರೆ. ಬಾಗಿಲಿನ ತೋರಣ ಸೂಕ್ಷ್ಮ ಕೆತ್ತನೆಯ ಹೂ ಬಳ್ಳಿಗಳಿಂದ ರಚಿತವಾಗಿದೆ. ಈ ದೇವಾಲಯದ ಹೊರಭಾಗ ಅಧಿಷ್ಠಾನ, ಭಿತ್ತಿ, ಕಪೋತವನ್ನು ಒಳಗೊಂಡಿವೆ. ಗರ್ಭಗೃಹ ಮತ್ತು ಅಂತರಾಳದ ಸುತ್ತ ಪ್ರಾಕಾರವಿರುವುದು ವಿಶೇಷ. ಶಿಖರ ಕದಂಬರ ನಾಗರ ಶೈಲಿಯಲ್ಲಿದೆ. ಶಿಖರ ಆರು ಹಂತಗಳನ್ನು ಒಳಗೊಂಡಿದೆ. ಮುಂಭಾಗದಲ್ಲಿ ಸುಖನಾಸಿ ಇದೆ. ನವರಂಗದಲ್ಲಿನ ಉತ್ತರ ಮತ್ತು ದಕ್ಷಿಣಗಳಲ್ಲಿ ಘನಾಕೃತಿಯ ಸ್ತಂಭಗಳು ಮೊಗಸಾಲೆಯ ಅವಶೇಷಗಳಿವೆ. ಘನಾಕಾರದ ಅಡಿ, ಅಷ್ಟಕೋನದ ದಿಂಡು, ನಿಡಿದಾದ ಚೂಪಾದ ಕುಂಭ ಇಲ್ಲಿನ ಸ್ತಂಭಗಳ ಪ್ರಮುಖ ಲಕ್ಷಣವಾಗಿದೆ. ವಾಯುವ್ಯದಲ್ಲಿರುವ ಅಮ್ಮನ ಗುಡಿಯು ಭಗ್ನವಾಗಿದೆ. ನೈರುತ್ಯ ದಿಕ್ಕಿನಲ್ಲಿರುವ ನವರಂಗ ಮಂಟಪ ಚಿತ್ರಣ ಸುಂದರ ಇದು ವಿಜಯನಗರ ಕಾಲಕ್ಕೆ ಸೇರುತ್ತದೆ. ಇದರ ಪ್ರವೇಶ ಮಂಟಪದಲ್ಲಿ ಎಂಟು

ಸ್ತಂಭಗಳಿದ್ದು, ಪುಷ್ಪ ಬೋದಿಗೆಗಳನ್ನು ಒಲಗೊಂಡಿವೆ. ಸ್ತಂಭಗಳಲ್ಲಿ ದೇವತೆಗಳು ಕೀರ್ತಿಮುಖ, ಲಿಂಗ, ಕಾಮಧೇನು, ಭಕ್ತ ಲಿಂಗಕ್ಕೆ ಆನೆ ವಂದಿಸುತ್ತಿರುವ ಚಿತ್ರ ಸರ್ಪಧಾರಿತ ಶಿವಲಿಂಗ, ಲಿಂಗಕ್ಕೆ ಕೈ ಮುಗಿಯುತ್ತಿರುವ ಚಿತ್ರ, ಪ್ರಾಣಿ, ಮನುಷ್ಯ ನಂದಿ, ಕಮಂಡಲಧಾರಿ ನಿಂತಸಿಂಹ ವಿವಿಧ ರೀತಿಯ ಪುಷ್ಪಗಳು ಶಂಖ ಊದುತ್ತಿರುವ ಸ್ತ್ರೀ ಕೈಯಲ್ಲಿ ಕೋಲು ಹಿಡಿದು ನರ್ತಿಸುತ್ತಿರುವ ಶಿಲ್ಪ ಮುಂತಾದ ಮೂರ್ತಿಶಿಲ್ಪಗಳಿವೆ. ಕಲ್ಯಾಣ ಮಂಟಪದ ಮೇಲ್ಛಾವಣಿಯಲ್ಲಿ ಅರಳಿದ ಕಮಲ ಅಲಂಕೃತವಾಗಿದೆ. ಸುತ್ತಲೂ ನರ್ತಿಸುವ ಸ್ತ್ರೀಯರ ಚಿತ್ರಣ ಇನ್ನೊಂದು ವಿಶೇಷತೆ. ಇವು ಚೌಕಾಕಾರವಾಗಿದ್ದು ಹೂವಿನ ಚಿತ್ರಣ ಮತ್ತು ಮಧ್ಯ ಪಟ್ಟಿಕೆಗಳನ್ನು ಒಳಗೊಂಡಿವೆ. ಸಿಂಹ, ನವಿಲು ವಾಹನ ಮಾಡಿಕೊಂಡು ಷಣ್ಮುಖ, ನಾಗಕನ್ಯೆ, ಗಣಪತಿ ವಿವಿಧ ಭಂಗಿಗಳ ಸ್ತ್ರೀ ರುದ್ರಾಕ್ಷಿ, ಸರ್ಪಧಾರಿಲಿಂಗ, ವಾಮದೇವ, ಆನೆ, ಆನೆಯ ಸೊಂಡಿಲು ಲಿಂಗದ ಮೂಲಕ ಶಿವ ಸಾನಿಧ್ಯ ಮುಂತಾದ ಚಿತ್ರಣಗಳಿವೆ. ವೇದಿಕೆ ಮುಂಭಾಗದಲ್ಲಿ ನಾಲ್ಕು ನಾಲ್ಕು ಸ್ತಂಭಗಳಲ್ಲಿ ಸ್ತ್ರೀಯ ವಿವಿಧ ಭಂಗಿಗಳು ನೃತ್ಯಗಾರ್ತಿಯರು, ಶಿವಲಿಂಗ, ವಿವಿಧ ಪಕ್ಷಿಗಳು, ಕಾಮಧೇನು ದೇವ–ದೇವತೆಗಳು ಈ ಸ್ತಂಭಗಳಲ್ಲಿ ಚಿತ್ರಿಸಲ್ಪಟ್ಟಿವೆ.

ಹೆಸರು :– ಮಲ್ಲಿಕಾರ್ಜುನ ದೇವಾಲಯ

ಸ್ಥಳ :– ಸೀತಾರಾಂ ತಾಂಡದ ಪಶ್ಚಿಮ ದಿಕ್ಕು, ಕಾಮಲಾಪುರ

ಕಾಲ :– ೧೪–೧೫ನೇ ಶತಮಾನ

ರಾಜವಂಶ :– ವಿಜಯನಗರ (ಸಂಗಮಕಾಲದ್ದು)

ದಿಕ್ಕು :– ಪೂರ್ವಾಭಿಮುಖ

ವಸ್ತು :– ಬೆಣಚುಕಲ್ಲು

ಈ ದೇವಾಲಯ ೧೫ ಮೀ ೧೦ ಸೆಂ.ಮೀ ಉದ್ದ x ೮ ಮೀ ೯೦ ಸೆಂ.ಮೀ ಅಗಲವಿದೆ. ಕಾಮಲಾಪುರದಿಂದ ೪ ಕಿ.ಮೀ ಅಂತರದಲ್ಲಿ ನಲ್ಲಾಪುರಕ್ಕೆ ಹೋಗುವ ಮಾರ್ಗದಲ್ಲಿ ಈ ದೇವಾಲಯವಿದೆ. ವಿಜಯನಗರ ಕಾಲದಲ್ಲಿ ಈ ಪ್ರದೇಶವನ್ನು ಅನಂತಾಪುರ ಎಂದು ಕರೆಯಲಾಗುತ್ತಿತ್ತು. ಈ ದೇವಾಲಯದ ಸುತ್ತಲೂ ಪ್ರಾಕಾರದ ಭಿತ್ತಿ ಆವರಿಸಿದ್ದು ಪೂರ್ವ–ಉತ್ತರ–ದಕ್ಷಿಣಕ್ಕೆ ಬಾಗಿಲು ದ್ವಾರಗಳಿದ್ದರೂ ಪ್ರಸ್ತುತ ಇದು ಶಿಥಿಲವಾಗಿದೆ. ದೇವಾಲಯದ ಒಳಭಾಗ ನವರಂಗ, ಅಂತರಾಳ ಗರ್ಭಗೃಹವನ್ನು ಒಳಗೊಂಡಿದೆ. ನವರಂಗದ ಮೂರು ದ್ವಾರಗಳ ಎದುರಿಗೆ ಮಂಟಪಗಳಿವೆ. ಪೂರ್ವ–ಉತ್ತರ–ದಕ್ಷಿಣ ದಿಕ್ಕುಗಳ ಬಾಗಿಲು ದ್ವಾರದ ಇಕ್ಕೆಲುಗಳಲ್ಲಿ ಶೈವ ದ್ವಾರಪಾಲಕರಿದ್ದಾರೆ. ಗರ್ಭಗೃಹದ ಮೇಲ್ಛಾವಣಿ ಅಷ್ಟಕೋನಾಕೃತಿ, ಮಧ್ಯದಲ್ಲಿ ಅರಳಿದ ಕಮಲವಿದೆ. ಗರ್ಭಗೃಹದಲ್ಲಿ ಪ್ರಸ್ತುತ ಪಾಣಿಪೀಠವಿದೆ. ಗರ್ಭಗೃಹದ ಬಾಗಿಲುವಾಡನ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಪದ್ಮಾಸೀನಳಾಗಿದ್ದಾಳೆ. ಅಂತರಾಳದ ಬಾಗಿಲು ವಾಡದಲ್ಲಿ ಶೈವದ್ವಾರ ಪಾಲಕರು ಸ್ಥಾನಿಕ ಭಂಗಿಯಲ್ಲಿದ್ದಾರೆ. ನವರಂಗದ ಮೇಲ್ಛಾವಣಿ ಅಷ್ಟಕೋನಾಕೃತಿಯ ಮಧ್ಯ ಭುವನೇಶ್ವರಿ ಇದೆ. ನವರಂಗದ ಮಧ್ಯದಲ್ಲಿ ನಾಲ್ಕು ಸ್ತಂಭಗಳು ಇದ್ದು ಕೆಳಭಾಗ ಚೌಕ ಷೋಡಾಶ್ರ, ಅಷ್ಟಪಟ್ಟಿಯನ್ನು ಒಳಗೊಂಡಿದೆ. ಮೇಲ್ಭಾಗ ಚೌಕಾಕಾರ ಮತ್ತು

ಅಮಾಲಕ ಇದೆ. ಈ ಸ್ತಂಭಗಳಲ್ಲಿ ಯೋಗಿ ಆನೆ ಪೂರ್ಣಕುಂಭ, ಮತ್ಸೇಂದ್ರನಾಥ ಆಮೆ, ಮಹಿಳೆಯ ನೃತ್ಯಭಂಗಿ, ಡೋಲುಧಾರಿ, ಗಣಪತಿ ಆಯುಧ ಹೊತ್ತ ಮನುಷ್ಯ, ಚಾಮರಧಾರಿ, ಬಿಂದಿಗೆ ಹೊತ್ತ ಮಹಿಳೆ ಮಂಗ ಹಣ್ಣು ತಿನ್ನುವುದು, ಶಿವಲಿಂಗ, ಚಕ್ರ ಪುಷ್ಪ, ವೀರಭದ್ರ, ಗಧಾಫಾ, ಮಹಿಳೆ, ಸ್ಥಾನಿಕ ಭಂಗಿಯಲ್ಲಿ ಸಿಂಹ, ಸಿಂಹ ಮುಖ, ಗಡ್ಡಧಾರಿ ಕಾಳಿಂಗಮರ್ಧನ ಕೃಷ್ಣ, ಬಾಲಕೃಷ್ಣ, ಬೆಣ್ಣೆಕೃಷ್ಣ, ಅಂಜಲಿ ಮುಂದ್ರೆಯಲ್ಲಿದ್ದು ಹನುಮಂತ ನವಿಲು, ಶಂಖ ಕೀರ್ತಿ ಮುಖ ಮುಂತಾದ ಚಿತ್ರಗಳನ್ನು ಸ್ತಂಭಗಳಲ್ಲಿ ಕಾಣಬಹುದು. ಮೇಲ್ಛಾವಣಿ ಭುವನೇಶ್ವರಿಯನ್ನು ಒಳಗೊಂಡಿದೆ. ಮೇಲ್ಛಾವಣೆಯಲ್ಲಿ ಕಲ್ಲು ವಿಸ್ತೃತವಾಗಿ ಹಾಸಲ್ಪಟ್ಟಿದೆ. ಮುಖ ಮಂಟಪದಲ್ಲಿ ಶಿಲಾಸ್ತಂಭಗಳಿದ್ದೂ ಸ್ತಂಭಗಳು ಚೌಕಾಕಾರವಾಗಿದ್ದು ಮೇಲೆ ಬೋದಿಗೆಗಳನ್ನು ಒಳಗೊಂಡಿವೆ. ಮುಖಮಂಟಪದ ಮೇಲೆ ಸುಖನಾಸಿ ಮಾತ್ರವಿದೆ. ಗರ್ಭಗೃಹದ ಮೇಲ್ಛಾವಣೆ ಗೋಪುರ ಇಟ್ಟಿಗೆ–ಗಾರೆಯಿಂದ ನಿರ್ಮಿತವಾಗಿದೆ. ಮುಂಭಾಗದಲ್ಲಿ ೨ ಸುಖನಾಸಿಗಳು ಇವೆ. ಆದರೆ ಯಾವುದೇ ಮೂರ್ತಿಶಿಲ್ಪವಿಲ್ಲ. ಈ ದೇವಾಲಯದ ಹೊರಭಾಗ ಅಧಿಷ್ಠಾನ, ಭಿತ್ತಿ ಮತ್ತು ಶಿಖರವನ್ನೊಳಗೊಂಡಿವೆ. ಅಧಿಷ್ಠಾನ ಈಗ ಮುಚ್ಚಲ್ಪಟ್ಟಿದೆ. ದೇವಾಲಯದ ಹೊರಭಿತ್ತಿಯಲ್ಲಿ ದೇವ ಕೋಷ್ಟಕಗಳಿವೆ. ಭಿತ್ತಿಯ ಮೇಲೆ ಹನುಮಂತ, ಉಗ್ರನರಸಿಂಹ, ಮೀನಿನ ಮೇಲೆ ನಿಂತು ಕರ ಜೋಡಿಸಿದ ಸ್ತ್ರೀ, ಅನಂತಶಯನ, ಬಾಲಕೃಷ್ಣ, ನವಿಲು, ಸ್ತ್ರೀ ಆಮೆ, ಮೀನು ಸಂಜೀವಿನಿ ಹನುಮಂತ, ಕಾಳಿಂಗ ಮರ್ಧನ ಕೃಷ್ಣ, ಗಜಾರೋಹಿ ಶಿಲ್ಪ ಮುಂತಾದ ಮೂರ್ತಿ ಶಿಲ್ಪಗಳು, ಸುತ್ತಲೂ ಆವರಿಸಿಕೊಂಡಿರುವುದು ಈ ದೇವಾಲಯದ ಮತ್ತೊಂದು ವಿಶೇಷತೆಯಾಗಿದೆ.

ಹೆಸರು :– ಚಂದ್ರಶೇಖರ ದೇವಾಲಯ [೪೦]

ಸ್ಥಳ :– ರಾಣಿಸ್ನಾನಗೃಹ, ಕಾಮಲಾಪುರ

ಕಾಲ :– ೧೫–೧೬ನೇ ಶತಮಾನ

ರಾಜವಂಶ :– ಮಾಂಡಲೀಕರು/ವಿಜಯನಗರ

ದಿಕ್ಕು :– ಪೂರ್ವಾಭಿಮುಖ

ವಸ್ತು :– ಬೆಣಚುಕಲ್ಲು

ಕಾಮಲಾಪುರದಿಂದ ಉತ್ತರದಿಕ್ಕಿಗೆ ೧ ಕಿ.ಮೀ ಅಂತರದಲ್ಲಿದೆ. ದೇವಾಲಯದ ಒಳಭಾಗ ಗರ್ಭಗೃಹ ಅಂತರಾಳ ಸಭಾಮಂಟಪವನ್ನು ಒಳಗೊಂಡಿದೆ. ಇಲ್ಲಿ ಜೋಡು ಗರ್ಭಗೃಹದ ದೇವ ಮಂದಿರವಿದೆ. ಮುಖ್ಯಗರ್ಭಗೃಹ ಪೂರ್ವಾಭಿಮುಖವಾಗಿದ್ದು, ರಂಗ ಮಂಟಪದ ಉತ್ತರಕ್ಕೆ ದಕ್ಷಿಣಾಭಿಮುಖವಾದ ಇನ್ನೊಂದು ಗರ್ಭಗೃಹವಿದೆ. ಗರ್ಭಗುಡಿಯು ಮೇಲ್ಛಾವಣೆ ಅಷ್ಟಕೋನಾಕೃತಿಯಲ್ಲಿದೆ. ಗರ್ಭಗೃಹದ ಎರಡೂ ಬಾಗಿಲು ಬದಿಗೆ ದ್ವಾರಪಾಲಕರಿದ್ದಾರೆ. ಮೇಲ್ಭಾಗದ ಲಲಾಟ ಬಿಂಬ ಸಪಾಟಾಗಿ ಅಲಂಕರಣೆ ಇಲ್ಲದೆ ಮೂಲ ರೂಪದಲ್ಲಿರುವುದು ವಿಶೇಷತೆ. ರಂಗಮಂಟಪಕ್ಕೆ ಹತ್ತಿಕೊಂಡೇ ತೆರೆದ ಮಂಟಪವಿದೆ. ಸ್ತಂಭಗಳು ಚಚ್ಚೌಕವಾಗಿದ್ದು ಈ ಸ್ತಂಭಗಳ ಮೇಲೆ ಶೈವ ಮತ್ತು ವೈಷ್ಣವ ಚಿತ್ರಗಳು ಕಾಣಸಿಗುತ್ತವೆ. ನವರಂಗ ಅಥವಾ ಸಭಾಮಂಟಪ ಹತ್ತು

ಸ್ತಂಭಗಳಿಂದ ಒಳಗೊಂಡಿದ್ದು ಪ್ರತಿಯೊಂದು ಸ್ತಂಭದ ಮೇಲೆ ಪುಷ್ಪ ಬೋಧಿಗೆಗಳಿವೆ. ಸ್ತಂಭಗಳು ಚೌಕಾಕಾರವಾಗಿದ್ದು ಚಂದ್ರಲಿಂಗ, ಸಿಂಹ ನರ್ತನದ ವಿವಿಧ ಭಂಗಿಗಳು ನವಿಲು ಕಾಮಧೇನು ಲಿಂಗಕ್ಕೆ ಹಾಲೆರೆಯುವ ಚಿತ್ರ. ಶಿವ ಪಾರ್ವತಿ ಶಂಖ ಊದುವ ಮಹಿಳೆ, ಪದ್ಮ, ಚಕ್ರ, ನಂದಿ ಹಸು ಕರುವಿಗೆ ಹಾಲುಣಿಸುವ ಚಿತ್ರ ಆಂಜನೇಯ ಪರ್ವತವನ್ನು ಹಿಡಿದು ಎತ್ತುತ್ತಿರುವುದು. ಶೈವ ಮೂರ್ತಿಶಿಲ್ಪ, ಶೈವ ಲೀಲೆಗಳ ವರ್ಣನೆ ಈ ಸ್ತಂಭಗಳಲ್ಲಿ ಚಿತ್ರಿತವಾಗಿವೆ. ನವರಂಗದ ಮಧ್ಯೆ ಮೇಲ್ಛಾವಣಿ ಅಷ್ಟಕೋನಾಕೃತಿ ಮಧ್ಯದಲ್ಲಿ ಅರಳಿದ ಕಮಲ ಈ ರಂಗಮಂಟಪಕ್ಕೆ ಮತ್ತಷ್ಟು ಮೆರಗನ್ನು ನೀಡಿವೆ. ರಂಗ ಮಂಟಪಕ್ಕೆ ಪೂರ್ವ-ಪಶ್ಚಿಮಕ್ಕೆ ಪ್ರವೇಶದ್ವಾರಗಳಿದ್ದು ಪ್ರವೇಶದ್ವಾರದ ಎರಡೂ ಕಡೆಗಳಲ್ಲಿ ದ್ವಾರಪಾಲಕರ ಚಿತ್ರಗಳಿವೆ. ಮುಖಮಂಟಪದ ಗೋಡೆಯ ಭಿತ್ತಿ ಕೂಡ್ಯ ಸ್ತಂಭಗಳನ್ನು ಒಳಗೊಂಡಿರುವುದು ವಿಶೇಷ ಲಕ್ಷಣಗಳಲ್ಲಿ ಒಂದಾಗಿದೆ. ಹೊರಭಾಗ ಅಧಿಷ್ಠಾನ, ಭಿತ್ತಿ ಕಪೋತ ಶಿಖರವನ್ನು ಒಳಗೊಂಡಿವೆ. ಶಿಖರದ ಸುತ್ತ ಮುತ್ತಲ ಭಕ್ತರ ನರ್ತನೆಯ ಶಿಲ್ಪ ಮೂರ್ತಿಗಳು ಗಾರೆ ಶಿಲ್ಪಗಳಿಂದ ಮಾಡಲ್ಪಟ್ಟಿವೆ. ಸುಖನಾಸಿಯಲ್ಲಿರುವ ಶಿಖರದ ಚಿತ್ರಣದಲ್ಲಿ ಇರುವ ಚಿತ್ರ ಬಹುಶಃ ಚಂದ್ರಶೇಖರನಿರಬೇಕು. ಸ್ತೂಪಿಯ ಮೇಲ್ಭಾಗ ಪ್ರಸ್ತುತ ಹಾಳಾಗಿದೆ. ಪ್ರವೇಶದ್ವಾರದ ಗೋಪುರದ ಸುತ್ತಲೂ ಅನೇಕಗಾರೆ ಮೂರ್ತಿ ಶಿಲ್ಪಗಳಿವೆ. ಈ ಗೋಪುರ ಮೂರು ಹಂತಗಳನ್ನು ಒಳಗೊಡಿದೆ. ಮಧ್ಯಭಾಗ ಶಿಥಿಲವಾಗಿದೆ. ಶಿಖರದ ಮೇಲ್ಭಾಗದಲ್ಲಿ ಉತ್ತರ ದಿಕ್ಕಿಗೆ ಸಿಂಹ ಮುಖದ ಪ್ರಣಾಳಿಕೆ ಶಿಖರದ ಮೇಲ್ಭಾಗ ಕೀರ್ತಿಮುಖವನ್ನು ಒಳಗೊಂಡಿದೆ. ದೇವಾಲಯದ ಭಿತ್ತಿ ವಿಸ್ತೃತವಾಗಿ ಹಾಸಲ್ಪಟ್ಟಿದೆ. ಹೊರ ಭಿತ್ತಿಗೆ ಕೂಡ್ಯಸ್ತಂಭ ಮಧ್ಯದಲ್ಲಿ ಗೂಡುಗಳಿದ್ದರೂ ಪ್ರಸ್ತುತ ಯಾವುದೇ ಮೂರ್ತಿಶಿಲ್ಪವಿಲ್ಲ. ಪಶ್ಚಿಮದ ಭಿತ್ತಿ ಶಿಥಿಲವಾಗಿದ್ದು ಇತ್ತೀಚಿಗೆ ಭಾರತೀಯ ಪುರಾತತ್ವ ಅನ್ವೇಷಣಾ ಇಲಾಖೆಯಿಂದ ಜೀರ್ಣೋದ್ಧಾರ ಮಾಡಲಾಗಿದೆ.

ಹೆಸರು :- ಶೈವ ದೇವಾಲಯ[೧೧]

ಸ್ಥಳ :- ಗಜಶಾಲೆಯ ಹಿಂಬದಿ, ಕಾಮಲಾಪುರ, ಹೊಸಪೇಟೆ (ತಾ)

ಕಾಲ :- ೧೫-೧೬ನೇ ಶತಮಾನ

ರಾಜವಂಶ :- ಮಾಂಡಲೀಕರು ವಿಜಯನಗರ

ದಿಕ್ಕು :- ದಕ್ಷಿಣ

ವಸ್ತು :- ಬೆಣಚುಕಲ್ಲು

ಈ ದೇವಾಲಯದ ಉದ್ದ ೧೦ಮೀ ೧೦ ಸೆಂ.ಮೀ ಮತ್ತು ೯ ಮೀ ೩೦ ಸೆಂ.ಮೀ ಇದೆ. ಪ್ರಸ್ತುತ ದೇವಾಲಯ ಶಿಥಿಲವಾಗಿದೆ. ಈ ದೇವಾಲಯದ ದಿಕ್ಕಿಗೆ ಮುಖವಾಗಿದೆ. ದೇವಾಲಯದ ಒಳಭಾಗ ಗರ್ಭಗಹ ಅಂತರಾಳ ಮತ್ತು ಮುಖ ಮಂಟಪವನ್ನು ಒಳಗೊಂಡಿದೆ. ಗರ್ಭಗೃಹದ ಮೇಲ್ಛಾವಣಿ ಅಷ್ಟಕೋನಾಕೃತಿಯನ್ನು ಒಳಗೊಂಡಿದೆ. ಅಂತರಾಳ ಬಾಗಿಲುದ್ವಾರ ಸೂಕ್ಷ್ಮ ಕೆತ್ತನೆಯಿಂದ ಒಳಗೊಂಡಿದ್ದರೂ ಲಲಾಟ ಬಿಂಬದಲ್ಲಿನ ಮೂರ್ತಿಶಿಲ್ಪ ಹಾಳಾಗಿದೆ. ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ಶೈವದ್ವಾರ ಪಾಲಕರು ಇದ್ದಾರೆ. ಬಾಗಿಲು ವಾಡದ ಸ್ತಂಭ ಪಟ್ಟಿಕೆಯ ಮೇಲ್ಭಾಗದಲ್ಲಿ ಹೂವಿನ,

ಸಿಂಹದ ಚಿತ್ರಣವಿದೆ. ಮುಖಮಂಟಪ ೮ ಸ್ತಂಭಗಳನ್ನು ಒಳಗೊಂಡಿದ್ದು, ಈ ಸ್ತಂಭಗಳು ಚೌಕಾಕಾರ, ಅಷ್ಟಕೋನಾಕೃತಿ ಮತ್ತೆ ಚೌಕಾಕಾರದ ಮೇಲೆ ಬೋಧಿಯನ್ನು ಒಳಗೊಂಡಿದೆ. ಈಶ್ವರ, ನಕ್ಷತ್ರ, ತಪಸ್ವಿನಿ, ವೀರಭದ್ರ, ಸಿಂಹ, ಗಣಪತಿ, ನಂದಿ, ಹೂ ವಾಮನ, ಆಯುಧ ಧಾರಿ ಗಂಢಬೇರುಂಢ ಮುಂತಾದ ಮೂರ್ತಿ ಶಿಲ್ಪಗಳು ಸ್ತಂಭಗಳ ಮೇಲೆ ಕೆತ್ತಲ್ಪಟ್ಟಿರುವುದು, ಈ ದೇವಾಲಯದ ವೈಶಿಷ್ಟ್ಯ ಹೊರಭಾಗ ಅಧಿಷಾವಿನ, ಭಿತ್ತಿ ಕಪೋತವನ್ನು ಒಳಗೊಂಡಿವೆ. ಮೇಲ್ಭಾಗಕ್ಕೆ ಇಟ್ಟಿಗೆ ಗಾರೆಗಳನ್ನು ಬಳಸಿರುವುದು ಗೋಚರವಾಗುತ್ತದೆ.

ಹೆಸರು :– ಈಶ್ವರ ದೇವಾಲಯ೬೨

ಸ್ಥಳ :– ಪ್ರಾಥಮಿಕ ಶಾಲೆಯ (೨ನೇವಾರ್ಡ್) ಹತ್ತಿರ, ಕಾಮಲಾಪುರ

ಕಾಲ :– ೧೫–೧೬ನೇ ಶತಮಾನ

ರಾಜವಂಶ :– ಮಾಂಡಲೀಕರು /ವಿಜಯನಗರ

ದಿಕ್ಕು :– ಪೂರ್ವಾಭಿಮುಖ

ವಸ್ತು :– ಬೆಣಚುಕಲ್ಲು

ದೇವಾಲಯದ ಉದ್ದ ೨೬ ಮೀ. ೬೦ ಸೆಂ.ಮೀ. ಅಗಲ ೮ ಮೀ. ವಿಸ್ತೀರ್ಣವಿದೆ. ಪ್ರಸ್ತುತ ಈ ದೇವಾಲಯ ಜೀರ್ಣೋದ್ಧಾರವಾಗಿದೆ. ಗರ್ಭಗೃಹದ ಅಂತರಾಳ ನವರಂಗ ಮತ್ತು ಮುಖ ಮಂಟಪವನ್ನು ಒಳಗೊಂಡಿವೆ. ಬಾಗಿಲುದ್ವಾರ ಉತ್ತರಕ್ಕೆ ದಕ್ಷಿಣಕ್ಕೆ ಮತ್ತು ಪೂರ್ವಾಭಿಮುಖವಾಗಿದೆ. ಗರ್ಭಗೃಹದಲ್ಲಿದ್ದ ಈಶ್ವರಲಿಂಗ ಇತ್ತೀಚಿನದು ಅಂತರಾಳದ ಬಾಗಿಲು ದ್ವಾರದ ಮೇಲ್ಭಾಗದ ಗಜಲಕ್ಷ್ಮಿ ಪದ್ಮಾಸೀನಳಾಗಿದ್ದಾಳೆ. ಇವರ ಬಾಗಿಲುದ್ವಾರದಲ್ಲಿ ವೈಷ್ಣವದ್ವಾರ ಪಾಲಕರಿದ್ದು ಬಹುಶಃ ಇದು ವೈಷ್ಣವ ಗುಡಿ ಎಂಬುದನ್ನು ಸೂಚಿಸುತ್ತದೆ. ಪ್ರವೇಶದ್ವಾರದಲ್ಲಿ ಸ್ತ್ರೀಯರ ಶಿಲ್ಪಗಳು ಹಾಗೂ ಲತಾಬಳ್ಳಿಗಳು ಕೆತ್ತಲ್ಪಟ್ಟಿವೆ. ಹೊಸ್ತಲಿನ ಮುಖಭಾಗ ಹನುಮಂತ ಸಂಜೀವಿನಿ ಪರ್ವತವನ್ನು ಕೈಯಲ್ಲಿ ಹಿಡಿದಂತಿವೆ. ಅಂತರಾಳ ಮತ್ತು ಗರ್ಭಗೃಹಗಳಲ್ಲಿ ಮೇಲ್ಛಾವಣಿಗೆ ಕಲ್ಲು ಉದ್ದವಾಗಿ ಹಾಸಲ್ಪಟ್ಟಿದೆ. ಅಂತರಾಳದ ಪ್ರವೇಶದ ಬಾಗಿಲು ವಾಡದಲ್ಲಿ ಹನುಮಂತ ಮೂರು ಭಕ್ತರು ಅಂಜಲಿ ಮುದ್ರೆಯಲ್ಲಿದ್ದು, ರಾಮ, ಲಕ್ಷ್ಮಣ, ಸೀತೆ, ಭಕ್ತರ ಶಿಲ್ಪಗಳೂ ಇಲ್ಲಿ ಕೆತ್ತಲ್ಪಟ್ಟಿದೆ. ಗರ್ಭಗೃಹದಲ್ಲಿ ಪೀಠದ ಭಾಗ ಸಿಂಹಮುಖದ ಪ್ರಣಾಳಿಕೆಯನ್ನು ಒಳಗೊಂಡಿದೆ. ನವರಂಗ ಎರಡ ಸ್ತಂಭಗಳನ್ನು ಒಳಗೊಂಡಿದೆ. ಸ್ತಂಭಗಳು ಚೌಕಾಕಾರವಾಗಿದ್ದು ನಾಸಿ, ಚೌಕಾಕಾರದ ಬೋದಿಗೆಗಳನ್ನು ಒಳಗೊಂಡಿದೆ. ಸ್ತ್ರೀ, ಮೃದಂಗವಾದಕ, ಯೋಗಿ, ನವಿಲು, ಸರ್ಪವನ್ನು ಕೊಕ್ಕಿನಲ್ಲಿ ಹಿಡಿದುಕೊಂಡಿರುವುದು ಕಮಲ ಮಂಗ, ತನ್ನ ಮರಿಯನ್ನು ಕೈಯಲ್ಲಿ ಹಿಡಿದು ಕೊಂಡಿರುವುದು ಹುಲಿಯ ಮೇಲೆ ಆಸೀನಳಾದ ದೇವಿ, ಹಂಸ ಇವು ಸ್ತಂಭಗಳಲ್ಲಿ ಚಿತ್ರಿತವಾಗಿದೆ. ದೇವಾಲಯದ ಹೊರಭಾಗ ಅಧಿಷ್ಠಾನ ಭಿತ್ತಿ ಶಿಖರವನ್ನು ಒಳಗೊಂಡಿದೆ. ಪ್ರಸ್ತುತ ಅಧಿಷ್ಠಾನ ಮಣ್ಣಿನಲ್ಲಿ ಮುಚ್ಚಿದೆ. ಹೊರಭಾಗದ ಭಿತ್ತಿ ಯಾವುದೇ ಅಲಂಕಾರತೆಯಲ್ಲದೇ ಸಪಾಟಾಗಿ ಮೂಲರೂಪದಲ್ಲಿರುವುದು ವಿಶೇಷತೆ. ಇಲ್ಲಿ ಶಿಖರ ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಲ್ಪಟ್ಟಿದ್ದು ವಿಜಯನಗರ

ಕಾಲದ ವೈಶಿಷ್ಟ್ಯತೆಗಳಲ್ಲಿ ಒಂದಾಗಿದೆ. ಶಿಖರದ ಮುಂಭಾಗ ಸುಖನಾಸಿಯನ್ನು ಒಳಗೊಂಡಿದೆ. ಗೋಪುರ ೮ ತಲಾಗಳನ್ನು ಒಳಗೊಂಡಿದ್ದು ಕದಂಬರ ನಾಗರ ಶೈಲಿಯಲ್ಲಿದೆ. ಸ್ತೂಪಿಯು ದೇವ ಕೋಷ್ಟಕಗಳ ರಚನೆಯಿಂದ ಆವೃತ್ತವಾಗಿದೆ. ಭಿತ್ತಿಯ ಕಲ್ಲು ವಿಸ್ತೃತವಾಗಿ ಹಾಸಲ್ಪಟ್ಟಿದೆ. ದೇವಾಲಯದ ಮುಖ್ಯದ್ವಾರದ ಎದುರಿನ ಮಂಟಪದಲ್ಲಿ ದೇವಿವಿಗ್ರಹ ನೀಳವಾದ ಲಿಂಗ ಮತ್ತು ನಾಗರ ಮೂರ್ತಿಶಿಲ್ಪಗಳಿವೆ. ದಕ್ಷಿಣ ಉತ್ತರದಿಕ್ಕಿನ ಮಂಟಪದಲ್ಲಿ ಭೈರವ ಮೂರ್ತಿಯಿದೆ.

ಹೆಸರು :– ನಗರೇಶ್ವರ ದೇವಾಲಯ[೪೩]

ಸ್ಥಳ :– ಕೋಟೆಯ ಮಧ್ಯೆ, ಕಾಮಲಾಪುರ

ಕಾಲ :– ೧೫–೧೬ನೇ ಶತಮಾನ

ರಾಜವಂಶ :– ಮಾಂಡಲೀಕರು/ವಿಜಯನಗರ

ದಿಕ್ಕು :– ಉತ್ತರಾಭಿಮುಖ

ವಸ್ತು :– ಬೆಣಚುಕಲ್ಲು

ಈ ದೇವಾಲಯದ ಉದ್ದ ೨೦ ಮೀ ಅಗಲ ೩೧ ಮೀ ೫೦ ಸೆಂ.ಮೀ ಇದೆ. ನಗರೇಶ್ವರ ದೇವಾಲಯದ ಒಳಭಾಗ ಗರ್ಭಗೃಹ ಮತ್ತು ಮಂಟಪವನ್ನು ಒಳಗೊಂಡಿದೆ. ಮೂಲತಃ ಈ ಕಟ್ಟಡ ವಿಜಯನಗರೋತ್ತರ ಕಾಲಕ್ಕೆ ಸೇರಿದೆ. ಆದರೆ ಗರ್ಭಗೃಹದಲ್ಲಿನ ಮೂರ್ತಿ ಶಿಲ್ಪ ಮತ್ತು ಮಂಟಪದಲ್ಲಿನ ಸ್ತಂಭ ರಚನೆ ವಿಜಯನಗರ ಕಾಲಕ್ಕೆ ಸೇರಿದೆ. ಈ ದೇವಾಲಯ ಪೂರ್ವಾಭಿಮುಖವಾಗಿದ್ದು ಗರ್ಭಗೃಹದ ಮೇಲ್ಛಾವಣಿ (೧೬ ಕೋನಾಕೃತಿಯ) ಚೌಕಾಕಾರದ ಮಧ್ಯದಲ್ಲಿ ಅರಳಿದ ಕಮಲದಿಂದ ಅಲಂಕೃತಗೊಂಡಿವೆ. ಗರ್ಭಗೃಹದ ಪ್ರವೇಶದ್ವಾರದ ಮೇಲೆ ಲಲಾಟ ಬಿಂಬದಲ್ಲಿ ಹೂವಿನ ಚಿತ್ರಣವಿದೆ. ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ವೈಷ್ಣವದ್ವಾರ ಪಾಲಕರಿದ್ದಾರೆ. ಇದು ವೈಷ್ಣವ ದೇವಾಲಯವಿರಬಹುದೇ? ಮಂಟಪದ ನೆಲಸ್ಥರವನ್ನು ಪೂರ್ತಿಯಾಗಿ ನವೀಕರಣ ಮಾಡಲಾಗಿದೆ. ಮಧ್ಯದಲ್ಲಿರುವ ನಂದಿ ಶಿವಲಿಂಗಕ್ಕೆ ಮುಖವಾಗಿದೆ. ಸ್ತಂಭಗಳು ಚೌಕಾಕೃತಿಯಲ್ಲಿದ್ದು ಪ್ರತಿಯೊಂದು ಸ್ತಂಭವೂ ಎರಡು ಪುಷ್ಪ ಬೋದಿಗೆಗಳನ್ನು ಒಳಗೊಂಡಿದೆ. ಕಾಮಧೇನು ಗಣೇಶ ಸಿಂಹಮುಖ, ತಪಸ್ವಿ, ಸ್ತ್ರೀಯರ ವಿವಿಧ ನೃತ್ಯ ಭಂಗಿಗಳು, ಕುಳಿತಿರುವ ಭಂಗಿ ಮುಂತಾದ ಶಿಲ್ಪಗಳು ಈ ಸ್ತಂಭಗಳಲ್ಲಿ ರಚನೆಯಾಗಿರುವುದು ಇದೊಂದು ವೈಶಿಷ್ಟ್ಯತೆ, ಪ್ರವೇಶ ಮಂಟಪದಲ್ಲಿ ನಾಲ್ಕು ಸ್ತಂಭಗಳಿದ್ದು ಮುಂದಿನ ಎರಡು ಸ್ತಂಭಗಳು ನಾಲ್ಕು ಪುಷ್ಪಭೋದಿಗೆಗಳನ್ನು ಒಳಗೊಂಡಿದೆ. ಪ್ರವೇಶದ್ವಾರದ ಬಲಕ್ಕೆ ಗಣೇಶ ಮತ್ತು ನವಗ್ರಹಗಳಿವೆ ಈ ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ಕೀರ್ತಿ ಮುಖಗಳು ಎಡ ಬಲಕ್ಕೆ ಆಮೆಗಳಿವೆ. ಜಾಲಂಧ್ರಗಳು ಹೂ–ಬಳ್ಳಿಗಳ ಕೆತ್ತನೆ, ಗದೆ, ಈಟಿ, ತ್ರಿಶೂಲವನ್ನು ಹಿಡಿದ ಸ್ತ್ರೀ ಈ ದ್ವಾರದ ಇಕ್ಕೆಲುಗಳಲ್ಲಿವೆ. ದೇವಾಲಯದ ಎದುರಿನ ಚಿಕ್ಕ ಮಂಟಪದಲ್ಲಿ ನಂದಿ ಮೂತಿಶಿಲ್ಪ ಜೊತೆಯಲ್ಲಿ ದೀಪ ಸ್ತಂಭವಿದೆ. ನಗರೇಶ್ವರ ದ್ವಾರದ ಪೂರ್ವದಿಕ್ಕಿಗೆ ಹಿಂಬದಿಯಲ್ಲಿ ದೇವಿ ಮಂಟಪವಿದೆ. ಈ ಗರ್ಭಗೃಹದ ಪ್ರವೇಶದ್ವಾರದಲ್ಲಿ ಎರಡೂ ಕಡೆ ಶೈವ ದ್ವಾರಪಾಲಕರಿದ್ದಾರೆ. ಅಧಿಷಾವಿನ, ಭಿತ್ತಿ, ಮೇಲ್ಭಾಗ ಕಪೋತವಿರದೆ

ಚೌಕಪಟ್ಟಿಗೆ ಯಂತಿದೆ ಅಧಿಷ್ಠಾನ ಮಂಚಬಂಧ ಮಾದರಿಯಲ್ಲಿದೆ. ಚೌಕಾಕಾರದ ಪಟ್ಟಿಕೆ ಕಪೋತವನ್ನು ಆದರಿಸಿದೆ. ಭಿತ್ತಿಗೆ ಕಲ್ಲು ವಿಸ್ತೃತವಾಗಿ ಹಾಸಲ್ಪಟ್ಟದೆ. ಭಿತ್ತಿಯ ಮೇಲೆ ವರಹ, ಸಿಂಹ, ಚಂದ್ರ ಮತ್ತು ಹಿಂಬದಿಯಲ್ಲಿ ಐದು ಆಮೆಗಳ ಚಿತ್ರಣವಿದೆ. ಹೆಡೆ ಬಿಚ್ಚಿದ ಸರ್ಪ ಜೋಡುಮುಖವಾಗಿ ನಿಂತ ಆನೆಗಳ ಚಿತ್ರಣವನ್ನು ಭಿತ್ತಿಯಲ್ಲಿ ಕಾಣಬಹುದು. ಪ್ರವೇಶದ ಮೇಲ್ಭಾಗ ಎರಡು ಭಾಗಗಳಲ್ಲಿ ಭಿತ್ತಿಯ ಮೇಲೆ ಗಂಡ ಭೇರುಂಡ ಪಕ್ಷಿ, ಆಮೆಯ ಕಾಲುಗಳ ಕೆಳಗೆ ಆನೆಗಳ ಶಿಲ್ಪಗಳು ಸಾಲು-ಸಾಲಾಗಿರುವ ಕೋಲಾಟ ಸ್ತ್ರೀಯರು, ಆನೆಗಳ ಶಿಲ್ಪ ಅಶ್ವಾರೋಹಿಗಳು, ಮೂರ್ತಿಶಿಲ್ಪ, ರಾಮ- ಲಕ್ಷ್ಮಣ-ಸೀತೆ ಮತ್ತು ಆಂಜನೇಯ ಮೂರ್ತಿಶಿಲ್ಪವೂ ಇಲ್ಲಿದೆ. ಪ್ರವೇಶದ್ವಾರದಲ್ಲಿ ಸೂಕ್ಷ್ಮ ಮತ್ತು ಅಂದನೆಯ ಕೆತ್ತನೆಯಿಂದ ಕೂಡಿದ ಕಾಷವಿಶಿಲ್ಪವಿದೆ.

ಹೆಸರು :- ವೀರಭದ್ರ ದೇವಾಲಯ[೪೪]

ಸ್ಥಳ :- ರಾಮನಗರಕ್ಕೆ ಹೋಗುವ ರಸ್ತೆಯ ಬಲಬದಿಯ ಎತ್ತರದ ಬೆಟ್ಟದಲ್ಲಿ

ಕಾಲ :- ೧೫-೧೬ನೇ ಶತಮಾನ

ರಾಜವಂಶ :- ವಿಜಯನಗರ

ದಿಕ್ಕು :- ಪಶ್ಚಿಮಾಭಿಮುಖ

ವಸ್ತು :- ಬೆಣಚುಕಲ್ಲು

ಈ ದೇವಾಲಯವು ೧೨.೮೦ ಮೀ ಉದ್ದ ಮತ್ತು ೧೫ ಮೀ ಅಗಲವಿದೆ. ಈ ದೇವಾಲಯವು ಗರ್ಭಗೃಹ, ನವರಂಗ ಮತ್ತು ಮುಖ ಮಂಟಪವನ್ನು ಒಳಗೊಡಿದೆ. ಮುಖಮಂಟಪದಲ್ಲಿ ೩೦ ಸ್ತಂಭಗಳಿವೆ. ಈ ಸ್ತಂಭಗಳು ಚೌಕಾಕಾರವಾಗಿವೆ. ಗರ್ಭಗೃಹದ ಮೇಲ್ಛಾವಣೆಯು ಅಷ್ಟಕೋನಾಕೃತಿಯಿಂದ ಕೂಡಿದೆ. ಏಕಶಿಲೆಯಲ್ಲಿ ಕಂಬ ಕೋಷ್ಟಗಳ ಮಧ್ಯೆ ಪಂಜರಕೋಷ್ಟಕದಲ್ಲಿ ವೀರಭದ್ರ ಮೂರ್ತಿಶಿಲ್ಪವಿದೆ.

ನವರಂಗದ ಮೇಲ್ಛಾವಣೆ ಅಷ್ಟಕೋನಾಕೃತಿಯಿಂದ ಕೂಡಿದ್ದು ಈ ಚೌಕಾಕಾರದ ಸ್ತಂಭಗಳು ಚೌಕಾಕಾರದ ಬೋದಿಗೆಗಳನ್ನು ಒಳಗೊಂಡಿದೆ. ೯ ಅಂಕಣಗಳಿಂದ ಈ ಮಂಟಪ ಕೂಡಿದೆ. ನವರಂಗ ಮಂಟಪದಲ್ಲಿ ನಂದಿ ಶಿಲ್ಪವಿದೆ. ಮುಖಮಂಟಪಕ್ಕೆ ೨ ಕಡೆಯಿಂದ ಪ್ರವೇಶದ್ವಾರವಿದೆ.

ಹೆಸರು :- ವೀರಭದ್ರ ದೇವಾಲಯ

ಸ್ಥಳ :- ನಗರೇಶ್ವರ ದೇವಾಲಯದ ಹೊರ ಆವರಣ ಕಾಮಲಾಪುರ

ಕಾಲ :- ೧೫-೧೬ನೇ ಶತಮಾನ

ರಾಜವಂಶ :- ಮಾಂಡಲೀಕ ವಿಜಯನಗರ

ದಿಕ್ಕು :- ಪೂರ್ವಾಭಿಮುಖ

ವಸ್ತು :- ಬೆಣಚುಕಲ್ಲು

ದೇವಾಲಯದ ಒಳಭಾಗ ಗರ್ಭಗುಡಿ ಮತ್ತು ಅರ್ಧಮಂಟಪ ನವರಂಗವನ್ನು ಒಳಗೊಂಡಿದೆ. ಗರ್ಭಗುಡಿಯ ಮೇಲ್ಛಾವಣಿ ಅಷ್ಟಕೋನಾಕೃತಿ ಅದರ ಮಧ್ಯದಲ್ಲಿ ಅರಳಿದ ಕಮಲವಿದೆ. ಪೀಠದಲ್ಲಿ ವೀರಭದ್ರ ಶಿಲ್ಪ ಸ್ಥಾನಿಕ ಭಂಗಿಯಲ್ಲಿದೆ. ಅರ್ಧ ಮಂಟಪ ನದು ತೆರೆದ ಮಂಟಪವಾಗಿದ್ದು ಯಾವುದೇ ಅಲಂಕರಣೆ ಇಲ್ಲದೆ ಸರಳವಾಗಿದೆ. ಸಭಾ ಮಂಟಪದಲ್ಲಿ ನಾಲ್ಕು ಸ್ತಂಭಗಳು ಚೌಕಾಕಾರವಾಗಿದ್ದು ಬೋಧಿಗೆಗಳನ್ನು ಒಳಗೊಂಡಿವೆ. ನವರಂಗದ ಮೇಲ್ಛಾವಣಿ ಅಷ್ಟಕೋನಾಕೃತಿಯ ಭುವನೇಶ್ವರಿಯನ್ನು ಒಳಗೊಂಡಿದೆ. ಇದರ ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ದ್ವಾರಪಾಲಕರು, ಲಲಾಟ ಬಿಂಬದಲ್ಲಿ ಹೂವಿನ ಚಿತ್ರಣವಿದೆ. ಹೊರಭಾಗ ಸಣ್ಣ ಅಧಿಷಾವಿನ (ಪ್ರಸ್ತುತ ಮುಚ್ಚಿದೆ) ಸಪಾಟಾದ ಭಿತ್ತಿ ಮತ್ತು ಸಪಾಟಾದ ಮೇಲ್ಛಾವಣಿ ಒಳಗೊಂಡಿವೆ. ಭಿತ್ತಿಗೆ ಕಲ್ಲನ್ನು ವಿಸ್ತೃತವಾಗಿ ಹಾಸಲ್ಪಟ್ಟಿದೆ.

ಹೆಸರು :– ವೀರಭದ್ರ ದೇವಾಲಯ

ಸ್ಥಳ :– ಆರ್.ಕೆ.ಎಚ್.ಇ.ಪಿ.ಶಾಲೆ, ಕಾಮಲಾಪುರ, ಹೊಸಪೇಟೆ (ತಾ)

ಕಾಲ :– ೧೫–೧೬ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಉತ್ತರಾಭಿಮುಖ

ವಸ್ತು :– ಬೆಣಚುಕಲ್ಲು

ದೇವಾಲಯ ೧೮.೩೫ ಮೀ ಉದ್ದ ಮತ್ತು ೮.೨ ಮೀ ಅಗಲವಿದೆ. ವೀರಭದ್ರ ದೇವಾಲಯದ ಒಳಭಾಗ ಗರ್ಭಗೃಹ, ನವರಂಗ ಮತ್ತು ಮುಖ ಮಂಟಪವನ್ನು ಒಳಗೊಂಡಿದೆ. ಗರ್ಭಗೃಹ ಮೇಲ್ಛಾವಣಿ ಯಾವುದೇ ಅಲಂಕರಣೆ ಇಲ್ಲ. ಗರ್ಭಗೃಹ ನವೀಕರಿಸಲ್ಪಟಿದ್ದರೂ ಇಲ್ಲಿರುವ ವೀರಭದ್ರ ಮೂರ್ತಿ ಶಿಲ್ಪ ವಿಜಯನಗರ ಕಾಲದ್ದಾಗಿದೆ. ಬಲಭಾಗದಲ್ಲಿ ಗಣಪತಿ ಶಿವಲಿಂಗ ಎಡಭಾಗದಲ್ಲಿ ಪಾರ್ವತಿ ಮೂರ್ತಿ ಶಿಲ್ಪವಿದೆ. ಬಾಗಿಲು ವಾಡದ ಎರಡೂ ಕಡೆಗೆ ಶೈವ ದ್ವಾರಪಾಲಕರಿದ್ದಾರೆ. ಹೂ–ಬಳ್ಳಿಗಳ ಕೆತ್ತನೆ ಬಾಗಿಲು ವಾಡದ ಇನ್ನೊಂದು ವಿಶೇಷತೆ. ಬಾಗಿಲು ವಾಡದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಪದ್ಮಾಸೀನಳಾಗಿದ್ದಾಳೆ. ಎರಡೂ ಆನೆಗಳು ಸೊಂಡಿಲಿನಲ್ಲಿ ನೀರಿನ ಪಾತ್ರೆ ಹಿಡಿದು ಗಜಲಕ್ಷ್ಮಿಯ ತಲೆಯ ಮೇಲೆ ನೀರನ್ನು ಎರಚುತ್ತಿರುವುದು ಚಿತ್ರ ಸುಂದರ. ನವರಂಗದಲ್ಲಿ ನಂದಿ ವೀರಭದ್ರನಿಗೆ ಮುಖವಾಗಿ ಕುಳಿತಿದೆ. ಇಲ್ಲಿ ಎಂಟು ಸ್ತಂಭಗಳಿದ್ದು ಚೌಕಾಕಾರವಾಗಿವೆ. ಮೇಲೆ ಚೌಕಾಕಾರದ ಬೋದಿಗೆಯನ್ನು ಒಳಗೊಂಡಿದೆ. ವಿಷ್ಣು, ಚಿಹ್ನೆ. ಪುಷ್ಪ, ಸಿಂಹ, ನವಿಲು, ನಂದಿ, ಪುರುಷ, ಗರುಡ, ಉಬ್ಬು ಮೂರ್ತಿ ಶಿಲ್ಪಗಳನ್ನು ಸ್ತಂಭಗಳಲ್ಲಿ ಕೆತ್ತಲಾಗಿದೆ. ನವರಂಗದ ಮೇಲ್ಛಾವಣಿ ಆರು ಅಂಕಣಗಳನ್ನು ಒಳಗೊಂಡಿದೆ. ಇದು ಜೀರ್ಣೋದ್ಧಾರದಲ್ಲಿ ಮಾಡಿದ ಬದಲಾವಣೆ. ಮುಖ ಮಂಟಪದ ಮುಂಭಾಗ ನಾಲ್ಕು ಸ್ತಂಭಗಳನ್ನು ಒಳಗೊಂಡಿದ್ದು ಚೌಕಾಕಾರದ ಪುಷ್ಪ ಬೋದಿಗೆಗಳನ್ನು ಒಳಗೊಂಡಿದೆ. ಮಧ್ಯದ ಮೇಲ್ಛಾವಣಿ ಅರಳಿದ ಕಮಲದಿಂದ ಅಲಂಕೃತವಾಗಿದೆ.ಹೊರಭಾಗದಲ್ಲಿನ ಸ್ತಂಭಗಳ ಮೇಲೆ ವೀರಾಂಜನೇಯ, ಚಕ್ರ, ಪುಷ್ಪ, ಶಂಖ,

ವಿಷ್ಣು, ವಂದನಾರ್ಪಣ ಭಕ್ತೆ, ಗಣಪ, ಬಾಲಕೃಷ್ಣ, ದಂಪತಿ, ಆಮೆ, ನಿಂತ ಗರುಡ, ನರ್ತಿಸುತ್ತಿರುವ ಬಾಲಕೃಷ್ಣ, ಅಭಯ ಮುದ್ರೆಯ ಬಾಲಕೃಷ್ಣ, ಬೆಣ್ಣೆ ಬಾಲಕೃಷ್ಣ ಮುಂತಾದ ಮೂರ್ತಿಶಿಲ್ಪಗಳು ಸ್ತಂಭಗಳ ಮೇಲೆ ಚಿತ್ರಿತವಾಗಿದೆ. ಸುತ್ತಲಿನ ಪ್ರಾಕಾರದ ಭಿತ್ತಿ ಇತ್ತೀಚಿಗೆ ನವೀಕರಿಸಲ್ಪಟ್ಟಿದೆ. ಮುಖ ಮಂಟಪದ ಮೇಲ್ಛಾವಣಿಯಲ್ಲಿ ಚಾಚಿದ ಕಪೋತವಿದೆ. ಮೇಲಿನ ಸುಖನಾಸಿಯಲ್ಲಿ ಪಾರ್ವತಿ, ಪರಮೇಶ್ವರ, ಗಣಪತಿ ಮುಂದೆ ನಂದಿಯ ಉಬ್ಬು ಶಿಲ್ಪದ ಚಿತ್ರಣವಿದೆ. ಇವೆಲ್ಲವುಗಳಿಗೂ ಪ್ರಸ್ತುತ ಬಣ್ಣ ಲೇಪಿಸಿದ್ದರಿಂದ ಇದು ಇತ್ತೀಚಿನ ಕಾಲದ್ದೆಂದು ತೋರುತ್ತದೆ. ಗರ್ಭಗುಡಿಯ ಗೋಪುರ ಸ್ತೂಪಿಯನ್ನು ಒಳಗೊಂಡಿದೆ. ಆದಿಶೇಷನ ಮೇಲೆ ಕುಳಿತ ವಿಷ್ಣುವಿನ ಪಕ್ಕದಲ್ಲಿ ದ್ವಾರ ಪಾಲಕರು, ಪಾರ್ವತಿ-ಪರಮೇಶ್ವರ ಮಧ್ಯೆ ವೀರಭದ್ರ, ಬ್ರಹ್ಮ, ವಿಷ್ಣು, ಮಹೇಶ್ವರ ಮೂರ್ತಿ ಶಿಲ್ಪಗಳಿವೆ.

ಶೈವ ದೇವಾಲಯಗಳು ವಿಜಯನಗರ ಕಾಲದಲ್ಲಿ ಹೆಚ್ಚಾಗಿ ಚೌಕಾಕಾರವಾಗಿವೆ. ಈ ಶೈವ ದೇವಾಲಯಗಳ ಅಂತರಾಳವು ಆಯತಾಕಾರವಾಗಿದೆ. ವಿಜಯನಗರಕಾಲದ ಕೆಲವು ದೇವಸ್ಥಾನಗಳು ಅಂತರಾಳ ಮತ್ತು ಮುಖ ಮಂಟಪ ಎರಡನ್ನೂ ಹೊಂದಿರುತ್ತವೆ. ಸಾಮಾನ್ಯವಾಗಿ ಮಧ್ಯದಲ್ಲಿ ನಾಲ್ಕು ಸ್ತಂಭಗಳು ಹೊರ ಅಂಚಿನ ಗೋಡೆಯಲ್ಲಿ ೧೨ ಕಂಬಗಳಿರುತ್ತವೆ. ನ್ಯಾಯ ಸಭೆ ಸಮಾರಂಭಗಳಿಗೆ, ಮನೋರಂಜನೆಗೆ ಮತ್ತು ನ್ಯಾಯ ತೀರ್ಪುಗಳಿಗೆ ಈ ಮಹಾರಂಗ ಮಂಟಪವನ್ನು ಬಳಕೆಮಾಡತೊಡಗಿದರು. ದ್ವಾರಬಾಗಿಲುಗಳು ಬಹಳಷ್ಟು ದೊಡ್ಡದಾಗಿ ಹಾಗೂ ಎತ್ತರವಾಗಿರುತ್ತವೆ. ಗರ್ಭಗೃಹದ ಮೇಲೆ ವಿಮಾನ ಇದರ ಹೊರ ಭಿತ್ತಿಯಲ್ಲಿ ದೇವ ಕೋಷ್ಠಕಗಳನ್ನು ಕಾಣಬಹುದು. ಇದರಲ್ಲಿ ಶೈವ ದೇವತೆಗಳ ಉಬ್ಬುಶಿಲ್ಪಗಳ ರಚನೆಯಾಗಿವೆ. ಉದಾ: ಚಂದ್ರಶೇಖರ ದೇವಾಲಯ ಗೋಪುರದ ಮೇಲ್ಭಾಗದಲ್ಲಿ ನಾಸಿ ಇದು ಕೀರ್ತಿ ಮುಖದಂತೆ ರಚನೆ ಇರುತ್ತದೆ. ಶೈವ ದೇವಾಲಯದ ಗೋಪುರವು ಮೂರರಿಂದ ಐದು ಅಂತಸ್ತಿನವರೆಗೆ ಕೂಡಿರುತ್ತದೆ. ಶೈವ ದೇವಾಲಯಗಳಲ್ಲಿ ದೀಪಸ್ತಂಭ ಹಾಗೂ ನಂದಿ ಮಂಟಪವಿರುತ್ತದೆ. ಅದಕ್ಕೆ ವೃಷಭ ಮಂಟಪವೆಂತಲೂ ಕರೆಯುತ್ತಾರೆ. ಶಿವಾಲಯಗಳಲ್ಲಿ ರಂಗ ಮಂಟಪವಿದ್ದು ಇದು ಹೆಚ್ಚು ವಿಶಾಲ ಹಾಗೂ ಎತ್ತರವಾಗಿದ್ದು ಸ್ತಂಭಗಳು ಹೆಚ್ಚು ಸಂಖ್ಯೆಯಲ್ಲಿ ಇರುತ್ತವೆ. ನಂತರ ಕಲ್ಯಾಣ ಮಂಟಪಗಳು ರಚಿತಗೊಂಡವು. ಇದರ ಮಧ್ಯೆ ವೇದಿಕೆ ಇದ್ದು ಸುತ್ತಲೂ ಸ್ತಂಭಗಳಿವೆ. ಉದಾ: ಪ್ರಸನ್ನ ವಿರುಪಾಕ್ಷ ದೇವಾಲಯದಲ್ಲಿನ ಸ್ತಂಭಗಳಲ್ಲಿ ಶಿವ-ಆತನ ಪರಿವಾರದೇವತೆಗಳ ಉಬ್ಬು ಶಿಲ್ಪಗಳು ಹೆಚ್ಚಿನ ಮಟ್ಟಿಗೆ ಕೆತ್ತಲಾಗಿದೆ. ದ್ವಾರದ ಅಕ್ಕ-ಪಕ್ಕ ಶೈವ ದ್ವಾರಪಾಲಕರು ಸ್ಥಾನಿಕ ಭಂಗಿಯಲ್ಲಿರುತ್ತಾರೆ.

**ಶಾಕ್ತ ಪಂಥ ದೇವಾಲಯಗಳು**

ಇದು ಜನ ಸಾಮಾನ್ಯರಲ್ಲಿ ಬೇರು ಬಿಟ್ಟಪಂಥ [೪೫] ಪ್ರಾಚೀನ ಕಾಲದಿಂದಲೂ ಮಾತೃದೇವಾತಾ ಆರಾಧನೆಯ ಫಲವಾಗಿ ಮೂಡಿ ಬಹುಮುಖವಾಗಿ ಪ್ರಗತಿ ಹೊಂದಿದೆ. ಪ್ರಾಚೀನ ಸಿಂಧೂ ನಾಗರೀಕತೆಯಲ್ಲಿ ಮಾತೃದೇವತಾ ಆರಾಧನೆ ಪ್ರಚಲಿತವಿದ್ದ ಬಗ್ಗೆ ಅನೇಕ ಕುರುಹುಗಳು ದೊರೆತಿವೆ. ಜನರ ಜೀವನಾಡಿಯಲ್ಲಿ ಬೆರೆತುಹೋದ ಮಾತೃದೇವತೆ ಆರಾಧನೆಯ ಪ್ರಭಾವ ಉಳಿದು ಬೆಳೆಯಿತು. ಈಕೆ ಜಗತ್ತನ್ನು ಸೃಷಿವಿಸಬೇಕೆಂಬ ಇಚ್ಛೆ ಮುನ್ನ, ಇವಳು ಪ್ರಕೃತಿಯಲ್ಲಿ ತಾನೊಬ್ಬಳೇ ಅವ್ಯಕ್ತ

ಸ್ವರೂಪದಲ್ಲಿದ್ದಳು ತನ್ನ ಶರೀರದಿಂದಲೇ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಸೃಷಿವಿಸಿದಳೆಂಬುದು ಈ ಪಂಥದ ಅಭಿಮತ. ಇದರಿಂದ ನೂರಾರು ಮಾತೃದೇವತಾ ಕಲ್ಪನೆಗೆ ದಾರಿಮಾಡಿಕೊಟ್ಟಿತು. ಸಾಂಖ್ಯರ ಪ್ರಕಾರ ಶಕ್ತಿಯು ಪುರುಷ (ಶಿವ) ನೊಡಗೂಡಿ ಸೃಷಿವಿಗೆ ಕಾರಣಳಾಗಿದ್ದಾಳೆ. ಇದರಿಂದ ಅವಳು ಶಿವನಿಗಿಂತ ಮಿಗಿಲಾದವಳು. ಅನ್ಯದೇವತೆಗಳ ಮಡದಿಯರೆಲ್ಲ ಶಕ್ತಿಯ ವಿವಿಧ ರೂಪಗಳಾಗಿವೆ.[೬೬] ಹೀಗೆ ಈ ಶಾಕ್ತ ಪಂಥದ ತತ್ವಗಳು ಭಾರತೀಯ ಸಂಸ್ಕೃತಿಯ ಸಮಸ್ತ ರೂಪಗಳಲ್ಲಿಯೂ ಅಡಕವಾಗಿವೆ. ಹೀಗೆ ಇದರ ಪ್ರಭಾವ ವಿವಿಧ ಧರ್ಮಗಲ್ಲಿ ಅಂದರೆ ಬೌದ್ಧರಲ್ಲಿ ತಾರಭಗವತಿ ಜೈನರಲ್ಲಿ ಪದ್ಮಾವತಿ ಜ್ವಾಲಾಮಾಲಿನಿ, ವೈಷ್ಣವರಲ್ಲಿ ಲಕ್ಷ್ಮಿದೇವಾಲಯ ಶೈವರಲ್ಲಿ ದುರ್ಗಿ ಕಾಳಿ, ಎಲ್ಲಮ್ಮ, ಮಹಿಷಾಸುರ ಮರ್ಧಿನಿ ದೇವಾಲಯಗಳು ರೂಪಗೊಂಡವು. ಪ್ರಸ್ತುತ ಕಾಮಲಾಪುರ ಪರಿಸರಕ್ಕೆ ಸೀಮಿತವಾದಂತೆ ಇಲ್ಲಿ ಆರು ಶಾಕ್ತದೇವಾಲಯಗಳ ವಾಸ್ತು ವಿಶೇಷತೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಹೆಸರು :– ಪಟ್ಟಣದ ಎಲ್ಲಮ್ಮ ದೇವಾಲಯ[೬೭]

ಸ್ಥಳ :– ಹಜರಾಮ ದೇವಾಲಯ ಮತ್ತು ರಾಣಿ ಪರಿವಾರದ ಒಳಾಂಗಣದ ಮಧ್ಯೆ ಕಾಮಲಾಪುರ

ಕಾಲ :– ೧೪–೧೫ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ದಕ್ಷಿಣಾಭಿಮುಖ

ವಸ್ತು :– ಬೆಣಚುಕಲ್ಲು

ದೇವಾಲಯದ ವಿಸ್ತೀರ್ಣ ೧೬ ಮೀ ೪೦ ಸೆಂ.ಮೀ ಉದ್ದ ೭ ಮೀ ೪೦.ಸೆಂ.ಮೀ ಅಗಲ ಹೊಂದಿದೆ. ಪಟ್ಟಣದ ಎಲ್ಲಮ್ಮ ನಗರದ ರಕ್ಷಣಾದೇವತೆ. ವಿಜಯನಗರ ಅರಸರು ಬೇರೆ ಬೇರೆ ರಾಜರೊಡನೆ ಯುದ್ಧಕ್ಕೆ ಹೊರಡುವ ಮುನ್ನ ಈ ದೇವತೆಯನ್ನು ಪೂಜಿಸುತ್ತಿದ್ದರು. ಎಲ್ಲಮ್ಮನಿಗೆ ಕೈಮುಗಿದು ನಂತರ ದೊರೆಗಳು ವಿರುಪಾಕ್ಷ ದೇವಸ್ಥಾನಕ್ಕೆ ಹೋಗುತ್ತಿದ್ದರೆಂಬ ಪ್ರತೀತಿ ಇದೆ. ಸಾಮಾನ್ಯವಾಗಿ ಮಂಗಳವಾರ ಮತ್ತು ಶುಕ್ರವಾರ ಈ ದೇವಿಗೆ ಇಂದಿಗೂ ವಿಶೇಷ ಆರಾಧನೆ ನಡೆಯುತ್ತದೆ. ಸಾಮಾನ್ಯವಾಗಿ ಭಕ್ತರು ಈ ದಿವಸಗಳಲ್ಲಿ ಹರಕೆ ಮತ್ತು ಕಾಣಿಕೆ ಅರ್ಪಿಸುವ ಪದ್ಧತಿ ಇದೆ. ಎಲ್ಲಮ್ಮ ಪಟ್ಟಣದ ಎಲ್ಲಮ್ಮನಾಗಿರಬೇಕು. ಎಲ್ಲೆ ಅಥವಾ ಗಡಿ ಎಂಬುದು ಎಲ್ಲಮ್ಮ ಎಂಬ ಹೆಸರು ಬರಲಿಕ್ಕೆ ಕಾರಣವಿರಬೇಕು. ಅಂದರೆ ಬೇಡಿಬಂದ ಭಕ್ತರಿಗೆ ರಕ್ಷಣೆಗಾಗಿ ಎಲ್ಲರ ಅಮ್ಮ 'ಎಲ್ಲಮ್ಮ' ಆಗಿದ್ದಾಳೆ. ಈ ದೇವಾಲಯಕ್ಕೆ ಸಂಬಂಧಿಸಿದಂತೆ ಪ್ರವಾಸಿಗರಾದ ನ್ಯೂನಿಜ್ ಮತ್ತು ಪ್ರೇಜ್‌ರವರೂ ತಮ್ಮ ಪ್ರವಾಸಿ ಕಥನದಲ್ಲೂ ಉಲ್ಲೇಖಿಸಿದ್ದಾರೆ. ನವರಾತ್ರಿ ಉತ್ಸವದಂದು ನವರಾತ್ರಿಯ ಕೊನೆಯ ದಿನ ಬನ್ನಿ ಮುಡಿಯುವ ಸಲುವಾಗಿ ವಿಜಯೋತ್ಸವ ಆಚರಣೆಗಾಗಿ ಪಲ್ಲಕ್ಕಿಯಲ್ಲಿ ಉತ್ಸವ ನಡೆಯುವುದು ಇದನ್ನು ವರ್ಷಕ್ಕೊಮ್ಮೆ ನಡೆಸಲಾಗುತ್ತಿತ್ತು ಈ ದೇವಾಲಯ ದಕ್ಷಿಣಾಭಿಮುಖವಾಗಿದ್ದು ಗರ್ಭಗೃಹ ಮತ್ತು ಸಭಾ ಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಪ್ರಾಚೀನ ಶೈಲಿಯ ದುರ್ಗಿ

ವಿಗ್ರಹವಿದೆ. ಗರ್ಭಗೃಹದ ಹೊಸ್ತಿಲಿನ ಮೇಲೆ ಹೂವಿನ ಚಿತ್ರಣವಿದೆ ಸಭಾ ಮಂಟಪ ಎಂಟು ಸ್ತಂಭಗಳಿಂದ ಅಲಂಕೃತಗೊಂಡಿದ್ದು, ಈ ಸ್ತಂಭಗಳು ಬೋದಿಗೆಗಳನ್ನು ಒಳಗೊಂಡಿವೆ. ಸ್ತಂಭಗಳ ಮೇಲೆ ಶಂಖ, ಚಕ್ರ, ಗುರಾಣಿ, ಆನೆ, ಸಿಂಹ, ನಂದಿ, ಹಂಸ, ಮೂಳೆ, ಪುರುಷ–ಸ್ತ್ರೀಯರ ಚಿತ್ರ ಬಿಲ್ಲು ಹಿಡಿದಿರುವ ಭಂಗಿ, ತಮಟೆ ನುಡಿಸುತ್ತಿರುವುದು ಋಷಿಗಳು, ಶಿವಲಿಂಗ ಸರ್ಪಾಧಾರಿ ಲಿಂಗ ಲಿಂಗಕ್ಕೆ ಹಾಲೆರೆಯುತ್ತಿರುವ ಹಸು, ನರ್ತಕಿ, ಕಮಂಡಲಧಾರಿ, ಆಂಜನೇಯ, ಕಹಳೆ ಊದುತ್ತಿರುವ ದೃಶ್ಯ. ಹಾವನ್ನು ಹಿಡಿದಿರುವ ನವಿಲು ಮುಂತಾದ ಶಿಲ್ಪಗಳು ಚಿತ್ರಿತವಾಗಿವೆ. ಬಾಗಿಲು ದ್ವಾರದಲ್ಲಿ ತ್ರಿಶೂಲ ಶಂಖ ಹಿಡಿದ ದ್ವಾರಪಾಲಕರಿದ್ದಾರೆ. ಗರ್ಭಗೃಹದ ಹೊರಭಾಗ ಅಧಿಷಾವಿನ, ಭಿತ್ತಿ, ಕಪೋತವನ್ನು ಒಳಗೊಂಡಿದೆ. ಅಧಿಷಾವಿನ ಮಂಚಬಂಧ ಮಾದರಿಯಲ್ಲಿದೆ. ಭಿತ್ತಿಗೆ ಕಲ್ಲು ವಿಸ್ತೃತವಾಗಿ ಹಾಸಲ್ಪಟ್ಟಿದ್ದು ಕಪೋತ ಮುಂಚಾಚಿದ್ದು ಮುಂಭಾಗ ಇಟ್ಟಿಗೆ ಗಾರೆಯಿಂದ ನಿರ್ಮಿತವಾಗಿದೆ. ಪ್ರಸ್ತುತ ಮೇಲ್ಭಾಗ ಪೂರ್ತಿಯಾಗಿ ಶಿಥಿಲವಾಗಿದೆ. ದೇವಾಲಯದ ಹೊರಭಾಗದಲ್ಲಿ ಯಾವುದೇ ಅಲಂಕಾರತೆಗೆ ಪ್ರಾಧಾನ್ಯತೆ ನೀಡದೇ ಮೂಲ ರೂಪದಲ್ಲಿರುವುದು ಇಲ್ಲಿಯ ವಿಶೇಷತೆ. ಈಗ ಈದೇವಾಲಯ ಭೂ ಮೇಲ್ಮೈಯಿಂದ ಕೆಳಭಾಗದಲ್ಲಿದೆ. ಬಹುಶಃ ಈ ದೇವಾಲಯವು ವಿಜಯನಗರಕ್ಕಿಂತಲೂ ಪೂರ್ವಕಾಲದಲ್ಲಿ ನಿರ್ಮಾಣವಾಗಿರಬೇಕು.

ಹೆಸರು :– ಅಮ್ಮನವರ ದೇವಾಲಯ[೪೮]

ಸ್ಥಳ :– ಹಜರಾಮ ದೇವಾಲಯದ ಆವರಣ, ಕಾಮಲಾಪುರ

ಕಾಲ :– ೧೪–೧೫ನೇ ಶತಮಾನ

ರಾಜವಂಶ :– ಮಾಂಡಲೀಕ ವಿಜಯನಗರ

ದಿಕ್ಕು :– ಉತ್ತರಾಭಿಮುಖ

ವಸ್ತು :– ಬೆಣಚುಕಲ್ಲು

ದೇವಾಲಯ ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಒಳಗೊಂಡಿದೆ. ಗರ್ಭಗುಡಿಯ ಮೇಲ್ಛಾವಣೆ ಅಷ್ಟಕೋನಾಕೃತಿ ಅರಳಿದ ಕಮಲದಿಂದ ಅಲಂಕೃತವಾಗಿದೆ. ಗರ್ಭಗುಡಿಯ ಪ್ರವೇಶದ್ವಾರ ಹೂ–ಬಳ್ಳಿಯ ಕೆತ್ತನೆಯ ನ್ನೊಳಗೊಂಡಿದೆ. ಅಕ್ಕ–ಪಕ್ಕ ಕುಂಭ ಪಂಜರ ಕುಡ್ಯ ಸ್ತಂಭ ಅರೆಗಂಬಗಳಿವೆ. ಇಲ್ಲಿನ ಭಿತ್ತಿಯ ಮೇಲೆ ಕಪೋತ ಪಂಜರಗಳಿವೆ. ನವರಂಗದಲ್ಲಿ ಹನ್ನೆರಡು ಸ್ತಂಭಗಳಿದ್ದು ಈಸ್ತಂಭಗಳ ಮೇಲೆ ಕಹಳೆ ಊದುವ, ಸಿಂಹ, ಆನೆ, ತ್ರಿನಾಮ, ಶಂಖ, ಪುಷ್ಪ, ಒಬ್ಬನ ಮೇಲೆ ಮತ್ತೊಬ್ಬನ ಆರೋಹಣ ಶಿಲ್ಪಿ, ನವಿಲು ಹಾವನ್ನು ಹಿಡಿದಿಡುವ ಚಿತ್ರಣ, ಪದ್ಮ ಮುಂತಾದ ಉಬ್ಬುಶಿಲ್ಪಗಳಿವೆ. ಗುಡಿಯ ಹೊರಭಾಗ ಅಧಿಷಾವಿನ, ಭಿತ್ತಿ ಶಿಖರವನ್ನು ಒಳಗೊಂಡಿದೆ. ಶಿಖರ ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿತವಾಗಿರುವುದು ಇದೊಂದು ವಿಜಯನಗರ ವೈಶಿಷ್ಟ್ಯತೆ ಪ್ರಸ್ತುತ ಮೇಲ್ಭಾಗ ಕಳಸ ಶಿಥಿಲವಾಗಿದೆ.

ಹೆಸರು :– ಕಾಳಿಕಾದೇವಿ ದೇವಾಲಯ

ಸ್ಥಳ :– ಕಾಮಲಾಪುರ ಕಮ್ಮಾರು ದಿಮ್ಮೆಯ ಮುಂಭಾಗದಲ್ಲಿ

ಕಾಲ :– ಕ್ರಿ.ಶ.೧೫–೧೬ನೇ ಶತಮಾನ

ರಾಜವಂಶ :– ವಿಜಯನಗರ

ದಿಕ್ಕು :– ಪೂರ್ವಾಭಿಮುಖ

ವಸ್ತು :– ಕಪ್ಪುಶಿಲೆ

ಈ ದೇವಾಲಯ ೯.೪೫ ಮೀ ಉದ್ದ x ೭..೬೫ ಮೀ ಅಗಲವಿದೆ. ಈ ದೇವಾಲಯವು ಗರ್ಭಗೃಹ ಅಂತರಾಳ, ನವರಂಗ ಮಂಟಪ ಮತ್ತು ಮುಖಮಂಟಪಗಳನ್ನು ಒಳಗೊಂಡಿದೆ. ಗರ್ಭಗೃಹದ ಮೇಲ್ಛಾವಣೆಯ ಮಧ್ಯಭಾಗ ಅಷ್ಟಕೋನಾಕೃತಿಯಿಂದ ಕೂಡಿದ್ದು ಮಧ್ಯದಲ್ಲಿ ಅರಳಿದ ಪುಷ್ಪವಿದೆ. ಗರ್ಭಗೃಹದ ಪ್ರವೇಶದ ಇಕ್ಕೆಲುಗಳಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ಗರ್ಭಗೃಹದ ಲಲಾಟ ಬಿಂಬದಲ್ಲಿ ದೇವಿ ಆಸೀನಳಾಗಿದ್ದಾಳೆ. ಅಂತರಾಳದ ದ್ವಾರದ ಇಕ್ಕೆಲುಗಳಲ್ಲಿ ಬಲಗಡೆ ಶೈವ ಮತ್ತು ಎಡಬಡೆ ವೈಷ್ಣವ ದ್ವಾರಪಾಲಕರಿದ್ದಾರೆ. ದ್ವಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಆಸೀನಳಾಗಿದ್ದಾಳೆ. ದ್ವಾರವು ಸೂಕ್ಷ್ಮಕೆತ್ತನೆಯ ಬಳ್ಳಿಗಳಿಂದ ಕೂಡಿದೆ. ಸಭಾ ಮಂಟಪವು ೧೨ ಸ್ತಂಭಗಳಿಂದ ಕೂಡಿದ್ದು ಆರು ಅಂಕಣಗಳಿಂದ ಆವೃತ್ತವಾಗಿದೆ. ನಾಲ್ಕು ಸ್ತಂಭಗಳು ಮಿಶ್ರಕ ಸ್ತಂಭಗಳಾಗಿವೆ. ಅವುಗಳ ಮೇಲೆ ವಿವಿದ ಪುಷ್ಪ ಚಿತ್ರಗಳಿವೆ. ನಾಲ್ಕು ಚೌಕಾಕಾರದ ಬೋದಿಗೆಗಳನ್ನು ಒಳಗೊಂಡಿದೆ. ಸಂಭಾಮಂಟಪದ ಮಧ್ಯದಲ್ಲಿ ಭುವನೇಶ್ವರಿ ಇದೆ. ಮುಖಮಂಟಪವು ನಾಲ್ಕು ಚೌಕಾಕಾರದ ಸ್ತಂಭಗಳಿಂದ ಆವೃತ್ತವಾಗಿದೆ. ಪ್ರತಿ ಸ್ತಂಭವು ಎರಡು ಪುಷ್ಪ ಬೋದಿಗೆಗಳನ್ನು ಒಳಗೊಂಡಿವೆ. ಈ ಸ್ತಂಭಗಳ ಮೇಲೆ ವ್ಯಾಘ್ರ, ಕುರಿಕಾಯುವವ, ಆಂಜನೇಯ, ಆಮೆ, ಚಕ್ರ, ವಿದೇಶಿ ಯಾತ್ರಿಕ, ಶಂಖು, ಗಣಪ, ಹಣ್ಣುತಿನ್ನುತ್ತಿರುವ ಮಂಗ, ನವಿಲು ವಿವಿಧ ಭಂಗಿಯಲ್ಲಿ ವಿಷ್ಣು, ನಾಟ್ಯಕೃಷ್ಣ, ನೀರಿನ ಮೇಲೆ ಆಸೀನ ಕೃಷ್ಣ ಕುಬೇರ, ಡೊಳ್ಳುವಾದಕ, ನಾಗಕನ್ಯೆ ತ್ರಿನಾಮಚಿಹ್ನೆ ಇನ್ನೂ ಮೊದಲಾದ ಉಬ್ಬು ಶಿಲ್ಪಗಳನ್ನು ಒಳಗೊಂಡಿವೆ. ದೇವಾಲಯದ ಎದುರಿಗು ಶಿಲಾ ಗರುಡ ಸ್ತಂಭವಿದೆ. ಪ್ರವೇಶ ಮೆಟ್ಟಿಲುಗಳ ಇಕ್ಕೆಲಗಳಲ್ಲಿ ಆನೆಗಳ ಶಿಲ್ಪಗಳಿವೆ.

ಹೆಸರು :– ದೇವಿ ದೇವಾಲಯ

ಸ್ಥಳ :– ರಾಮನಗರ ಬಸ್ ನಿಲ್ದಾಣದ ಹಿಂದುಗಡೆ ಬಲಗಡೆಯ
ಎತ್ತರವಾದ ಬೆಟ್ಟದ ಮೇಲೆ.

ಕಾಲ :– ೧೬ನೇ ಶತಮಾನ

ರಾಜವಂಶ :– ವಿಜಯನಗರೋತ್ತರ

ದಿಕ್ಕು :– ಪಶ್ಚಿಮಾಭಿಮುಖ

ವಸ್ತು :– ಬೆಣಚುಕಲ್ಲು

ಈ ದೇವಾಲಯ ೬.೩೦ ಮೀ ಉದ್ದ ಮತ್ತು ೩.೫೫ಮೀ ಅಗಲವಿದೆ. ಒಳಭಾಗ ಗರ್ಭಗೃಹ ಮತ್ತು ಅಂತರಾಳವನ್ನು ಹೊಂದಿದೆ. ಗರ್ಭಗೃಹದ ಮೇಲ್ಛಾವಣಿ ಅಷ್ಟಕೋನಾಕೃತಿಯಿಂದ ಕೂಡಿದ್ದು ಅದರಲ್ಲಿ ಅರಳಿದ ಪುಷ್ಪವಿದೆ. ಗರ್ಭಗೃಹದ ಒಳ ಭಿತ್ತಿಯ ಬಂಡೆಗಳನ್ನು ವಿಸ್ತೃತವಾಗಿ ಹಾಸಲಾಗಿದೆ. ಗರ್ಭಗೃಹದ ಪ್ರವೇಶದ್ವಾರದ ಕೆತ್ತನೆ ತುಂಬಾ ಸರಳತೆಯಿಂದ ಕೂಡಿದೆ. ದ್ವಾರದ ಲಲಾಟ ಬಿಂಬದಲ್ಲಿ ಅರಳಿದ ಪುಷ್ಪವಿದೆ. ದ್ವಾರದ ಇಕ್ಕೆಲುಗಳಲ್ಲಿ ದೇವಿಯರ ಶಿಲ್ಪಗಳು ಕುಳಿತ ಭಂಗಿಯಲ್ಲಿವೆ.

ಅಂತರಾಳದ ಪ್ರವೇಶದ್ವಾರವು ಹೂ-ಬಳ್ಳಿಗಳಿಂದ ಅಲಂಕೃತವಾಗಿವೆ. ದೇವಾಲಯದ ಎದುರುಗಡೆ ನಂದಾದೀಪ ಸ್ತಂಭವಿದೆ. ಈ ದೇವಾಲಯದ ಎದುರುಗಡೆ ಹದಿನಾರು ಸ್ತಂಭಗಳಿಂದ ಆವೃತ್ತವಾದ ಮಂಟಪವಿದೆ.

ಹೆಸರು :- ಕಾಳಿಕಾದೇವಿ ದೇವಾಲಯ

ಸ್ಥಳ :- ಜೀರು ದೊಡ್ಡಹನುಮಂತಪ್ಪ ಮನೆಯ ಹತ್ತಿರ, ಕಾಮಲಾಪುರ

ಕಾಲ :- ೧೬-೧೭ನೇ ಶತಮಾನ

ರಾಜವಂಶ :- ವಿಜಯನಗರ

ದಿಕ್ಕು :- ಪೂರ್ವಾಭಿಮುಖ

ವಸ್ತು :- ಬೆಣಚುಕಲ್ಲು

ಈ ದೇವಾಲಯ ೯.೬ x ೯.೬ ಚೌಕಾಕಾರದ ಅಳತೆಹೊಂದಿದೆ. ದೇವಾಲಯವು ಗರ್ಭಗೃಹ ಮತ್ತು ಮುಖಮಂಟಪವನ್ನು ಒಳಗೊಂಡಿದೆ. ಪ್ರಸ್ತುತ ದೇವಾಲಯ ಪೂರ್ಣ ಜೀರ್ಣೋದ್ಧಾರವಾಗಿದೆ. ಗರ್ಭಗೃಹದ ಮೇಲ್ಛಾವಣೆ ಅಷ್ಠಕೋನಾಕೃತಿಯಲ್ಲಿದ್ದು ಅಲ್ಲಿ ಅರಳಿದ ಕಮಲವಿದೆ. ಗರ್ಭಗೃಹದಲ್ಲಿ ಇರುವ ಕಾಳಿಕಾದೇವಿ ಅಧಿದೇವತೆ, ಗರ್ಭಗುಡಿಯ ಪ್ರವೇಶದ್ವಾರದಲ್ಲಿ ಇಬ್ಬರು ಚಾಮರ ಧಾರಣಿಯರು ನಿಂತ ಭಂಗಿಯಲ್ಲಿದ್ದಾರೆ. ಲಲಾಟ ಬಿಂಬದಲ್ಲಿ ಹೂವಿನ ಶಿಲ್ಪವಿದೆ. ಹೊರ ಮಂಟಪ ೩ ಅಂಕಣಗಳಿಂದ ಕೂಡಿದೆ. ಹೊರ ಮಂಟಪದಲ್ಲಿ ಒಟ್ಟು ಆರು ಸ್ತಂಭಗಳಿವೆ. ಮುಂಭಾಗದಲ್ಲಿಯ ನಾಲ್ಕು ಸ್ತಂಭಗಳು ಚೌಕಾಕಾರವಾಗಿದ್ದು ಮೇಲ್ಭಾಗ ಆ ಮೂಲಕ ಬೋದಿಗೆಯನ್ನು ಒಳಗೊಂಡಿದೆ. ಸ್ತಂಭದ ಮಧ್ಯೆ ಇರುವ ಜಾಲಾಂದ್ರ ಇತ್ತೀಚಿನದು. ಮಹಿಳೆ ಕಮಂಡಲದಿಂದ ನೀರು ಹಾಕುತ್ತಿರುವುದು, ಆರು ಕೈಗಳುಳ್ಳ ಮಹಿಷಮರ್ಧಿನಿ, ಚಾಮರ ಬೀಸುವ ಸ್ತ್ರೀ ಗಂಡ ಬೇರುಂಡ, ನಂದಿ ಶಿಲ್ಪಗಳು ಕೆತ್ತಲ್ಪಟ್ಟಿವೆ. ಮುಖ ಮಂಟಪದ ಎದುರು ಲೋಹದ ದೀಪಸ್ತಂಭವಿದೆ. ದೀಪಸ್ತಂಭದ ಕೆಳಬದಿಯಲ್ಲಿ ಪಾದ ಪೀಠವಿದೆ. ಹೊರಭಾಗ ಅಧಿಷ್ಠಾನ ಭಿತ್ತಿಯನ್ನು ಒಳಗೊಂಡಿದೆ. ಪ್ರಸ್ತುತ ಸ್ಮಾರಕ ಬಣ್ಣದಿಂದ ಅಲಂಕೃತವಾಗಿದೆ. ದೇವಾಲಯದ ಸುತ್ತಲೂ ನಾಗಬಂಧ ನಾಗದೇವತೆಯ ಶಿಲ್ಪಗಳಿವೆ.

**ಜೈನ ಬಸದಿಗಳು**

ವೈದಿಕ ಮತ್ತು ಬೌದ್ಧ ಧರ್ಮಗಳ ಸಮಕಾಲೀನ ಸಾಹಿತ್ಯಗಳಲ್ಲಿಯೂ ಈ ಧರ್ಮದ ಕುರಿತು ಉಲ್ಲೇಖಗಳಿವೆ.[೪೯] ವರ್ತಮಾನ ಕಾಲದ ಪ್ರಥಮ ತೀರ್ಥಂಕರ ವೃಷಭನಾಥನ ನಿರ್ಮಾಣದ ತರುವಾಯ

ಆತನ ಹಿರಿಯ ಸುಪುತ್ರ ಭರತ ಚಕ್ರವರ್ತಿ ಕೈಲಾಸ ಪರ್ವತದಲ್ಲಿ ಒಂದು ಚೈತ್ಯ ಮತ್ತು ಸಿಂಹ ನಿಷಿಧ್ಯ ಆಯತನವನ್ನು ನಿರ್ಮಿಸಿದನೆಂದು ಜಿನಸೇನಾಯಾರ್ಯನ ಪೂರ್ವ ಪುರಾಣದಲ್ಲಿ ಬರುವ ಪ್ರಸ್ತಾಪವೇ ಈ ಧರ್ಮದ ವಾಸ್ತು ನಿರ್ಮಾಣ ಪ್ರಪ್ರಥಮ ನಿದರ್ಶನ.[೫೦] ಈ ಧರ್ಮದ ವಾಸ್ತು ನಿರ್ಮಾಣಗಳು ಮೌರ್ಯ ಮನೆತನದಿಂದೀಚೆಗೆ ಕಂಡುಬರುತ್ತವೆ. ಆದರೆ ಅಶೋಕ ಚಕ್ರವರ್ತಿ ಮತ್ತು ಆತನ ಮೊಮ್ಮಗ ದಶರಥನು ಅಜೀವಿಕ ಪಂಥದ ಮುನಿಗಳ ಆಶ್ರಯಕ್ಕಾಗಿ ಗುಹಾಲಯಗಳನ್ನು ಖಂಡರಿಸಿದ್ದಾರೆ. ಅದೇರೀತಿ ಕ್ರಿ.ಪೂ.ಸುಮಾರು ೧ನೇ ಶತಮಾನದಲ್ಲಿ ಕಾಳಿಂಗದ ಖಾರವೀಲನು ಉದಯಗಿರಿ ಮತ್ತು ಖಂಡಗಿರಿ ಬೆಟ್ಟದಲ್ಲಿ ಮುನಿಗಳಿಗಾಗಿ ಗುಹಾಲಯಗಳನ್ನು ಕಂಡರಿಸಿದ್ದಾನೆ. ತಮಿಳುನಾಡಿನಲ್ಲಿ ಮಧುರೈಯ ಪರಿಸರದಲ್ಲಿ ಜೈನ ಮುನಿಗಳ ಆಶ್ರಯಕ್ಕಾಗಿ ಕಂಡರಿಸಿರುವ ಗುಹಾಲಯಗಳಿವೆ. ಹೀಗೆ ಭಾರತದಾದ್ಯಂತ ಸುಮಾರು ೨೦೦ ಜೈನ ಗುಹಾಲಯಗಳು ಕಂಡುಬರುತ್ತವೆ.[೫೧]

ಆದರೆ ಕನ್ನಡ ನಾಡಿಗೆ ಸೀಮಿತವಾದರೆ ಈಧರ್ಮದ ಪ್ರಾಚೀನತೆ ಕ್ರಿ.ಶ.ಸುಮಾರು ೪ನೇ ಶತಮಾನದಿಂದ ಗುರುತಿಸಬಹುದಾದರೂ[೫೨] ಇದರ ವಾಸ್ತು ನಿರ್ಮಾಣಗಳು ಕ್ರಿ.ಪೂ೪-೫ನೇಯ ಶತಮಾನದಿಂದ ಕಂಡುಬರುತ್ತವೆ. ಬನವಾಸಿ ಕದಂಬರು, ಬಾದಾಮಿ ಚಾಲುಕ್ಯರು, ಮಳಖೇಡದ ರಾಷ್ಟ್ರಕೂಡರು, ಕಲ್ಯಾಣಿಚಾಲುಕ್ಯರು, ದೋರಸಮುದ್ರದ ಹೊಯ್ಸಳರು ವಿಜಯನಗರದ ಅರಸರು ಇವೆಲ್ಲಾ ಮನೆತನಗಳ ಆಶ್ರಯ ಪ್ರೋತ್ಸಾಹ ಹಾಗೂ ಈ ಧರ್ಮದ ಮುನಿ ಪರಂಪರೆ, ಕವಿಗಳು ಮತ್ತು ಶ್ರಾವಕರ ಪ್ರಯತ್ನದಿಂದಾಗಿ ಜಿನಾಲಯಗಳು ಬಹುಸಂಖ್ಯೆಯಲ್ಲಿ ನಿರ್ಮಾಣವಾಗಿದೆ. ಆ ನಿರ್ಮಾಣ ಪರಂಪರೆ ಪ್ರಾಚೀನ ಕಾಲದಿಂದಲೂ ಈ ಪ್ರದೇಶದಲ್ಲಿ ನಡೆದು ಬಂದಿರುವುದನ್ನು ಸಮಕಾಲೀನ ಶಾಸನ ಮತ್ತು ಸಾಹಿತ್ಯಿಕ ಕುರುಹುಗಳು ಧೃಡಪಡಿಸುತ್ತವೆ. ಪ್ರಸ್ತುತ ಕಾಮಲಾಪುರ ಪರಿಸರದಲ್ಲಿ ನಿರ್ಮಾಣವಾದ ೬ ಜಿನಾಲಯಗಳು ಇವೆ. ಇವುಗಳ ಸ್ಥೂಲ ಪರಿಚಯವನ್ನು ಇಲ್ಲಿ ಮಾಡಲಾಗಿದೆ.

ಹೆಸರು :- ಗಾಣಗಿತ್ತಿ ಜಿನ ಬಸದಿ[೫೩]

ಸ್ಥಳ :- ಕಾಮಲಾಪುರ, ಹೊಸಪೇಟೆ (ತಾ).

ಕಾಲ :- ೧೩೪೨ ಕ್ರಿ.ಶ

ರಾಜವಂಶ :- ವಿಜಯನಗರ

ದಿಕ್ಕು :- ಉತ್ತರಾಭಿಮುಖ

ವಸ್ತು :- ಬೆಣಚುಕಲ್ಲು

ಗಾಣಗಿತ್ತಿ ಜೈನ ಬಸದಿಯ ಮುಂದೆ ದೀಪಸ್ತಂಭವಿದೆ. ಈ ಸ್ತಂಭ ಶಾಸನ ಇರುಗುಪ್ಪ ದಂಡನಾಯಕನು ವಿಜಯನಗರದಲ್ಲಿ ಕುಂತುನಾಥ ಜಿನಾಲಯವನ್ನು ಕಟ್ಟಿಸಿದನೆಂಬ ವಿಷಯವನ್ನು ತಿಳಿಸುತ್ತದೆ. ಈ ದೇವಾಲಯ ಸಮೀಪದಲ್ಲೇ ಇನ್ನೊಂದು ಶಾಸನಬಿದ್ದಿದ್ದು ಪ್ರಸ್ತುತ ಈ ಶಾಸನವನ್ನು ಬಸದಿಯ ಒಳಗಡೆ ಇಡಲಾಗಿದೆ. ಈ ಶಾಸನ ಮಹಾಮಂಡಲೇಶ್ವರ, ಶ್ರೀರಂಗ, ರಾಜರಾಮರಾಜ ಅಯ್ಯನು ಚಿಕ್ಕ ದೇವರ ಬಸದಿಯ ಶಾಂತಿನಾಥ ಸ್ವಾಮಿಗೆ ಅಂಗಡಿಯಿಂದ ಬರುವ ಆದಾಯವನ್ನು ದಾನ ಮಾಡದನೆಂದು ತಿಳಿಸುತ್ತದೆ. ಅಲ್ಲದೇ ವೀರನರಸಣ್ಣನು ಬಸದಿಗಾಗಿ ಕಟ್ಟಿಸಿದ ವಿಷಯವನ್ನು

ಪ್ರಸ್ತುತ ಪಡಿಸುತ್ತದೆ. ಪ್ರಸ್ತುತ ಈ ಜೈನ ಬಸದಿ ಗಾಣಗಿತ್ತಿ ಬಸದಿ 'ಕುಂತನಾಥ ಜಿನಾಲಯ' ಎಂದು ಕರೆಯಲ್ಪಡುತ್ತದೆ. ಭೀಮನಬಾಗಿಲು ಈ ಸ್ಥಳಕ್ಕೆ ಹೋಗುವ ದಾರಿಯಲ್ಲಿ ಈ ಬಸದಿ ಇದೆ. ಈ ಬಸದಿಯ ಒಳಭಾಗ ನವರಂಗ ಹಾಗೂ ಎರಡು ಗರ್ಭಗೃಹಗಳನ್ನೊಳಗೊಂಡಿದೆ. ದ್ವಿಕೂಟಾಚಲಕ್ಕೆ ಈ ಸ್ಮಾರಕ ಮಾದರಿಯಾಗಿದೆ. ಗರ್ಭಗೃಹದಲ್ಲಿ ಯಾವುದೇ ಮೂರ್ತಿಶಿಲ್ಪವಿಲ್ಲ. ಗರ್ಭಗೃಹದ ಲಲಾಟಬಿಂಬದಲ್ಲಿ ತೀರ್ಥಂಕರ ಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡ ಹೂ-ಬಳ್ಳಿಗಳಿಂದ ಅಲಂಕೃತಗೊಂಡಿದೆ. ಇನ್ನೊಂದು ಗರ್ಭಗೃಹದ ಪ್ರವೇಶದ್ವಾರದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಪದ್ಮಾಸೀನಳಾಗಿದ್ದಾಳೆ. ಸಭಾಮಂಟಪದ ಮಧ್ಯದಲ್ಲಿ ನಾಲ್ಕು ಸ್ತಂಭಗಳಿದ್ದು ಈ ಸ್ತಂಭಗಳು ಚೌಕಾಕಾರದ ಬೋದಿಗೆಗಳನ್ನು ಒಳಗೊಂಡಿದೆ. ಅಂತರಂಗದ ಮೇಲ್ಛಾವಣಿ ವಿಸ್ತೃತವಾಗಿದೆ. ಇಲ್ಲಿ ಎರಡು ದೇವಕೋಷ್ಠಕಗಳಿವೆ. ಇಲ್ಲಿನ ಸಣ್ಣ ಗುಡಿ ಪೂರ್ವಾಭಿಮುಖವಾಗಿದ್ದು ಚೌಕಾಕಾರದಲ್ಲಿದೆ. ಸಭಾಮಂಟಪ ದೊಡ್ಡದಿದ್ದು ಹದಿನಾರು ಸ್ತಂಭಗಳು ನಾಲ್ಕು ಸಾಲುಗಳಲ್ಲಿ ಪಸರಿಸಿವೆ. ನವರಂಗದ ಮೇಲ್ಛಾವಣಿಯಲ್ಲಿ ಭುವನೇಶ್ವರಿ ಇದ್ದು, ಅಷ್ಟಕೋನಾಕೃತಿಯಿಂದ ಅಲಂಕರಣಗೊಂಡಿದೆ. ಸಭಾಮಂಟಪದ ಎರಡೂ ದಿಕ್ಕುಗಳಲ್ಲಿ ಚಿಕ್ಕ-ಚಿಕ್ಕ ಎಂಟು ಗೂಡುಗಳಿವೆ. ಮುಖಮಂಟಪದ ಪ್ರವೇಶದ್ವಾರದಲ್ಲಿ ತೀರ್ಥಂಕರ ಮೂರ್ತಿ ಸದ್ಮಾಸನದಲ್ಲಿದೆ. ದ್ವಾರದ ಇಕ್ಕೆಲುಗಳಲ್ಲಿ ಸ್ಥಾನಿಕ ಸಿಂಹ ಶಿಲ್ಪಗಳಿವೆ. ಮುಖಮಂಟಪದ ಸ್ತಂಭದ ಕೆಳಭಾಗ ಚೌಕಾಕಾರವಾಗಿದ್ದು ಮೇಲ್ಭಾಗದ ಪೊಡಾಶ್ರ ಪಟ್ಟಿಕೆಗಳನ್ನು ಒಳಗೊಂಡಿದೆ. ಮೇಲ್ಭಾಗದ ನಾಲ್ಕು ಬೋದಿಗೆಗಳು ಚೌಕಾಕಾರದಲ್ಲಿದೆ. ಮುಖಮಂಟಪದ ಎಡ-ಬಲ ಭಾಗದಲ್ಲಿ ಕಕ್ಷಾಸನವಿದೆ. ಇಲ್ಲಿನ ನಾಲ್ಕು ಸ್ತಂಭಗಳು ಚೌಕಾಕಾರದ ಪೀಠಭಾಗ ಚೌಕಾಕಾರದ ಷೋಡಾಶ್ರಪಟ್ಟಿಕೆ ಮತ್ತು ಅಮಾಲಕವನ್ನು ಒಳಗೊಂಡಿದೆ. ಸ್ತಂಭದ ಚೌಕಾಕಾರದ ಮುಂಭಾಗದಲ್ಲಿ ನವಿಲು ಶಿಲ್ಪಗಳಿಂದ ಅಲಂಕೃತವಾಗಿದೆ. ದಕ್ಷಿಣದ ಮುಖಮಂಟಪದಲ್ಲಿ ಇದೇ ಮಾದರಿಯ ಎರಡು ಸ್ತಂಭಗಳಿದ್ದು ಇಕ್ಕೆಲುಗಳಲ್ಲಿ ಎತ್ತರವಾದ ಜಗತಿಗಳಿವೆ. ದೇವಾಲಯದ ಹೊರಭಾಗ ಅಧಿಷ್ಠಾನ, ಭಿತ್ತಿ ಸಣ್ಣ ಕಪೋತ ಮತ್ತು ಶಿಖರವನ್ನು ಒಳಗೊಂಡಿದೆ. ಈ ಬಸದಿ ಕ್ರಿ.ಶ೧೫ನೇ ಶತಮಾನಕ್ಕೆ ಸೇರಿದ ಸ್ಮಾರಕದ ಮುಖಮಂಟಪದ ನಂತರದ ಕಾಲದಲ್ಲಿ ನಿರ್ಮಿತವಾಗಿದೆ. ಈ ಬಸದಿಯ ಮುಂದೆ ಮಾನ ಸ್ತಂಭವಿದೆ. ಇದು ಜೈನ ಸ್ಮಾರಕಗಳಲ್ಲಿನ ವಿಶೇಷ ಲಕ್ಷಣಗಳಲ್ಲಿ ಒಂದು. ಒಟ್ಟಾರೆ ಎರಡು ಗರ್ಭಗೃಹ, ಸಭಾಮಂಟಪ ಮತ್ತು ಮುಖಮಂಟಪ ಪ್ರವೇಶ ದ್ವಾರದಲ್ಲಿನ ಕುಡ್ಯಸ್ತಂಭ, ಲತಾ ಲಲಾಟ ಬಿಂಬದಲ್ಲಿನ ಪದ್ಮಾಸನದಲ್ಲಿ ಸ್ಥಾನಿಕ ತೀರ್ಥಂಕರ, ವಿಶಾಲವಾದ ಮುಖಮಂಟಪ, ಮತ್ತು ಕಕ್ಷಾಸನ ಇವು ಈ ಬಸದಿಯಲ್ಲಿನ ವೈಶಿಷ್ಟ್ಯತೆಯಾಗಿದೆ.

ಹೆಸರು :- ಜೈನದೇವಾಲಯ

ಸ್ಥಳ :- ವೈಷ್ಣವ ದೇವಾಲಯದ ಹಿಂಬದಿಯಲ್ಲಿ

ಕಾಲ :- ೧೫ನೇ ಶತಮಾನ

ರಾಜವಂಶ :- ವಿಜಯನಗರ

ದಿಕ್ಕು :- ಉತ್ತರಾಭಿಮುಖ

ವಸ್ತು :- ಬೆಣಚುಕಲ್ಲು

ಈ ದೇವಾಲಯದ ಅಧಿಷ್ಠಾನವು ಮಂಚ ಬಂಧ ರೀತಿಯಲ್ಲಿದ್ದು, ಈಗ ಮುಚ್ಚಿದೆ ದೇವಾಲಯದ ಹೊರ ಭಿತ್ತಿಯ ಮೇಲೆ ಪಂಜರ ಕೋಷವಿಕಗಳು, ಸ್ತಂಭಗಳು, ಚೌಕಾಕಾರವಾಗಿವೆ. ಬಾಗಿದ ಕಪೋತವಿದೆ. ಈ ದೇವಾಲಯಕ್ಕೆ ಹೋಗಲು ಮೂರು ಪ್ರವೇಶ ದ್ವಾರಗಳಿವೆ. ಪ್ರವೇಶದ ಲಲಾಟ ಬಿಂಬವು ಹಾಳಾಗಿದೆ.

ದ್ವಾರವು ನವಿಲು, ಪುಷ್ಪ, ಬಳ್ಳಿಗಳಿಂದ ಅಲಂಕೃತವಾಗಿದೆ. ಪ್ರವೇಶದ್ವಾರದ ಮಧ್ಯದಲ್ಲಿ ಅರಳಿದ ಪುಷ್ಪವಿದೆ. ಈ ದೇವಾಲಯವು ಗರ್ಭಗೃಹ ಅಂತರಾಳ ನವರಂಗ, ಮುಖಮಂಟಪವನ್ನು ಒಳಗೊಂಡಿದೆ. ಸ್ತಂಭಗಳು, ಚೌಕಾಕಾರವಾಗಿದ್ದು ಚೌಕಾಕಾರದ ಬೋದಿಗೆಗಳನ್ನು ಒಳಗೊಂಡಿದೆ. ಪ್ರವೇಶ ಮಂಟಪದ ಮಧ್ಯದಲ್ಲಿ ಆರು ಸ್ತಂಭಗಳಿದ್ದು ಉಬ್ಬು ಶಿಲ್ಪಗಳಿಂದ ಸ್ತಂಭವು ಅಲಂಕೃತವಾಗಿದೆ. ಈ ಮಂಟಪವು ಹನ್ನೆರಡು ಸ್ತಂಭಗಳಿಂದ ಕೂಡಿದ್ದು ಬೋದಿಗೆಗಳು ಕಮಲದ ಹೂವಿನ ಸೂಕ್ಷ್ಮ ಕೆತ್ತನೆಯನ್ನು ಒಳಗೊಂಡಿದೆ. ಈ ಸ್ತಂಭಗಳ ಮೇಲಿನ ಶಿಲ್ಪಗಳು ಗಿಳಿ, ಕಮಲದ ಹೂ ಹಿಡಿದ ದೃಶ್ಯದ ಉಬ್ಬುಶಿಲ್ಪ, ಸಿಂಹಮುಖ, ನವಿಲು, ಚಕ್ರ, ಬಳ್ಳಿ ಹಿಡಿದ ನವಿಲು, ನವರಂಗದ ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ಜೈನದ್ವಾರಪಾಲಕರು ಗದೆ ಹಿಡಿದು ನಿಂತಿದ್ದಾರೆ. ಕುಂಬ ಲತಾಗಳು ಸ್ತಂಭಗಳ ಮೇಲೆ ಚಿತ್ರಿತವಾಗಿದೆ. ಲಲಾಟ ಬಿಂಬದಲ್ಲಿ ಜಿನನ ಪ್ರತಿಬಿಂಬವಿದೆ. ದ್ವಾರದ ಇಕ್ಕೆಲುಗಳಲ್ಲಿ ಕಳಸಗಳಿವೆ. ಪ್ರವೇಶ ಮಂಟಪದ ಒಳ ಮೇಲ್ಛಾವಣಿಯ ಮಧ್ಯದಲ್ಲಿಯೂ ಅರಳಿದ ಪುಷ್ಪವಿದೆ. ಇದರ ಪ್ರವೇಶ ಮಂಟಪದ ಒಲ ಭಿತ್ತಿಯ ಇಕ್ಕೆಲುಗಳಲ್ಲಿ ಅಲಂಕೃತ ಆನೆ ಆನೆಮೇಲೆ ಮಾವುತ ಅಂಜಲಿಮುದ್ರೆಯಲ್ಲಿ ಚಿತ್ರಿತವಾಗಿದೆ.

ಹೆಸರು :– ಜೈನ ಬಸದಿ[೫೪]

ಸ್ಥಳ :– ಆನೆಲಾಯದ ಹಿಂಬದಿ, ಕಾಮಲಾಪುರ

ಕಾಲ :– ಕ್ರಿ.ಶ.೧೪೩೬

ರಾಜವಂಶ :– ವಿಜಯನಗರ

ದಿಕ್ಕು :– ಉತ್ತರಾಭಿಮುಖ

ವಸ್ತು :– ಬೆಣಚುಕಲ್ಲು

ಈ ಬಸದಿಯು ೪೩ ಮೀ ೮೫ ಸೆ.ಮೀ ಉದ್ದ ೨೭ ಮೀ ೬೫ ಸೆಂ.ಮೂ ಅಗಲವಿದೆ. ಗಜಶಾಲೆಯ ಹಿಂಬದಿಯಲ್ಲಿ ಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟ, ಕ್ರಮ ಕಪರ್ಣಾಪನ ವೀಧಿ ಅಥವಾ ಪರ್ಣಪೂಗೀಫನಾ ವೀದಿ (ಪಾನ್ ಸುಪಾರಿ ಬಜಾರ್) ಎಂದು ಉಲ್ಲೇಖಿಸಲ್ಪಟ್ಟ ಈ ಪ್ರದೇಶದಲ್ಲಿ ಅರ್ಧಮುಚ್ಚಿ ಹೋಗಿದ್ದ ನಾಲ್ಕು ದೇವಾಲಯಗಳನ್ನು ಬೆಳಕಿಗೆ ತರಲಾಯಿತು. ಇವುಗಳಲ್ಲಿ ಎರಡು ಜೈಸ ಸಂಪ್ರದಾಯಕ್ಕೆ ಸಂಬಂಧಿಸಿವೆ.

ಕ್ರಿ.ಶ.೧೪೨೬ರಲ್ಲಿ ಪಾನ್ ಸುಪಾರಿ ಬಜಾರಿನ ಬೀದಿಯಲ್ಲಿ ಅರ್ಥತ್ ಪಾರ್ಶ್ವನಾಥನಿಗಾಗಿ ಕಲ್ಲಿನಲ್ಲಿ ಜೈತ್ಯಾಲಯ ಕಟ್ಟಿಸಿದನೆಂದು ಶಾಸನವೊಂದು ದಾಖಲಿಸುತ್ತದೆ. ಪ್ರಸ್ತುತ ಈ ಬಸದಿ ಗರ್ಭಗೃಹ

ಅಂತರಾಳ ಮತ್ತು ನವರಂಗವನ್ನು ಒಳಗೊಂಡಿದೆ. ಗರ್ಭಗುಡಿಯ ಒಳಭಾಗದ ಮೇಲ್ಛಾವಣಿ ಅಷ್ಟಕೋನಾಕೃತಿಯಿಂದ ಕೂಡಿದ್ದು ಅರಳಿದ ಹೂವಿನಿಂದ ಅಲಂಕೃತವಾಗಿದೆ. ಪ್ರವೇಶ ದ್ವಾರದ ಲಲಾಟಬಿಂಬದಲ್ಲಿ ಕುಳಿತ ತೀರ್ಥಂಕರ ಶಿಲ್ಪವಿದೆ. ಅಂತರಾಳ ಯಾವುದೇ ಅಲಂಕರಣತೆ ಇಲ್ಲದೆ ಸರಳವಾಗಿದೆ. ಮೂಲ ರೂಪಕ್ಕೆ ಇಲ್ಲಿ ಹೆಚ್ಚು ಪ್ರಾಧಾನ್ಯತೆಯನ್ನು ಕೊಟ್ಟಂತಿದೆ. ನವರಂಗದ ಮೇಲ್ಛಾವಣಿಯ ಮಧ್ಯದಲ್ಲಿ ಭುವನೇಶ್ವರಿ ಇದೆ. ಮಧ್ಯದ ನಾಲ್ಕು ಸ್ತಂಭಗಳು ನಾಶಿ, ಹಾರಿಕಾ, ವೃತ್ತ, ವೇತ್ರ, ಚೌಕಾಕಾರದ ಬೋದಿಗೆಗಳನ್ನು ಒಳಗೊಂಡಿದೆ. ಎಡ ಬಲ ಭಾಗದಲ್ಲಿ ದ್ವಾರಪಾಲಕರ ಚಿತ್ರಣವಿದೆ. ಪ್ರವೇಶದ್ವಾರದ ಲಲಾಟಬಿಂಬದಲ್ಲಿ ಪದ್ಮಾಸನದಲ್ಲಿದ್ದ ತೀರ್ಥಂಕರ ಎಡಬಲ ಭಾಗದಲ್ಲಿ ಆನೆಗಳಿಗಿರುವ ಉಬ್ಬು ಶಿಲ್ಪಗಳಿರುವುದು ವಿಶೇಷ ಲಕ್ಷಣಗಳಲ್ಲಿ ಒಂದು. ದ್ವಾರದ ಇಕ್ಕೆಲುಗಳಲ್ಲಿ ಸಿಂಹ, ಆನೆಗಳ ಚಿತ್ರಣ ಹೂ-ಬಳ್ಳಿಗಳಲ್ಲಿ ಅಲಂಕೃತವಾಗಿದೆ. ಮುಖಮಂಟಪದಲ್ಲಿ ನಾಲ್ಕು ಸ್ತಂಭಗಳಿದ್ದು ಚೌಕಾಕಾರ, ಷೋಡಾಶ್ರ ಮೇಲೆ ಅಮಾಲಕವನ್ನು ಒಳಗೊಂಡಿದೆ. ಮುಖಮಂಟಪಕ್ಕೆ ಎದುರುಗಡೆ ಪ್ರವೇಶದ್ವಾರವಿದ್ದು ಕಕ್ಷಾಸನವೂ ಇದೆ. ಹೊರಭಾಗ ಅಧಿಷಾವಿನ, ಭಿತ್ತಿ ಮತ್ತು ಶಿಖರವನ್ನು ಒಳಗೊಂಡಿದೆ. ಬಹುಮಟ್ಟಿಗೆ ಈ ಜಿನಾಲಯ ಹೇಮಕೂಟ ದೇವಾಲಯವನ್ನು ಹೋಲುತ್ತದೆ.

ಹೆಸರು :- ಜೈನ ಬಸದಿ[೫೫]

ಸ್ಥಳ :- ಗಜಶಾಲೆಯ ಹಿಂದೆ ಬಾಳೆ ತೋಟದಲ್ಲಿ, ಕಾಮಲಾಪುರ

ಕಾಲ :- ೧೫ನೇ ಶತಮಾನ

ರಾಜವಂಶ :- ವಿಜಯನಗರ

ದಿಕ್ಕು :- ದಕ್ಷಿಣಾಭಿಮುಖ

ವಸ್ತು :- ಬೆಣಚುಕಲ್ಲು

ಈ ದೇವಾಲಯದ ಉದ್ದ ೯.೮೦ ಸೆಂ.ಮೀ X ೨೧.೬೦ ಸೆಂ.ಮೀ ಇದೆ. ಈ ಬಸದಿ ಪ್ರಸ್ತುತ ಶಿಥಿಲವಾಗಿದೆ. ಹೆಚ್ಚಿನ ಅಲಂಕಾರತೆಗೆ ಇಲ್ಲಿ ಪ್ರಾಧಾನ್ಯತೆ ಕೊಡದೇ ಮೂಲರೂಪದಲ್ಲಿರುವುದು ವಿಶೇಷತೆಯಾಗಿದೆ. ಒಳಭಾಗ ಗರ್ಭಗೃಹದ ಅಂತರಾಳ ಸಭಾ ಮಂಟಪ ಮತ್ತು ಮುಖಮಂಟಪವನ್ನು ಒಳಗೊಂಡಿದೆ. ಗರ್ಭಗೃಹದ ಮೇಲ್ಛಾವಣಿ ಅಷ್ಟಕೋನಾಕೃತಿ ಮಧ್ಯದಲ್ಲಿ ಅರಳಿದ ಕಮಲವಿದೆ. ಗರ್ಭಗೃಹದಲ್ಲಿ ಯಾವುದೇ ಮೂರ್ತಿ ಶಿಲ್ಪವಿಲ್ಲ. ಪ್ರವೇಶದ್ವಾರದಲ್ಲಿ ಯಾವುದೇ ಕೆತ್ತನೆ ಇರದೇ ಸಪಾಟಾಗಿದೆ. ಅಂತರಾಳ, ಪ್ರವೇಶದ್ವಾರ ಪಾಳುಬಿದ್ದದ್ದು ಪ್ರವೇಶದ್ವಾರದ ಲಲಾಟಬಿಂಬದಲ್ಲಿ ಪದ್ಮಾಸೀನ ಜಿನಶಿಲ್ಪ ಇದರ ಸುತ್ತಲೂ ಹೂ-ಬಳ್ಳಿಯ ಚಿತ್ರಣವಿದೆ. ಇಲ್ಲಿನ ಪ್ರದಕ್ಷಿಣಾಪಥ ಸಾಂಧಾರ ದೇವಾಲಯವನ್ನು ನೆನಪಿಗೆ ತರುವಂತಿದೆ. ಸಭಾ ಮಂಟಪದ ಮೇಲ್ಛಾವಣಿ ಭುವನೇಶ್ವರಿಯನ್ನು ಒಳಗೊಂಡಿದ್ದು ಅದರಲ್ಲಿಅರಳಿದ ಕಮಲವಿದೆ. ಚೌಕಾಕಾರದ ಸ್ತಂಭಗಳಿದ್ದು ಇವುಗಳ ಮೇಲೆ ಬೋದಿಗೆಗಳಿವೆ. ಸಭಾ ಮಂಟಪವನ್ನು ಪ್ರವೇಶಿಸುವ ದ್ವಾರದ ಲಲಾಟಬಿಂಬದಲ್ಲಿ ಪದ್ಮಾಸನದಲ್ಲಿದ್ದ ಜಿನನ ಚಿತ್ರಣವಿದೆ. ಮುಂಭಾಗದ ನಾಲ್ಕು ಸ್ತಂಭಗಳಲ್ಲಿ ಎರಡು ಸ್ತಂಭಗಳು ಪೀಠ ಚೌಕಾಕಾರ

ಮತ್ತು ಬೋದಿಗೆಯನ್ನು ಒಳಗೊಂಡಿದೆ. ಈ ಬಸದಿಯು ಶಿಥಿಲವಾಗಿದ್ದು ಪ್ರಸ್ತುತ ಅಧಿಷ್ಠಾನದ ಮತ್ತು ಮೇಲ್ಛಾವಣಿ ಮಾತ್ರ ಕಾಣಸಿಗುತ್ತದೆ.

ಹೆಸರು :- ಜೈನ ದೇವಾಲಯ

ಸ್ಥಳ :- ರಾಮನಗರದ ಬಸ್ ನಿಲ್ದಾಣದ ರಸ್ತೆಯ ಎಡಬದಿಯಲ್ಲಿ, ಕಾಮಲಾಪುರ

ಕಾಲ :- ೧೫ನೇ ಶತಮಾನ

ರಾಜವಂಶ :- ವಿಜಯನಗರ

ದಿಕ್ಕು :- ಉತ್ತರಾಭಿಮುಖ

ವಸ್ತು :- ಬೆಣಚುಕಲ್ಲು

ಈ ದೇವಾಲಯವು ೧೭.೯೦ ಮೀ ಉದ್ದ ಮತ್ತು ೮.೪೦. ಮೀ ಅಗಲವಿದೆ. ಈ ದೇವಾಲಯವು ಮೂರು ಗರ್ಭಗೃಹಗಳನ್ನು ಒಳಗೊಂಡಿದೆ. ಇದು ತ್ರಿಕೂಟ ದೇವಾಲಯ. ಎರಡು ಗರ್ಭಗೃಹಗಳ ಮೇಲ್ಛಾವಣಿಯಲ್ಲಿ ಅಷ್ಟಕೋನಾಕೃತಿಯಲ್ಲಿ ಅರಳಿದ ಪದ್ಮ ಪುಷ್ಪವಿದೆ. ಗರ್ಭದ ಗೃಹಗಳ ದ್ವಾರದ ಎರಡೂ ಲಲಾಟಬಿಂಬದಲ್ಲಿ ಗೋಮಟೇಶ್ವರ (ಬಾಹುಬಲಿ) ಉಬ್ಬುಶಿಲ್ಪವಿದೆ. ದ್ವಾರವು ಸೂಕ್ಷ್ಮ ಕೆತ್ತನೆಯಿಂದ ಕೂಡಿದೆ. ಮೇಲ್ಛಾವಣಿಗೆ ಛಪ್ಪಡಿಕಲ್ಲನ್ನು ಉದ್ದವಾಗಿ ಹಾಸಲಾಗಿದೆ. ಒಳ ಭಿತ್ತಿಯ ಛಪ್ಪಡಿಕಲ್ಲನ್ನು ಅಡ್ಡಲಾಗಿ ಹಾಸಲಾಗಿದೆ. ಮೂರನೇ ಗರ್ಭಗೃಹ ಶಿಥಿಲವಾಗಿದೆ. ತೆರೆದ ಮಂಟಪವಿದೆ. ಸಭಾ ಮಂಟಪವು ಒಂಬತ್ತು ಅಂಕಣಗಳಿಂದ ಕೂಡಿದೆ. ಸಭಾಮಂಟಪದ ಮೇಲ್ಛಾವಣೆಯು ಅಷ್ಟಕೋನಾಕೃತಿ, ಮಧ್ಯ ಅರಳಿದ ಪುಷವಿವಿದೆ. ಮಧ್ಯದ ನಾಲ್ಕು ಸ್ತಂಭಗಳು, ಮಿಶ್ರಕಸ್ತಂಭಗಳಾಗಿವೆ. ಇವು ನಾಸಿ, ಹಾರಿಕಾ ವೃತ್ತವೇತ್ರ ಬೋದಿಗೆಗಳನ್ನು ಒಳಗೊಂಡಿದೆ. ಈ ನಾಲ್ಕು ಸ್ತಂಭಗಳು ಒಂದು ಅಡಿ ಎತ್ತರದ ವೇದಿಕೆಯ ಮೇಲೆ ಇವೆ. ಎರಡನೇ ಗರ್ಭಗೃಹದ ಲಲಾಟ ಬಿಂಬದಲ್ಲಿ ಕುಳಿತ ಜಿನ ಮೂರ್ತಿಇದೆ. ಹದಿನಾರು ಸ್ತಂಭಗಳ ಚಚ್ಚೌಕಾರ ಸಭಾಮಂಟಪವು ಕೂಡಿದೆ. ಮುಖ ಮಂಟಪದ ಪ್ರವೇಶದ್ವಾರದಲ್ಲಿ ಎರಡು ಜೈನ ದ್ವಾರಪಾಲಕರಿದ್ದಾರೆ. ಈ ದ್ವಾರ ಪಾಲಕರು ಗದೆ, ಅಭಯಹಸ್ತ ಹೊಂದಿದ್ದಾರೆ. ಪ್ರವೇಶದ್ವಾರವು ಮೂರು ಅಂಕಣಗಳಿಂದ ಒಳಗೊಂಡಿದೆ. ಮಧ್ಯದಲ್ಲಿ ಅರಳಿದ ಪುಷ್ಪವಿದೆ. ಮೇಲ್ಚಾವಣಿಯ ಬಂಡೆಗಳನ್ನು ಉದ್ದವಾಗಿ ಹಾಸಲಾಗಿದೆ.

ಹೆಸರು :- ಜೈನ ದೇವಾಲಯ

ಸ್ಥಳ :- ಪವರ್‌ಹೌಸ್ ಹಿಂದುಗಡೆಯ ಓವರ್‌ಟ್ಯಾಂಕ್‌ನ ಗುಡ್ಡದ ಬದಿಗೆ

ಕಾಲ :- ೧೬ನೇ ಶತಮಾನ

ರಾಜವಂಶ :- ವಿಜಯನಗರೋತ್ತರ

ದಿಕ್ಕು :- ಉತ್ತರ-ದಕ್ಷಿಣ

ವಸ್ತು :- ಬೆಣಚುಕಲ್ಲು

ಈ ದೇವಾಲಯವು ೨.೬೦ ಸೆಂ.ಮೀ ಉದ್ದ ಮತ್ತು ೫ ಮೀ ಅಗಲ ಇದೆ. ದೇವಾಲಯವು ಗರ್ಭಗೃಹ ಮತ್ತು ಮುಖಮಂಟಪವನ್ನು ಒಳಗೊಂಡಿದೆ. ಗರ್ಭಗೃಹದ ಮೇಲ್ಛಾವಣಿ ಅಷ್ಟಕೋನಾಕೃತಿಯಿಂದ ಕೂಡಿದೆ. ಮಧ್ಯದಲ್ಲಿ ಅರಳಿದ ಪುಷ್ಪವಿದೆ. ನಾಲ್ಕು ಸ್ತಂಭಗಳಿಂದ ಆವೃತ್ತವಾಗಿದೆ. ಗರ್ಭಗೃಹದಲ್ಲಿ ಪೀಠಮಾತ್ರ ಉಳಿದಿದೆ. ಗರ್ಭಗೃಹದ ಲಲಾಟ ಬಿಂಬದಲ್ಲಿ ಜಿನನ ಶಿಲ್ಪವಿದೆ. ಮುಖಮಂಟಪದಲ್ಲಿ ಎರಡು ಸ್ತಂಭಗಳು ಚೌಕಾಕಾರವಾಗಿದ್ದು ಮುಂದಿನ ಸ್ತಂಭಗಳು ಮಿಶ್ರಕಸ್ತಂಭಗಳಾಗಿವೆ. ಇವು ನಾಶಿ ಹಾರಿಕಾ ವೃತ್ತವೇತ್ರ ಬೋದಿಗೆಗಳನ್ನು ಒಳಗೊಂಡಿದೆ. ಮುಖಮಂಟಪದ ಮೇಲ್ಛಾವಣಿಯನ್ನು ಉದ್ದವಾಗಿ ಹಾಸಲಾಗಿದೆ.

**ವೈಷ್ಣವ ದೇವಾಲಯಗಳು:**

| ಕ್ರ.ಸಂ | ಸ್ಥಳ | ಹೆಸರು | ಕಾಲ | ಸ್ಥಿತಿ |
|---|---|---|---|---|
| ೧. | ಮಹಾನವಮಿ ದಿಬ್ಬದ ವಾಯುವ್ಯ ಭಾಗ ಕಾಮಲಾಪುರ | ಹಜಾರರಾಮ ದೇವಾಲಯ | ಕ್ರಿ.ಶ.೧೪ನೇ ಶತಮಾನ | ಸುಸ್ಥಿತಿ |
| ೨. | ಸೀತಾರಾಮ ತಾಂಡದ ಎಡಭಾಗ | ವಿಷ್ಣುದೇವಾಲಯ | ಕ್ರಿ.ಶ.೧೫ನೇ ಶತಮಾನ | ಸುಸ್ಥಿತಿ |
| ೩. | ವರದರಾಜಮ್ಮ ಪಟ್ಟಣಕ್ಕೆ ಹೋಗುವ ರಸ್ತೆಯ ಎಡಭಾಗ | ಪಟ್ಟಾಭಿರಾಮ ದೇವಾಲಯ | ಕ್ರಿ.ಶ.೧೫ನೇ ಶತಮಾನ | ಸುಸ್ಥಿತಿ |
| ೪. | ಚಂದ್ರಶೇಖರ ದೇವಾಲಯದ ಉತ್ತರಕ್ಕೆ | ವಿಷ್ಣು ದೇವಾಲಯ | ಕ್ರಿ.ಶ.೧೫ನೇ ಶತಮಾನ | ಜೀರ್ಣೋದ್ಧಾರ |
| ೫. | ಪಾಪಿನಾಯಕನಹಳ್ಳಿಯ ರಸ್ತೆಯ ಪಕ್ಕ ಸಿದ್ದೇಶ್ವರ ಗದ್ದೆಯಲ್ಲಿ | ವಿಷ್ಣು ದೇವಾಲಯ | ಕ್ರಿ.ಶ.೧೫ನೇ ಶತಮಾನ | ಜೀರ್ಣೋದ್ಧಾರ |
| ೬. | ಅಕ್ಕ-ತಂಗಿಯರ ಗುಡ್ಡದ ಪಕ್ಕದಲ್ಲಿ | ಹನುಮಂತ ದೇವಾಲಯ | ಕ್ರಿ.ಶ.೧೫ನೇ ಶತಮಾನ | ಜೀರ್ಣೋದ್ಧಾರ |
| ೭. | ಕನ್ನಡ ವಿಶ್ವವಿದ್ಯಾಲಯಕ್ಕೆ ಹೋಗುವ ರಸ್ತೆಯ ಎಡಬದಿಯಲ್ಲಿ | ಗಾರಿಬಾವಿ ಆಂಜನೇಯ ದೇವಾಲಯ | ಕ್ರಿ.ಶ.೧೫ನೇ ಶತಮಾನ | ಜೀರ್ಣೋದ್ಧಾರ |
| ೮. | ವರದರಾಜಮ್ಮ ಪಟ್ಟಣದ ರಸ್ತೆಯ ಎಡಬದಿಯಲ್ಲಿ | ವಿಷ್ಣು ದೇವಾಲಯ | ಕ್ರಿ.ಶ.೧೫ನೇ ಶತಮಾನ | ಜೀರ್ಣೋದ್ಧಾರ |
| ೯. | ಜನಾನ ಪ್ರಾಕಾರದ ಹೊರಗೆ ಆಗ್ನೆಯ ಮೂಲೆಯಲ್ಲಿ | ರಂಗನಾಥ ದೇವಾಲಯ | ಕ್ರಿ.ಶ.೧೫೪೫ | ಜೀರ್ಣೋದ್ಧಾರ |
| ೧೦. | ಕಾಮಲಾಪುರದ ಕೆರೆಯಿಂದ ೧ ಕಿ.ಮೀ ದೂರದಲ್ಲಿ | ಹೇಮಗಿರಿ ಆಂಜನೇಯ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |

| | | | |
|---|---|---|---|
| ೧೧. ರಾಮನಗರದ ಬಸ್‌ನಿಲ್ದಾಣದ ಎಡಗಡೆ ಎತ್ತರದ ಬೆಟ್ಟದ ಮೇಲೆ | ವಿಷ್ಣು ದೇವಾಲಯ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |
| ೧೨. ರಾಮನಗರದ ಬಸ್‌ನಿಲ್ದಾಣದ ಬಲಗಡೆ ಎತ್ತರದ ಬೆಟ್ಟದ ಮೇಲೆ | ಹನುಮಂತ ದೇವಾಲಯ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |
| ೧೩. ದೇವಿ ದೇವಾಲಯದ ಹಿಂಬದಿ | ಆಂಜನೇಯ ದೇವಾಲಯ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |
| ೧೪. ರಾಮನಗರದ ಮುಖ್ಯರಸ್ತೆಯ ಬಸ್ ನಿಲ್ದಾಣದ ಬಲಗಡೆ | ಆಂಜನೇಯ ದೇವಾಲಯ | ಕ್ರಿ.ಶ.೧೬ನೇ ಶತಮಾನ | ಜೀರ್ಣೋದ್ಧಾರ |
| ೧೫. ಸಿಂಗಾರದ ಬಾಗಿಲಿನ ಸಮೀಪ | ವಿಷ್ಣು ದೇವಾಲಯ | ಕ್ರಿ.ಶ.೧೬ನೇ ಶತಮಾನ | ಜೀರ್ಣೋದ್ಧಾರ |
| ೧೬. ಸಿಂಗಾರದ ಬಾಗಿಲಿನ ಸಮೀಪ | ಹನುಮಂತ ದೇವಾಲಯ | ಕ್ರಿ.ಶ.೧೬ನೇ ಶತಮಾನ | ಜೀರ್ಣೋದ್ಧಾರ |
| ೧೭. ಸಿಂಗಾರದ ಬಾಗಿಲಿನ ಬಲಭಾಗ | ವಿಷ್ಣು ದೇವಾಲಯ | ಕ್ರಿ.ಶ.೧೬ನೇ ಶತಮಾನ | ಸುಸ್ಥಿತಿ |
| ೧೮. ಗಜಶಾಲೆಯ ಹಿಂಭಾಗದಲ್ಲಿ | ಶ್ರೀರಾಮ ದೇವಾಲಯ | ಕ್ರಿ.ಶ.೧೬ನೇ ಶತಮಾನ | ಜೀರ್ಣೋದ್ಧಾರ |
| ೧೯. ವರದರಾಜಮ್ಮ ಪಟ್ಟಣ | ಪ್ರಸನ್ನ ಆಂಜನೇಯ | ಕ್ರಿ.ಶ.೧೬-೧೭ನೇ ಶತಮಾನ | ಜೀರ್ಣೋದ್ಧಾರ |
| ೨೦. ಕಾಮಲಾಪುರದ ವೇಣುಗೋಪಾಲ ದೇವಾವಲಯದ ಎದುರಿಗೆ | ವಿಷ್ಣು ದೇವಾಲಯ | ಕ್ರಿ.ಶ.೧೬-೧೭ನೇ ಶತಮಾನ | ಜೀರ್ಣೋದ್ಧಾರ |
| ೨೧. ಕೋಟೆಯ ಹಿಂಬದಿಯಲ್ಲಿ | ಗೋಪಾಲಕೃಷ್ಣ ದೇವಾಲಯ | ಕ್ರಿ.ಶ.೧೬-೧೭ನೇ ಶತಮಾನ | ಜೀರ್ಣೋದ್ಧಾರ |
| ೨೨. ರಾಯರ ಗುಡಿಯ ಎದುರು ಕಾಮಲಾಪುರ | ವೇಣುಗೋಪಾಲ ದೇವಾಲಯ | ಕ್ರಿ.ಶ.೧೬-೧೭ನೇ ಶತಮಾನ | ಜೀರ್ಣೋದ್ಧಾರ |
| ೨೩. ವಾಮನಚಾರ್ ಮನೆಯ ಹತ್ತಿರ | ಆಂಜನೇಯ ದೇವಾಲಯ | ಕ್ರಿ.ಶ.೧೬-೧೭ನೇ ಶತಮಾನ | ಸುಸ್ಥಿತಿ |
| ೨೪. ವರದರಾಜಮ್ಮ ಪಟ್ಟಣದ ಕಾಲುವೆಯ ಹತ್ತಿರ | ಬೆಟ್ಟದ ಆಂಜನೇಯ ದೇವಾಲಯ | ಕ್ರಿ.ಶ.೧೬-೧೭ನೇ ಶತಮಾನ | ಜೀರ್ಣೋದ್ಧಾರ |
| ೨೫. ನಗರೇಶ್ವರ ದೇವಾಲಯದ ಪೂರ್ವಕ್ಕೆ | ಕೋಟೆ ಆಂಜನೇಯ ದೇವಾಲಯ | ಕ್ರಿ.ಶ.೧೭-೧೮ನೇ ಶತಮಾನ | ಜೀರ್ಣೋದ್ಧಾರ |
| ೨೬. ಪಟಗಿ ಶ್ರೀನಿವಾಸರಾವ್ ಮನೆಯ ಪೂರ್ವಕ್ಕೆ | ಆಂಜನೇಯ ದೇವಾಲಯ | ಕ್ರಿ.ಶ.೧೭-೧೮ನೇ ಶತಮಾನ | ಜೀರ್ಣೋದ್ಧಾರ |

## ಶೈವ ದೇವಾಲಯಗಳು

| ಕ್ರ.ಸಂ | ಸ್ಥಳ | ಹೆಸರು | ಕಾಲ | ಸ್ಥಿತಿ |
|---|---|---|---|---|
| ೧. | ಮಹಾನವಮಿ ದಿಬ್ಬದ ಸಮೀಪ ಪಶ್ಚಿಮ ದಿಕ್ಕಿಗೆ ಕಾಮಲಾಪುರ | ಪ್ರಸನ್ನ ವಿರುಪಾಕ್ಷ ದೇವಾಲಯ | ಕ್ರಿ.ಶ.೧೩೩೬ ಶತಮಾನ | ಜೀರ್ಣೋದ್ಧಾರ |
| ೨. | ಸೀತಾರಾಂ ತಾಂಡದ ಪಶ್ಚಿಮ ದಿಕ್ಕು ಕಾಮಲಾಪುರ | ಮಲ್ಲಿಕಾರ್ಜುನ ದೇವಾಲಯ | ಕ್ರಿ.ಶ.೧೪-೧೫ ಶತಮಾನ | ಶಿಥಿಲವಾಗಿದೆ |
| ೩. | ರಾಣಿಸ್ನಾನ ಗೃಹ ಕಾಮಲಾಪುರ | ಚಂದ್ರಶೇಖರ ದೇವಾಲಯ | ಕ್ರಿ. ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |
| ೪. | ಗಜಶಾಲೆಯ ಹಿಂಬದಿ ಕಾಮಲಾಪುರ | ಶೈವ ದೇವಾಲಯ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋ |
| ೫. | ಪ್ರಾಥಮಿಕ ಶಾಲೆಯ ೨ನೇ ವಾರ್ಡ್ ಹತ್ತಿರ ಕಾಮಲಾಪುರ | ಈಶ್ವರ ದೇವಾಲಯ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋಧ್ಧಾರ |
| ೬. | ಕೋಟೆಯ ಮಧ್ಯೆ, ಕಾಮಲಾಪುರ | ನಗರೇಶ್ವರ ದೇವಾಲಯ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |
| ೭. | ರಾಮನಗರಕ್ಕೆ ಹೋಗುವ ರಸ್ತೆಯ ಬಲಬದಿಯ ಎತ್ತರದ ಬೆಟ್ಟದಲ್ಲಿ | ವೀರಭದ್ರ ದೇವಾಲಯ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |
| ೮. | ನಗರೇಶ್ವರ ದೇವಾಲಯ ಆವರಣ ಕಾಮಲಾಪುರ | ವೀರಭದ್ರ ದೇವಾಲಯ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |
| ೯. | ಆರ್.ಕೆ.ಎಚ್.ಇ.ಪಿ.ಶಾಲೆ ಕಾಮಲಾಪುರ | ವೀರಭದ್ರ ದೇವಾಲಯ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |

## ಶಾಕ್ತ ದೇವಾಲಯಗಳು

| ಕ್ರ.ಸಂ | ಸ್ಥಳ | ಹೆಸರು | ಕಾಲ | ಸ್ಥಿತಿ |
|---|---|---|---|---|
| ೧. | ಹಜಾರರಾಮ ದೇವಾಲಯ ಮತ್ತು ಒಳಾಂಗಣದ ಮಧ್ಯೆ ಕಾಮಲಾಪುರ | ಪಟ್ಟಣದ ಎಲ್ಲಮ್ಮ ದೇವಾಲಯ | ಕ್ರಿ.ಶ.೧೪-೧೫ನೇ ಶತಮಾನ | ಜೀರ್ಣೋದ್ಧಾರ |
| ೨. | ಹಜಾರರಾಮ ದೇವಾಲಯದ ಆವರಣ, ಕಾಮಲಾಪುರ | ಅಮ್ಮನವರ ದೇವಾಲಯ | ಕ್ರಿ.ಶ.೧೪-೧೫ನೇ ಶತಮಾನ | ಸುಸ್ಥಿತಿ |
| ೩. | ರಾಮನಗರ ಬಸ್ ನಿಲ್ದಾಣದ ಹಿಂದುಗಡೆಯ ಎತ್ತರದ ಬೆಟ್ಟದ ಮೇಲೆ, ಕಾಮಲಾಪುರ | ದೇವಿ ದೇವಾಲಯ | ಕ್ರಿ.ಶ.೧೬ನೇ ಶತಮಾನ | ಸುಸ್ಥಿತಿ |

| | | | | |
|---|---|---|---|---|
| ೪. | ಜೀರು ದೊಡ್ಡ ಹನುಮಂತಪ್ಪನ ಮನೆಯ ಹತ್ತಿರ, ಕಾಮಲಾಪುರ | ಕಾಳಿಕಾದೇವಿ ದೇವಾಲಯ | ಕ್ರಿ.ಶ.೧೬-೧೭ನೇ ಶತಮಾನ | ಜೀರ್ಣೋದ್ಧಾರ |
| ೫. | ಕಮ್ಮಾರು ದಿಮ್ಮೆಯ ಹಿಂಭಾಗದಲ್ಲಿ, ಕಾಮಲಾಪುರ | ಕಾಳಿಕಾದೇವಿ ದೇವಾಲಯ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |

**ಜೈನ ದೇವಾಲಯಗಳು**

| ಕ್ರ.ಸಂ | ಸ್ಥಳ | ಹೆಸರು | ಕಾಲ | ಸ್ಥಿತಿ |
|---|---|---|---|---|
| ೧. | ವೆಂಕಟಾಪುರಕ್ಕೆ ಹೋಗುವ ದಾರಿಯ ಬಲಬದಿಯಲ್ಲಿ ಕಾಮಲಾಪುರ | ಗಾಣಗಿತ್ತಿ ಕುಂತಕ ನಾಥ ಜಿನಬಸದಿ | ಕ್ರಿ.ಶ.೧೩೪೨ ಶತಮಾನ | ಜೀರ್ಣೋದ್ಧಾರ |
| ೨. | ಆನೆಲಾಯದ ಹಿಂಬದಿ, ಕಾಮಲಾಪುರ | ಪಾರ್ಶ್ವನಾಥ ಜೈನ ಬಸದಿ | ಕ್ರಿ.ಶ.೧೪೩೬ ಶತಮಾನ | ಜೀರ್ಣೋದ್ಧಾರ |
| ೩. | ವೈಷ್ಣವ ದೇವಾಲಯದ ಹಿಂಬದಿ, ಕಾಮಲಾಪುರ | ಜೈನ ಬಸದಿ | ಕ್ರಿ.ಶ.೧೫ನೇ ಶತಮಾನ | ಜೀರ್ಣೋದ್ಧಾರ |
| ೪. | ಗಜಶಾಲೆಯ ಹಿಂಬದಿ ಕಾಮಲಾಪುರ | ಜೈನ ಬಸದಿ | ಕ್ರಿ.ಶ.೧೫ನೇ ಶತಮಾನ | ಜೀರ್ಣೋದ್ಧಾರ |
| ೫. | ರಾಮನಗರದ ಬಸ್ ನಿಲ್ದಾಣದ ರಸ್ತೆಯ ಎಡಬದಿ, ಕಾಮಲಾಪುರ | ಜೈನ ಬಸದಿ ಶತಮಾನ | ಕ್ರಿ.ಶ.೧೫ನೇ | ಸುಸ್ಥಿತಿ |
| ೬ | ವರದರಾಜಮ್ಮ ಪಟ್ಟಣದಲ್ಲಿ ಪವರ್‌ಹೌಸ್ ಹಿಂದುಗಡೆಯ ಒವರ್ ಟ್ಯಾಂಕ್‌ನ ಗುಡ್ಡದ ಬದಿಗೆ | ಜೈನ ಬಸದಿ ಶತಮಾನ | ಕ್ರಿ.ಶ.೧೬ನೇ | ಜೀರ್ಣೋದ್ಧಾರ |

**ಪೀಠಿಕೆ**

ಬಗ್ಗೆ ವಿದೇಶಿ ಪ್ರವಾಸಿಗರ ಪ್ರಕಾರ ವಿಜಯನಗರದ ಕೋಟೆ ಏಳು ಸುತ್ತುಗಳಿಂದ ಸುತ್ತ ಮುತ್ತಲಿನ ಪ್ರದೇಶವನ್ನು ಆವರಿಸಲ್ಪಟ್ಟಿದ್ದು ಈಗ ಕೇವಲ ಕೆಲವು ಸುತ್ತುಗಳು ಮಾತ್ರ ಉಳಿದುಕೊಂಡಿವೆ. ಅಳ್ವೇರಿಗಳು ಬಹಳ ದಪ್ಪವಾಗಿದ್ದು ಹೊರಮೈಗೆ ದಪ್ಪ ಕಲ್ಲುಗಳಿದ್ದು ಒಳಮೈಗೆ ಮಣ್ಣಿನ ಇಳಿವೊರೆ (ramp) ಇದೆ. ಹೊರೆ ಭಾಗದಲ್ಲಿ ದೊಡ್ಡ ಕಲ್ಲುಗಳ ಮಧ್ಯದಲ್ಲಿ ಯಾವುದೇ ಗಾರೆಯನ್ನು ಉಪಯೋಗಿಸದೇ ಒಂದು ಕಲ್ಲು ಮತ್ತೊಂದರ ಜೊತೆಗೆ ಸರಿಯಾಗಿ ಹೊಂದಿಕೊಳ್ಳುವಂತೆ ಸಂದುಗಳಿಲ್ಲದೆ ಕಟ್ಟಲಾಗಿದೆ. ದೊಡ್ಡ ಕಲ್ಲುಗಳನ್ನು ಮೇಲಕ್ಕೆ ಎತ್ತುವಾಗ ಆಗುವ ಭಾರವನ್ನು ಕಡಿಮೆ ಮಾಡುವುದಕ್ಕಾಗಿ ಬೆಣೆಯಾಕಾರದ (Wedge shaped) ಕಲ್ಲುಗಳನ್ನು ಬಹಳ ಜಾಣ್ಮೆಯಿಂದ ಆಯತಾಕಾರದ ಕಲ್ಲುಗಳ ಬದಲಿಗೆ ಉಪಯೋಗಿಸಲಾಗಿದೆ. ಇವುಗಳ ಹೊರಭಾಗ ಅಗಲವಿದ್ದು ಒಳಭಾಗ ಚೂಪಾಗಿರುತ್ತದೆ. ಒಳಭಾಗದಲ್ಲಿ ಕಲ್ಲುಗಳ ಮಧ್ಯದ ಸಂದುಗಳನ್ನು ಸುಣ್ಣ, ಕಲ್ಲು, ಮಣ್ಣಿನಿಂದ ತುಂಬಲಾಗಿದೆ. ಕೋಟೆ ಗೋಡೆಯ ಭದ್ರತೆಯನ್ನು ಹೆಚ್ಚಿಸುವ ಸಲುವಾಗಿ ಅಲ್ಲಲ್ಲಿ ಚೌಕಾಕಾರದ ಕೊತ್ತಲಗಳನ್ನು ನಿರ್ಮಿಸಲಾಗಿದೆ. ಈ

ಕೊತ್ತಲುಗಳು ಚೌಕಾಕಾರವಾಗಿದ್ದು ಮುಂದೆ ಚಾಚಿಕೊಂಡಿರುವ ಕೋಟೆ ಗೋಡೆಯ ಭಾಗಗಳಾಗಿರುತ್ತದೆ. ಯುದ್ಧದ ಸಂದರ್ಭದಲ್ಲಿ ಹೆಚ್ಚು ಸೈನಿಕರು ನಿಲ್ಲಲು ಸಹ ಈ ಕೊತ್ತಲಗಳು ಸಹಕಾರಿಯಾಗುತ್ತಿದ್ದವು. ಕೊತ್ತಲಗಳ ಮೇಲೆ ಕಾವಲಿನವರು ನಿಂತು ಕೋಟೆಯನ್ನು ಸಂರಕ್ಷಿಸುತ್ತಿದ್ದರು. ಇವರಿಗಾಗಿ ನಿರ್ಮಿಸಿದ ಚಿಕ್ಕ ಕಟ್ಟಡಗಳ ಅವಶೇಷಗಳು ಕೊತ್ತಳಗಳ ಮೇಲೆ ಈಗಲೂ ಕಾಣುತ್ತಿವೆ. ಕೋಟೆಯ ಪಕ್ಕದಲ್ಲಿ ನೈಸರ್ಗಿಕವಾಗಿ ಎತ್ತರದಲ್ಲಿರುವ ಕೆಲವು ಸ್ಥಳಗಳನ್ನು ಸಹ ಕೊತ್ತಳಗಳಂತೆ ಉಪಯೋಗಿಸಲಾಗಿದೆ. ಕೋಟೆ ಗೋಡೆಗಳಲ್ಲಿರುವ ಬಾಗಿಲುಗಳು ಒಂದೇ ತರವಿಲ್ಲ.

ಹೆಬ್ಬಾಗಿಲುಗಳು ಅತಿ ದೊಡ್ಡವು. ಇವುಗಳನ್ನು ಮುಖ್ಯ ಪ್ರವೇಶದ್ವಾರಗಳಾಗಿ ಉಪಯೋಗಿಸುತ್ತಿದ್ದರು. ಬಾಗಿಲುಗಳು ಮಧ್ಯಮ ಗಾತ್ರದವು. ದಿಡ್ಡಿಗಳು ಚಿಕ್ಕ ಬಾಗಿಲುಗಳಾಗಿದ್ದು ಜನರು ತಮ್ಮ ದಿನ ನಿತ್ಯದ ಕೆಲಸಗಳಿಗಾಗಿ ಪಟ್ಟಣದ ಎಲ್ಲಾ ದಿಕ್ಕಿಗೂ ಸುಲಭವಾಗಿ ಹೋಗಲು ಅನುಕೂಲವಾಗುವಂತೆ ನಿರ್ಮಿಸಲ್ಪಟ್ಟಿವೆ. ಹೆಬ್ಬಾಗಿಲು, ಬಾಗಿಲು ಮತ್ತು ದಿಡ್ಡಿಗಳ ವಿನ್ಯಾಸವನ್ನು ಯುದ್ಧ ತಂತ್ರದ ದೃಷಿವಿಯಿಂದ ಬಹಳ ಎಚ್ಚರಿಕೆಯಿಂದ ಮಾಡಲಾಗಿದೆ. ಕೋಟೆಯೊಳಗೆ ನೇರವಾದ ಪ್ರವೇಶವನ್ನು ಇವು ನೀಡುವುದಿಲ್ಲ ದೂರದಿಂದ ನೋಡಿದಾಗ ಪ್ರವೇಶದ್ವಾರವೇ ಕಾಣುವುದಿಲ್ಲ. ಪ್ರವೇಶದ್ವಾರದ ಎರಡೂ ಪಾರ್ಶ್ವದಲ್ಲಿ ಮತ್ತು ಮುಂಭಾಗದಲ್ಲಿ ಅದೇ ರೀತಿಯ ಗೋಡೆಗಳನ್ನು ಕಟ್ಟಿ ಅದನ್ನು ಮರೆಮಾಡಿ ಗೋಡೆಯಲ್ಲಿ ಎರಡನೆಯ ಪ್ರವೇಶದ್ವಾರವನ್ನು ಕಲ್ಪಿಸಲಾಗಿದೆ.

ಎರಡನೇ ದ್ವಾರವು ಪಾರ್ಶ್ವದಲ್ಲಿರುವುದರಿಂದ ಇದೂ ಸಹ ದೂರದಿಂದ ಕಾಣುವುದಿಲ್ಲ. ಹೀಗಾಗಿ ಒಳಗೆ ಬರುವ ದಾರಿಯು ಅಂಕು ಡೊಂಕಾಗಿದೆ. ಸಾಮಾನ್ಯವಾಗಿ ಬಾಗಿಲುಗಳ ಪಾರ್ಶ್ವದಲ್ಲಿ ಎರಡು ದೊಡ್ಡ ಕೊತ್ತಲಗಳಿವೆ. ಬಾಗಿಲಿನ ಮೂಲಕ ಅಂಕುಡೊಂಕಾದ ದಾರಿಯಲ್ಲಿ ಒಳ ಪ್ರವೇಶಿಸಲು ಪ್ರಯತ್ನಿಸುವ ವೈರಿ ಪಡೆಯನ್ನು ಕೋಟೆ ಗೋಡೆಯ ಮತ್ತು ಕೊತ್ತಲಗಳ ಮೇಲೆ ಸಂರಕ್ಷಣೆಗಾಗಿ ನಿಂತ ಸೈನಿಕರು ಸುಲಭವಾಗಿ ಸದೆಬಡಿಯಲು ಅನುಕೂಲವಾಗುತ್ತಿತ್ತು. ಬಾಗಿಲುಗಳಲ್ಲಿ ಕಾವಲುಗಾರರಿದ್ದು ಇವರು ಖಡ್ಗ ದೊಣ್ಣೆ ಮತ್ತು ಚಾವಟಿಗಳನ್ನು ಹಿಡಿದುಕೊಂಡು ನಿಂತಿರುತ್ತಿದ್ದರು. ಇಂತಹ ಕೆಲವು ಶಿಲ್ಪಗಳನ್ನು ಬಾಗಿಲು ತೋಳು ಗಂಭಗಳ ಮೇಲೆ ಕೆತ್ತಲಾಗಿದೆ. ಪ್ರವೇಶ ದ್ವಾರಗಳು ಕಂಭ ಮತ್ತು ತೊಲೆಗಳಿಂದ ಇಟ್ಟಿಗೆ ಗಾರೆ ಬಳಸದೆ ಹಿಂದು ಶೈಲಿಯಲ್ಲಿ ಕಟ್ಟಲಾಗಿದೆ. ಬಾಗಿಲು ತೋಳುಗಳ ಮೇಲೆ ದ್ವಾರಪಾಲಕರು ಮತ್ತು ಅಲಂಕಾರಿಕ ಶಾಖೆಗಳನ್ನು ಕೆತ್ತಿದೆ. ಪ್ರವೇಶದ ಇಕ್ಕೆಲುಗಳಲ್ಲಿ ಕಂಬಗಳ ಅಂಕಣ ಮತ್ತು ಕಟ್ಟೆಗಳಿವೆ. ನೇರ ಪ್ರವೇಶದ ಕದನಗಳನ್ನು ಹಾಕಿದಾಗ ಬಳಸಲು ಪಕ್ಕದಲ್ಲಿ ಎಲ್ (L) ಅಥವಾ ಯು (U) ಆಕಾರದ ಉಪ ಪ್ರವೇಶಗಳನ್ನು ಒದಗಿಸಿವೆ. ಕೆಲವು ಪ್ರವೇಶ ದ್ವಾರಗಳ ರಚನೆಯಲ್ಲಿ ಮುಸ್ಲಿಂ ವಾಸ್ತುನ ಪ್ರಭಾವವೂ ಕಾಣುತ್ತದೆ. ಗುಮ್ಮಟ ಬಾಗಿಲೆಂದೇ ಕರೆಯುವ ಪ್ರವೇಶ ದ್ವಾರದ ಮೇಲಿನ ಗುಮ್ಮಟ ಮತ್ತು ಬೇಟೆಕಾರರ ಹೆಬ್ಬಾಗಿಲು ಮತ್ತು ಅರೆ ಶಂಕರ ಬಾಗಿಲುಗಳ ಮೇಲಿನ ಕಮಾನುಗಳು ಮುಸ್ಲಿಂ ಶೈಲಿಯಲ್ಲಿವೆ. ಕೆಲವು ಬಾಗಿಲುಗಳ ಗೋಡೆಗಳನ್ನು ಶಿಲ್ಪಗಳಿಂದ ಅಲಂಕರಿಸಿದೆ ಮತ್ತು ಬಾಗಿಲುಗಳ ಆವರಣದಲ್ಲಿ ದೇವಾಲಯಗಳಿವೆ. ಕಮಲಾಪುರದಲ್ಲಿ ಕಂಡು ಬರುವ ಕೋಟೆ ಕೊತ್ತಲಗಳು ಮತ್ತು ಹೆಬ್ಬಾಗಿಲುಗಳ ಬಗ್ಗೆ ಸವಿಸ್ತಾರವಾದ ವಿವರಗಳನ್ನು ಶಾಸನ ಮತ್ತು ಇತರ ಆಧಾರಗಳ ಮೇಲೆ ಮಾಡಿದ ಅಧ್ಯಯನ ಇದಾಗಿದೆ.

**ಕೋಟೆ:** ರಾಜ್ಯದ ಅತ್ಯಾವಶ್ಯಕವಾದ ಸಪ್ತಾಂಗಗಳಲ್ಲಿ ದುರ್ಗವೂ ಒಂದು.[೫೬] ಬದ್ರವಾದ ಕೋಟೆಯಿಲ್ಲದ ರಾಜನನ್ನು ಬಿರುಗಾಳಿಗೆ ಸಿಕ್ಕಿದ ಮೋಡಕ್ಕೆ ಸಮಾನ. ಕೋಟೆಯಿಲ್ಲದ ರಾಜನನ್ನು ಬಿರುಗಾಳಿಗೆ ಸಿಕ್ಕಿದ ಮೋಡಕ್ಕೆ ಸಮಾನ. ಕೋಟೆಯಿಲ್ಲದ ರಾಜನನ್ನು ವಿಷ ರಹಿತವಾದ ಹಾವಿನಂತೆ ಅಥವಾ ಮದ ರಹಿತವಾದ ಆನೆಯಂತೆ ಸುಲಭವಾಗಿ ಪಳಗಿಸಿಕೊಳ್ಳಬಹುದು. ರಕ್ಷಣೆಯ ದೃಷ್ಟಿಯಿಂದ ಕೋಟೆಯ ಪಾತ್ರ ಮಹತ್ವದ್ದು. ಕೋಟೆಗಳನ್ನು ಕಟ್ಟಲು ಸ್ಥಳಗಳ ಆಯ್ಕೆಯ ಅವಶ್ಯಕತೆ, ವಿವಿಧ ಪ್ರಕಾರದ ಕೋಟೆಗಳ ಕುರಿತು ಪ್ರಾಚೀನ ಕೃತಿಗಳಲ್ಲಿ ಪ್ರಸ್ತಾಪಿಸಲಾಗಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ರಾಜ್ಯದ ನಾಲ್ಕು ದಿಕ್ಕುಗಳಲ್ಲಿ ವೈರಿ ಪಡೆಯನ್ನು ತಡೆಯಲು ಭದ್ರವಾದ ಕೋಟೆಗಳನ್ನು ನಿರ್ಮಿಸಬೇಕೆಂದಿದೆ. ಅಲ್ಲದೆ ಔಧಕ, ಪಾರ್ವತ, ಧಾನ್ವದ ಮತ್ತು ವನ ಎಂಬ ನಾಲ್ಕು ಪ್ರಕಾರದ ಕೋಟೆಗಳ ವಿವರಗಳನ್ನು ಪ್ರಸ್ತಾಪಿಸಲಾಗಿದೆ. ಮನುಸ್ಮೃತಿಯಲ್ಲಿ ಸ್ಥಳ ಕಟ್ಟಲು ಉಪಯೋಗಿಸಿದ ಸಾಮಗ್ರಿ ಮತ್ತು ಸಂರಕ್ಷಣಾ ವಿಧಾನಗಳ ಆಧಾರದ ಹಿನ್ನೆಲೆಯಲ್ಲಿ ಧನು, ಮಹೀ, ಜಲ, ವೃಕ್ಷ, ನರ, ಗಿರಿ ಎಂಬ ಆರು ಪ್ರಕಾರದ ಕೋಟೆಗಳನ್ನು ಪ್ರಸ್ತಾಪಿಸಲಾಗಿದೆ.

ಐರಿಣಿ, ಪರಿಖ, ಪರಿಘ, ವನ, ಧನ್ವ, ಜಲ, ಗಿರಿ, ಸೈನ್ಯ ಸಹಾಯ ಎಂಬ ಒಂಬತ್ತು ಪ್ರಕಾರದ ಕೋಟೆಗಳನ್ನು ಶುಕನೀತಸಾರ ಪರಿಚಯಿಸಿದೆ. ದುರ್ಗಸಿಂಹನು ತನ್ನ ಪಂಚತಂತ್ರ ಕೃತಿಯಲ್ಲಿ ಜಲದುರ್ಗ, ಗಿರಿದುರ್ಗ, ಸ್ಥಳದುರ್ಗ, ವನದುರ್ಗ ಎಂಬ ಎಂಟು ಪ್ರಕಾರದ ಕೋಟೆಗಳನ್ನು ಉಲ್ಲೇಖಿಸಿದ್ದಾನೆ. ಮಾನಸೋಲ್ಲಾಸಕೃತಿಯಲ್ಲಿ ಜಲದುರ್ಗ, ಗಿರಿದುರ್ಗ, ಪಾಷಾಣುದುರ್ಗ, ಇಷ್ಟಕದುರ್ಗ, ವೃತ್ತಿಕಾಮಯಮದುರ್ಗ, ವನದುರ್ಗ, ಮರದುರ್ಗ, ದಾರುಮಯದುರ್ಗ ನರದುರ್ಗ, ಎಂಬ ಒಂಬತ್ತು ಪ್ರಕಾರದ ಕೋಟೆಗಳನ್ನು ಎರಡನೇ ಸೋಮೇಶ್ವರನು ತಿಳಿಸಿದ್ದಾನೆ.[೫೭] ಕೋಟೆ ಎಂಬುದು ರಕ್ಷಣಾವರಣ. ರಕ್ಷಣೆಗಾಗಿ ಮುಡುಪಾಗಿಡುವ ಸ್ಥಳವೇಕೋಟೆ. ಪ್ರಾಚೀನ ಕಾಲದ ಜನರು ತಮ್ಮನ್ನು ರಕ್ಷಿಸಿಕೊಳ್ಳಲು ಶತ್ರುಗಳಿಂದ ಕಾಡು ಪ್ರಾಣಿಗಳಿಂದ ಕಾಪಾಡಿಕೊಳ್ಳಲು, ಕೋಟೆಯನ್ನು ಕಟ್ಟಲು ಪ್ರಾರಂಭಿಸಿದರು. ನಂತರ ಊರುಗಳು ಬೆಳೆದು, ಹಲವು ಊರುಗಳು ಒಟ್ಟುಗೂಡಿ, ರಾಜ್ಯ ಸ್ಥಾಪನೆಯಾದ ಮೇಲೆ ಅದನ್ನು ಸಂರಕ್ಷಿಸಿಕೊಳ್ಳಲು ಗಡಿ ಪ್ರದೇಶದಲ್ಲಿ ಭದ್ರವಾದ ಕೋಟೆಗಳನ್ನು ಕಟ್ಟಿಸಲು ಪ್ರಾರಂಭಿಸಿದರು.[೫೮] ಶುಕ್ರನೀತಿ ಸಾರದಲ್ಲಿ ಹೇಳುವಂತೆ ಅನೇಕ ಬಗೆಯ ಗಿಡ-ಮರಗಳ ಪೊದರುಗಳಿಂದ ಸಂಮೃದ್ಧವಾಗಿರುವ ಪ್ರದೇಶಗಳಲ್ಲಿ ಕೋಟೆಗಳನ್ನು ಕಟ್ಟಬೇಕು ಎಂದಿದೆ. ಶಕ್ತಿ ಪೂಜಕರಾದ ಕನ್ನಡಿಗರು ವಾಸ್ತವದಲ್ಲಿ ದುರ್ಗ ಹೀನರಾಗದೇ, ದುರ್ಗಗಳನ್ನು ಕಟ್ಟಿ, ಅವುಗಳ ಶಕ್ತಿ ರೂಪಿಣಿ ದುರ್ಗ ಎಂತಲೇ ಹೆಸರಿಸಿದ್ದಾರೆ.

**ಕೊತ್ತಲುಗಳು:** ಕೋಟೆ ಗೋಡೆಯ ಭದ್ರತೆಯನ್ನು ಹೆಚ್ಚಿಸುವ ಸಲುವಾಗಿ ಕೊತ್ತಲಗಳು ಚೌಕಾಕಾರವಾಗಿ ನಿರ್ಮಾಣವಾಗಿರುತ್ತವೆ. ಅಂದು ಸೈನಿಕರು ನಿಲ್ಲಲು ಉಪಯೋಗಿಸಲಾಗುತ್ತಿತ್ತು. ಒಟ್ಟಾರೆ ಕೋಟೆಯ ವ್ಯಾಖ್ಯೆ ಮತ್ತು ಕೋಟೆಯ ಮಹತ್ವವನ್ನು ಕುರಿತಂತೆ ಸಾಹಿತ್ಯಿಕ ಆಕರಗಳ ಜೊತೆಗೆ ಶಾಸನಗಳೂ ಇದನ್ನು ಪುಷ್ಟೀಕರಿಸುತ್ತವೆ. ಪ್ರಸ್ತುತ ಕಾಮಲಾಪುರ ಗ್ರಾಮದಲ್ಲಿ ಲಭ್ಯವಾದ ಶಾಸನಗಳು-ಕೋಟೆ-ಕೊತ್ತಲ-ಹೆಬ್ಬಾಗಿಲುಗಳ ಹೆಸರುಗಳನ್ನು ಉಲ್ಲೇಖಿಸಿವೆ.

ಕ್ರಿ.ಶ.೧೩೮೦ರ ಶಾಸನದಲ್ಲಿ ಹರಿಹರ ರಾಯನ ಆಳ್ವಿಕೆಯಲ್ಲಿ ಮಲಿಗೆಯ ನಾಯ್ಕನ ಮಗ ಬಥ್ಯೆಯನಾಯ್ಕನು ಬೇಟೆಗಾರರ ಹೆಬ್ಬಾಗಿಲ ಪೂರ್ವದಿಕ್ಕಿನಲ್ಲಿ ಒರತೆಯ ಮೈಲಾರ ದೇವರನ್ನು ಪ್ರತಿಷ್ಠಾಪಿಸಿದ ಉಲ್ಲೇಖವಿದೆ.[೫೯]

ಕ್ರಿ.ಶ.೧೪ನೇ ಶತಮಾನದ ಶಾಸನವು ವೀರಬುಕ್ಕ ರಾಯನು ವಿಜಯನಗರದ ಪಟ್ಟಣದ ಪೂರ್ವಕ್ಕಿರುವ ಸೋಮವಾರದ ಬಾಗಿಲ ಉತ್ತರಕ್ಕಿರುವ ಸೋಮದೇವರ ಕೊತ್ತಲವನ್ನು ಉಲ್ಲೇಖಿಸಿದೆ.[೬೦] ಈ ಶತಮಾನಕ್ಕೆ ಸೇರಿದ ಇನ್ನೊಂದು ಶಾಸನ ವೀರ ಬುಕ್ಕರಾಯನ ಕಾಲದಲ್ಲಿ ಸಿಂಘಾರದ ಹೆಬ್ಬಾಗಿಲಿನ ಉತ್ತರಕ್ಕೆ ಮೂಲೆಯ ಬಂಡೆಯ ಮೇಲಿರುವ ಆನೆಗೊಂದಿಯ ಕೊತ್ತಳಕ್ಕೆ ಮಂಗಳದಾಯಕವಾಗಲೆಂದು ತಿಳಿಸುತ್ತದೆ.[೬೧] ಈ ಶತಮಾನಕ್ಕೆ ಸೇರಿದ ಮತ್ತೊಂದು ಶಾಸನ ಜಡೆ ಶಂಕರ ದೇವರ ಹೆಸರಿನ ದಿಡ್ಡಿಯ ಬಾಗಿಲನ್ನು ಹೆಸರಿಸುತ್ತದೆ.[೬೨] ಹಂಪಾದೇವಿಯ ಹೆಸರಿನ ದಿಡ್ಡಿ (ಬಾಗಿಲ) ಕೂಡ ಶಾಸನದಲ್ಲಿದೆ.[೬೩] ಕ್ರಿ.ಶ ೧೪ನೇ ಶತಮಾನದ ಮತ್ತೊಂದು ಶಾಸನದಲ್ಲಿ ಮಾತಂಗ ದೇವರ ಕೊತ್ತಳ ಎಂದು ಉಲ್ಲೇಖಿಸಲಾಗಿದೆ.[೬೪]

ಕ್ರಿ.ಶ.೧೪ನೇ ಶತಮಾನದಲ್ಲಿ ಕೊತ್ತಳವನ್ನು ಪ್ರತಾಪ ಕೊತ್ತಳವೆಂದು ಕರೆಯಲಾಗಿದೆ.[೬೫] ಮದನದ ಹೆಸರಿನ ಕೊತ್ತಳವನ್ನು ಕ್ರಿ.ಶ೧೪ನೇ ಶತಮಾನದ ಶಾಸನದಲ್ಲಿ ಉಲ್ಲೇಖಿಸಲಾಗಿದೆ.[೬೬] ಸಂಖರ ದೇವರ ಕೊತ್ತಳ ಎಂದು ಕ್ರಿ.ಶ ೧೪ನೇ ಶತಮಾನದ ಶಾಸನದಲ್ಲಿ ದಾಖಲಿಸಿದೆ.[೬೭] ವಿಖಿರದ ಗಂಡನ ಹೆಸರಿನ ಕೊತ್ತಳದ ಉಲ್ಲೇಖವು ೧೪ನೇ ಶತಮಾನದ ಶಾಸನದಲ್ಲಿ ಕಂಡುಬಂದಿದೆ.[೬೮] ಕ್ರಿ.ಶ.೧೪ನೇ ಕಾಲದ ಶಾಸನದಲ್ಲಿ ಹರಿಹರ ರಾಯನು ಹೊಡೆಯ ಬಾಗಿಲಿನ ವಿನಾಯಕ ದೇವರಿಗೆ ಭೂ-ದಾನ ನೀಡಿದ ಉಲ್ಲೇಖವಿದೆ.[೬೯] ಕ್ರಿ.ಶ.೧೫೩೧ರ ಶಾಸನವು ವೋಳಕೋಟೆ ಎಂಬ ಹೆಸರಿನ ಗ್ರಾಮದ ಉಲ್ಲೇಖವಿದ್ದ ಶಾಸನವಾಗಿದೆ. ೮೦ ಕ್ರಿ.ಶ.೧೫-೧೬ ಶತಮಾನದ ಶಾಸನದಲ್ಲಿ ಕೋಟೆ ಶಂಕರ ದೇವರ ಬಾಗಿಲು ಎಂದು ಉಲ್ಲೇಖಿಸಿದೆ.[೭೦] ಕಿ.ಶ.೧೫-೧೬ನೇ ಶತಮಾನದ ಶಾಸನದಲ್ಲಿ ಕೋಟೆ ಶಂಕರದೇವರ ಬಾಗಿಲು ಎಂದು ಬರೆದಿದೆ.[೭೧] ೧೫-೧೬ನೇ ಶತಮಾನದ ಮತ್ತೊಂದು ಶಾಸನ ಸ್ವಾಮಿ ದ್ರೋಹನ ಗಂಡನ ಕೊತ್ತಳವೆಂದು ಕೊತ್ತಳವನ್ನು ಉಲ್ಲೇಖವಿದೆ.[೭೨] ಕ್ರಿ.ಶ.೧೪-೧೫ನೇ ಶತಮಾನದ ಶಾಸನದಲ್ಲಿ ಮಳಲ ವಿನಾಯಕ ಕೊತ್ತಳ ಎಂದು ಬರೆದಿದೆ.[೭೩] ಕ್ರಿ.ಶ.೧೫ನೇ ಶತಮಾನದ ವೊಳಕೋಟೆಯ ರೆಮ್ಮುದಿಡ್ಡಿ ಎಂಬ ಹೆಸರನ್ನು ಉಲ್ಲೇಖಿಸುತ್ತದೆ.[೭೪] ಕ್ರಿ.ಶ.೧೫೪೯ರ ಶಾಸನದಲ್ಲಿ ವರದರಾಜಮ್ಮನ ಪಟ್ಟಣಕ್ಕೆ ಪೂರ್ವಪೆನುಗೊಂಡೆ ಬಾಗಿಲು ಬಳಿ ಎಂಬ ಪದದ ಉಲ್ಲೇಖವನ್ನು ಗುರುತಿಸುತ್ತದೆ.[೭೫] ೮೬ ಹಲವಾರು ಶಾಸನಗಳು ಇಲ್ಲಿನ ಕೋಟೆ-ಕೋಟೆ ಬಾಗಿಲು-ಕೊತ್ತಲಗಳನ್ನು ಹೆಸರಿಸಿದೆ. ಪ್ರಸ್ತುತ ವಿಜಯನಗರ ಕಾಲಕ್ಕೆ ಸೇರಿದ ಕಾಮಲಾಪುರದ ಕೋಟೆಯ ಕುರಿತು ಇಲ್ಲಿ ಸೆರೆಡಿಹಿಯಲಾಗಿದೆ. ಈ ಕೋಟೆ ಪ್ರಸ್ತುತ ಕಾಮಲಾಪುರ ಗ್ರಾಮದ ಮಹಾನವಮಿದಿಬ್ಬದ ಅರಮನೆಯ ಪ್ರದೇಶದ ರಾಣಿ ಸ್ನಾನ ಗೃಹ, ಆನೆಸಾಲಿನ ಹಿಂದಿನ ಜೈನ ದೇವಾಲಯ ಭೂಮಿಯ ಕೆಳಮಟ್ಟ ದೇವಾಲಯದ ಪ್ರದೇಶವನ್ನು ಆವರಿಸಿದೆ.

**ಕಾಮಲಾಪುರದ ಕೋಟೆ:** ಕ್ರಿ.ಶ.೧೫೬೫ರ ನಂತರ, ವಿಜಯನಗರ ಅವಸಾನದತ್ತ ನಡೆದಿರುವಾಗ ಅನೇಕ ಪಾಳೆಯಗಾರರು ಸ್ವತಂತ್ರರಾದರು. ಈ ಹಿನ್ನೆಲೆಯಲ್ಲಿ ಕುರುಗೋಡಿನ ಪರಿಗಣೆಯಲ್ಲಿ

ಕಾಮಲಾಪುರವೂ ಸೇರಿತು. ಕುರುಗೋಡಿನ ಪರಿಗಣೆಯನ್ನು ಆಳುತ್ತಿದ್ದ ಚಿನ್ನರಾಯ ಕ್ರಿ.ಶ೧೭೦೩ರಲ್ಲಿ ಕಾಮಲಾಪುರದ ಕೋಟೆ ಹುಲಿಮುಖ ಕೋಟೆಗಳನ್ನು ಕಟ್ಟಿಸಿದನೆಂದು ಕೈಫಿಯತ್ ಉಲ್ಲೇಖಿಸುತ್ತದೆ.[೨೬] ಕಾಮಲಾಪುರದ ಕೋಟೆಗೋಡೆ ಮೇಲಿರುವ ಗಂಡ ಭೇರುಂಡ ಚಿತ್ರ ವಿಜಯನಗರದ ಮೊದಲ ಆರಸರ ಚಿಹ್ನೆ ಎಂದರೆ ಈ ಕೋಟೆ ಸಂಗಮ ವಂಶಸ್ಥರ ಕಾಲದ್ದು ಎಂಬ ಅಭಿಪ್ರಾಯಕ್ಕೆ ಪುಷ್ಟಿಕೊಡುತ್ತದೆ.[೨೭] ಈ ಕೋಟೆ ವಿಜಯನಗರ ಕಾಲದಲ್ಲಿ ನಿರ್ಮಾಣಗೊಂಡಿದ್ದು ಪಾಳೆಗಾರರ ಅವಧಿಯಲ್ಲಿ ಜೀರ್ಣೋದ್ಧಾರ ಕಂಡಿದೆ.

**ಲಕ್ಷಣಗಳು:** ಇಪತ್ತು ಎಕರೆಯ ಪ್ರದೇಶದಿಂದ ವಿಸ್ತರಿಸಲ್ಪಟ್ಟ ಈ ಕೋಟೆಯು ಪರಿಘಾ (ನೆಲದುರ್ಗ) ಪ್ರಕಾರಕ್ಕೆ ಸೇರುತ್ತದೆ. ಚೌಕಾಕಾರದ ಕೋಟೆಯನ್ನು ಬೃಹತ್ ಮತ್ತು ಮಧ್ಯಮ ಗಾತ್ರದ ಕಲ್ಲು ಹಾಗೂ ಗಾರೆಗಳಿಂದ ನಿರ್ಮಿಸಲಾಗಿದೆ. ಕೋಟೆಯ ಮೇಲ್ಭಾಗದಲ್ಲಿ ಕೈಪಿಡಿಗೋಡೆಯನ್ನು ಇಟ್ಟಿಗೆ ಗಾರೆಗಳಿಂದ ಕಟ್ಟಿದ್ದರೂ ಹಾಳಾಗಿದ್ದು ಪ್ರಸ್ತುತ ಸ್ವಲ್ಪ ಮಟ್ಟಿಗೆ ಗೋಚರಿಸುತ್ತದೆ. ಕೋಟೆಯ ಉತ್ತರ ದಿಕ್ಕಿನಲ್ಲಿ ಗೋಡೆಯ ಮಧ್ಯದಲ್ಲಿ ದೊಡ್ಡ ಬಾಗಿಲಿದೆ. ದಕ್ಷಿಣ ದಿಕ್ಕಿನ ಗೋಡೆಯ ಮಧ್ಯದಲ್ಲಿ ಚಿಕ್ಕ ದಿಡ್ಡಿ ಇದ್ದಿತೆಂಬ ಬಗ್ಗೆ ಪ್ರತೀತಿ ಇದೆ. ಕೋಟೆಯ ಆಯಾ ಕಟ್ಟಿನ ಸ್ಥಳಗಳಲ್ಲಿ ಕೊತ್ತಳಗಳಿವೆ. ಕೋಟೆಯ ಸುತ್ತಲೂ ಕಂದಕವಿದೆ. ಉತ್ತರ ಬಾಗಿಲ ಮೇಲಿನ ಕೈಪಿಡಿಗೋಡೆಯಲ್ಲಿ ಚಿಕ್ಕ ಚಿಕ್ಕ ರಂಧ್ರಗಳಿವೆ. ಇಕ್ಕೆಲ ಗೋಡೆಗಳ ಮೇಲೆ ನವಿಲು, ಮೊಸಳೆ, ಮೀನು ಹಂಸಗಳ ಉಬ್ಬುಶಿಲ್ಪಗಳಿವೆ. ಬಾಗಿಲಿನ ಪೂರ್ವ ಮತ್ತು ಪಶ್ಚಿಮ ದಿಕ್ಕಿನಲ್ಲಿ ವೃತ್ತಾಕಾರದ ಕೊತ್ತಳಗಳಿವೆ. ಈ ಪ್ರದೇಶದ ಎರಡೂ ಬದಿಗೆ ಎತ್ತರವಾದ ಕಟ್ಟೆಗಳಿವೆ. ಈ ಕಟ್ಟೆಗಳಿಗೆ ಸರಿ ಹೊಂದಿಕೊಂಡು ನಗರೇಶ್ವರ ದೇವಾಲಯವಿದೆ.

ಈ ಪ್ರದೇಶವನ್ನು ಸ್ಥಳೀಯರು ಕ್ರಾಟೆ, ಕೋಟೆ ಎಂದು ಈಗಲೂ ಕರೆಯುವುದು ವಾಡಿಕೆ. ಮಧ್ಯಭಾಗದ ಕೊತ್ತಳ ಬೃಹದಾಕಾರವಾಗಿದ್ದು, ೬೦ ಅಡಿ ಎತ್ತರ ೧೫೦ಅಡಿ ಸುತ್ತಳತೆಯನ್ನು ಹೊಂದಿದೆ. ಕೊತ್ತಳದ ಮೇಲಕ್ಕೆ ಏರಲು ಅನುಕೂಲವಾಗುವಂತೆ ಪಶ್ಚಿಮ ದಿಕ್ಕಿಗೆ ಮೆಟ್ಟಿಲುಗಳನ್ನು ನಿರ್ಮಿಸಿ ಚಿಕ್ಕ ಬಾಗಿಲನ್ನು ಜೋಡಿಸಲಾಗಿದೆ. ಈ ಎತ್ತರದ ಪ್ರದೇಶದಲ್ಲಿ ನಿಂತು ನೋಡಿದರೆ, ಹಂಪೆ ಪ್ರದೇಶದ ಸುತ್ತಮುತ್ತಲಿನ ಎಲ್ಲಾ ಸ್ಮಾರಕಗಳ ದೃಶ್ಯಕಂಡುಬರುತ್ತದೆ. ಇದರಿಂದ ಈ ಕೊತ್ತಳದ ಉದ್ದೇಶವನ್ನು ಅರಿಯಬಹುದು. ಕೊತ್ತಳದ ಕಾಂಡ ಭಾಗದಲ್ಲಿ ಚಿಕ್ಕ ಗೂಡೊಂದು ನಿರ್ಮಿಸಿ ಇದರಲ್ಲಿಯ ಕಲ್ಲು ಗುಂಡನ್ನು 'ತಾಯಮ್ಮ' ಎಂದು ಆರಾಧಿಸುವ ಪ್ರತೀತಿ ಇಲ್ಲಿನ ಜನಪದರಲ್ಲಿದೆ.

**ವಿದೇಶಿ ಪ್ರವಾಸಿಗರ ವರ್ಣನೆ:** ಡಾಮಿಂಗೋ ಫಯಾಜ್ ವಿಜಯನಗರಕ್ಕೆ ಭೇಟಿ ನೀಡಿದ್ದ ಸಂದರ್ಭದಲ್ಲಿ ಕೆಳಮಟ್ಟದ ಭೂಮಿಯಲ್ಲಿ, ಎದೆ ಮಟ್ಟದ ಚೂಪಾದ ಕಲ್ಲುಗಳನ್ನು ನೆಟ್ಟಿದ್ದರು. ಇವು ಗುಡ್ಡ ಪ್ರದೇಶವನ್ನು ತಲುಪುವವರೆಗೆ ಮುಂದುವರೆದಿದ್ದವು. ಇಂತಹ ಕಲ್ಲುಗಳನ್ನು ಕುದುರೆ ಮತ್ತು ಮನುಷ್ಯರ ಚಲನೆಯನ್ನು ತಡೆಯಲು ನೆಟ್ಟಿದ್ದುದನ್ನು ಅಬ್ದುಲ್ ರಜಾಕ್ ಸಹ ದಾಖಲಿಸಿದ್ದಾನೆ. ಇಂತಹ ಕುದುರೆಕಲ್ಲುಗಳು ನಮಗೆ ಪ್ರಸ್ತುತ ಕಾಣಸಿಗುವುದು ಕಮ್ಮಟದುರ್ಗದಲ್ಲಿ ಮಾತ್ರ.[೨೮] ಕೋಟೆಗೋಡೆಗಳು ಬಹಳ ದಪ್ಪವಾಗಿದ್ದು ಹೊರಮೈಗೆ ದಪ್ಪುಕಲ್ಲುಗಳಿದ್ದು, ಒಳಮೈಗೆ ಮಣ್ಣಿನ ಇಳಿ ಓರೆಇದೆ. ಹೊರಭಾಗದಲ್ಲಿ ದೊಡ್ಡ ಕಲ್ಲುಗಳು ಸರಿಯಾಗಿ ಹೊಂದಿಕೊಳ್ಳುವಂತೆ ಸಂದುಗಳಿಲ್ಲದೆ

ಕಟ್ಟಲಾಗಿದೆ. ಕಲ್ಲುಗಳನ್ನು ಮೇಲಕ್ಕೆ ಎತ್ತುವಾಗ ಭಾರವನ್ನು ಕಡಿಮೆ ಮಾಡುವುದಕ್ಕಾಗಿ ಬೆಣೆಯಾಕಾರದ ಕಲ್ಲುಗಳನ್ನು ಮಾಡಿರುವುದು ಈ ಕೋಟೆಯ ಇನ್ನೊಂದು ವಿಶೇಷತೆ.

ಕೋಟೆ ಭದ್ರತೆಯನ್ನು ಹೆಚ್ಚಿಸುವ ಸಲುವಾಗಿ ಚೌಕಾಕಾರದ ಕೊತ್ತಲಗಳನ್ನು ಮಾಡಲಾಗಿದೆ. ಸೈನಿಕರು ನಿಲ್ಲಲ್ಲು ಇದು ಉಪಯೋಗವಾಗುತ್ತದೆ. ಕೋಟೆಯ ಪಕ್ಕದಲ್ಲಿದ್ದ ಕಂದಕ, ಈಗ ಮುಚ್ಚಲ್ಪಟ್ಟಿದೆ.

ಪ್ರಾಮುಖ್ಯತೆ ಮತ್ತು ಗಾತ್ರದ ದೃಷ್ಠಿಕೋನದಲ್ಲಿ ಪ್ರವೇಶ ದ್ವಾರವನ್ನು ಮಧ್ಯದಲ್ಲಿ ಮೋರೆ ಮಾಡಿ ಕಟ್ಟಲಾಗಿದೆ. ಕೆಲವು ಬಾಗಿಲುಗಳ ರಚನೆಯಲ್ಲಿ ಮುಸ್ಲಿಂ ಶೈಲಿಯ ಪ್ರಭಾವ ಕಾಣಬರುತ್ತದೆ. ಒಟ್ಟಾರೆ ಶಾಸನಗಳ ಆಧಾರವನ್ನು ಪರಿಶೀಲಿಸಿದರೆ ಕೋಟೆ-ಕೊತ್ತಲಗಳಿಗೆ, ಬಾಗಿಲುಗಳಿಗೆ ಅವುಗಳನ್ನು ಗುರುತಿಸಲು ಅನುಕೂಲವಾಗುವಂತೆ ಹೆಸರನ್ನು ಇಡಲಾಗಿದೆ. ಪ್ರಸ್ತುತ ಕಾಮಲಾಪುರ ಗ್ರಾಮದಲ್ಲಿ ಅಭ್ಯವಾದ ಶಾಸನಗಳು ಕೋಟೆ ಮತ್ತು ಕೋಟೆಗಳ ಹೆಬ್ಬಾಗಿಲಿನ ಹೆಸರುಗಳು ಕೊತ್ತಲಗಳ ಬಗ್ಗೆ ಇಲ್ಲಿ ವಿವರಿಸಲಾಗಿದೆ.

**ಬಾಗಿಲುಗಳಲ್ಲಿ ಕೋಟೆಯ ಹೆಬ್ಬಾಗಿಲುಗಳು**

**ಸಿಂಗಾರದ ಹೆಬ್ಬಾಗಿಲು:** ಈ ಹೆಬ್ಬಾಗಿಲು ಆನೆ ಸಾಲಿನ ಹಿಂಭಾಗದಲ್ಲಿದೆ. ರಾಜಧಾನಿಯಾದ ಸಿಂಘಾಪುರಕ್ಕೆ ಈ ಹೆಬ್ಬಾಗಿಲು ಪ್ರವೇಶ ನೀಡುವುದರಿಂದ ಇದಕ್ಕೆ ಸಿಂಗಾರದ ಹೆಬ್ಬಾಗಿಲು ಎಂದು ಹೆಸರು. ಪ್ರವೇಶದ್ವಾರದ ಎರಡೂ ಬದಿಗೂ ಬಲಿಷ್ಠವಾದ ಗೋಡೆಗಳಿವೆ. ಹಾಗಾಗಿ ಒಳಗೆ ಬರುವ ದಾರಿ ವಕ್ರವಾಗಿದೆ. ನಡುವೆ ವಿಶಾಲವಾದ ಆವರಣವಿದೆ. ಆವರಣದ ಎಡಭಾಗದ ವೇದಿಕೆಯ ಮೇಲೆ ವೈಷ್ಣವ ದೇವಾಲಯವಿದೆ. ಈ ದೇವಾಲಯ ಉತ್ತರಾಭಿಮುಖವಾಗಿದ್ದು ಗರ್ಭಗೃಹ, ಸಭಾಮಂಟಪಗಳಿವೆ. ಗರ್ಭಗೃಹದಲ್ಲಿ ಯಾವುದೇ ರೀತಿಯ ಶಿಲ್ಪವಿಲ್ಲ. ಪ್ರವೇಶದ್ವಾರದ ಇಕ್ಕೆಲುಗಳಲ್ಲಿ ವೈಷ್ಣವದ್ವಾರ ಪಾಲಕರ ಉಬ್ಬುಶಿಲ್ಪಗಳಿವೆ. ಸಭಾ ಮಂಟಪದ ನಾಲ್ಕು ಸ್ತಂಭಗಳಲ್ಲಿ ಯಾಳಿ, ಆಂಜನೇಯ ಮುಂತಾದ ಉಬ್ಬು ಶಿಲ್ಪಗಳ ಕೆತ್ತನೆಗಳಿರುವುದು ವಿಶೇಷತೆಯಾಗಿದೆ. ಆವರಣದ ಪಶ್ಚಿಮ (ಭಿತ್ತಿ) ಗೋಡೆಯಲ್ಲಿ ಗಣೇಶ, ಸಿಂಗಾರ ಮಾಡಿಕೊಳ್ಳುವ ಸ್ತ್ರೀ, ನಂದಿ, ಆನೆ, ವೀರರ ಉಬ್ಬುಶಿಲ್ಪಗಳಿವೆ.

ದ್ವಾರದ ಬದಿಗಳಲ್ಲಿ ದ್ವಾರ ಪಾಲಕರ ಉಬ್ಬು ಶಿಲ್ಪಗಳಿವೆ. ಪ್ರವೇಶದ್ವಾರದ ಪಾರ್ಶ್ವದಲ್ಲಿ ಉಪಬಾಗಿಲನ್ನು ನಿರ್ಮಿಸಲಾಗಿದೆ. ಈ ದ್ವಾರದ ಮೂಲಕ ಪಶ್ಚಿಮಕ್ಕೆ ಸಾಗಿದರೆ ಸಿಂಘಾಪುರಪ್ರದೇಶ, ಸಿಗುವುದು. ಸಿಂಘಾಪುರದ ಉಲ್ಲೇಖ ಬರುವ ಶಾಸನವು ವಿಠಲ ಸ್ವಾಮಿ ದೇವಾಲಯ ಮುಂದಿರುವ ಮಂಟಪದ ದಕ್ಷಿಣದ ಭಿತ್ತಿಯಲ್ಲಿದೆ.[೭೮] ಈ ಹೆಬ್ಬಾಗಿಲು ವಿಜಯನಗರ ನೇರವಾಗಿ ಪ್ರವೇಶವನ್ನು ಕೊಡುತ್ತದೆ.

**ಗುಮ್ಮಟಬಾಗಿಲು:** ಕಾಮಲಾಪುರದ ಈಶಾನ್ಯ ದಿಕ್ಕಿಗೆ ಸುಮಾರು ಒಂದು ಕಿ.ಮೀ ದೂರದಲ್ಲಿ ಈಗಿನ (ಹೆಚ್.ಪಿ.ಸಿ)ಯ ಬಳಿ ಈ ಗುಮ್ಮಟದ ಬಾಗಿಲಿದೆ. ಗುಮ್ಮಟದಂತಿರುವದರಿಂದ ಇದನ್ನು ಗುಮ್ಮಟ ಬಾಗಿಲು ಎಂದು ಕರೆಯುತ್ತಾರೆ.

ಈ ಹೆಬ್ಬಾಗಿಲು ಬೃಹದಾಕಾರದಾಗಿದ್ದು ಹಾಗೂ ಸುಸ್ಥಿತಿಯಲ್ಲಿರುವ ಹೆಬ್ಬಾಗಿಲುಗಳಲ್ಲಿ ಒಂದಾಗಿದೆ. ನಗರ ಪ್ರವೇಶ ಮಾಡುವವರು ಪೆನುಗೊಂಡ ಪ್ರದೇಶದಿಂದ ಬರುವವರು ಮೊದಲು ಪೆನುಗೊಂಡ ಬಾಗಿಲನ್ನು ಬಳಸಿಕೊಂಡು ಗುಮ್ಮಟ ಹಾಗೂ ಭೀಮನ ಹೆಬ್ಬಾಗಿಲುಗಳ ಮೂಲಕ ನಗರ ಪ್ರವೇಶ

ಮಾಡುತ್ತಿದ್ದರು. ಹಿಂದೂ-ಮುಸ್ಲಿಂ ಶೈಲಿಯಲ್ಲಿ ನಿರ್ಮಾಣವಾಗಿರುವ ಸ್ಮಾರಕಗಳಲ್ಲಿ ಈ ಗುಮ್ಮಟ ಬಾಗಿಲೂ ಒಂದು. ಪ್ರವೇಶದ್ವಾರದ ಮುಂಭಾಗದಲ್ಲಿ ಇಪತ್ತು ಅಡಿ ಅಗಲವಾದ ಅಂತರದಲ್ಲಿ ಅಭಿಮುಖವಾಗಿ ಎರಡೂ ಭಿತ್ತಿಗಳು ದಕ್ಷಿಣ ದಿಕ್ಕಿಗೆ ಮುಂಚಾಚಿವೆ. ಇವುಗಳ ಮುಂದೆ ವಿಶಾಲವಾದ ಆವರಣವಿದೆ. ಈ ಆವರಣದ ಪಶ್ಚಿಮ ಗೋಡೆಯಲ್ಲಿ ಉಪಬಾಗಿಲನ್ನು ಜೋಡಿಸಿ ನಿರ್ಮಿಸಲಾಗಿದೆ. ಆವರಣವನ್ನು ಸುತ್ತುವರೆದಿರುವ ಪ್ರಕಾರದ ಗೋಡೆಯು ಪೂರ್ವದಿಕ್ಕಿಗೆ ಸುಮಾರು ನೂರು ಅಡಿಗಳಷ್ಟು ಉದ್ದವಾಗಿದೆ. ಇದಕ್ಕೆ ಅಭಿಮುಖವಾಗಿ ಇನ್ನೊಂದು ಗೋಡೆ ಇದೆ. ಇದಕ್ಕೆ ತಾಗಿಕೊಂಡು ಆಂಜನೇಯ ದೇವಾಲಯವಿದ್ದು ಇದು ಕೇವಲ ಗರ್ಭಗೃಹವನ್ನು ಒಳಗೊಂಡಿದೆ. ಇಲ್ಲಿನ ಆಂಜನೇಯ ಶಿಲ್ಪ ಆರು ಅಡಿ ಎತ್ತರವಿದೆ. ಈ ದೇವಾಲಯದ ಎದುರಿನ ಭಿತ್ತಿಯಲ್ಲಿ ಇಮ್ಮಡಿ ದೇವರಾಯನನ್ನು ಪ್ರತಿನಿಧಿಸುವ ಉಬ್ಬುಶಿಲ್ಪವಿದೆ.[೮೦] ಇಲ್ಲಿ ದೊರೆಯು ವಿಜಯನಗರ ಕಾಲದ ಸಾಂಪ್ರದಾಯಿಕ ಉಡುಗೆಯಲ್ಲಿ ಅಂಜಲಿಬದ್ಧನಾಗಿ ಶಿವಲಿಂಗದ ಎದುರು ನಿಂತಿದ್ದಾನೆ. ಇವೆರಡು ಶಿಲ್ಪಗಳ ನಡುವೆ ನಂದಿ ವಿಗ್ರಹವಿದೆ. ಪ್ರವೇಶದ ಮೇಲೆ ಕಮಾನಾಕಾರದ ಗುಮ್ಮಟ ಮೂರು ಸ್ತರಗಳಿದ್ದು ಪ್ರಥಮಹಂತದಲ್ಲಿ ನಾಲ್ಕು ಮೂಲೆಯ ಎರಡು ಕಟ್ಟಡಗಳಿವೆ. ಮೂರನೇ ಹಂತದಲ್ಲಿ ವೃತ್ತಾಕಾರದ ಗುಮ್ಮಟವಿದೆ. ಗೋಡೆಗೆ ಹಾಗೂ ದ್ವಾರದ ಪ್ರಥಮ ಹಂತದಲ್ಲಿ ಮಧ್ಯಮ ಗಾತ್ರದ ಕಲ್ಲು ಹಾಗೂ ಗಾರೆಯನ್ನು ಬಳಸಲಾಗಿದೆ. ಕಮಾನಿನ ಎರಡು-ಮೂರನೇ ಹಂತದಲ್ಲಿ ಇಟ್ಟಿಗೆ ಗಾರೆಯನ್ನು ಬಳಕೆ ಮಾಡಿದ್ದಾರೆ.

**ಭೀಮನ ಬಾಗಿಲು:** ಕಾಮಲಾಪುರದಿಂದ ಕಂಪ್ಲಿಗೆ ಹೋಗುವ ರಸ್ತೆಯ ಬಲ ಬದಿಯಲ್ಲಿ ಬರುವ ಗಾಣಗಿತ್ತಿ ದೇವಾಲಯದ ಆಗ್ನೇಯ ದಿಕ್ಕಿಗೆ ಈ ಹೆಬ್ಬಾಗಿಲಿದೆ. ಬೃಹದಾಕಾರದ ಬಾಗಿಲುಗಳಲ್ಲಿ ಇದು ಒಂದು. ಗಾತ್ರದ ದೃಷ್ಟಿಯಿಂದಲೇ ಇದಕ್ಕೆ ಭೀಮನಬಾಗಿಲು ಎಂದು ಕರೆದಿರುವ ಸಾಧ್ಯತೆ ಇದೆ. ಈ ಬಾಗಿಲು ಸುಮಾರು ಇಪ್ಪತ್ತು ಅಡಿ ಎತ್ತರ ಹಾಗೂ ಹದಿನೈದು ಅಡಿ ಅಗಲವಿದೆ. ಬಾಗಿಲು ಸರಳ ಕೆತ್ತನೆಯಿಂದ ಕೂಡಿದ್ದು ಲಲಾಟ ಬಿಂಬದ ಎರಡೂ ಬದಿಯ ಕೆಳಗೆ ಇಳಿಬಿದ್ದ ಪದ್ಮದ ಮೊಗ್ಗುಗಳಿವೆ. ಹೆಬ್ಬಾಗಿಲ ಮುಂಭಾಗದಲ್ಲಿ ವಿಶಾಲವಾದ ಆವರಣವಿದ್ದು ಇದು ದಕ್ಷಿಣಕ್ಕೆ ಹೆಚ್ಚು ವಿಸ್ತಾರವಾಗಿದೆ. ಇಲ್ಲಿ ಸುಮಾರು ಎಂಟು ಅಡಿ ಎತ್ತರದ ಭೀಮನ ಬಿಡಿ ಶಿಲ್ಪವಿದೆ. ಪಕ್ಕದ ಭಿತ್ತಿಯಲ್ಲಿ ಭೀಮನು ಕೀಚಕನನ್ನು ಸಂಹಾರ ಮಾಡುವ ದೃಶ್ಯ ಕೆತ್ತಲ್ಪಟ್ಟಿದೆ.[೮೧] ಭೀಮ ಮತ್ತು ದುಶ್ಯಾಸನರ ಯುದ್ಧ ಚಿತ್ರಗಳಿವೆ. ದಕ್ಷಿಣ ಗೋಡೆಗೆ ಹೊಂದಿಕೊಂಡು ಉತ್ತರಾಭಿಮುಖವಾಗಿ ಮೂರು ಗರ್ಭಗೃಹಗಳಿವೆ. ಪ್ರವೇಶದ ಇಕ್ಕೆಲುಗಳಲ್ಲಿ ತೋಳುಗಳಲ್ಲಿ ವೈಷ್ಣವ ದ್ವಾರ ಪಾಲಕರ ಉಬ್ಬುಶಿಲ್ಪಗಳಿವೆ.[೮೨] ಭೀಮನ ಹೆಬ್ಬಾಗಿಲಿಗೆ ಪ್ರವೇಶಮಾಡುವ ಮೊದಲು ಉತ್ತರದಿಂದ ದಕ್ಷಿಣಕ್ಕೆ ಬಂದು ಅಲ್ಲಿಂದ ಪಶ್ಚಿಮಕ್ಕೆ ತಿರುಗಿ ಪೂರ್ವದಿಂದ ಮುಖ್ಯ ಪ್ರವೇಶ ದ್ವಾರಕ್ಕೆ ಪ್ರವೇಶಿಸಬೇಕಾಗುತ್ತದೆ.

**ಸೋಮವಾರ ಬಾಗಿಲು:** ಪೂರ್ವಾಭಿಮುಖವಿದೆ. ವಿಜಯನಗರದ ಸಾಮ್ರಾಜ್ಯದಲ್ಲಿ ಕೃಷಿ ಪ್ರಧಾನ ಸರಸ್ಕೃತಿ ಇತ್ತು. ಕೃಷಿಗೆ ಸೋಮವಾರ ಬಿಡುವಿನ ದಿನ ಅಂದು ಬೇಸಾಯಕ್ಕೆ ದನಗಳನ್ನು ಹೂಡುತ್ತಿರಲಿಲ್ಲ. ಆ ಸಂಸ್ಕೃತಿ ಇಂದಿಗೂ ನಡೆದು ಬಂದಿದೆ. ಕಾಮಲಾಪುರ ಗ್ರಾಮದಲ್ಲಿ ಇಂದಿಗೂ ಸೋಮವಾರವೇ ಮಾರುಕಟ್ಟೆಯ ದಿನ. ಈ ಬಾಗಿಲಿನ ಸುತ್ತ ಮುತ್ತಲಿನಲ್ಲಿ ವಿಶಾಲವಾದ ಬಯಲು ಸ್ಥಳವಿದೆ. ಇಲ್ಲಿಯ ಕೃಷಿ ಮಾರುಕಟ್ಟೆಯೂ ಸಹ ಇತ್ತು.[೮೩] ಎನ್ನುವುದಕ್ಕೆ ಅಬ್ದುಲ್ ರಜಾಕ್ ಅಭಿಪ್ರಾಯವೂ ಇದಕ್ಕೆ

ಪೂರಕ ಪುಷ್ಠಿ ನೀಡುತ್ತದೆ. ಈ ಹಿನ್ನೆಲೆಯಾಗಿ ಕೃಷಿಕರಿಗೆ ಶ್ರೇಷ್ಠ ದಿನವಾದ ಈದಿನ ಈ ಪ್ರಾಂತ್ಯದಲ್ಲಿ ಮಾರುಕಟ್ಟೆ ನಡೆಯುತ್ತಿದ್ದರಿಂದ ಈ ಬಾಗಿಲಿಗೆ ಈ ನಾಮ ಅನ್ವರ್ಥವಾಗಿರುವ ಸಾಧ್ಯತೆಗಳಿವೆ. ಕ್ರಿ.ಶ.೧೫೪೫ರ ಸದಾಶಿವರಾಯನ ಶಾಸನ ಮೇಲಿನ ಅಂಶವನ್ನು ಪುಷ್ಠೀಕರಿಸುತ್ತದೆ.[೮೪] ಸೋಮಯ್ಯ ಎನ್ನುವ ದೇವರ ಹೆಸರಿನಿಂದ ಈ ಬಾಗಿಲಿಗೆ ಈ ಹೆಸರನ್ನು ಕರೆದಿರಲೂಬಹುದು. ಇದನ್ನು ಸಮರ್ಥಿಸುವಂತೆ ಇದಕ್ಕೆ ಈ ಬಾಗಿಲ ಮುಂಭಾಗದಲ್ಲಿ ಶೈವ ದೇಗುಲವಿದೆ. ಈ ಬಾಗಿಲು ಸಿಂಘಾರದ ಹೆಬ್ಬಾಗಿಲಿನ ದಕ್ಷಿಣ ಭಾಗದಲ್ಲಿದೆ. ಇಲ್ಲಿಯೇ ಉತ್ತರ ಬೆಟ್ಟದ ಮೇಲಿನ ಗುಂಡಿನಲ್ಲಿರುವ ವೀರಬುಕ್ಕರಾಯನ ಶಾಸನವೂ ಸೋಮವಾರದ ಬಾಗಿಲು ಎಂಬ ಹೆಸರನ್ನು ಉಲ್ಲೇಖಿಸುತ್ತದೆ.[೮೫] ಸುಮಾರು ೨೦ ಅಡಿ x ೨೦ ಅಡಿ ಎತ್ತರವಿರುವುದರಿಂದ ಬಾಗಿಲಿನ ಪಾರ್ಶ್ವದ ಗೋಡೆಗಳಲ್ಲಿ ಆಂಜನೇಯ, ಆನೆ, ಹಂಸ, ಗಣೇಶ, ಬಿಲ್ಲು ಬಾಣ ಹಿಡಿದು ನಿಂತಿರುವ ವೀರರ ಉಬ್ಬುಶಿಲ್ಪಿಗಳ ಕೆತ್ತನೆ ಇದೆ. ಮುಂಭಾಗದಲ್ಲಿ ದಕ್ಷಿಣಾಭಿಮುಖವಾಗಿ ಶೈವ ದೇಗುಲವಿದೆ. ಇದು ಗರ್ಭಗೃಹದ ಪ್ರವೇಶದ ಇಕ್ಕೆಲುಗಳಲ್ಲಿ ಶೈವದ್ವಾರ ಪಾಲಕರ ಉಬ್ಬು ಶಿಲ್ಪಗಳ ಕೆತ್ತನೆಗಳಿವೆ.

**ಉದಯಗಿರಿ ಬಾಗಿಲು:** ಪೂರ್ವಾಭಿಮುಖವಾಗಿದೆ. ಕಾಮಲಾಪುರದಿಂದ ಕಂಪ್ಲಿಗೆ ಹೋಗುವ ರಸ್ತೆಯ ಬದಿಯಲ್ಲಿ ಇದು ಎರಡು ಬೆಟ್ಟಗಳ ನಡುವಿನ ಕಣವೆಯನ್ನು ಬಳಸಿ ನಿರ್ಮಿಸಲಾಗಿದೆ.[೮೬] ಉದಯಗಿರಿಯಿಂದ ವಿಜಯನಗರಕ್ಕೆ ಬರುವವರು ಈ ಬಾಗಿಲನ್ನು ಪ್ರವೇಶಿಸಿಕೊಂಡೇ ಬರಬೇಕು. ಹೀಗಾಗಿ ಇದಕ್ಕೆ ಉದಯಗಿರಿ ಬಾಗಿಲೆಂದೇ ಹೆಸರು. ವಿಠಲ ದೇವಾಲಯದ ಗರ್ಭಗೃಹದ ಮುಂದಿನ ಮಂಟಪದಲ್ಲಿರುವ ಶಾಸನವು ಉದಯ ಗಿರಿಯ ಬಾಗಿಲನ್ನು ಉಲ್ಲೇಖಿಸುತ್ತದೆ.[೮೭] ಈ ಬಾಗಿಲು ದೂರದಿಂದ ನೋಡಲು ಕಾಣದ ಹಾಗೆ ಮರೆ ಮಾಡಲು ಎತ್ತರವಾದ ಗೋಡೆಗಳನ್ನು ನಿರ್ಮಿಸಲಾಗಿದೆ. ಇಲ್ಲಿಯ ದೇವಾಲಯವು ಪ್ರಸ್ತುತ ಪಾಳು ಬಿದ್ದಿದೆ.

**ಒಂದನೇ ಪೆನುಗೊಂಡ ಬಾಗಿಲು:** ಇದು ಕಾಮಲಾಪುರದ ಆಗ್ನೇಯ ದಿಕ್ಕಿಗಿರುವ ಪಟ್ಟಾಭಿರಾಮ ದೇವಾಲಯದ ಹತ್ತಿರದಲ್ಲಿ ಈ ಹೊರ ಬದಿ ಕೋಟೆಯ ಬಾಗಿಲು ನಿರ್ಮಿತವಾಗಿದೆ. ಇದು ಪೆನುಗೊಂಡದಿಂದ ವರದರಾಜಮ್ಮನ ಪಟ್ಟಣಕ್ಕೆ ಪ್ರವೇಶವನ್ನು ಕಲ್ಪಿಸುತ್ತದೆ. ವರದಾದೇವಿ ಅಚ್ಯುತರಾಯನ ಪಟ್ಟದರಸಿ ಈಕೆಯ ನೆನಪಿಗಾಗಿ ಕಟ್ಟಿಸಿದ ಪಟ್ಟಣವೇ ವರದರಾಜಮ್ಮನ ಪಟ್ಟಣ. ಈ ಪಟ್ಟಣ ವರದಾದೇವಿ ಪೆನುಗೊಂಡದವಳಾಗಿದ್ದರಿಂದ ಈ ಬಾಗಿಲಿಗೆ ಪೆನುಗೊಂಡ ಬಾಗಿಲು ಎಂದು ಕರೆಯುವ ಸಾಧ್ಯತೆಇದೆ. ಕ್ರಿ.ಶ.೧೫೪೦ ಅಚ್ಯುತರಾಯನ ಶಾಸನದಲ್ಲಿ ಪೆನುಗೊಂಡ ಬಾಗಿಲು ಹಾಗೂ ಅಲ್ಲಿ ಪ್ರತಿಷ್ಠಾಪಿಸಿದ ರಘುನಾಥದೇವರ ಉಲ್ಲೇಖಗಳಿವೆ.[೮೮] ಈ ಬಾಗಿಲಿಗೆ ಸ್ಥಳೀಯರ "ಸಣ್ಣಕೆಪ್ಪನ ಅಗಸೆ" ಎಂತಲೂ ಕರೆಯುತ್ತಾರೆ. ಬಾಗಿಲ ಹೊರ ಭಾಗದಲ್ಲಿ ಈಗಲೂ ಸಣ್ಣಕ್ಕಿ ವೀರಭದ್ರ ದೇವಾಲಯವಿದೆ. ಇದರ ಹಿಂಬದಿ, ಮುಂಬದಿಗೆ ಸಾಲು ಮಂಟಪಗಳು ಮಧ್ಯದಲ್ಲಿ ಬೀದಿ (ಮೈದಾನ) ಇದೆ. ಇದನ್ನೇ ವರದರಾಜಮ್ಮನ ಬಜಾರು ಎಂದು ಕರೆಯುತ್ತಾರೆ.[೮೯] ಬಾಗಿಲು ಮತ್ತು ಕೋಟೆ ಗೋಡೆಗೆ ಹೊಂದಿಕೊಂಡು ಮೂರು ದೇವಾಲಯಗಳಿವೆ. ಅವುಗಳಲ್ಲಿ ಒಂದನ್ನು ಅಚ್ಯುತರಾಯನ ಕಾಲದಲ್ಲಿ ಕಟ್ಟಲಾದ ರಘನಾಥ ದೇವಾಲಯವೆಂದು ಶಾಸನವು ಸ್ಪಷ್ಟವಾಗಿ[೯೦] ಹೇಳಿದರೂ ಸ್ಥಳೀಯರು ಮಾತ್ರ ಕಳ್ಳರ ಗುಡಿಯೆಂದೇ ಗುರುತಿಸಿದ್ದಾರೆ. ಉತ್ತರಾಭಿಮುಖವಾಗಿರುವ ಈ ದೇಗುಲವು ಗರ್ಭಗೃಹ ಸಭಾಮಂಟಪಗಳನ್ನು

ಒಳಗೊಂಡಿದೆ. ಗರ್ಭಗೃಹದ ದ್ವಾರದ ಇಕ್ಕೆಲುಗಳಲ್ಲಿ ವೈಷ್ಣವದ್ವಾರ ಪಾಲಕರು ಸ್ಥಾನಿಕ ಭಂಗಿಯಲ್ಲಿದ್ದಾರೆ. ಆದರೆ, ಗರ್ಭಗೃಹದಲ್ಲಿ ಯಾವುದೇ ಮೂರ್ತಿಶಿಲ್ಪವಿಲ್ಲ. ರಘುನಾಥ ದೇವರ ಬಲ ಬದಿಗೆ ಕೋಟೆ ಬಾಗಿಲಿಗೆ ಹೊಂದಿಕೊಂಡು ಚಿಕ್ಕ ದೇವಾಲಯವಿದೆ. ಇದಕ್ಕೆ ಗರ್ಭಗೃಹವಿದೆ. ಇದರಲ್ಲಿ ಇಲಿಯನ್ನು ಕೆತ್ತಿರುವ ಪೀಠದ ಮೇಲೆ ಗಣೇಶನ ಭಗ್ನ ಶಿಲ್ಪವಿದೆ. ಇದರಿಂದ ಇದನ್ನು ಗಣೇಶನ ದೇವಾಲಯವೆಂದೇ ಹೇಳಬಹುದು.

ಬಾಗಿಲಿನ ಮುಂಭಾಗದಲ್ಲಿ ವೀರಭದ್ರ ದೇವಾಲಯವಿದೆ. ಇದನ್ನು ಸಣ್ಣಕ್ಕಿ ವೀರಭದ್ರನೆಂದು ಕರೆಯುತ್ತಾರೆ. ಗರ್ಭಗೃಹವಿದೆ. ಅದರಲ್ಲಿನ ಮೂರ್ತಿ ವೀರಭದ್ರನ ಶಿಲ್ಪವಿದೆ. ಈ ದೇವಾಲಯಕ್ಕೆ ಕಣಶಿಲೆ ಶಿಖರ ಮತ್ತು ಕೈಪಿಡಿ ಗೋಡೆಗಳಿಗೆ ಇಟ್ಟಿಗೆ ಮತ್ತು ಗಾರೆಗಳನ್ನು ಉಪಯೋಗಿಸಿ ನಿರ್ಮಿಸಲಾಗಿದೆ.

**ಎರಡನೇ ಪೆನುಗೊಂಡ ಬಾಗಿಲು:** ಕಾಮಲಾಪುರದ ಆಗ್ನೆಯಕ್ಕೆ ಸುಮಾರು ಎರಡು ಕಿ.ಮೀ ಅಂತರದಲ್ಲಿ ಮೊದಲ ಪೆನುಗೊಂಡ ಬಾಗಿಲಿನ ಉತ್ತರಕ್ಕಿದೆ. ಪ್ರಾರಂಭದಿಂದಲೂ ಪೆನುಗೊಂಡಕ್ಕೂ ವಿಜಯನಗರಕ್ಕೂ ನಿಕಟವಾದ ಸಂಬಂಧಗಳಿವೆ. ಪೆನುಗೊಂಡಕ್ಕೆ ಬರುವವರು ಈ ಮಾರ್ಗವಾಗಿಯೇ ಹೋಗಬೇಕಾಗಿತ್ತು. ಹಾಗಾಗಿ ಇದಕ್ಕೆ ಪೆನುಗೊಂಡದ ಎರಡನೇಬಾಗಿಲೆಂದು ಗುರುತಿಸಲಾಗಿದೆ. ಕಳ್ಳರ ಗುಡಿ ಹತ್ತಿರದಲ್ಲಿ ಪೆನುಗೊಂಡ ಬೀದಿ ಇದೆ.[೯೧] ಇದರ ದಕ್ಷಿಣಕ್ಕೆ ಪೆನುಗೊಂಡ ಬಾಗಿಲಿದೆ. ಪೆನುಗೊಂಡ ಬೀದಿಯ ಒಂದು ಮಾರ್ಗವ ಗುಮ್ಮಟಬಾಗಿಲಿಗೆ ಹೋಗಿ ಅಲ್ಲಿಂದ ಭೀಮನ ಅಗಸೆಯ ಮೂಲಕ ವಿಜಯನಗರ ಕಡೆ ಹೋಗುತ್ತದೆ. ಪೆನುಗೊಂಡ ಬಾಗಿಲಿಗೆ ಹೊಂದಿಕೊಂಡಂತೆ ಕೋಟೆಗೋಡೆ ಮಲಪನಗುಡಿ ಕೋಟೆ ಗೋಡೆಗೆ ಹತ್ತಿಕೊಂಡಿರುವುದು.[೯೨] ಪ್ರಸ್ತುತ ಪೆನುಗೊಂಡ ಬಾಗಿಲಿನಿಂದ ಕಾಮಲಾಪುರದ ಕೆರೆಯ ಹಿಂಬದಿಯವರೆಗೆ ಕೋಟೆಗೋಡೆ ಗೋಚರಿಸುತ್ತದೆ. ಅಲ್ಲಿಂದ ಆಚೆಗೆ ಕೋಟೆ ಗೋಡೆಯ ಯಾವುದೇ ಅವಶೇಷಗಳು ಕಾಣಬರುವುದಿಲ್ಲ. ಪೂರ್ವಾಭಿ ಮುಖವಾಗಿರುವ ಈ ಬಾಗಿಲು ಸುಮಾರು ಹದಿನೈದು ಅಡಿ ಅಗಲ ಇಪ್ಪತ್ತು ಅಡಿ ಎತ್ತರವಾಗಿದೆ. ಬಾಗಿಲಿಗೆ ಇಕ್ಕೆಲುಗಳಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಲಲಾಟ ಬಿಂಬದ ಎರಡೂ ಬದಿಯ ಕೆಳಗೆ ಇಳಿಬಿದ್ದ ಪದ್ಮದ ಮೊಗ್ಗುಗಳಿವೆ. ಎಡಭಾಗದಲ್ಲಿ ಉಪಬಾಗಿಲು, ಬಲಭಾಗದ ಗೋಡೆಯ ಮೇಲೆ ಶಿವಲಿಂಗ, ನಂದಿ, ಅಂಜಲಿ ಮುದ್ರೆಯಲ್ಲಿ ನಿಂತಿರುವ ರಾಜ (ಪ್ರೌಢದೇವರಾಯ)ನ ಉಬ್ಬು ಶಿಲ್ಪಗಳಿವೆ. ಈ ಪ್ರದೇಶದ ಎರಡೂ ಬದಿಗೆ ಕಟ್ಟೆಗಳಿದ್ದು ಅವುಗಳು ಮಂಟಪಗಳಿಂದ ಆವೃತ್ತವಾಗಿದ್ದು ಹತ್ತಿರದ (ಒಳಭಾಗದ)ಲ್ಲಿಯೇ ಆಂಜನೇಯ ಮತ್ತು ಗಣೇಶ ಶಿಲ್ಪಗಳಿಂದ ಕೂಡಿದ ಗರ್ಭಗೃಹಗಳ ದೇವಾಲಯಗಳಿವೆ.

**ಕೋಟೆ ಶಂಕರ ದೇವರ ಬಾಗಿಲು:** ಕಾಮಲಾಪುರದಿಂದ ಹಂಪಿಗೆ ಹೋಗುವ ರಸ್ತೆಯ ಬದಿಯಲ್ಲಿರುವ ಅಕ್ಕ– ತಂಗಿಯ ಗುಡ್ಡದ ಹಿಂಬದಿಗೆ ಕೋಟೆ ಶಂಕರ ದೇವರ ಬಾಗಿಲಿದೆ. ಕೋಟೆಗೆ ತಾಗಿಕೊಂಡೇ ಇನ್ನೊಂದು ಶೈವದೇವಾಲಯವಿದೆ. ಇದಕ್ಕೆ ಶಂಕರ ದೇವರ ಗುಡಿಎಂದು ಕರೆಯುತ್ತಾರೆ. (ಕಲ್ಲುಬಂಡೆಯ ಮೇಲಿ ಲಿಂಗಗಳ ಸುಮೂಹ) ಇದೆ. ಈಹಿನ್ನೆಲೆಯಲ್ಲಿ ಬಾಗಿಲಿಗೆ ಆ ಹೆಸರೇ ರೂಢಿಗತ ಬಂದಿದೆ. ಪ್ರಸನ್ನ ವಿರುಪಾಕ್ಷ ದೇವಾಲಯದ ಹತ್ತಿರವಿರುವ ಗುಂಡಿನ ಮೇಲಿರುವ[೯೩] ಹಾಗೂ ಪಕ್ಕದಲ್ಲಿರುವ ಬಂಡೆಯ ಶಾಸನಗಳಲ್ಲಿ[೯೪] ಕೋಟೆ ಶಂಕರದೇವರ ಬಾಗಿಲಿನ ಪ್ರಸ್ತಾಪಗಳಿವೆ. ಬಾಗಿಲು ದಕ್ಷಿಣಾಭಿಮುಖವಾಗಿದ್ದು ಪ್ರವೇಶದ ಆರಂಭದಲ್ಲಿ ಬೃಹದಾಕಾರದ ಬಂಡೆಯ ಮೇಲೆ

ಭೀಮನಾಕೃತಿಯನ್ನು ಕೆತ್ತಲಾಗಿದೆ. ಈ ಬಾಗಿಲು ಭಗ್ನಾವಸ್ಥೆಯಲ್ಲಿದ್ದು ಇದು ಹತ್ತು ಅಡಿ ಅಗಲ ಮತ್ತು ಇಪ್ಪತ್ತು ಅಡಿ ಎತ್ತರವಿದೆ.

**ಜಡೆ ಶಂಕರ ದೇವರ ದಿಡ್ಡಿ (ಬಾಗಿಲು):** ಇದು ಕಾಮಲಾಪುರುದಿಂದ ಹಂಪಿಗೆ ಹೋಗುವ ರಸ್ತೆಯ ಬದಿಯಲ್ಲಿರುವ ಅಕ್ಕ-ತಂಗಿಯರ ಗುಡ್ಡದ ಹಿಂಬದಿಗೆ ಇದೆ. ಇದು ಉತ್ತರಾಭಿಮುಖವಾಗಿ ದೊಡ್ಡ ಕಂದಕದಲ್ಲಿದೆ. ಶಾಸನಗಳಲ್ಲಿ ಜಡೆ ಶಂಕರ ದೇವರ ದಿಡ್ಡಿಯ ಸ್ಥಳವನ್ನು ಉಲ್ಲೇಖಿಸಿದೆ.[೯೫]

**ಹಂಪಾದೇವಿಯ ದಿಡ್ಡಿ (ಬಾಗಿಲು):** ಜಡೆ ಶಂಕರ ದೇವರ ದಿಡ್ಡಿ ಬಾಗಿಲಿಗೆ ಉತ್ತರಕ್ಕೆ ಸ್ವಲ್ಪ ಅಂತರದಲ್ಲಿಯೇ ಹಂಪಾದೇವಿಯ ದಿಡ್ಡಿ ಬಾಗಿಲಿದೆ. ಪ್ರಸ್ತುತ ಪೂರ್ಣಾಭಗ್ನಾವಸ್ಥೆಯ ಸ್ಥಿತಿಯಲ್ಲಿದ್ದು ಈ ದಿಡ್ಡಿಯ ಪಶ್ಚಿಮ ದಿಕ್ಕಿಗಿರುವ ಬಂಡೆಯ ಮೇಲೆರುವ ಶಾಸನದಲ್ಲಿ[೯೬] ಹಂಪಾದೇವಿಯ ದಿಡ್ಡಿ ಎಂದು ದಾಖಲಿಸಿದೆ.

**ಕೊತ್ತಲಗಳು:** ಹೆಬ್ಬಾಗಿಲು ಬಾಗಿಲು ಮತ್ತು ದಿಡ್ಡಿಗಳ ಇಕ್ಕೆಲುಗಳಲ್ಲಿ ಕೋಟೆಯ ಆಯಾಕಟ್ಟಿನ ಸ್ಥಳಗಳಲ್ಲಿ ಕೋಟೆ ಗೋಡೆಯ ಮೇಲೆ ನಿಂತು ಹೋರಾಟ ಮಾಡಲು ಅನುಕೂಲವಾಗುವಂತೆ ಮತ್ತು ಕೆಲವು ಗುಪ್ತ ಸ್ಥಳಗಳಲ್ಲಿ ಕೊತ್ತಳಗಳನ್ನು ನಿರ್ಮಿಸಲಾಗಿದೆ.

**ಪ್ರತಾಪ ಕೊತ್ತಳ:** ಪ್ರತಾಪ ಕೊತ್ತಳವು ಕೋಟೆ ಶಂಕರ ಬಾಗಿಲು ಮುಂಭಾಗದಲ್ಲಿದ್ದು, ಅಕ್ಕ-ತಂಗಿಯರ ಗುಂಡುಗಳ ಪಶ್ಚಿಮದ ಬಂಡೆಯ ಮೇಲಿನ ಶಾಸನವು ಇದನ್ನು ಗುರುತಿಸುತ್ತದೆ. ಪ್ರತಾಪ ಎನ್ನುವುದು ವಿಜಯನಗರದ ಅರಸರುಗಳಿಗಿದ್ದ ಬಿರುದಾಗಿದೆ.[೯೭]

**ಸ್ವಾಮಿ ದ್ರೋಹರ ಗಂಡನ ಕೊತ್ತಳ:** ಹಂಪಾದೇವಿ ದಿಡ್ಡಿ ಬಾಗಿಲು ಹಾಗೂ ಜಡೆ ಶಂಕರ ದೇವರದಿಡ್ಡಿ ಬಾಗಿಲುಗಳ ಮಧ್ಯದಲ್ಲಿರುವುದೇ ಸ್ವಾಮಿ ದ್ರೋಹರ ಗಂಡನಕೊತ್ತಳ[೯೮] ಕೋಟೆ ಗೋಡೆಯಲ್ಲಿರುವ ಶಾಸನವು ಈ ಕೊತ್ತಳವನ್ನು ಉಲ್ಲೇಖಿಸುತ್ತದೆ.[೯೯]

**ಹಂಪಿಯ ಕೊತ್ತಳ:** ಕೋಟೆ ಶಂಕರ ದೇವರ ಬಾಗಿಲಿನ ಪೂರ್ವದಿಕ್ಕಿಗಿದೆ. ಹಂಪಿ ವಿಜಯನಗರದ ಅರಸರ ರಾಜಧಾನಿ ಇಂದು ಪ್ರಸಿದ್ದ ಪ್ರವಾಸಿತಾಣ.

**ಆನೆಗೊಂದಿಯ ಕೊತ್ತಳ:** ಈ ಕೊತ್ತಳವು ಸಿಂಘಾರದ ಹೆಬ್ಬಾಗಿನ ಉತ್ತರಕ್ಕಿರುವ ಬೆಟ್ಟದ ಮೇಲಿದೆ.[೧೦೦] ಆನೆಗೊಂದಿ ವಿಜಯನಗರ ಅರಸರ ಎರಡನೇ ರಾಜಧಾನಿ. ಈಗಲೂ ವಿಜಯನಗರದ ವಂಶಸ್ಥರು ಇಲ್ಲಿದ್ದಾರೆ. ಗಜಶಾಲೆಯ ಹಿಂಭಾಗದಲ್ಲಿಯೂ ಬೆಟ್ಟದಲ್ಲಿರುವ ಬಂಡೆಯ ಮೇಲೆ ಆನೆಗೊಂದಿ ಕೊತ್ತಳವೆಂದು ಕೆತ್ತಲಾಗಿದೆ.[೧೦೧]

**ಸೋಮಯ ದೇವರ ಕೊತ್ತಳ:** ಈ ಕೊತ್ತಳವು ಸಿಂಘಾರದ ಮತ್ತು ಸೋಮವಾರದ ಬಾಗಿಲುಗಳ ಮಧ್ಯ ಭಾಗದಲ್ಲಿದೆ. ಇಲ್ಲಿಯೇ ಉತ್ತರಕ್ಕಿರುವ ಬೆಟ್ಟದ ಮೇಲೆ ಸೋಮಯ್ಯ ದೇವರ ಕೊತ್ತಳವೆಂದು ಕಡೆಯಲಾಗಿದೆ.[೧೦೨] ಸೋಮಯ್ಯದೇವರ ಹೆಸರಿನಲ್ಲಿ ಅಥವಾ ಸೋಮವಾರ ಈದಿನ ಮಾರುಕಟ್ಟೆ (ಸಂತೆ) ನಡೆಯುವ ದಿನವೆಂದು ಈ ಹೆಸರಿನಿಂದಲೇ ಕೊತ್ತಳಕ್ಕೆ ಸೋಮಯ್ಯ ದೇವರ ಕೊತ್ತಲವೆಂದು ಹೆಸರಿಸಲಾಗಿದೆ.[೧೦೩]

**ಗಜಶಾಲೆ:** ಇದು ಹಿಂದೂ ಮುಸ್ಲಿಂ ಮಿಶ್ರ ಶೈಲಿಯ ಅಪರೂಪದ ರಚನೆ. ಆನೆ ಲಾಯದ ಕಟ್ಟಡವೆಂದು ಕರೆಯಲಾಗುತ್ತಿದೆ. ಇದನ್ನು ವಿಜಯನಗರ ಪಟ್ಟಣದ ಉಪನಗರವಾದ ಕಾಮಲಾಪುರದ ಗ್ರಾಮದಲ್ಲಿ ಕಾಣಬಹುದು. ಈ ಕಟ್ಟಡದಲ್ಲಿ ಪಟ್ಟದಾನೆಗಳನ್ನು ಕಟ್ಟಿಹಾಕಲಾಗುತ್ತಿತ್ತು ಎಂಬುದಕ್ಕೆ ಸಾಕ್ಷಿಯಾಗಿ ವಿಜಯನಗರ ಕಾಲದಲ್ಲಿ ಆನೆಗಳನ್ನು ಯುದ್ಧಕ್ಕೆ, ದೇವಾಲಯಗಳ ಉತ್ಸವಕ್ಕೆ, ರಾಜ ಪರಿವಾರದವರ ಉತ್ಸವ, ಬೇಟೆ, ಮುಂತಾದವುಗಳ ಸನ್ನಿವೇಶಕ್ಕೆ ಉಪಯೋಗಿಸುತ್ತಿದ್ದರು. ಅಂತಹ ಆನೆಗಳ ಸಾಲಿನ ಶಿಲ್ಪಗಳನ್ನು ರಾಮಚಂದ್ರ ದೇವಾಲಯದ ಭಿತ್ತಿಯ ಮೇಲೆ, ಮಹಾನವಮಿ ದಿಬ್ಬದ ಭಿತ್ತಿಯ ಮೇಲೆ ಕಾಣಬಹುದು. ಅರಮನೆ ಕಟ್ಟಡಗಳ ಮೆಟ್ಟಿಲುಗಳ ಇಕ್ಕೆಲುಗಳಲ್ಲಿ ಕೆಲವೊಮ್ಮೆ ಆನೆಯ ಪೂರ್ಣ ಆಕಾರದ ಶಿಲ್ಪಗಳನ್ನು ಅಥವಾ ಆನೆಯ ಸೊಂಡಿಲು ಭಾಗದ ಶಿಲ್ಪಗಳನ್ನು ಕಾಣಬಹುದಾಗಿದೆ.

ಗಜಶಾಲೆಯಲ್ಲಿ ಕೇವಲ ಹನ್ನೊಂದು ಕೊಠಡಿಗಳಿದ್ದು ಹನ್ನೊಂದು ಆನೆಗಳನ್ನು ಕಟ್ಟಲು ಸ್ಥಳಾವಕಾಶ ಮಾತ್ರ ಪ್ರಸ್ತುತ ಕಾಣಬಹುದಾಗಿದೆ.[೧೦೪] ಈ ಕಟ್ಟಡಗಳಲ್ಲಿನ ಕೊಠಡಿಗಳ ಮೇಲ್ಛಾವಣೆಯಲ್ಲಿನ ಶಿಖರ ಗುಮ್ಮಟಾಕಾರದಲ್ಲಿ ಅಷ್ಟ ಕೋನಾಕಾರದಲ್ಲಿದೆ. ಒಂದು ಕೋಣೆಯಿಂದ ಮತ್ತೊಂದು ಕೋಣೆಗೆ ಹೋಗಲು ಮಧ್ಯ ಸಣ್ಣ ಜಾಲಂಧ್ರಗಳಿವೆ. ಪ್ರತಿಯೊಂದು ಕೊಠಡಿಯಲ್ಲಿ ಒಂದೊಂದೇ ಆನೆಯನ್ನು ಕಟ್ಟಬಹುದಾಗಿದೆ. ಕೊಠಡಿಯ ಛಾವಣಿಯ ಮೇಲಿಂದ ಕಬ್ಬಿಣದ ಸರಪಳಿಗಳನ್ನು ತೂಗಿಬಿಟ್ಟು, ಅದರಿಂದ ಆನೆಗಳನ್ನು ಕಟ್ಟುತ್ತಿದ್ದರೆಂಬ ಅಬ್ದುಲ್ ರಜಾಕನ ವಿದೇಶಿ ಕಥನದಲ್ಲಿದೆ.

ಕೊಠಡಿಗಳ ಪ್ರವೇಶದ್ವಾರವು ದೊಡ್ಡದಾದ ಕಮಾನಿನಿಂದ ಕೂಡಿದೆ. ಮಧ್ಯಕ್ಕಿರುವ ಕೊಠಡಿಗೆ ಎರಡು ಅಂತಸ್ತಿನ ಚೌಕಾಕಾರದ ಗೋಪುರವಿದೆ. ಇದರ ಮೇಲ್ಛಾವಣಿಗೆ ಹೋಗಲು ಮೆಟ್ಟಿಲುಗಳಿವೆ. ಮೇಲ್ಮಾಳಿಗೆಗೆ ಹೋದಾಗ ಎಲ್ಲಾ ಮಾಳಿಗೆಗಳಲ್ಲಿನ ಸ್ವರೂಪತೆಯನ್ನು ಇಲ್ಲಿ ಕಾಣಬಹುದು. ಎರಡೂ ತುದಿಗಳಲ್ಲಿ ಮೊದಲಿನವು ದುಂಡಾಗಿದ್ದರೆ ಎರಡನೆಯವೂ ಮತ್ತು ನಾಲ್ಕನೆಯವು ದೇವಾಲಯದ ಶಿಖರದಂತಿದೆ. ಮೂರನೆಯವು ನೆಲ್ಲಿಕಾಯಿಯಂತೆ ಏಣು ಏಣುಳ್ಳ ಮೇಲು ಹೊದಿಕೆ ಹೊಂದಿದ್ದರೆ ಕೊನೆಯ ಎರಡು ವರ್ತುಲಾಕಾರದಲ್ಲಿವೆ.[೧೦೫] ಉತ್ಖನನ ಮಾಡಿದಾಗ ಅಸ್ಥಿಪಂಜರ ಮತ್ತು ಗೋದಲಿ ಮಾನವರ ಇಪ್ಪತ್ತೆಂಟು ಅಸ್ತಿ ಪಂಜರದ ಭಾಗಗಳು ದ್ವಾರಬಾಗಿಲು, ಕಪ್ಪು, ಬೂದಿ ಮಣ್ಣು ನೀರಿನ ತೊಟ್ಟಿಗಳು ಮತ್ತು ಕಲ್ಲಿನ ದೀಪ ಸ್ತಂಭ ಮುಂತಾದ ಅವಶೇಷಗಳು ದೊರಕಿವೆ.[೧೦೬] ಈ ಸ್ಮಾರಕದ ಸಮೀಪದ ದೊಡ್ಡದಾದ ಸರಪಳಿ ದೊರಕಿರುವುದರಿಂದ ವಿದೇಶೀಯಾತ್ರಿಕರ ಕಥನದಲ್ಲಿ ಉಲ್ಲೇಖಿಸಿದಂತೆ ಆನೆಲಾಯ (ಗಜಶಾಲೆ) ಎಂಬುದನ್ನು ಪುಷ್ಟೀಕರಿಸುತ್ತದೆ.

**ರಾಣಿಸ್ನಾನ ಗೃಹ:** ಕಾಮಲಾಪುರದಿಂದ ಹಂಪೆಗೆ ಹೋಗುವ ಮಾರ್ಗದಲ್ಲಿ ಬಲಗಡೆ ಈ ಸ್ಮಾರಕವನ್ನು ಕಾಣಬಹುದು. ಕಾಮಲಾಪುರದಿಂದ ಒಂದು ಕಿ.ಮೀ.ಅಂತರದಲ್ಲಿದೆ. ನೂರ ಎಂಬತ್ತು ಗೃಹಗಳು ರಾಣಿಯರಿಗಾಗಿಯೇ ನಿರ್ಮಿತವಾಗಿದ್ದವು.[೧೦೭] ರಾಣಿಯೊರ್ವಳ ಸ್ನಾನಗೃಹ ಚಿನ್ನಮಯವಾಗಿದ್ದು, ಅದರ ನಡುವೆ ನುಣುಪಾದ ಹೊಳೆಯುತ್ತಿದ್ದ ಅಮೃತಶಿಲೆಯ ಬಂಡೆಗಲ್ಲುಗಳಿಂದ ನಿರ್ಮಿತವಾದ ನೀರಿನ ಪಾತ್ರೆಗಳನ್ನು, ಕುಂಭಗಳನ್ನು ಒದಗಿಸಿಟ್ಟಿದ್ದರು.[೧೦೮] ಇದರ ಸನಿಹದಲ್ಲೇ ರಾಣಿಯರ ಶೃಂಗಾರ ಗೃಹವೂ ಇದ್ದಿರಬೇಕು. ರಾಣಿಸ್ನಾನ ಮಾಡಿದ ನಂತರ ಶೃಂಗಾರ ಗೃಹಕ್ಕೆ ತೆರಳಿ ತಾನು ಉಡಿಗೆ–

ತೊಡಿಗೆಗಳಿಂದ ಅಲಂಕಾರ ಮಾಡಿಕೊಳ್ಳಲು ನಿರತಳಾಗಿರುತ್ತಾಳೆ ಎಂದು ಧರ್ಮನಾಥ ಪುರಾಣ ಸಾಹಿತ್ಯವು ಪುಷ್ಟೀಕರಿಸುತ್ತದೆ.[೧೦೯]

ಈ ಸ್ಮಾರಕ ವಿಜಯನಗರ ಕಾಲಕ್ಕೆ ಸೇರಿದ್ದು, ಇಲ್ಲಿ ಕಮಾನು ಮುಸ್ಲಿಂ ಶೈಲಿಯ ಪ್ರಭಾವವಿದೆ. ನಾಲ್ಕು-ದಿಕ್ಕುಗಳಲ್ಲಿ ಮೊಗಸಾಲೆಗಳು ಮುಂದಕ್ಕೆ ಹೊರ ಸೂಸಿವೆ. ಎರೆಡೆರಡು ಮೊಗಸಾಲೆಗಳ ನಡುವೆ ಜಾಲಂಧ್ರಗಳಿವೆ. ಇವುಗಳ ಮೇಲಿನ ಭಾಗ ಗಾರೆಯಿಂದ ನಿರ್ಮಿತವಾಗಿದೆ. ಪ್ರತಿ ಅಂಕಣಗಳ ಛಾವಣಿ ಗುಮ್ಮಟಾಕಾರದಲ್ಲಿದೆ. ಜ್ಯಾಮಿತಿ ಲತಾಬಳ್ಳಿ ಮತ್ತು ಪಕ್ಷಿಗಳ ಚಿತ್ರಣಗಳಿಂದ ಕಂಗೊಳಿಸುವುದು ಈ ಸ್ಮಾರಕದ ವೈಶಿಷ್ಟ್ಯ. ನೀರಿನಲ್ಲಿ ಇಳಿಯಲು ಸೋಪಾನಗಳ ವ್ಯವಸ್ಥೆ, ಕೊಳಕ್ಕೂ ಭಿತ್ತಿಗೂ ಇರುವ ಪೌಳಿಯಲ್ಲಿ ಸ್ತಂಭಗಳ ಮಧ್ಯೆ ಅಲ್ಲಲ್ಲಿ ಕಮಾನುಗಳಿಂದ ಕೂಡಿದ ಜಾಲಂಧ್ರದ ವ್ಯವಸ್ಥೆ ಈ ಸ್ಮಾರಕದ ಮತ್ತೊಂದು ವೈಶಿಷ್ಟ್ಯತೆಯೇ ಸರಿ. ಮಲಿನವಾದ ನೀರು ಬೇರೆ ಕಾಲುವೆಯಿಂದ ಹೊರಗೆ ಹೋಗುವ ವ್ಯವಸ್ಥೆಯನ್ನು ಇಲ್ಲಿ ಮಾಡಲಾಗಿದೆ.[೧೧೦] ಮೇಲ್ಛಾವಣಿ ಕೊರೆದ ಕಮಾನು ಅವುಗಳ ಮಧ್ಯಗಚ್ಚು, ಗಾರೆಗಳಿಂದ ಕೊರೆದ ಕಮಾನು, ಗಾರೆಯಿಂದ ಮೂಡಿದ ಹೂ-ಬಳ್ಳಿ ವೈಶಿಷ್ಟ್ಯಪೂರ್ಣವಾಗಿದೆ.[೧೧೧] ಈ ಸ್ಮಾರಕ ಇಂಡೋ ಇಸ್ಲಾಂಮಿಕ್ ಶೈಲಿಗೆ ಅತ್ಯುತ್ತಮ ಉದಾಹರಣೆ. ಪ್ರಸ್ತುತ ಇದು ದಕ್ಷಿಣಾಭಿಮುಖವಾಗಿ ಚೌಕಾಕಾರದ ಸ್ಮಾರಕವಾಗಿದೆ. ಎತ್ತರವಾದ ಭಿತ್ತಿ ಇದರ ಸುತ್ತಲೂ ಆವರಿಸಿಕೊಂಡಿದೆ. ನಾಲ್ಕು ದಿಕ್ಕಿನ ಮೊಗಸಾಲೆಗಳ ಮಧ್ಯೆ ೧೫ ಚ.ಕಿ.ಮೀ x ೧.೮ ಚ.ದ.ಕಿ.ಮೀ ಉದ್ದ ಈಜು ಕೊಳವಿದೆ. ಬಾವಿಗಳಿಂದ ಮತ್ತು ಕಾಲುವೆಗಳಿಂದ ಈಜುಕೊಳಕ್ಕೆ ನೀರನ್ನು ಬಿಡಲಾಗುತ್ತಿತ್ತು.[೧೧೨] ಒಟ್ಟಿನಲ್ಲಿ ಇದು ಲೌಖಿಕ ವಾಸ್ತು ಶೈಲಿಗೆ ಉತ್ತಮ ಉದಾಹರಣೆಯಾಗಿದೆ.

**ಅರವಟ್ಟಿಗೆ:** ಕಾಮಲಾಪುರದಿಂದ ಹಂಪಿಗೆ ಹೋಗುವ ಮಾರ್ಗದಲ್ಲಿ ಬಲಭಾಗದಲ್ಲಿ ಅಂದರೆ ರಾಣಿಯರ ಸ್ನಾನಗೃಹ ಪಶ್ಚಿಮಕ್ಕೆ ಇದೆ. ಈ ಮಂಟಪವು ಗಾರೆಯಿಂದ ನಿರ್ಮಾಣವಾಗಿದೆ. ಕಟ್ಟಡದ ಮಧ್ಯಭಾಗದಲ್ಲಿ ಆಳವಾದ ಅಷ್ಟಕೋನಾಕೃತಿಯ ಚಿಲುಮೆಯ ತೊಟ್ಟಿ ಇದೆ. ಮಂಟಪದ ಛಾವಣಿಯು ಸಣ್ಣ ಗುಮ್ಮಟಗಳನ್ನು ಹೊಂದಿದ್ದು ತಾವರೆ ದಳಗಳಿಂದ ಅಲಂಕೃತಗೊಂಡಿದೆ. ಮಧ್ಯದ ಚಾವಣಿಯಲ್ಲಿ ದೊಡ್ಡವಾದ ಕೆಳಮಟ್ಟದ ಅಷ್ಟಕೋನಾಕಾರದ ಗುಮ್ಮಟವಿದೆ. ಈ ಮಂಟಪದ ದಕ್ಷಿಣಕ್ಕೆ ಒಂದೇ ಶಿಲೆಯಲ್ಲಿ ಕಡೆದ ತೊಟ್ಟಿಯೊಂದು ಕಂಡುಬರುತ್ತದೆ. ಈ ಮಂಟಪದ ಹೊರಭಾಗದಲ್ಲಿ ಮಣ್ಣಿನ ಕೊಳವೆಗಳ ಅವಶೇಷಗಳನ್ನು ಕಾಣಬಹುದು. ಬಹುಶಃ ಇವುಗಳ ಮೂಲಕವೇ ಈ ಮಂಟಪಕ್ಕೆ ನೀರನ್ನು ಒದಗಿಸುತ್ತಿದ್ದರೆಂಬುದಕ್ಕೆ[೧೧೩] ಇಲ್ಲಿನ ಕುರುಹುಗಳು ಸಾಕ್ಷಿಯನ್ನು ಒದಗಿಸುತ್ತದೆ.

**ಪುಷ್ಕರಣಿ:** ಮಹಾನವಮಿದಿಬ್ಬದ ನೈರುತ್ಯದಿಕ್ಕಿನಲ್ಲಿ ಇತ್ತೀಚಿಗೆ ಬೆಳಕಿಗೆ ಬಂದಿದೆ. ಇದು ಹೊಯ್ಸಳರ ಹಳೇಬೀಡಿನ ಸಮೀಪದ ಹುಲಿಕೆರೆಯಲ್ಲಿರುವ ಕಲ್ಯಾಣಿಯನ್ನು ಬಹುಮಟ್ಟಿಗೆ ಹೋಲುತ್ತದೆ.[೧೧೪] ಮೆಟ್ಟಿಲು ಪುಷ್ಕರಣೆಯು ನೆಲಮಟ್ಟಕ್ಕಿಂತ ಕೆಳಗೆ ಇದೆ. ಐದು ಹಂತಗಳಿದ್ದು ಪ್ರತಿ ಮೇಲಿನ ಹಂತವು ಕೆಳಗಿನ ಹಂತಕ್ಕಿಂತ ಹೆಚ್ಚು ವಿಸ್ತಾರವಾಗಿದ್ದು ಪ್ರತಿ ಹಂತಚೌಕಾರವಾಗಿದೆ. ಮೊದಲನೆಯ ಹಂತವು ೬.೯೦ x ೬.೯೦ ಮೀ ಇದ್ದು ಆಳವು ೨.೪೫ ಮೀ ಇದೆ. ಇದರ ನಾಲ್ಕು ದಿಕ್ಕಿನಲ್ಲಿ ಹನ್ನೊಂದು ಮೆಟ್ಟಿಲುಗಳಿವೆ. ಇವುಗಳ ಅಗಲ ಮಾತ್ರ ಹೆಚ್ಚಾಗುತ್ತಾ ಕೊಳದ ಆಳಕ್ಕೆ ಪಕ್ಕಕ್ಕೆ ಚಲಿಸುತ್ತಾ ಇಳಿಮುಖವಾಗುತ್ತದೆ. ಎರಡನೆ, ಮೂರನೇಯ, ನಾಲ್ಕನೆಯ ಐದನೇಯ ಹಂತಗಳು ೯.೨೦ ಮತ್ತು

೯.೨೦ ಮತ್ತು ೧೨.೬೫ x ೧೨.೬೫ ಮೀ ೧೬.೧೦ x ೧೬.೨೦ ಮೀ, ೨೦.೭೦ x ೨೦.೭೦ ಮೀಟರ್ ಕ್ರಮವಾಗಿ ಇದೆ. ಪ್ರತಿ ಹಂತದಲ್ಲೂ ಆರು ಮೆಟ್ಟಿಲುಗಳು ಪಿರಮಿಡ್ ಆಕಾರವನ್ನು ಹೋಲುತ್ತದೆ.

ಎರಡನೇ ಹಂತದಲ್ಲಿ ಪ್ರತಿದಿಕ್ಕಿಗಳಲ್ಲಿ ಮೂರು ಮೆಟ್ಟಿಲುಗಳಿವೆ. ಮೂರನೇ, ನಾಲ್ಕನೇ ಐದನೇ ಹಂತದ ಪ್ರತಿದಿಕ್ಕಿನಲ್ಲಿ ಐದು, ಏಳು ಮತ್ತು ಒಂಬತ್ತು ಮೆಟ್ಟಿಲುಗಳಿವೆ. ಪುಷ್ಕರಣಿಯ ಪ್ರತಿ ಹಂತದ ಆಳವು ಸುಮಾರು ೧.೦೫ ಮೀ ಇದ್ದು ಒಟ್ಟು ಆಳವು ೬.೬ ಮೀ ಪುಷ್ಕರಣಿಯ ತಳಭಾಗದಲ್ಲಿ ಕಲ್ಲುಗಳನ್ನು ಹಾಸಿದ್ದು ಅದರ ಕೆಳಗಡೆ ಮರಗಳನ್ನು ಒದಗಿಸಲಾಗಿದೆ. ತಿಳಿನೀರು ಮಾತ್ರ ಕೊಳದೊಳಗೆ ಬರಲು ಮರಳಿನ ಕವಚದಿಂದ ಸಹಕಾರಿಯಾಗಿದೆ. ಈ ಮೆಟ್ಟಿಲು ಪುಷ್ಕರಣಿಯ ವಿನ್ಯಾಸ ಮತ್ತು ನಿರ್ಮಾಣ ಕಾರ್ಯವು ಪೂರ್ಣವಾಗಿ ಪೂರ್ವ ನಿಯೋಜಿತವಾಗಿರುವುದು ಅತ್ಯಂತ ಗಮನಾರ್ಹ. ಇಲ್ಲಿ ಬಳಸಲಾಗುವ ವಾಸ್ತು ಭಾಗಗಳ ಮೇಲೆ ದಿಕ್ಕು ಮತ್ತು ಸಂಖ್ಯೆಗಳನ್ನು ನಮೂದಿಸಲಾಗಿರುವುದರಿಂದ ಬೇರೆ ಕಡೆ ಕಲ್ಲುಗಳನ್ನು ಸಿದ್ಧಪಡಿಸಿಕೊಂಡು ಇದನ್ನು ಕಟ್ಟಿ ನಿರ್ಮಿಸಲಾಗಿದೆ. ಈ ಸ್ಥಳ ನಿರ್ದೇಶನದ ಚಿಹ್ನೆಗಳು ೧೪-೧೫ ಶತಮಾನದ ಕನ್ನಡ ಲಿಪಿಯಲ್ಲಿದೆ.[೧೧೫] ಪ್ರತಿಯೊಂದು ಕಲ್ಲಿನ ಮೇಲೆ ಸಂಖ್ಯೆ. ಚಿಹ್ನೆ ಮತ್ತು ಅಕ್ಷರಗಳು ಇದೆ. ಉತ್ತರ, ದಕ್ಷಿಣ, ಪೂರ್ವ ಮತ್ತು ಪಶ್ಚಿಮ ದಿಕ್ಕುಗಳನ್ನು ಆಯಾ ದಿಕ್ಕಿನ ಮೊದಲ ಅಕ್ಷರವನ್ನು ಬರೆದು ಸೂಚಿಸಲಾಗಿದೆ. ಅವು ಕ್ರಮಾನುಸಾರದಲ್ಲಿ ಉ.ದ.ಪೂ ಮತ್ತು ಪ ಎಂದು ಸೂಚಿಸಲಾಗಿದೆ. ಒಟ್ಟು ಮೂವತ್ತಾರು ಮೆಟ್ಟಿಲುಗಳು ಐದು ಹಂತಗಳಲ್ಲಿವೆ. ಪ್ರತಿ ಮೆಟ್ಟಿಲಿಗೂ ಕನ್ನಡದ ಒಂದು ವರ್ಣಮಾಲೆಯನ್ನು ಬಳಸಲಾಗಿದೆ. ಐದನೇ ಹಂತದ ಮೇಲೆ ಸುತ್ತಲೂ ಒರಗು ದಿಂಬಿನಾಕಾರದ ಕಲ್ಲುಗಳಿವೆ. ಇದಕ್ಕೆ "ಠ" ಅಕ್ಷರವನ್ನು ಬಳಸಲಾಗಿದೆ.

**ಚಿಹ್ನೆಗಳು:** ಪುಷ್ಕರಣಿಯ ಐದು ಪ್ರತಿಹಂತದ ಶಿಲೆಗಳ ಮೇಲೂ ವಿವಿಧ ಚಿಹ್ನೆಗಳಿವೆ. ಇವು ಪ್ರತಿಯೊಂದು ದಿಕ್ಕಿಗೂ ಮತ್ತು ಹಂತಕ್ಕೂ ಬೇರೆ ಬೇರೆಯಾಗಿದೆ. ಮೂರು ಹಂತಗಳಲ್ಲಿ ಶಂಖ, ನಕ್ಷತ್ರ ಮತ್ತು ಸ್ವಸ್ತಿಕ್ ಚಿಹ್ನೆಗಳಿವೆ. ನಾಲ್ಕನೇ ಹಂತದಲ್ಲಿ ವೃತ್ತದ ವಿವಿಧ ರೂಪಗಳಾಗಿ ವೃತ್ತ, ಅರ್ಧವೃತ್ತ, ಹೊರಗಡೆ, ಸರಳರೇಖೆ ಇರುವ ವೃತ್ತ ಮತ್ತು ಪರಸ್ಪರ ಲಂಬಗಳನ್ನುಳ್ಳ ವೃತ್ತಗಳು ಇವೆ. ಐದನೇ ಹಂತದಲ್ಲಿ ಸರಳರೇಖೆಯ ವಿವಿಧ ರೂಪಗಳಾಗಿ, ಎರಡು ಸಮಾನಾಂತರ ಸರಳರೇಖೆಗಳು, ಎರಡು ಸಮಾನಾಂತರ ರೇಖೆಗಳನ್ನು ವಿಭಜಿಸಿದ ಅಡ್ಡರೇಖೆ, ಪರಸ್ಪರ ಲಂಬವಾಗಿರುವ ಎರಡು ರೇಖೆಗಳು ಮತ್ತು ತ್ರಿಕೋಣಾಕಾರದ ಚಿಹ್ನೆಗಳಿವೆ.

**ಪಿರಾಮಿಡ್ ಆಕರದ ಮೆಟ್ಟಿಲುಗಳು:** ಈ ಪುಷ್ಕರಣೆಯಲ್ಲಿ ನೂರು ಮೆಟ್ಟಿಲುಗಳ ಸಮೂಹವಿದೆ. ಪ್ರತಿ ಸಮೂಹದಲ್ಲಿ ಪ್ರತ್ಯೇಕ ಸಂಕೇತದ ಸಂಖ್ಯೆ ಮತ್ತು ಆರು ಮೆಟ್ಟಿಲುಗಳಿವೆ. ಎರಡನೇ ಹಂತದಲ್ಲಿ ಮೂರು ಪಿರಮಿಡ್ ಆಕಾರದ ಮೆಟ್ಟಿಲುಗಳ ಸಮೂಹವಿದ್ದು, ಎಡದಿಂದ ಬಲಕ್ಕೆ, ಅವುಗಳ ಸಂಖ್ಯೆಯನ್ನು ನೀಡಲಾಗಿದೆ. ಮೂರು-ನಾಲ್ಕನೇ ಹಂತದ ಮೆಟ್ಟಿಲುಗಳ ಸಮೂಹಕ್ಕೆ ಸರಿಯಾಗಿ ಅಳವಡಿಸಲಾಗಿದೆ. ಪಕ್ಕದ ಮೆಟ್ಟಿಲುಗಳ ಸಮೂಹಕ್ಕೆ ಹೋಲಿಸಿದಾಗ ಸ್ವಲ್ಪ ಅಗಲದಲ್ಲಿಯೂ ಮತ್ತು ಉದ್ದದಲ್ಲಿಯೂ ಹೆಚ್ಚು ಅಳತೆಹೊಂದಿದೆ. ಪ್ರತಿ ಮೆಟ್ಟಲಿನ ಮೂಲೆಯ ಸ್ವಲ್ಪ ಒಳಬಂದಂತಿದೆ. ಮೆಟ್ಟಿಲು ಒಂದೇ

ಕಲ್ಲಿನಿಂದ ಕೂಡಿದ್ದರೆ ಅದರ ಸಂಖ್ಯೆಯನ್ನು ಒಂದು ಎಂದು ಹೇಳಲಾಗಿದೆ. ಮೂರು ನಾಲ್ಕು ಐದನೇ ಮೆಟ್ಟಿಲುಗಳ ಅಗಲ ಹೆಚ್ಚಿಗೆ ಇದ್ದು ಇವು ೨-೩ ಕಲ್ಲುಗಳಿಂದ ಕೂಡಿರುತ್ತದೆ.

**ತಾಂತ್ರಿಕತೆ:** ಸಂಪೂರ್ಣ ತಾಂತ್ರಿಕೆ ಒಳಗೊಂಡ ಮೆಟ್ಟಿಲು ಪುಷ್ಕರಣಿ ಇದಾಗಿದೆ. ಪ್ರತಿ ದಿಕ್ಕು-ಹಂತ ಮೆಟ್ಟಿಲುಗಳಿಗೆ ಅಕ್ಷರ-ಚಿಹ್ನೆ-ಸಂಖ್ಯೆಗಳನ್ನು ಬಳಸಲಾಗಿದೆ. ಈ ಪುಷ್ಕರಣಿಯ ದಕ್ಷಿಣ ದಿಕ್ಕಿಗೆ ಒಂದು ದೇವಾಲಯವಿದೆ. ಇದಕ್ಕೆ ವೇದಿಕೆ ಇರುವುದು ವಿಶೇಷತೆ. ಇದರ ವಿಶಿಷ್ಟ ವಿನ್ಯಾಸ ಅಲಂಕಾರ ಹಾಗೂ ಪಾರ್ಶ್ವದಲ್ಲಿರುವ ಮಂದಿರ ಇವುಗಳಿಂದ ಇದು ರಾಜಾಂಗಣದಲ್ಲಿ ವಾಸಿಸುತ್ತಿದ್ದ ರಾಜ ಮನೆತನದವರ ಸ್ವಂತ ಉಪಯೋಗಕ್ಕಾಗಿ[೧೧೬] ಬಹುಶಃ ನಿರ್ಮಾಣವಾಗಿರಬಹುದೇ? ಈ ಪುಷ್ಕರಣಿಯನ್ನು ನಿರ್ಮಿಸಿದ ನಂತರ ಕಲ್ಲಿನ ತೊಟ್ಟಿಲು ಕಾಲುವೆಗಳ ಮೂಲಕ ನೀರು ಪೂರೈಕೆಯಾಗುತ್ತಿತ್ತು. ಇದು ವರ್ಷಪೂರ್ತಿಬಳಕೆಯಲ್ಲಿದೆ. ನೆಲಮಟ್ಟದಲ್ಲಿ ದಿಂಬು ಕಲ್ಲು ಇರುವುದು ಈ ಪುಷ್ಕರಣಿಯಲ್ಲಿ ದೇವರ ತೆಪ್ಪೋತ್ಸವ ಇತ್ಯಾದಿ ಆಚರಣೆಗಳನ್ನು ವೀಕ್ಷಿಸಲು ಮಾಡಿದ ಅನುಕೂಲವಿರಬಹುದು.[೧೧೭]

**ಮಹಾನವಮಿ ದಿಬ್ಬ :** ಇದನ್ನು ದಸರಾದಿಬ್ಬವೆಂತಲೂ ಕರೆಯುತ್ತಾರೆ. ಫಯಾಜ್‌ರವರು ವಿಜಯ ನಗರದ ಭವನ ಎಂದು ಕರೆದಿದ್ದಾರೆ. ಆದರೆ ಇದು ಅರಮನೆಯ ಪ್ರದೇಶದಿಂದ ಈಶಾನ್ಯದಿಕ್ಕಿನಲ್ಲಿದೆ. ಈ ಎತ್ತರವಾದ ಸಭಾ ಪೀಠಾಂಗವನ್ನು ಉದಯಗಿರಿಯ ದಿಗ್ವಿಜಯದ ಸ್ಮರಣಾರ್ಥವಾಗಿ ಕೃಷ್ಣ ದೇವರಾಯನು ಕ್ರಿ.ಶ. ೧೫೩೧ರಲ್ಲಿ ನಿರ್ಮಿಸಿದನು.[೧೧೮] ವಾಸ್ತವವಾಗಿ ಈ ವೇದಿಕೆಯ ಮೇಲೆ ವರ್ಣರಂಜಿತವಾದ ಅಲಂಕರಣಗೊಂಡ ಕಂಭಸಾಲುಳ್ಳ ಹಾಜಾರವಿತ್ತು. ನವರಾತ್ರಿಯಲ್ಲಿ ಒಂಬತ್ತು ದಿನಗಳ ಕಾಲ ಇಲ್ಲಿ ವಿಜೃಂಭಣೆಯಿಂದ ಹಬ್ಬವು ನಡೆಯುತ್ತಿತ್ತು.[೧೧೯] ಆದರೆ ಈಗ ಕಾಣುವುದು ಕೇವಲ ಮೂರು ಸ್ತರಗಳ ವಿಶಾಲವಾದ ವೇದಿಕೆ ಮಾತ್ರ. ಒಂದೊಂದು ಸ್ತರದ ಅಂಚಿನಲ್ಲೂ ಬೆಣಚುಕಲ್ಲನ್ನು ಅಳವಡಿಸಿದ್ದು. ಈ ಕಲ್ಲುಗಳಲ್ಲಿ ಮಾಂಡಲೀಕರು ಮತ್ತು ವಿದೇಶಿಗಳ ರಾಯಭಾರಿಗಳು ಕಾಣಿಕೆ ಸಲ್ಲಿಸುತ್ತಿರುವ ದೃಶ್ಯಗಳನ್ನು ಆನೆ, ಕುದುರೆ, ಮತ್ತು ಕಾಲ್ದಳಗಳ ಮೆರವಣಿಗೆಯ ಚಿತ್ರಗಳನ್ನು ಅದ್ಭುತವಾಗಿ ಬಿಡಿಸಲಾಗಿದೆ. ಸೂಕ್ಷ್ಮ ಶಿಲ್ಪಗಳ ಫಲಕಗಳನ್ನು ವೇದಿಕೆಯ ಪಶ್ಚಿಮ ಭಾಗದಲ್ಲಿ ಕಾಣಬಹುದು. ಅವುಗಳಲ್ಲಿ ನೃತ್ಯಗಾರರು, ಸಂಗೀತಗಾರರ ಶಿಲ್ಪಗಳಿವೆ. ಪೂರ್ವಭಾಗದಲ್ಲಿ ಸಣ್ಣ ಕೊಠಡಿ ಇದ್ದು, ವೇದಿಕೆ ಏರಲು ಮತ್ತು ಇಳಿಯಲು ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಮೆಟ್ಟಿಲುಗಳಿವೆ. ಒಳ ಭಿತ್ತಿಯ ಮೇಲೆ ಶಂಕುವಿನಾಕಾರದ ಟೋಪಿಗಳನ್ನು ಧರಿಸಿದಂತೆ ಚಿತ್ರಿತವಾದ ಶಿಲ್ಪಗಳಿವೆ. ಇವು ಚೀನಾದೇಶದ ರಾಯಭಾರಿಗಳೆಂದು ಊಹಿಸಲಾಗಿದೆ. ಇದರ ಹೊರ ಮಗ್ಗಲು ಎಂಟು-ಹತ್ತು ಸಾಲುಗಳಲ್ಲಿ ಪ್ರಾಣಿ-ಪಕ್ಷಿ, ನೃತ್ಯಗಾರ್ತಿಯರ, ದೇವಾಲಯ, ಕ್ರೀಡೆ ಮೊದಲಾದ ಕಲಾತ್ಮಕ ಕೆತ್ತನೆಗಳಿವೆ. ವೇದಿಕೆಯ ತಳಬಾಗ ಸುಮಾರು ನಲವತ್ತು ಮೀ ಚದರವಾಗಿದ್ದು ಮೇಲಿನ ಸ್ತರ ಇಪ್ಪತ್ನಾಲ್ಕು ಮೀಟರ್ ಚದರ ವಿಸ್ತೀರ್ಣವನ್ನು ಹೊಂದಿದೆ.[೧೨೦] ಒಟ್ಟಿನಲ್ಲಿ ಈ ದಿಬ್ಬದ ಮೇಲೆ ಮಹಾನವಮಿಯ ದಿನ ಚಕ್ರವರ್ತಿ ರಾಜ ಪರಿವಾರದೊಡನೆ ಕುಳಿತ ಎದುರುಗಡೆ ನಡೆಯುತ್ತಿದ್ದ ಕುಸ್ತಿ, ನಾಟ್ಯ, ಆನೆಗಳ ಕಾಳಗ ಮುಂತಾದ ಕ್ರೀಡೆ, ಉತ್ಸವಗಳನ್ನು, ನೊಡುತ್ತಿದ್ದರೆಂಬ ಪ್ರತೀತಿ ಇದೆ.[೧೨೧]

**ಕಮಲ ಮಹಲ್**: ರಾಣಿ ಸ್ನಾನ ಗೃಹದ ಪೂರ್ವಕ್ಕೆ ಸ್ವಲ್ಪ ದೂರದಲ್ಲಿ ಕಮಲ ಮಂದಿರ. ಇದು ಕಮಲದ ಆಕಾರದಂತೆ ನಿರ್ಮಿಸಲ್ಪಟ್ಟಿದ್ದರಿಂದ "ಕಮಲ ಮಹಲ್" ಎಂದು ಕರೆಯುವ ವಾಡಿಕೆ ಇದೆ.[೧೨೨] "ಚಿತ್ತರಂಗಿ ಮಹಲ್" ಎಂತಲೂ ಇದನ್ನು ಕರೆಯುತ್ತಾರೆ. ಇದು ಎರಡು ಅಂತಸ್ತುಗಳ ಒಂದು ಆಕರ್ಷಕ ಮಂಟಪ. ಇದು ಇಟ್ಟಿಗೆ-ಗಾರೆಗಳಿಂದ ನಿರ್ಮಿತವಾದ ವಿಹಾರ ಮಂಟಪ. ಈ ಮಂಟಪ ಭೂಮಿಯ ಸಮತಲದಿಂದ ಕೆಳಮಟ್ಟದಲ್ಲಿದ್ದು ಮೂರು ಪಾವಟಿಗಳ ಸಹಾಯದಿಂದ ಮೇಲೆ ಹತ್ತಿದ್ದಾಗ ಮೇಲ್ಮನೆಯಲ್ಲೂ ರೂಪಗಳಿವೆ. ಅರೇಬಿಕ್ ಶೈಲಿಯ ಚಿಕ್ಕ ಚಿಕ್ಕ ಕಮಾನುಗಳಿಂದ ಆಕರ್ಷಿತವಾದ ಭಿತ್ತಿಗಳಿಂದ ಅಲಂಕೃತವಾದ ಈ ಮಹಡಿಯ ಮಧ್ಯಭಾಗ ಗುಮ್ಮಟದಂತೆ ಎತ್ತರವಾಗಿದೆ.[೧೨೩] ವಾಸ್ತವವಾಗಿ ಚೌಕಾಕಾರದಿಂದ ತಳಪಾಯ ಹೊಂದಿದ್ದರೂ ಈಗ ಕಲ್ಲಿನ ಅಧಿಕೃತ ಅಧಿಷ್ಠಾನದ ಮೇಲೆ ಚೌಕಾಕಾರದ ಇಪ್ಪತ್ನಾಲ್ಕು ಸ್ತಂಭಗಳಿದ್ದು ಹಿಂಜರಿದ ಪತ್ರ ವಿನ್ಯಾಸದ ಕಮಾನುಗಳು ಅವುಗಳನ್ನು ಆಧರಿಸಿದೆ. ಮೊದಲಿನ ಅಂತಸ್ತಿನ ಕಪೋತದಲ್ಲಿ ತುಸು ಬಾಗಿದ ಪುಷ್ಪವಿನ್ಯಾಸ ಹಾಗೂ ಹೊರಮೂಲೆಗಳಲ್ಲಿ ಯಾಳಿಗಳಿದ್ದು, ಈ ಎಲ್ಲಾ ಶಿಥಿಲವಾಗಿದ್ದು ಒಂದೇ ಒಂದು ಮಾತ್ರ ಉಳಿದಿದೆ. ಒಳಭಾಗದಲ್ಲಿ ಯಾವುದೇ ಅಲಂಕಾರತೇ ಇಲ್ಲದೆ ಮೂಲರೂಪದಲ್ಲಿರುವುದು ಇದರ ವಿಶೇಷತೆ. ಸ್ತಂಭಗಳನ್ನು ಅಲಂಕೃತ ಕಮಾನುಗಳಿಂದ ಕೂಡಿಸಿವೆ. ಅಡ್ಡ ಕಮಾನುಗಳು ಕೆಳಭಾಗದಲ್ಲಿದುದು ಮೇಲ್ಛಾವಣೆಯ ಮಧ್ಯಭಾಗ ಕಮಲದ ಮೊಗ್ಗುವಿನಿಂದ ಆವೃತ್ತವಾಗಿ ಕೆಳಮುಖವಾಗಿದೆ. ಈ ಕಟ್ಟಡದ ಉತ್ತರ ದಿಕ್ಕಿಗೆ ಮೇಲಿನ ಅಂತಸ್ತಿಗೆ ಹೋಗಲು ಮೆಟ್ಟಿಲುಗಳಿವೆ. ಮೇಲ್ಛಾವಣೆಯ ಚಿತ್ರಣ ಮಾಳಿಗೆ ಮೇಲೆ ಹತ್ತು ಸೋಪಾನಗಳಿರುವುದು ಒಂದು ವೈಶಿಷ್ಟ್ಯತೆಯಾಗಿದೆ.[೧೨೪]

ಇಲ್ಲಿ ಗಾರೆಗಳಿಂದ ನಿರ್ವಿತವಾದ ಕಮಾನುಗಳು, ಲತಾ ವಿನ್ಯಾಸಗಳು, ಪುಷ್ಪಬೋದಿಗೆಗಳು ವಿಗ್ರಹಗಳನ್ನು ಇಡಲು ಗೂಡುಗಳಿವೆ. ಮಧ್ಯದಲ್ಲಿ ಕಮಲದ ಗುಮ್ಮಟ ಕೆಳಮುಖವಾಗಿದ್ದು, ಕಟ್ಟಡದ ಮೇಲೆ ಪಿರಮಿಡ್‌ನಾಕಾರದ ವಿಭಿನ್ನಗಾತ್ರದ ಒಂಬತ್ತು ಶಿಖರಗಳಿವೆ. ಇವು ಒಂದೊಂದು ತುಸು ಬಾಗಿದ ಕಪೋತಗಳಿಗಾಗಿ ಒಂದರ ಮೇಲೊಂದು ಕಿರಿದಾಗುತ್ತಾ ಹೋಗಿದೆ.

ಈ ಸ್ಮಾರಕವನ್ನು ಯಾವ ರೀತಿಯಿಂದ ನೋಡಿದರೂ ಒಂದೇ ರೀತಿಯಲ್ಲಿ ಕಾಣಿಸುತ್ತದೆ.[೧೨೫] ಈ ಸ್ಮಾರಕ ಹಿಂದೂ-ಮುಸ್ಲಿಂ ಶೈಲಿಗೆ ಒಂದು ಸೂಕ್ತ ಉದಾಹರಣೆ. ಇದರ ಮುಂಚಾಚು ದ್ವಿಭಂಗಿ ಸೂರು, ಅದಕ್ಕೆ ಬೆಂಬಲ ನೀಡುವ ಚಾಚು ಪೀಠಗಳು, ಈ ಸ್ಮಾರಕದ ಮೇಲಿನ ಗೋಪುರಗಳು, ಹಿಂದೂ ವಾಸ್ತು ಶೈಲಿಯಾದರೆ, ಸುತ್ತಲೂ ತೆರೆದ ಕಮಾನುಗಳು ಮುಸ್ಲಿಂ ಶೈಲಿಯಲ್ಲಿರುವುದು ವಿಶೇಷತೆಯಾಗಿದೆ.

**ಕೋಟೆ**

| ಕ್ರ.ಸಂ | ಗ್ರಾಮ | ಕಾಲ | ಸ್ಥಿತಿ |
|---|---|---|---|
| ೧ | ಕಾಮಲಾಪುರ | ೧೭೩೦ | ಜೀರ್ಣೋದ್ಧಾರ |

## ಹೆಬ್ಬಾಗಿಲು

| ಕ್ರ.ಸಂ | ಸ್ಥಳ | ಹೆಸರು | ಕಾಲ | ಶೈಲಿ | ಸ್ಥಿತಿ |
|---|---|---|---|---|---|
| ೧. | ಆನೆಲಾಯದ ಹಿಂಬದಿ ಬಾಗಿಲು | ಸಿಂಗಾರದ ಶತಮಾನ | ೧೫-೧೬ನೇ | – | ಸುಸ್ಥಿತಿ |
| ೨. | ವರದರಾಜಮ್ಮ ಪಟ್ಟಣಕ್ಕೆ ಹೋಗುವ ರಸ್ತೆಯ ಎಡಬದಿಯಲ್ಲಿ | ಗುಮ್ಮಟ ಬಾಗಿಲು | ಹಿಂದೂ-ಮುಸ್ಲಿಂ | – | ಜೀರ್ಣೋದ್ಧಾರ |
| ೩. | ಗಾಣಗಿತ್ತಿದೇವಾಲಯದ ಆಗ್ನೇಯದಿಕ್ಕಿಗೆ | ಭೀಮನ ಬಾಗಿಲು | ೧೫ನೇ ಶತಮಾನ | – | ಸುಸ್ಥಿತಿ |
| ೪. | ಸಿಂಗಾರದ ಬಾಗಿಲಿನ ದಕ್ಷಿಣಕ್ಕೆ | ಸೋಮವಾರದ ಬಾಗಿಲು | ೧೫ನೇ ಶತಮಾನ | – | ಹಾಳಾಗಿದೆ |
| ೫. | ಕಂಪ್ಲಿಗೆ ಹೋಗುವ ರಸ್ತೆಯ ಎಡಬದಿಯಲ್ಲಿ | ಉದಯಗಿರಿಯ ಬಾಗಿಲು | ೧೫ನೇ ಶತಮಾನ | – | ಹಾಳಾಗಿದೆ |
| ೬. | ಪಟ್ಟಾಭಿರಾಮ ದೇವಾಲಯದ ಹತ್ತಿರ | ಒಂದನೇ ಪೆನುಗೊಂಡ ಬಾಗಿಲು | ಕ್ರಿ.ಶ.೧೫೪೦ | – | ಸುಸ್ಥಿತಿ |
| ೭. | ಪೆನುಗೊಂಡ ಬಾಗಿಲಿನ ಉತ್ತರಕ್ಕೆ | ಎರಡನೇ ಪೆನುಗೊಂಡ ಬಾಗಿಲು | ಕ್ರಿ.ಶ. ೧೫ನೇ ಶತಮಾನ | – | ಹಾಳಾಗಿದೆ |
| ೮. | ಅಕ್ಕ-ತಂಗಿಯ ಗುಡ್ಡದ ಹಿಂಬದಿ | ಕೋಟೆಶಂಕರ ಬಾಗಿಲು | ಕ್ರಿ.ಶ.೧೫ನೇ ಶತಮಾನ | – | ಶಿಥಿಲಾವಸ್ಥೆ |
| ೯. | ಅಕ್ಕ-ತಂಗಿಯ ಗುಡ್ಡದ ಹಿಂಬದಿ | ಜಡೆ ಶಂಕರ ದಿಡ್ಡಿ ಬಾಗಿಲು | ಕ್ರಿ.ಶ.೧೫ನೇ ಶತಮಾನ | – | ಹಾಳಾಗಿದೆ |
| ೧೦. | ಜಡೆ ಶಂಕರದೇವರ ದಿಡ್ಡಿ ಅಂತರದಲ್ಲಿ | ಹಂಪಾದೇವಿಯ ಬಾಗಿಲು | ಕ್ರಿ.ಶ.೧೫ನೇ ಶತಮಾನ | – | ಶಿಥಿಲಾವಸ್ಥೆ |

## ಕೊತ್ತಲಗಳು

| ಕ್ರ.ಸಂ | ಸ್ಥಳ | ಹೆಸರು | ಕಾಲ | ಸ್ಥಿತಿ |
|---|---|---|---|---|
| ೧. | ಕೋಟೆ ಶಂಕರಬಾಗಿಲಿನ ಮುಂಭಾಗ | ಪ್ರತಾಪ ಕೊತ್ತಳ | ಕ್ರಿ.ಶ.೧೫ನೇ ಶತಮಾನ | ಜೀರ್ಣೋದ್ಧಾರ |
| ೨. | ಹಂಪಾದೇವಿ ದಿಡ್ಡಿಬಾಗಿಲು ಹಾಗೂ ಜಡೆ ಶಂಕರ ದೇವರ ದಿಡ್ಡಿ ಬಾಗಿಲುಗಳ ಮಧ್ಯ | ಸ್ವಾಮಿ ದ್ರೋಹರ ಗಂಡನ ಕೊತ್ತಳ | ಕ್ರಿ.ಶ.೧೫ನೇ ಶತಮಾನ | ಜೀರ್ಣೋದ್ಧಾರ |
| ೩. | ಕೋಟೆ ಶಂಕರ ದೇವರ ಬಾಗಿಲು ಪೂರ್ವಕ್ಕೆ | ಹಂಪಿಕೊತ್ತಳ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |

| | | | |
|---|---|---|---|
| ೪. ಸಿಂಘಾರದ ಹೆಬ್ಬಾಗಿಲಿನ ಉತ್ತರಕ್ಕಿರುವ ಬೆಟ್ಟದ ಮೇಲೆ | ಆನೆಗೊಂದಿ ಕೊತ್ತಳ | ಕ್ರಿ.ಶ.೧೫-೧೬ನೇ ಶತಮಾನ | ಜೀರ್ಣೋದ್ಧಾರ |
| ೫. ಸಿಂಘಾರದ ಮತ್ತು ಸೋಮವಾರದ ಬಾಗಿಲಿನ ಮಧ್ಯ | ಸೋಮಯ್ಯ ದೇವರ ಕೊತ್ತಳ | ಕ್ರಿ.ಶ.೧೫ ೧೬ನೇ ಶತಮಾನ | ಜೀರ್ಣೋದ್ಧಾರ |

## ಸ್ಮಾರಕಗಳು

| ಕ್ರ.ಸಂ ಸ್ಥಳ | ಹೆಸರು | ಕಾಲ | ಶೈಲಿ | ಸ್ಥಿತಿ |
|---|---|---|---|---|
| ೧. ಕಮಲ ಮಹಲ್‌ನ ಹಿಂದುಗಡೆ | ಗಜಶಾಲೆ | ೧೫ನೇ ಶತಮಾನ | ಹಿಂದೂ-ಮುಸ್ಲಿಂ | ಜೀರ್ಣೋದ್ಧಾರ |
| ೨. ಹಂಪಿಗೆ ಹೋಗುವ ರಸ್ತೆಯ ಬಲಗಡೆ | ರಾಣಿಸ್ನಾನ ಗೃಹ | ೧೫ನೇ ಶತಮಾನ | ಹಿಂದೂ-ಮುಸ್ಲಿಂ | ಜೀರ್ಣೋದ್ಧಾರ |
| ೩. ರಾಣಿಸ್ನಾನ ಗೃಹದ ಪಶ್ಚಿಮಕ್ಕೆ | ಅರವಟ್ಟಿಗೆ | ೧೫ನೇ ಶತಮಾನ | ಹಿಂದೂ-ಮುಸ್ಲಿಂ | ಸುಸ್ಥಿತಿ |
| ೪. ಮಹಾನವಮಿದಿಬ್ಬದ | ಪುಷ್ಕರಣಿ ನೈರುತ್ಯ ದಿಕ್ಕಿಗೆ | ೧೪-೧೫ನೇ ಶತಮಾನ | ಹೊಯ್ಸಳರ ಶೈಲಿ | ಸುಸ್ಥಿತಿ |
| ೫. ಅರಮನೆಯ ಪ್ರದೇಶದಿಂದ ಈಶಾನ್ಯ ದಿಕ್ಕಿಗೆ | ಮಹಾನವಮಿ ದಿಬ್ಬ | ಕ್ರಿ.ಶ.೧೫೩೧ | – | ಸುಸ್ಥಿತಿ |
| ೬. ರಾಣಿಸ್ನಾನ ಗೃಹದಪೂರ್ವಕ್ಕೆ | ಕಮಲಮಹಲ್ | ೧೫ನೇ ಶತಮಾನ | ಹಿಂದೂ-ಅರೇಬಿಕ್ | ಜೀರ್ಣೋದ್ಧಾರ |

## ಅಡಿ ಟಿಪ್ಪಣಿ

೧. ಬ್ರೂನೋ ಡೆಗೆನ್ಸ್, ಮಯಮತ, ೧೯೮೫, ಪು.೩೫, ನವದೆಹಲಿ

೨. ಅನಂತರಂಗಚಾರ್.ಎನ್, ಭಾರತೀಯ ಶಿಲ್ಪಶಾಸ್ತ್ರದ ಸಂಕ್ಷಿಪ್ತ ಪರಿಚಯ, ೧೯೫೪, ಬಾಗಿನ (ರಂಗಣ್ಣ.ಎಸ್.ವಿ.ರವರ ಸ್ಮರಣ ಸಂಚಿಕೆ), ಪು.೩೦೮

೩. ತಿಪ್ಪೇರುದ್ರಸ್ವಾಮಿ.ಎಚ್, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ೧೯೯೭, ಪು.೫೨೬

೪. ಅದೇ ಪು.೫೨೭

೫. ಗೋಪಾಲರಾವ್.ಎಚ್.ಎಸ್, ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ, (ಅಪ್ರಕಟಿತ ಪಿ.ಎಚ್.ಡಿ ಪ್ರಬಂಧ), ೧೯೯೩, ಪು.೩

೬. ರಾಮಚಂದ್ರರಾವ್.ಎಸ್.ಕೆ, ಗುಡಿ ಜನರ ಜೀವನಾಡಿ, ೧೯೯೪, ಪು.೧

೭. ಅಪರ್ಣ.ಕೂ.ಸ, ದೇವಾಲಯ ವಾಸ್ತುಶಿಲ್ಪ ಪರಿಚಯ, ೧೯೯೯, ಪು.೨

೮. ಚಿದಾನಂದ ಮೂರ್ತಿ.ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೯, ಪು.೧೭೫-೧೭೬

೯. ಅಪರ್ಣ.ಕೂ.ಸು, ದೇವಾಲಯ ವಾಸ್ತು ಪರಿಚಯ, ೧೯೯೯, ಪು.೧

೧೦. ಎಂ.ಎ.ಧಾಕಿ ಅವರು ಈ ಮಾಹಿತಿಗಳನ್ನು ಮೊದಲ ಬೆಳಕಿಗೆ (Indian Temple Forms in Karnataka Inscriptions -೧೯೭೫) ತಂದಿದ್ದಾರೆ.

೧೧. ಅದೇ

೧೨. ಕರ್ಮವೀರ ವಾರಪತ್ರಿಕೆ (ಫೆಬ್ರವರಿ-೧) ೨೦೦೧, ಪು..೬೯

೧೩. ಸುಂದರ ಅ.(ಸಂ) ಕರ್ನಾಟಕ ಚರಿತ್ರೆ ಸಂ.೧, ೧೯೯೭, ಪು.೩೧೪

೧೪. ರಘುನಾಥ ಭಟ್ ಎಚ್.ಆರ್, ಪ್ರಾಚೀನ ಕರ್ನಾಟಕ ವಾಸ್ತು ಶಿಲ್ಪಕಲೆ ಕನಕಸಿರಿ (ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ), ೧೯೯೯ ಪು.೫೬೭

೧೫. ಭಟ್. ಎನ್.ಆರ್, ಅಜಿತಾಗಮ, ೧೯೬೪, ಪು.೮೨, ಪಾಂಡಿಚೆರಿ

೧೬. ಪ್ರಭಾಕರನ್.ಎಂ.ಎನ್, ದೇವಾಲಯ ವಾಸ್ತುಚಂದ್ರಿಕೆ, ೨೦೦೦, ಪು.೩೭

೧೭. ಧಾಕೀ. ಎಂ.ಎ., ದಿ.ಇಂಡಿಯನ್ ಟೆಂಪಲ್ ಫಾರ್ಮಸ್ ಇನ್ ಕರ್ನಾಟಕ ಇನ್‌ಸ್ಕ್ರಿಪ್ಶನ್ಸ ಆ್ಯಂಡ್ ಆರ್ಕಿಟೆಕ್ಚರ್, ೧೯೭೭, ನ್ಯೂದೆಹಲಿ, ಪು.೧೪

೧೮. ಅದೇ ಪು.೧೩

೧೯. ಅಪರ್ಣ ಕೂ.ಸ. ಪೂರ್ವೋಕ್ತ, ಪು.೬೭

೨೦. ಧಾಕೀ. ಎಂ.ಎ., ಪೂರ್ವೋಕ್ತ, ಪು-೨೧

೨೧. ಅದೇ ಪು.೨೨

೨೨. ಸುರೇಶ್ ಕೆ.ಎಂ. ಮತ್ತು ಇತರರು, ಕರ್ನಾಟಕ ದೇವಾಲಯ ಕೋಶ (ಬಳ್ಳಾರಿ ಜಿಲ್ಲೆ),೧೯೯೯, ಪು.xxx

೨೩. South Indian Inscription IV Volume I No.೨೫೦

೨೪. ರಾಜಶೇಖರ.ಎಸ್. ಕರ್ನಾಟಕ ವಾಸ್ತು ಮತ್ತು ಮೂರ್ತಿಶಿಲ್ಪ, ೧೯೮೮, ಪು.೧೩೮

೨೫. ಸುರೇಶ್ ಕೆ.ಎಂ.ಮತ್ತು ಇತರರು ಪೂರ್ವೋಕ್ತ, ಪು.xxxvi

೨೬. ವಸುಂಧರ ಫಿಲಿಯೋಜ, ಅಳಿದುಳಿದ ಹಂಪೆ, ೧೯೮೨, ಪು.೪೧

೨೭. ಸುರೇಶ್ ಕೆ.ಎಂ.ಮತ್ತು ಇತರರು ಪೂರ್ವೋಕ್ತ, ಪು.೪೩

೨೮. ವಸುಂಧರ ಫಿಲಿಯೋಜ. ಪೂರ್ವೋಕ್ತ, ಪು.೧೦೧

೨೯. ಸೋಮಶೇಖರ ವೈ, ಹಂಪೆ ಬಜಾರಗಳು, ೧೯೯೭, ಪು.೩೦

೩೦. ಮಹಾದೇವ.ಸಿ. ಹೊಸಪೇಟೆ ತಾಲೂಕು ದರ್ಶನ, ೨೦೦೨, ಪು.೧೪೪

೩೧. ಅದೇ

೩೨. ಅದೇ ಪು.೧೩೦

೩೩. ವಸುಂಧರ ಫಿಲಿಯೋಜ, ಪೂರ್ವೋಕ್ತ, ಪು.೪೬-೪೮

೩೪. ಅದೇ ಪು.೪೨-೪೬

೩೫. ಗೋಪಾಲ್.ಬಿ.ಆರ್. ವಿಜಯನಗರ ಇನ್‌ಸ್ಕ್ರಿಪ್‌ಶನ್-೧, ೧೯೮೬, ಪು.೩೭೬

೩೬. ಕಡಪಟ್ಟೆ ಎಂ.ಎಸ್. ಪ್ರಾಚೀನ ಕರ್ನಾಟಕದಲ್ಲಿ ಶೈವಧರ್ಮ, ೨೦೦೫, ಪು.೧೦-೧೨

೩೭. ಅದೇ ಪು.೩೭

೩೮. ಬಸವರಾಜ ಮಲ್ಲಶೆಟ್ಟಿ, ಹಂಪಿ ಒಂದು ಪರಿಚಯ, ೧೯೮೧, ಪು.೧೮

೩೯. ಮಂಜುನಾಥಯ್ಯ ಟಿ.ಎಂ., ವಿಜಯನಗರ ಅಧ್ಯಯನ (ಸಂ), ೧೯೯೬, ಪು.೪೪

೪೦. ವಸುಂಧರ ಫಿಲಿಯೋಜ, ಪೂರ್ವೋಕ್ತ, ಪು.೫೧-೫೮

೪೧. ಅದೇ ಪು.೪೭

೪೨. ಅದೇ ಪು.೧೦೦

೪೩. ಮಹಾದೇವ ಸಿ., ಮರದ ವಾಸ್ತು ಶಿಲ್ಪ, ೨೦೦೨, ಪು.೧೩೧

೪೪. ವಸುಂಧರಾ ಫಿಲಿಯೋಜ ಪೂರ್ವೋಕ್ತ, ಪು.೯೬

೪೫. ಅನಂತರಾಮು.ಕೆ. ಕವಿ ಬ್ರಹ್ಮಶಿವ ಅಧ್ಯಯನ, ೧೯೯೧, ಪು.೧೯

೪೬. ಅದೇ ಪೂರ್ವೋಕ್ತ, ಪು.೧೯೮

೪೭. ತಳವಾರ ಎಚ್.ಟಿ. ವಿಜಯನಗರ ಅಧ್ಯಯನ ಸಂ-೫, ೨೦೦೦, ಪು.೧೧೪

೪೮. ಮಹಾದೇವ ಸಿ. ಅದೇ ಪು.೧೨೪

೪೯. ಮಿರ್ಜಿ ಅಣ್ಣರಾಯ ಜೈನಧರ್ಮ, ೧೯೯೭, ಪು.೧೩-೨೧

೫೦. ಮಿರ್ಜಿ ಅಣ್ಣರಾಯ (ಅನು) ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ, ೧೯೮೧, ಪು.೩೭೧

೫೧. ಶೆಟ್ಟಿ ಎಸ್.ಡಿ ತುಳುನಾಡಿನ ಜೈನಧರ್ಮ ಒಂದು ಸಾಂಸ್ಕೃತಿಕ ಅಧ್ಯಯನ, ೨೦೦೨, ಪು.೧೯-೨೨

೫೨. ಗೋವಿಂದ ಪೈ.ಎಂ. ಕರ್ನಾಟಕಕ್ಕೆ ಜೈನ ಧರ್ಮದ ಆಗಮನ ಕನ್ನಡ ಸಾಹಿತ್ಯ ಪರೀಕ್ಷೆ ಪತ್ರಿಕೆ, ಸಂ ೨೬/೧ ಮತ್ತು ೨ ಪು.೧-೨೧, ೧೯೯-೧೪೪

೫೩. ವಾಸುದೇವ ಬಡಿಗೇರ ಮತ್ತು ಇತರರು ಕರ್ನಾಟಕ ದೇವಾಲಯ ಕೋಶ, ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೯, ಪು.೧೨೨

೫೪. ಅದೇ ಪು.೧೨೨

೫೫. ವಸುಂಧರ ಫಿಲಿಯೋಜ ಪುರ್ವೋಕ್ತ ಪು.೪೭-೪೮

೫೬. ಪಾಟೀಲ ಸಿ.ಎಸ್ ಕರ್ನಾಟಕದ ಕೋಟೆಗಳು ಸಂ.೧, ೧೯೯೯, ಪು.೧

೫೭. ಅದೇ ಪು.೨-೪

೫೮. ಅದೇ ಪು.೧

೫೯. ವಿಜಯನಗರ ಪ್ರೋಗ್ರಸ್ ರಿಪೋರ್ಟ್ ೧೯೮೪-೮೭ ನಂ.೧೦೫

೬೦. ಅದೇ ೧೯೮೩-೮೪ ನಂ.೩

೬೧. ಅದೇ ನಂ.೪

೬೨. ಅದೇ ನಂ.೫

೬೩. ಅದೇ ನಂ.೯

೬೪. ಅದೇ ನಂ.೧೦

೬೫. ಅದೇ ನಂ.೬

೬೬. ಅದೇ ನಂ.೮

೬೭. ಅದೇ ನಂ.೭

೬೮. ಅದೇ ನಂ.೧೨೪

೬೯. A.R (ಎನ್ಯುವಲ್ ರಿಪೋರ್ಟ್) ೧೮೮೯ ನಂ.೨೪

೭೦. VPR (ವಿಜಯನಗರ ಪ್ರೋಗ್ರಸ್ ರಿಪೋರ್ಟ್) ೧೯೮೪-೮೭ ನಂ.೮೩

೭೧. ಅದೇ ನಂ.೮೪

೭೨. ಅದೇ ನಂ.೮೬

೭೩. ಅದೇ ನಂ.೮೭

೭೪. ಅದೇ ನಂ.೧೨೫

೭೫. A.R (ಎನ್ಯುವಲ್ ರಿಪೋರ್ಟ್) ೧೮೮೯ ನಂ.೧೬

೭೬. ಕಲಬುರ್ಗಿ.ಎಂ.ಎಂ. (ಸಂ) ಕರ್ನಾಟಕದ ಕೈಪಿಯತ್ತುಗಳು, ೧೯೯೪ ಪು.೪೩೬

೭೭. ದೇವಕುಂಜರಿ ಹಂಪಿ ಒಂದು ಪರಿಚಯ, ೧೯೭೦ ಪು.೭೦

೭೮. ಪಾಟೀಲ ಸಿ.ಎಸ್ ಮೂರ್ವೋಕ್ತ ಪು.೯೪

೭೯. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩ ೨೦೦೦ ಪು.೧೬೪

೮೦. ದಿಕ್ಷಿತ್ ಜಿ.ಎಸ್ ಮತ್ತು ವಿಶ್ವೇಶ್ವರಯ್ಯ ಎಂ.ಎಂ. ಸಂಗಮರ ಕಾಲದ ವಿಜಯನಗರ ೧೯೯೧, ಪು.೯೪-೯೫

೮೧. ವಸುಂಧರ ಫಿಲಿಯೋಜ, ಪುರ್ವೋಕ್ತ ಪು.೯೭

೮೨. ವಾಸುದೇವನ್ ವಿ.ಅ.ಸಂ.೧೧ ೨೦೦೫, ಪು.೨೧೫-೨೧೭

೮೩. ಬಾಲಸುಬ್ರಹ್ಮಣ್ಯಂ ಅನು. ಮರೆಯಲಾಗದ ಮಹಾಸಾಮ್ರಾಜ್ಯ ೨೦೦೦ ಪು.೩೫೦

೮೪. South India inscriptions pt No-೪ P.೨೬೬

೮೫. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩ ಪು.೨೪೩

೮೬. ವಸುಂಧರ ಫಿಲಿಯೋಜ ಪೂರ್ವೋಕ್ತ ಪು.೯೬

೮೭. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩ ಪು.೧೪೧

೮೮. ವಸುಂಧರ ಫಿಲಿಯೋಜ ಪೂರ್ವೋಕ್ತ ಪು.೧೦೪

೮೯. ಸೋಮಶೇಖರ ವೈ. ಪೂರ್ವೋಕ್ತ ಪು.೩೦

೯೦. ವಸುಂಧರ ಫಿಲಿಯೋಜ ಪೂರ್ವೋಕ್ತ ಪು.೧೦೩

೯೧. ಸೋಮಶೇಖರ.ವೈ ಪೂರ್ವೋಕ್ತ ಪು.೩೧

೯೨. ವಸುಂಧರ ಫಿಲಿಯೋಜ ಪೂರ್ವೋಕ್ತ ಪು.೧೦೪

೯೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩ ಪು.೧೮೯

೯೪. ಅದೇ ಪು.೧೮೯

೯೫. ಅದೇ ಪು.೧೮೮

೯೬. ಅದೇ ಪು.೧೮೬

೯೭. ಅದೇ ಪು.೧೮೯

೯೮. ಅದೇ ಪು.೧೮೦

೯೯. V.P.R ೧೯೮೪-೮೭ ನಂ.೮೬

೧೦೦. V.P.R ೧೯೮೩-೮೪ ನಂ.೨

೧೦೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩ ಪು.೨೪೫

೧೦೨. V.P.R ೧೯೮೩-೮೪ ನಂ.೩

೧೦೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ.೩ ಪು.೨೪೨

೧೦೪. Longhust A.H. ೧೯೮೨ Hampi Ruins ಪು.೧೭-೧೮

೧೦೫. ವಸಿಂಧರ ಫಿಲಿಯೋಜ ಪೂರ್ವೋಕ್ತ ಪು.೪೬-೪೭

೧೦೬. ಶಿವಶಂಕರ್ ಮತ್ತು ಚೆನ್ನಬಸಪ್ಪ ಪಾಟೀಲ್.ಎಸ್, ವಿ.ಅ.ಸಂ-೨, ೧೯೯೬, ಪು.೯-೧೧

೧೦೭. ಪ್ರೌಢದೇವರಾಯನ ಕಾವ್ಯ ಸಂ.೨೧, ಪದ್ಯ೯

೧೦೮. ಧರ್ಮನಾಥ ಪುರಾಣ ಸಂ.೬, ವಚನ ಪದ್ಯ.೧೦

೧೦೯. ಅದೇ ಪು.೧೦೫-೧೧೭

೧೧೦. ದೇವಕುಂಜರಿ.ಡಿ ೧೯೮೩ ಹಂಪಿ ಪು.೩೪-೩೫

೧೧೧. ವಸುಂಧರ ಫಿಲಿಯೋಜ ಪೂರ್ವೋಕ್ತ ಪು.೫೨-೫೩

೧೧೨. ದೇವಕುಂಜರಿ ಡಿ. ಪೂರ್ವೋಕ್ತ ಪು.೨೨-೨೩

೧೧೩. ಅದೇ ಪು.೪೩

೧೧೪. ದಿಕ್ಷಿತ್.ಜಿ.ಎಸ್. ಸಂ, ಸಂಗಮರ ಕಾಲದ ವಿಜಯನಗರ, ೧೯೯೧, ಪು.೧೯೯-೨೧೩

೧೧೫. ಅದೇ ಪು.೨೧೩-೨೧೪

೧೧೬. ಅದೇ ಪು.೨೧೪

೧೧೭. ಅದೇ ಪು.೧೨೪-೧೩೧

೧೧೮. ದೇವಕುಂಜರಿ ಡಿ. ಪೂರ್ವೋಕ್ತ ಪು.೨೩

೧೧೯. ಬಸವರಾಜ ಮಲ್ಲಶೆಟ್ಟಿ, ಪೂರ್ವೋಕ್ತ ಪು.೨೦

೧೨೦. ಸಿ.ಮಹಾದೇವ ಮತ್ತು ಇತರರು, ಪೂರ್ವೋಕ್ತ ಪು.೧೫೨

೧೨೧. ಬಸವರಾಜ ಮಲ್ಲಶೇಟ್ಟಿ, ಪೂರ್ವೋಕ್ತ ಪು.೨೦-೨೧

೧೨೨. ವಸುಂಧರ ಫಿಲಿಯೋಜ ಪೂರ್ವೋಕ್ತ ಪು.೫೨-೫೩

೧೨೩. ಬಸವರಾಜ ಮಲ್ಲಶೆಟ್ಟಿ, ಪೂರ್ವೋಕ್ತ ಪು.೧೮-೧೯

೧೨೪. ದೇವಕುಂಜರಿ ಡಿ. ಪೂರ್ವೋಕ್ತ ಪು.೩೬-೩೭

೧೨೫. ಅದೇ ಪು.೩೪-೩೫



## ಅಧ್ಯಾಯ–೪

# ಮೂರ್ತಿ ಶಿಲ್ಪ

ಜನಾಂಗದ ಬದುಕು ಜೀವನ ಚರಿತ್ರೆಯೆನಿಸಿದರೆ ಕಲೆಗಳು ಅದರ ಆತ್ಮ ಚರಿತ್ರೆಯೆಂದೆನಿಸುತ್ತದೆ. ಶಿಲ್ಪ ಕಲೆಗಳು ಕಲೆಗಳ ಆತ್ಮ ಚರಿತ್ರೆಯೆಂದರೆ ಇತಿಹಾಸದ ಒಳ ಚೌಕಟ್ಟಿನಲ್ಲಿ ಶಿಲ್ಪ ಕಲೆಗಳು ಬೆಳೆದು ಬಂದ ರೀತಿ ಎಂದರ್ಥ. ಧರ್ಮ ಪ್ರಜ್ಞೆಯ ಆಚಾರ ವಿಚಾರಗಳು ಹಲವಾರು ಸಂಪ್ರದಾಯಗಳಿಗೆ, ನಂಬಿಕೆಗಳಿಗೆ ಮೌಲ್ಯಗಳಿಗೆ ಕಾರಣವಾಗಿ ಸಾಹಿತ್ಯ, ಸಂಗೀತ, ಚಿತ್ರಕಲೆ ಇತ್ಯಾದಿಯಾಗಿ ಒಟ್ಟು ೬೪ ಕಲೆಗಳು ಉಗಮವಾಗಿ ವಿಕಾಸಗೊಂಡವು.[೧]

ಕಲೆಯೆನ್ನುವುದು ಮೂಲತಃ ಪ್ರಕೃತಿಯ ಮಡಿಲಲ್ಲಿ ಬೆಳೆದ ಮಾನವ ಸ್ವಾಭಾವಕ್ಕೆ ಸಂಬಂಧಿಸಿದ್ದು. ಇದು ಅನುಭವಗಳಿಗೆ ಜೀವಕೊಡುವ ಕ್ರಿಯೆ, ಕಲೆಗಳಿಗೆ ಬದುಕಿನ ಅನುಭವವೇ ಮೂಲ ದ್ರವ್ಯವೆಂದು ಹೇಳಬಹುದು.[೨] ಕಲೆ ಮತ್ತು ಮಾನವನ ಮಧ್ಯದಲ್ಲಿ ನಿಕಟವಾದ ಸಂಬಂಧವಿದೆ. ಸಾಹಿತ್ಯವು ಹೀಗೆ ಜನ ಜೀವನದ ಮುಡಿಗನ್ನಡಿಯೋ ಹಾಗೆಯೇ ಶಿಲ್ಪವು ಅದರ ಮಾನಸಿಕ ಪ್ರಗತಿಯನ್ನು ಪ್ರತಿಬಿಂಬಿಸುವ ಪಡಿಯಚ್ಚಾಗಿದೆ.[೩] ದೇವರ ಪ್ರತೀಕವಾದ ಮೂರ್ತಿಯ ಪಾವಿತ್ರ್ಯತೆ ಹಾಗೂ ರಕ್ಷಣೆಗೋಸ್ಕರವೇ ದೇವಾಲಯಗಳು ನಿರ್ಮಾಣವಾಗಿವೆ. ಗರ್ಭಗೃಹ ದೇವಾಲಯದ ಹೃದಯವಾದರೆ, ಅದರಲ್ಲಿರುವ ಮೂರ್ತಿ ಶಿಲ್ಪಗಳು ಉಸಿರು. ದೇವಾಲಯವೆಂದರೆ ಇದು ದೇವರಿಗಾಗಿ ಕಟ್ಟಲ್ಪಟ್ಟ ಮಂದಿರ ಎಂದರ್ಥ. ವಾಸ್ತು ಶಿಲ್ಪಕ್ಕಿಂತ ಪ್ರಾಚೀನವಾದ ಇತಿಹಾಸ ಮೂರ್ತಿ ಶಿಲ್ಪಕ್ಕಿದೆ.

ಸಿಂಧೂ ನಾಗರೀಕತೆಯ ನೆಲೆಗಳ ಉತ್ಖನನಗಳಲ್ಲಿ ದೊರೆತ ಕೆಲವು ಶಿಲ್ಪಾವಶೇಷಗಳು ಬಹು ಉನ್ನತ ಮಟ್ಟದ ಶಿಲ್ಪಜ್ಞಾನವನ್ನು ಪರಿಚಯಿಸಿವೆ. ಇದು ಶಿಲ್ಪಜ್ಞಾನದ ಆರಂಭವೆಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು, ವೈದಿಕ ಸಂಸ್ಕೃತಿಯಲ್ಲಿ ಸಾರ್ವಜನಿಕವಾಗಿ ಶಿಲ್ಪಗಳ ಆರಾಧನೆ ಪ್ರಚಲಿತದಲ್ಲಿರಲಿಲ್ಲ, ಅಂದು ಜನರು ತಮ್ಮ ಮನೆಗಳಲ್ಲಿಯೇ ದೇವತಾ ಪ್ರತಿಮೆಗಳನ್ನು ಇಟ್ಟುಕೊಂಡು ವೈಯಕ್ತಿಕ ನೆಮ್ಮದಿಯನ್ನು ಬಯಸಿ ಪೂಜೆ ಮಾಡುತ್ತಿದ್ದರು. ತದನಂತರದಲ್ಲಿ ಆರ್ಯರು, ಅನಾರ್ಯರು (ದ್ರಾವಿಡರ) ದೈವಗಳನ್ನು ಪರಿಗ್ರಹಿಸಿ ಅವಕ್ಕೆಲ್ಲ ಒಂದೊಂದು ಸ್ವರೂಪ ವಹಿಸಿಕೊಟ್ಟರು.[೪] ವೈದಿಕ ಪ್ರಭಾವವನ್ನೇ ಅಳವಡಿಸಿಕೊಂಡು

ಶಿಲ್ಪಶಾಸ್ತ್ರಗಳು ಈ ದೇವತೆಗಳನ್ನು ಚತುರ್ದೇವತೆಗಳ ಪರಿವಾರ ದೇವತೆಗಳೆಂದು ಒಪ್ಪಿ ಅವುಗಳನ್ನು ಸಿದ್ಧಪಡಿಸುವ ವಿಧಿ-ವಿಧಾನಗಳನ್ನು ರೂಪಿಸಿದವು. ಭಾರತದ ಚಾರಿತ್ರಿಕ ಯುಗದಲ್ಲಿ ಪ್ರಪ್ರಥಮವಾಗಿ ದೊರೆತಿರುವ ಶಿಲ್ಪವು ಮೌರ್ಯರ (ಕ್ರಿ.ಪೂ.೩೨೪) ಕಾಲದ್ದಾಗಿದೆ.[೫]

ಶಿಲ್ಪಶಾಸ್ತ್ರವು ಹುಟ್ಟದ ಮೇಲೆ ಭಾವನಾತ್ಮಕ ಶಿಲ್ಪಗಳ ಸಂಖ್ಯೆ ಬಹಳ ವಿರಳವಾಗತೊಡಗಿತು, ಸೃಷ್ಟಿಸ್ಥಿತಿ, ಸಂಹಾರಕ್ಕೆ ಕಾರಣರಾದ ಬ್ರಹ್ಮ, ವಿಷ್ಣು ಹಾಗೂ ಶಿವನ ಶಿಲ್ಪಗಳಲ್ಲಿ ಬೇರೆ ಬೇರೆ ಆಕಾರಗಳು ಕಾಣಿಸತೊಡಗಿದವು. ನಾಗ, ಯಕ್ಷ, ವೃಕ್ಷ-ಯಕ್ಷಿಣಿ, ನಾಗ, ನರ-ಸಿಂಹ, ಆನೆ-ಮನುಷ್ಯ, ನಂದಿ-ಬಸವ ಮೊದಲಾದ ಮೂರ್ತಿಗಳ ಆಕಾರವನ್ನು ಅಳಸುವ ಮತ್ತು ಜೋಡಿಸುವ ಪದ್ಧತಿಯನ್ನು ಭಾರತೀಯ ಶಿಲ್ಪ ಶಾಸ್ತ್ರದಲ್ಲಿ ತುಂಬಾ ಹಳೆಯ ಪದ್ಧತಿಯಾದುದ್ದನ್ನು ಸಿಂಧೂ ಸಂಸ್ಕೃತಿಯಲ್ಲಿ ಕಾಣುತ್ತೇವೆ. ವಜ್ರಘಂಟೆ, ಶೂಲ, ಪರಶು, ಪರಶು ಅಂಕುಶ, ದಂಡ-ಪಾಶ ಮೊದಲಾದ ಸಂಯುಕ್ತಾಭರಣಗಳನ್ನು ಉಲ್ಲೇಖಿಸಲಾಗಿದೆ.[೬] ಕನ್ನಡ ನಾಡಿನಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಮೂರ್ತಿ ಶಿಲ್ಪಕ್ಕೆ ಅವಿಚ್ಛಿನ್ನೇವಾದ ಸ್ಥಾನವಿದೆ, ಸಮಕಾಲೀನ ಮಾನವರು ತಾವು ವಾಸಿಸುತ್ತಿದ್ದ ಗುಹಾಲಯಗಳ ಪರಿಸರದ ಬಂಡೆಗಳ ಮೇಲೆ, ತಾವು ಕಂಡ ಮೃಗ, ಪಕ್ಷಿ, ಮನುಷ್ಯ ಮೊದಲಾದ ವರ್ಣರೇಖಾ ಚಿತ್ರಗಳನ್ನು ಚಿತ್ರಿಸಿರುವುದು ಕಂಡು ಬರುತ್ತದೆ. ಉದಾ:- ಮಸ್ಕಿ ತೆಕ್ಕಲ ಕೋಟೆ[೭] ಇನ್ನು ಚಾರಿತ್ರಿಕವಾಗಿ ಗಮನಿಸಿದಾಗ ಶಾತವಾಹನ ಮನೆತನದ ಕಾಲಾವಧಿಯಲ್ಲಿ ಶಿಲ್ಪಕಲೆಯ ಬಗ್ಗೆ ಸ್ವಲ್ಪಮಟ್ಟಿಗೆ ವಿವರಗಳು ದೊರೆತಿವೆ. ನಂತರ ಆದಿ ಕದಂಬ ಮನೆತನದ ಕಾಲಾವಧಿಯಲ್ಲಿ ಶಿಲ್ಪವಿಶೇಷಗಳು ದೊರಕುತ್ತವೆ. ಬಾದಾಮಿ ಚಲುಕ್ಯ ಮನೆತನದ ಕಾಲಾವಧಿಯಲ್ಲಿ ಈ ನಾಡಿನ ಮೂರ್ತಿ ಶಿಲ್ಪ ಕಲೆಯುಉನ್ನತ ಹಂತವನ್ನು ತಲುಪಿತು, ನಂತರ ಈ ನಾಡಿನಲ್ಲಿ ಆಳ್ವಿಕೆ ಕೈಗೊಳ್ಳುತ್ತ, ಬಂದ ಪ್ರತಿಯೊಂದು ಅರಸು ಮನೆತನಗಳು ಸಮಕಾಲೀನ ವಿವಿಧ ಧರ್ಮಗಳಿಗೆ ಆಶ್ರಯ ನೀಡಿ ಆಯಾ ಧರ್ಮದ ಮೂರ್ತಿ ಶಿಲ್ಪಗಳು ಬೆಳೆದು ಬಂದವು.

**ಶಿಲ್ಪಗಳಲ್ಲಿ ಆಸನಗಳು:** ಚಕ್ರ ಪ್ರಧಾನ ವಿಷ್ಣುವಿನ ಕೆಲವು ರೂಪದ ಶಿಲ್ಪಗಳು, ಉದಾ:- ಮತ್ಸಾವತಾರ,ಶೇಷಶಯನ ಅವತಾರ, ಧೇವಿ ಶಿಲ್ಪಗಳು, ಭಕ್ತ ಶಿಲ್ಪಗಳು ಕಂಡು ಬರುತ್ತವೆ. ಈ ಭಂಗಿಯಲ್ಲಿ ಸಮಭಂಗಿ, ದ್ವಿಭಂಗಿ ತ್ರಭಂಗಿ, ಅತಿಭಂಗಿ, ನೃತ್ಯ ಮೊದಲಾದ ಪ್ರಕಾರಗಳಿವೆ. ಆಸೀನ ಭಂಗಿಯಲ್ಲಿ ದಕ್ಷಿಣಾ ಮೂರ್ತಿ, ಸೋಮಸ್ಕಂದ, ಸದಾಶಿವ, ಮೈಲಾರಲಿಂಗ ಮೊದಲಾದ ಶಿವನ ಶಿಲ್ಪಗಳು, ನರಸಿಂಹ, ಲಕ್ಷ್ಮೀನಾರಾಯಣ, ಪಟ್ಟಾಭಿರಾಮ, ಯೋಗ ನಾರಾಯಣ, ಮೊದಲಾದ ವಿಷ್ಣುವಿನ ಶಿಲ್ಪಗಳು, ಜೈನ ಪರಂಪರೆಯ ೨೪ ಜನ ತೀರ್ಥಂಕರ ಶಿಲ್ಪಗಳು, ಗಣಪತಿ, ಗಜಲಕ್ಷ್ಮಿ, ಸರಸ್ವತಿ, ಸಪ್ತ ಮಾತೃಕೆಯರು ಮೊದಲಾದ ಶಿಲ್ಪಗಳು ಕಂಡು ಬರುತ್ತವೆ. ಈ ಭಂಗಿಯಲ್ಲಿ ಯೋಗಾಸನ, ಅನಂತಾಸನ, ಸಿಂಹಾಸನ, ಭದ್ರಾಸನ, ವಿಮಾಲಾಸನ, ಪದ್ಮಾಸನ, ಆಲೀಡ್‌ಸನ, ಪ್ರತ್ಯಾಲೀತಾಸನ, ವಿರಾಸನ, ಸುಖಾಸನ, ಸವ್ಯಲಲಿತಾಸನ, ವಾಮಲಲಿತಾಸನ, ಪ್ರಲಂಭಾಸನ ಮೊದಲಾದ ಪ್ರಕಾರಗಳಿವೆ. ಶಯನ ಭಂಗಿಯಲ್ಲಿ ವಿಶೇಷವಾಗಿ ವಿಷ್ಣುವಿನ ಶಿಲ್ಪಗಳು (ಅನಂತಶಯನ) ಕಂಡು ಬರುತ್ತವೆ.[೮] ಜೈನ ತೀರ್ಥಂಕರರ ಶಿಲ್ಪಗಳು ಸಾಮಾನ್ಯವಾಗಿ ಪದ್ಮಾಸನ, ಕಾಯೋತ್ಸರ್ಗ/ವಿಸರ್ಗ/ಖಡ್ಗಾಸನ ಭಂಗಿಗಳಲ್ಲಿ ಕಂಡು ಬರುತ್ತದೆ.

**ಶಿಲ್ಪಗಳಲ್ಲಿನ ಆಯುಧಗಳು:** ಶಿಲ್ಪಗಳ ಕೈಯಲ್ಲಿ ಕೊಟ್ಟಿರುವ ಆಯುಧಗಳು ಭಿನ್ನ ಭಿನ್ನವಾಗಿರುತ್ತವೆ. ೨-೪-೮-೧೦-೧೨ ಕೈಗಳಿರುವ ಶಿಲ್ಪಗಳಿರುತ್ತವೆ. ಸಾತ್ವಿಕ, ವೀರ, ಶಾಂತಶಿಲ್ಪಗಳಲ್ಲಿ ೨ ಇಲ್ಲವೇ ೪ ಕೈಗಳಿರುತ್ತವೆ. ರಜತ, ತಾಮಸ ಶಿಲ್ಪಗಳಲ್ಲಿ ೬, ೮ ಕೈಗಳಿರುತ್ತವೆ. ಉಗ್ರ ಸಂಹಾರ ತಾಮಸ ಶಿಲ್ಪಗಳಲ್ಲಿ ೧೦, ೧೨, ೧೬ ಕೈಗಳಿರುತ್ತವೆ. ಈ ಶಿಲ್ಪಗಳಲ್ಲಿ ಶಂಖ, ಚಕ್ರ, ಗಧಾ, ತ್ರಿಶೂಲ, ಡಮರು, ಶೂಲ, ಟಂಕ, ಪಾಶ, ಖಟ್ವಾಂಗ, ಖಡ್ಗ ಧನಸ್ಸು, ಬಾಣ ಅಂಕುಶ, ವಜ್ರಶಕ್ತಿ, ಪರಶು, ನೇಗಿಲು, ಅಗ್ನಿ ಮೊದಲಾದ ಆಯುಧಗಳು ಪ್ರಮುಖವಾಗಿ ಕಂಡು ಬರುತ್ತವೆ.[೯]

ವಿಷ್ಣುವಿನ ಶಂಖ, ಚಕ್ರ, ಗಧಾ,ಪದ್ಮ ಶಿವನಿಗೆ ತ್ರಿಶೂಲ, ಡಮರು, ಅಗ್ನಿ ಗಣಪತಿಗೆ ಪಾಶ ಅಂಕುಶ, ಲಕ್ಷ್ಮಿಗೆ ಪದ್ಮ , ಬಲರಾಮನಿಗೆ ನೇಗಿಲು, ಪರಶುರಾಮನಿಗೆ ಪರಶು, ರಾಮನಿಗೆ ಬಿಲ್ಲು ಬಾಣ, ಕಾರ್ತಿಕೇಯನಿಗೆ ಶೂಲ, ಟಂಕ, ವಜ್ರ, ಬ್ರಹ್ಮನಿಗೆ ಕಮಂಡಲು, (ಸೌಟು) ಅಕ್ಷಮಾಲೆ, ಸರಸ್ವತಿಗೆ ವೀಣೆ ಅಕ್ಷರ ಮಾಲೆ, ಪುಸ್ತಕ, ವೀರ ಭದ್ರನಿಗೆ ಖಡ್ಗ, ಖೇಟಕ ಹೀಗೆ ಶಿಲ್ಪ ಶಾಸ್ತ್ರಗಳಲ್ಲಿ ಒಬ್ಬೊಬ್ಬ ದೇವತೆಗೂ ನಿರ್ದಿಷ್ಠವಾದ ಆಯುಧಗಳಿರುವುದನ್ನು, ವಿವಿಧ ಶಕ್ತಿ ಗುಣಗಳನ್ನು ಉಲ್ಲೇಖಿಸಿವೆ.[೧೦] ಕೆಲವು ಆಯುಧಗಳಿಗೆ ಪ್ರತ್ಯೇಕವಾದ ಮೂರ್ತಿರೂಪ ಕೊಟ್ಟಿದ್ದು ಅವುಗಳಿಗೆ ಆಯುಧ ಪುರುಷರೆಂದು ಕರೆಯಲಾಗಿದೆ.[೧೧] ವಿಷ್ಣು ದೇವಾಲಯಗಳಲ್ಲಿ ಚಕ್ರ, ಶಿವ ದೇವಾಲಯಗಳಲ್ಲಿ ತ್ರಿಶೂಲ, ಕಾರ್ತಿಕೇಯ ದೇವಾಲಯಗಳಲ್ಲಿ ಶಕ್ತಿ, ಆಯುಧ ಪುರುಷರಾಗಿ ಪೂಜಾ ವಿಧಿಯಲ್ಲಿ ಪಾಲ್ಗೊಳ್ಳುತ್ತವೆ. ವೈಷ್ಣವಾಗಮಗಳು ಮತ್ತು ಶೈವಾಗಮಗಳು ಕೆಲವು ಆಯುಧಗಳಿಗೆ ಅಧ್ಯಾತ್ಮಿಕ ಅರ್ಥವನ್ನು ಒದಗಿಸಿವೆ.[೧೨]

ಶಂಖ ಆಜ್ಞಾನನಾಶಕ ಶಕ್ತಿಯನ್ನು, ಚಕ್ರ ಕಾಲಚಕ್ರವನ್ನು, ಬಾಣಗಳು, ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳನ್ನು, ಅಂಕುಶ ಆತ್ಮನಿಗೆ ಬೇಕಾದುದನ್ನು ಆರಿಸಿಕೊಳ್ಳುವ ಶಕ್ತಿಯನ್ನು, ಪಾಶ ತ್ರಿಗುಣಾತ್ಮಕವಾದ ಬಂಧನವನ್ನೂ, ಗದಾ ಅಧರ್ಮಿ ನಾಶಕ ಶಕ್ತಿಯನ್ನು, ಖಡ್ಗ ಶೌರ್ಯವನ್ನು, ಪರಶು ದೈವೇ ಶಕ್ತಿಯನ್ನು, ತ್ರಿಶೂಲ ತಮೋ ಗುಣಗಳನ್ನು, ವಜ್ರ ಬುದ್ಧಿಯನ್ನು ಸೂಚಿಸುತ್ತವೆ.

**ಆಭರಣಗಳು:** ಶಿಲ್ಪಗಳನ್ನು ಅಲಂಕರಿಸಿದರೆ ಅಸಾಧಾರಣವಾದ ಶಕ್ತಿಯೊಂದು ಒದಗಿ ಬರುತ್ತದೆ. ಎಂಬ ಭಾವನೆ ಪ್ರಾಚೀನ ಕಾಲದಿಂಧಲೂ ಬಂದಿದೆ. ಶಿಲ್ಪ ಶಾಸ್ತ್ರಗಳು ಮೂರ್ತಿ ಶಿಲ್ಪಗಳು ಸರ್ವಾಂಗಸುಂದರವಾಗಿ ವಸ್ತ್ರಾಭರಣಗಳಿಂದ ಭೂಷಿತವಾಗಿರಬೇಕೆಂದು ಸೂಚಿಸಿವೆ.[೧೩] ದೇವತಾ ಶಿಲ್ಪಗಳಲ್ಲಿ ಸಾಮಾನ್ಯವಾಗಿ ಕೀರಟ ಮಕುಟ, ಜಟಾ ಮಕುಟ, ಕರಂಡ ಮಕುಟ, ಜಟಾಬಂಧ, ಶಿಲಾಮಣಿ, ಕೇಶಬಂಧ, ಮಹಾಕುಂಡಲ, ಪತ್ರ ಕುಂಡಲ, ರತ್ನ ಮಾಲೆ, ಮಣಿಸರ, ಕಂಠಹಾರ, ಶ್ರೀವತ್ಸ್ಯ, ಉದರಬಂಧ ಉಪವೀತ, ಕಟಿಸೂತ್ರ ಬಾಹುಬಂಧ, ಕಂಕಣ, ಮಣಿಬಂಧ, ರತ್ನಾಂಗುಲಿ ಮುಖಗಳು, ಪೀತಕಾರ್ಪಟ ನೂಪುರ, ಪಾದ, ಜಾಲಕ, ಭುಜಂಗವಲಯ, ವೈಜಯಂತಿ, ಪ್ರಭಾಮಂಡಲ, ಕೊರಳಸರ, ಬೆರಳುಂಗುರಗಳು ಮೊದಲಾದ ಪ್ರಕಾರದ ವಸ್ತ್ರಾಭರಣಗಳು ಕಂಡು ಬರುತ್ತವೆ. ಜೈನ ಪರಂಪರೆಯಲ್ಲಿ ಯಕ್ಷ-ಯಕ್ಷಿಯರ ಶಿಲ್ಪ, ಬಾಹುಬಲಿ ಗ್ರೇನೇಯಕ ಹಾರಗಳು ಕುಂಡಲಿಗಳು, ಸ್ತನಸೂತ್ರ ಕಂಕಣಗಳು ಹಾಗೂ ಪಾದ ಸರಗಳಿಂದ ಅಲಂಕೃತಗೊಂಡಿರುತ್ತದೆ.[೧೪]

**ವಾಹನ (ಲಾಂಛನ) ಗಳು:** ಬ್ರಹ್ಮನಿಗೆ ಹಂಸ, ಶಿವನಿಗೆ ವೃಷಭ, ವಿಷ್ಣುವಿಗೆ ಗರುಡ ಗಣಪತಿಗೆ ಮೂಶಕ, ದುರ್ಗೆಗೆ ಸಿಂಹ, ಸುಬ್ರಮಣ್ಯನಿಗೆ ನವಿಲು, ದ್ತತ್ರಾತ್ರೇಯನಿಗೆ ನಾಯಿ, ಸರಸ್ವತಿಗೆ ನವಿಲು,

ಲಕ್ಷ್ಮಿ ಪದ್ಮ, ಬ್ರಹ್ಮಗೆ ಹಂಸ, ಕೌಮಾರಿಗೆ ಮಯೂರ, ವರಾಹಿಗೆ ಮಹಿಷ, ಚಾಮುಂಡಿಗೆ ಸಿಂಹ ಹೀಗೆ ಮೊದಲಾದ ಲಾಂಛನಗಳಿರುತ್ತವೆ. ಜೈನ ೨೪ ತೀರ್ಥಂಕರರಿಗೆ ಬೇರೆ ಬೇರೆ ಲಾಂಛನಗಳಿವೆ. ಇವು ದೇವ ದೇವತೆಯರ ಹಾಗೂ ತೀರ್ಥಂಕರ ಶಿಲ್ಪಗಳನ್ನು ಗುರುತಿಸಲು ಸಹಾಯಕವಾಗುತ್ತವೆ. ಪ್ರಸ್ತುತ ಕಮಲಾಪುರದಲ್ಲಿ ಶೈವ, ವೈಷ್ಣವ, ಜೈನ ಹಾಗೂ ಶಾಕ್ತ ಪಂಥಗಳ ಶಿಲ್ಪಗಳು ಕಂಡು ಬಂದಿವೆ. ಈ ಶಿಲ್ಪಗಳ ಪ್ರತಿಮಾ ಲಕ್ಷಣಗಳ ಪ್ರಸ್ತಾವನೆ ಇಲ್ಲಿ ಮಾಡಲಾಗಿದೆ.

**ಶೈವ ಶಿಲ್ಪಗಳು:** ಸಿಂಧೂ ನಾಗರೀಕತೆಯ ಹರಪ್ಪ ಮೆಹೆಂಜೋದಾರೋ ಮತ್ತು ಕಾಲಿ ಬಂಗಾನ ನೆಲೆಗಳಲ್ಲಿ ದೊರೆತ ಮುದ್ರೆಗಳ ಮೇಲಿರುವ ಸಿಂಹಾಸನದ ಮೇಲೆ ಯೋಗ ಮುದ್ರೆಯಲ್ಲಿ ಆಸೀನನಾಗಿರುವ "ಮೂರು ಮುಖದ ಪಶುಪತಿ" ಶಿವನ ಚಿತ್ರಗಳು ಶೈವ ಪರಂಪರೆಯ ಶಿಲ್ಪ ಕಲೆಯ ಪ್ರಾಚೀನ ದೃಷ್ಟಿಯಿಂದ ಪ್ರಮುಖವೆನಿಸಿವೆ. ಇವು ಶಿವನ ಅತಿ ಪ್ರಾಚೀನ ರೂಪವೆಂದು ಹೇಳಲಾಗುತ್ತದೆ. ಇದರಿಂದ ಆ ಸಂಸ್ಕೃತಿಯಲ್ಲಿ ಅಂದರೆ ಅಂದಿನಿಂದ ಶಿವನ ಆರಾಧನೆ ಪ್ರಚಲಿತದಲ್ಲಿತ್ತೆಂಬುದು ನಿಶ್ಚಿತ. ವೈದಿಕ ಸಂಸ್ಕೃತಿಯ ಸಾಹಿತ್ಯದಲ್ಲಿಯೂ ಶಿವನ ಉಲ್ಲೇಖಗಳಿವೆ.[೧೫] ಚಾರಿತ್ರಿಕ ದೃಷ್ಟಿಯಿಂದಲೂ ಈ ಪರಂಪರೆಯ ಶಿಲ್ಪಗಳಿಗೆ ಪ್ರಾಚೀನ ನಿದರ್ಶನವಿದೆ. ಆಂಧ್ರ ಪ್ರದೇಶದ ರೇಣಿಗುಂಟ ಹತ್ತಿರದ ಗುಡಿ ಮಲ್ಲಿಂದಲ್ಲಿರುವ ಕ್ರಿ. ಪೂ ೨ ನೇ ಶತಮಾನದ ಪರಶುರಾಮೇಶ್ವರ ಲಿಂಗವು ಇದಕ್ಕೆ ಸಾಕ್ಷಿಯಾಗಿದೆ. ಕನ್ನಡ ನಾಡಿಗೆ ಸಂಬಂಧಿಸಿದಂತೆ ಕಾರವಾರ ಜಿಲ್ಲೆಯ ಅಂಕೋಲ ಬಳಿ ಬೋಳೆ ಮಹಾಕೂಟದಲ್ಲಿರುವ ಶಿವಲಿಂಗಗಳು ಶೈವಾರಾಧನೆ ಮತ್ತು ಶೈವ ಪುರಾಣ ಕಥೆಗಳ ಪ್ರಾಚೀನತೆಗೆ ಮತ್ತು ಜನ ಪ್ರಿಯತೆಗೆ ಉದಾಹರಣೆಗಳಾಗಿವೆ.[೧೬] ಇದರಿಂದ ಶೈವ ಪಂಥ ಪ್ರಾಚೀನ ಪಂಥವೆಂಬುದಂತೂ ಸ್ಪಷ್ಟ. ಶಿವನನ್ನು ಮೂರ್ತಿ ರೂಪಕ್ಕಿಂತ ಅಮೂರ್ತವಾದ ಲಿಂಗ ರೂಪದಲ್ಲೇ ಹೆಚ್ಚಿನ ಮಟ್ಟಿಗೆ ಪೂಜಿಸುವ ಸಂಪ್ರದಾಯವಿದೆ. ಶಿವಪೂಜೆ ಎಂದರೆ ಹೆಚ್ಚಿನ ಮಟ್ಟಿಗೆ ಲಿಂಗ ಸ್ವರೂಪದ ಪೂಜೆಯೇ.[೧೭] ಈತನ ಆಯುಧಗಳಿಂದ ಶೂಲ, ತ್ರಿಶೂಲ ಮತ್ತು ಪ್ರತಿ ರೂಪವಾದಲಿಂಗಗಳು. ವೈದಿಕ ಯಜ್ಞಯುಗಾದಿಗಳು ಸಂದರ್ಭದಲ್ಲಿ ಬಳಕೆಯ ಯೂಪದ ರೂಪಾಂತರಗಳಾಗಿವೆ.[೧೮] ಲಿಂಗಗಳಲ್ಲಿ ಸ್ಥಾವರ ಮತ್ತು ಜಂಗಮ ಲಿಂಗವನ್ನು ಶಿಲೆ, ರತ್ನ, ಲೋಹ, ಮತ್ತು ಮಣ್ಣಿನಿಂದ ನಿರ್ಮಿಸಲಾಗುತ್ತದೆ. ಶಿಲ್ಪಶಾಸ್ತ್ರಗಳಲ್ಲಿ ಸ್ಥೂಲಲಿಂಗ, ಸೂಕ್ಷ್ಮಲಿಂಗ, ಭದ್ರಲಿಂಗ, ಭಾರಶಿವಲಿಂಗ, ಸ್ತಂಭಲಿಂಗ, ಸ್ವಯಂಭೂಲಿಂಗ, ದಿವ್ಯಲಿಂಗ, ಮನುಷ್ಯ ಲಿಂಗ,ಅರ್ಷಲಿಂಗ, ರಾಕ್ಷಸಲಿಂಗ, ದೈವಿಕಲಿಂಗ, ಬಾಣಲಿಂಗ, ಪೃಥ್ವೀಲಿಂಗ, ಆಫ್‌ಲಿಂಗ, ತೇಜೋಲಿಂಗ, ವಾಯುಲಿಂಗ, ಆಕಾಶಲಿಂಗ, ಮೊದಲಾದ ಪ್ರಕಾರದ ಲಿಂಗಗಳ ಬಗ್ಗೆ ವಿವರಣೆ ಇದೆ.[೧೯] ಅತೀ ಪ್ರಾಚೀನ ಲಿಂಗಗಳು ಪೀಠ ರಹಿತವಾಗಿರುತ್ತವೆ. ತದನಂತರ ಪೀಠದ ಮೇಲೆ ಪ್ರತಿಷ್ಠಾಪಿಸುವ ಪರಂಪರೆ ಪ್ರಾರಂಭವಾಯಿತು. ಅವುಗಳಲ್ಲಿ ಪೀಠಪಾಣಿ, ಪಾತ್ರೆ, ಜಲಹರಿ ಮತ್ತು ಬ್ರಹ್ಮಸೂತ್ರವುಳ್ಳಲಿಂಗ ಭಾಗಗಳಿರುತ್ತವೆ. ಪೂಜಿಸುವಾಗ ಕೆಳಗಿನ ಚೌಕಾಕಾರ ಪೀಠ ಬ್ರಹ್ಮಭಾಗ, ಮಧ್ಯಪಾಣಿ ವಾಟ್ಟುವಿಷ್ಣು, ಭಾಗ ಮೇಲಿನ ವರ್ತುಲಾಕೃತಿಯಲಿಂಗ ಶಿರಭಾಗವೆಂಬ ಕಲ್ಪನೆಯಿದೆ. ಪ್ರಾಚೀನ ಲಿಂಗಗಳ ರುದ್ರಭಾಗದ ಮೇಲೆ ವಿವಿಧ ಪ್ರಕಾರದ ವಿನ್ಯಾಸವುಳ್ಳ ಬ್ರಹ್ಮಸೂತ್ರಗಳಿರುತ್ತವೆ. ಹೀಗೆ ಇದಕ್ಕೆ ತನ್ನದೇ ಆದ ವೈಶಿಷ್ಟತೆ ಇದೆ.

ಪ್ರಸ್ತುತ ಕಾಮಲಾಪುರ ಗ್ರಾಮಕ್ಕೆ ಸೀಮಿತವಾಗಿರಿಸಿ ನೋಡಿದರೆ, ಕಾಮಲಾಪುರ ಗ್ರಾಮದಲ್ಲಿ ಊರಮ್ಮ ದೇವಾಲಯದ ಬಲಗಡೆಯ ಸೀತಾರಾಮ್ ಸಿಂಗ್ ಮನೆಯ ಹತ್ತಿರದ ಮಂಟಪದಲ್ಲಿ

೧೪ನೇ ಶತಮಾನದ ಪಂಚ ಶಿವಲಿಂಗಗಳು ಕಣಶಿಲೆಯಲ್ಲಿ ಇವೆ. ಇದಕ್ಕೆ ಚತುರಸ್ರಾಕಾರದ ಪಾಣಿಪೀಠವಿದೆ.[೨೦] ವಾಲ್ಮೀಕಿ ವೃತ್ತದ ಈಶ್ವರ ದೇವಾಲಯದಲ್ಲಿ ಕ್ರಿ.ಶ.೧೫-೧೬ನೇ ಶತಮಾನದ ಶಿವಲಿಂಗವಿದೆ. ಇದು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ನಗರೇಶ್ವರ ದೇವಾಲಯದ ಹೊರ ಆವರಣದ ಮಂಟಪದಲ್ಲಿ ಕ್ರಿ.ಶ.೧೫ನೇ ಶತಮಾನದ ಶಿವಲಿಂಗವಿದೆ. ಇದು ಬೆಣಚುಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕ್ರಿ.ಶ.೧೬-೧೭ ನೇ ಶಮಾನದ ಶಿವಲಿಂಗ ನಗರೇಶ್ವರ ದೇವಾಲಯದ ಗರ್ಭಗೃಹದಲ್ಲಿದೆ. ಬೆಣಚುಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕ್ರಿ.ಶ.೧೬-೧೭ನೇ ಶತಮಾನದ ಶಿವಲಿಂಗ ಹಂಪಿ ಬಜಾರದ ಎದುರುಗಡೆ, ವೀರಭದ್ರ ದೇವಾಲಯದ ಗರ್ಭಗೃಹದಲ್ಲಿ ಭಾರತೀಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿನ ಶೈವ ಅಂಕಣದಲ್ಲಿನ ಈಶ್ವರಲಿಂಗ ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಪ್ರವೇಶದ ಹೊರ ಆವರಣದಲ್ಲಿ ವೈವಿಧ್ಯಮಯ ಶೈಲಿಯ ಶಿವಲಿಂಗಗಳು ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿನ ಶಿವಲಿಂಗ ಊರಮ್ಮ ದೇವಾಲಯದ ಬಲಗಡೆಯ ಮಂಟಪದಲ್ಲಿನ ಪಂಚ ಶಿವಲಿಂಗ, ಹಳೇ ಬಸ್ ನಿಲ್ದಾಣದ ಈಶ್ವರ ದೇವಾಲಯದ ಗರ್ಭಗೃಹದಲ್ಲಿ ೨ ನೇ ವಾರ್ಡ್‌ಗೆ ಪ್ರಾಥಮಿಕ ಶಾಲೆಯ ಹತ್ತಿರದ ಈಶ್ವರ ದೇವಾಲಯದ ಗರ್ಭಗೃಹದಲ್ಲಿ ಬಿ.ಡಿ.ಸಿ.ಸಿ. ಬ್ಯಾಂಕ್‌ಗೆ ಹೋಗುವ ರಸ್ತೆಯ ಬಲಗಡೆ ಅರಳಿ ಮರದ ಕಟ್ಟೆಯ ಮೇಲೆ, ಕಾಳಿಕಾ ದೇವಿಯ ದೇವಾಲಯದ ಗರ್ಭಗೃಹದಲ್ಲಿ ಶಿವಲಿಂಗಗಳಿವೆ. ಇವೆಲ್ಲವೂ ಕಪ್ಪು ಶಿಲೆಯಲ್ಲಿ ಹಾಗೂ ಬೆಣಚುಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ.

**ಸುಖಾಸೀನ ಶಿಲ್ಪಗಳು:** ಈ ಶಿಲ್ಪಗಳಲ್ಲಿ ಶಿವನು ಭದ್ರಪೀಠದ ಮೇಲೆ ಸವ್ಯಲಲಿತಾಸನದಲ್ಲಿ ಆಸೀನನಾಗಿರುವ ಶಿವ ಜಟಾಧಾರಿಯಾಗಿ, ಸರ್ಪಾಭರಣಧಾರಿಯೂ, ಹುಲಿ ಚರ್ಮಧಾರಿಯೂ ಆಗಿದ್ದು, ಚತುರ್ಭುಜಗಳನ್ನು ಹೊಂದಿರುತ್ತಾನೆ. ಆತನ ಎರಡು ಕೈಗಳಲ್ಲಿ ಪರಶು, ಡಮರು, ಮತ್ತೆರಡು ಕೈಗಳು ಅಭಯ ವರದಮುದ್ರೆಯಲ್ಲಿರುತ್ತವೆ. ಪಕ್ಕದಲ್ಲಿ ಪಾರ್ವತಿ ಮತ್ತು ಸ್ಕಂದ ಇದ್ದರೆ ಈ ಶಿಲ್ಪವನ್ನು ಸೋಮಸ್ಕಂದ ಶಿಲ್ಪವೆಂದು ಉಮಾಮಹೇಶ್ವರ ಶಿಲ್ಪ ವಾಗಿದ್ದರೆ ಇಬ್ಬರು ಸ್ಥಾನಕ ಅಥವಾ ಸುಖಾಸನದಲ್ಲಿದ್ದು ಶಿವನು ಜಟಾ ಮುಕುಟ ಚಂದ್ರನನ್ನು ಧರಿಸಿ ಕೈಯಲ್ಲಿ ನೀಲೋತ್ಪಲ ಮತ್ತು ಸರ್ಪ ಹಿಡಿದಿರುತ್ತಾನೆ. ಪಕ್ಕದಲ್ಲಿ ನಂದಿವಾಹನ ಇರುತ್ತದೆ.[೨೧] ಕ್ರಿ.ಶ.೧೪-೧೫ನೇ ಶತಮಾನಕ್ಕೆ ಸೇರಿದ ಇಂತ ಶಿವನ ಶಿಲ್ಪಗಳು ಕನ್ನಡ ವಿಶ್ವ ವಿದ್ಯಾಲಯದ ವಸ್ತುಸಂಗ್ರಹಾಲಯದ ಮುಂಭಾಗದ ಆವರಣದಲ್ಲಿ, ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಮತ್ತು ಭಾರತೀಯ ಪ್ರಾಚ್ಯ ವಸ್ತು ಸಂಗ್ರಹಾಯದಲ್ಲಿ ಕಾಣಬಹುದು. ಭಾರತೀಯ ಪುರಾತತ್ವ, ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಕ್ರಿ.ಶ.೧೫-೧೬ನೇ ಶತಮಾನದ ಶಾಂತ ಸ್ವರೂಪದ ಉಮಾ ಮಹೇಶ್ವರ ಶಿಲ್ಪವಿದೆ. ಬೆಣಚು ಶಿಲೆಯಲ್ಲಿ ಇದು ಕಂಡರಿಸಲ್ಪಟ್ಟಿದೆ. ಇಲ್ಲಿ ಮಹೇಶ್ವರ ಸುಖಾಸನದಲ್ಲಿ ಕುಳಿತಿದ್ದು ಚತುರ್ಭುಜಗಳಿವೆ. ಕೈಗಳಲ್ಲಿ ಕ್ರಮವಾಗಿ ಡಮರುಗ, ಖಡ್ಗ ಅಭಯ ಹಸ್ತ ಮತ್ತು ಮತ್ತೊಂದು ಕೈ (ಪಾರ್ವತಿ) ಉಮಾಳ ಬೆನ್ನ ಮೇಲೆ ಇದೆ. ಉಮಾದೇವಿ ಶಿವನ ಎಡ ತೊಡೆಯ ಮೇಲೆ ಸುಖಾಸೀನದಲ್ಲಿದ್ದಾಳೆ. ಮಕುಟಕಿರೀಟ, ಕಂಠಹಾರ, ಕಿವಿ, ಓಲೆ, ಕೈಬಳೆ, ಕಾಲ್ಗಡಗ, ಶಿವಲಿಂಗ, ದಾರ, ಭುಜಬಂಧ ಧರಿಸಿದ್ದಾಳೆ. ಈ ಶಿಲ್ಪವೇ ಇಲ್ಲಿ ದೊರೆತ ಶಿವನ ಶಿಲ್ಪಗಳಲ್ಲಿ ವಿಶಿಷ್ಠದ್ದಾಗಿದೆ.

**ನಂದಿ ಶಿಲ್ಪ:** ಶಿವನ ವಾಹನ, ಪುರಾಣಗಳಲ್ಲಿಯೂ ಶಿವನ ವಾಹನ ನಂದಿ ಎಂಬ ಪ್ರಸ್ತಾಪಗಳಿವೆ, ನಂದಿಯ ಬೆನ್ನ ಮೇಲೆ ಡುಬ್ಬ ಪರ್ವತಾಕಾರವಾಗಿದ್ದು ಅದು ಮುಂದಣ ಕಾಲದಲ್ಲಿ ಲಿಂಗದೊಂದಿಗೆ ತಾದಾತ್ಮತ್ಯವನ್ನು ಪಡೆಯಿತು. ಲಿಂಗಾಕಾರದ ಡುಬ್ಬು ಬೆನ್ನ ಮೇಲಿರುವುದರಿಂದ ನಂದಿಯೂ ಕೂಡ ಶಿವಲಿಂಗ ಎಂದೆನಿಸಿಕೊಳ್ಳುತ್ತದೆ. ಮುಂದೆ ಶಿವನ ಜಟಾಭಾರ, ಜಟಾಮುಕುಟಗಳೂ ಆ ಡುಬ್ಬಿನ ರೂಪಾಂತರಗಳೇ ಆಗಿರಬಹುದೆಂದು ಎಸ್. ಕೆ. ರಾಮಚಂದ್ರರಾವ್ ಅಭಿಪ್ರಾಯ.[೨೨] ಶಿವನ ವಾಹನವಾದ ನಂದಿಯ ಶಿಲ್ಪಗಳು ಸಾಮಾನ್ಯವಾಗಿ ಶಿವಾಲಯಗಳು ಅಂತರಾಳ ಇಲ್ಲವೇ ನವರಂಗ ಅಲ್ಲದೇ ಮುಖ ಮಂಟಪದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುತ್ತವೆ. ಪ್ರಸ್ತುತ ಕಮಲಾಪುರ ಪರಿಸರದಲ್ಲಿರುವ ನಂದಿ ಶಿಲ್ಪಗಳು ಶಿವಾಲಯದ ಅಂತರಾಳ ಮತ್ತು ನವರಂಗಗಳಲ್ಲಿ. ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿದ್ದ ಕ್ರಿ.ಶ.೬–೭ನೇ ಶತಮಾನದ ಬದಾಮಿ ಚಲುಕ್ಯ ಕಾಲದ ನಂದಿ ಶಿಲ್ಪ ಅತ್ಯಂತ ಪ್ರಾಚೀನದ್ದಾಗಿದೆ. ಈ ಶಿಲ್ಪದ ಕೆಂಪು ಮಿಶ್ರಿತ ಮರಳು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕ್ರಿ.ಶ.೧೪–೧೫ನೇ ಶತಮಾನದ ನಂದಿ ಶಿಲ್ಪಗಳನ್ನೂ ಕಾಣಬಹುದು. ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ಹಾಗೂ ಕನ್ನಡ ವಿಶ್ವವಿದ್ಯಾಲಯದ ಹೊರ ಆವರಣದಲ್ಲಿ ಹಾಗೂ ಭಾರತೀಯ ಪ್ರಾಚ್ಯ ವಸ್ತು ಸಂಗ್ರಹಾಲಯದಲ್ಲಿ ಕ್ರಿ.ಶ.೧೫–೧೬ನೇ ಶತಮಾನದ ನಂದಿ ಶಿಲ್ಪಗಳು ಇವೆ. ಈ ಶಿಲ್ಪ ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ. ಇದು ಕ್ರಿ.ಶ.೧೮ನೇ ಶತಮಾನದ್ದಾಗಿದೆ. ಇದು ಬೆಣಚುಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ವೀರಭದ್ರ ದೇವಾಲಯದ ಸಭಾಮಂಟಪದಲ್ಲಿ, ಈಶ್ವರ ದೇವಾಲಯದ ಅಂತರಾಳದಲ್ಲಿ, ಕಾಳಿಕಾ ದೇವಾಲಯದ ಮುಖ ಮಂಟಪದಲ್ಲಿ ವಿಶ್ವಕರ್ಮಜನಾಂಗದ ಕಮ್ಮಾರದಿಮ್ಮೆಯ ಕಾಳಿಕಾದೇವಾಲಯದ ಮುಖಮಂಟಪದಲ್ಲಿ ಕ್ರಿ.ಶ.೧೭–೧೮ನೇ ಶತಮಾನದ ನಂದಿ ಶಿಲ್ಪಗಳಿವೆ. ಈ ಶಿಲ್ಪಗಳಲ್ಲಿ ಸಾಮಾನ್ಯವಾಗಿ ಹಣೆಯಲ್ಲಿ ಕುಚ್ಚಿನ ಪದಕ, ಕುತ್ತಿಗೆ ಗಂಟೆಸರ, ಉದರ ಪಟ್ಟಿಕೆ ಮೊದಲಾದ ವಸ್ತ್ರಾಭರಣಗಳಿರುವುದು ಸಾಮಾನ್ಯ ಲಕ್ಷಣಗಳಾಗಿವೆ.

**ಭೈರವನ ಶಿಲ್ಪಗಳು:** ಶಿವಪುರಾಣದ ಪ್ರಕಾರ ಭೈರವ ಸಂಹಾರ ಲೀಲಾ ಮೂರ್ತಿಗಳಲ್ಲಿ ಒಬ್ಬ. ಭೂತ ಪ್ರೇತ ಪಿಶಾಚಿಗಳ ಉಚ್ಛಾಟನೆಗೆಂದು ಭೈರವನ ಪೂಜೆ ಪ್ರಸಿದ್ಧವಾಗಿದೆ. ಕೈಯಲ್ಲಿ ಕಪಾಲವನ್ನು ಹಿಡಿದು ದಂಡಪಾಣಿಯಾಗಿ ಸರ್ಪವನ್ನು ಯಜ್ಞೋಪವೀತವಾಗಿ ಧರಿಸಿ ಯಾಗವನ್ನು ನಾಶಪಡಿಸುವ ಭೈರವನನ್ನು ಕ್ಷೇತ್ರಪಾಲನೆಂದೂ ಕರೆಯಲಾಗುತ್ತಿದೆ. ಶಾರದ ತಿಲಕ ತಂತ್ರ ಕೃತಿಯಲ್ಲಿ ಈತನಿಗೆ ಸಾತ್ವಿಕ ರಾಜಸಿಕ, ತಾಮಸಿಕ ರೂಪಗಳಿಂದ ಕರೆಯಲಾಗಿದೆ. ಸಾತ್ವಿಕ ರೂಪದಲ್ಲಿ ಭೈರವನು ದ್ವಿಭುಜನಾಗಿದ್ದು ದಿಗಂಬರ ಮತ್ತು ಹಸನ್ಮುಖಿಯಾಗಿರುತ್ತಾನೆ. ಆತನೊಂದಿಗೆ ನಾಯಿ ಇರುತ್ತದೆ. ರಾಜಸಿಕ ಭೈರವನು ಚತರ್ಭುಜಗಳನ್ನು ಹೊಂದಿರುತ್ತಾನೆ. ತಾಮಸಿಕ ಭೈರವನು ಅಷ್ಟಭುಜಗಳನ್ನು ಹೊಂದಿರುತ್ತಾನೆ. ಇವರಿಬ್ಬರ ಕೊರಳಲ್ಲಿ ರುಂಡಮಾಲೆ ಇರುತ್ತದೆ.[೨೩] ಭೈರವ ರೂಪಗಳಲ್ಲಿ ವೈವಿಧ್ಯತೆಗಳಿವೆ. ಇವು ತ್ರಿಪುರಾಂತಕ ಭೈರವ, ವೇತಾಲ ಭೈರವ, ಅಗ್ನಿ ಜಿಹ್ವಭೈರವ, ಕಾಲ ಭೈರವ, ಭೀಮರೂಪಭೈರವ,[೨೪] ಪ್ರಸ್ತುತ ಕಾಮಲಾಪುರ ಗ್ರಾಮಕ್ಕೆ ಸೀಮಿತಮಾಡಿದರೆ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿ ಭಾರತೀಯ ಪ್ರಾಚ್ಯ ಪುರಾತತ್ವ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ ಪಟ್ಟಣದ ಎಲ್ಲಮ್ಮ ದೇವಾಲಯದ ಮುಖಮಂಟಪದ ಎಡಭಾಗದಲ್ಲಿ ಭೈರವ ಶಿಲ್ಪಗಳಿವೆ. ಇವೆಲ್ಲವೂ ಇಲ್ಲಿ

ಲಭ್ಯವಿರುವ ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ. ಎಲ್ಲಾ ಶಿಲ್ಪಗಳಲ್ಲಿ ಜಟಾ ಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ರುಂಡಮಾಲೆ, ಕಟಿವಸ್ತ್ರ, ತೋಳುಬಂಧಿ, ಬೆರಳುಂಗುರ, ಕೈಕಡಗ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ತೋರಿಸಿರುವುದು ಸಾಮಾನ್ಯ ಲಕ್ಷಣಗಳಾಗಿವೆ. ಕ್ರಿ.ಶ.೧೪-೧೫ನೇ ಶತಮಾನದ ಒಂದು ಭೈರವನ ಸ್ಥಾನಕ ಶಿಲ್ಪವು ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿದೆ. ಪಟ್ಟಾಭಿರಾಮದೇವಾಲಯ ಪುರಾತತ್ವ ಪ್ರಾಚ್ಯವಸ್ತು ಸಂಗ್ರಹಾಲಯದ ಶೈವ ಅಂಕಣದಲ್ಲಿ ಮತ್ತು ಹೊಸ ಆವರಣದಲ್ಲಿ ಕ್ರಿ.ಶ.೧೫ನೇ ಶತಮಾನದ ಭೈರವನ ಮೂರ್ತಿ ಶಿಲ್ಪಗಳಿವೆ. ಈತನ ಕೈಗಳಲ್ಲಿ ಕ್ರಮವಾಗಿ ಖಡ್ಗ, ಡಮರು, ತ್ರಿಶೂಲ ಮತ್ತು ಪಾನಪಾತ್ರೆಗಳಿವೆ. ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದಲ್ಲಿ ೧೫ನೇ ಶತಮಾನದ ಭೈರವನ ಸ್ಥಾನಿಕ ಶಿಲ್ಪವಿದ್ದು, ಚತುರ್ಭುಜನಾಗಿದ್ದು ಕೈಗಳಲ್ಲಿ ಕ್ರಮವಾಗಿ ಖಡ್ಗ ತ್ರಿಶೂಲ, ಡಮರು ಮತ್ತು ರುಂಡವಿದೆ. ರುಂಡದಿಂದ ಕೆಳಗೆ ಬೀಳುತ್ತಿರುವ ರಕ್ತವನ್ನು ನಾಯಿಯೊಂದು ಜಿಗಿದು ಸೇವಿಸುತ್ತಿರುವುದು ಈತನ ಪಾರ್ಶ್ವಗಳಲ್ಲಿ ಭೂತಗಳ ಪ್ರತಿರೂಪಗಳನ್ನು ತೋರಿಸಲಾಗಿದೆ. ಅಚ್ಯುತಾಪುರದಲ್ಲಿ ಕ್ರಿ.ಶ.೧೫ನೇ ಶತಮಾನದ ಸಾಮಾನ್ಯ ರೀತಿಯಲ್ಲಿ ಚತುರ್ಭುಜ ಭೈರವ ನಿಂತಿದ್ದಾನೆ. ನಿಚ್ಚಣಿಕೆ ಆಂಜನೇಯ ದೇವಾಲಯದ ಪ್ರವೇಶದ್ವಾರದ ಬಲಗಡೆಯಲ್ಲಿ ಕೆದರಿದ ಜಟಾರಾಶಿ, ಚತುರ್ಭುಜ ಹೊಂದಿದ ಭೈರವ ಶಿಲ್ಪವಿದೆ. ಇವೆರಡೂ ಶಿಲ್ಪಗಳು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ ಇಲ್ಲಿನ ಶಿಲ್ಪಗಳು ಮೇಲಿನ ಶಿಲ್ಪದ ಪ್ರತಿಮಾಲಕ್ಷಣಗಳನ್ನು ಒಳಗೊಂಡಿದೆ.

**ಕಾರ್ತಿಕೇಯ ಶಿಲ್ಪಗಳು:** ಶಿವನ ಪರಿವಾರದಲ್ಲಿ ಕಾರ್ತಿಕೇಯನಿಗೆ ಶಿವನ ಮಗನೆಂದು ವಿಶೇಷವಾದ ಸ್ಥಾನವಿದೆ.[೨೫] ಶಿವನ ಮುಖಗಳಿಂದ ಹೊರಹೊಮ್ಮಿದ ಆರು ಕಳೆಗಳ ತೇಜಸ್ಸನ್ನು ಅಗ್ನಿ ಮತ್ತು ವಾಯು ತೆಗೆದುಕೊಂಡು ಹೋಗಿ "ಶರವಣ" ಸರೋವರದಲ್ಲಿರಿಸಿದ್ದರಿಂದ ಅದು 'ಶರವಣಭವ'ವಾಯಿತು. ಅಲ್ಲಿ ಆರು ಜನ ಕೃತಿಕೆಯರು ಅದನ್ನು ಬೆಳಸಿದ್ದರಿಂದ ಕಾರ್ತಿಕೇಯನಾದನು. ಮೊದಲು ಪ್ರಪ್ರಥಮ ರೂಪ ಮುರುಗನ್ ಪಾರ್ವತಿ ಮರುಗನನ್ನು ಶರವಣ ಸರೋವರದಲ್ಲಿ ನೋಡಿ ಅವನ ಆರು ಕಳೆಗಳನ್ನು ಅಪ್ಪಿಕೊಂಡಾಗ ಅವೆಲ್ಲವೂ ಸೇರಿ 'ಸ್ಕಂದ'ನ ರೂಪವಾಯಿತು. ಅನಂತರ ಆತನಿಗೆ ಹಾಲುಣಿಸಿ ಶಿವ-ಪಾರ್ವತಿಯರು ತಮ್ಮ ಮಧ್ಯದಲ್ಲಿ ನಿಲ್ಲಿಸಿಕೊಂಡರು. ಆಗ ಆತನು ಸೋಮಸ್ಕಂದನಾದನು. ಶೂರಪದ್ಮ ಮಾವಿನ ಮರದ ರೂಪದಲ್ಲಿ ಸಮುದ್ರದಡಿಯಲ್ಲಿ ಅಡಗಿಕೊಂಡನು. ಕುಮಾರನು ಮೇಲಾಯುಧದಿಂದ ಆ ಮಾವಿನ ಮರವನ್ನು ಉರುಳಿಸಿದಾಗ ಅಸುರನ ಶರೀರ ಇಬ್ಭಾಗವಾಗಿ ಒಂದು ಭಾಗ ನವಿಲಿನಂತೆ ಇನ್ನೊಂದು ಭಾಗ ಕೋಳಿಯಂತೆ ಕಾಣಿಸಿಕೊಂಡವು. ಕುಮಾರನು ನವಿಲನ್ನು ತನ್ನ ವಾಹನವನ್ನಾಗಿಯೂ, ಕೋಳಿಯನ್ನು ತನ್ನ ಧ್ವಜವನ್ನಾಗಿ ಮಾಡಿಕೊಂಡನು.[೨೬]

ದಕ್ಷಿಣ ಭಾರತದಲ್ಲಿ ಕಾರ್ತಿಕೇಯ ಶೇಯೋನ್, ಮುರುಗ, ಷಣ್ಮುಖ, ಮಹಾಸೇನ, ಕುಮಾರ ಬಾಲಸ್ವಾಮಿ, ವೇಲನ್, ದಂಡಪಾಣಿ, ವಲ್ಲೀನಾಯಕ, ದೇವಸೇನಾಪತಿ, ಸೇನಾನಿ, ಗುಹ, ಗುರುಗುಹ, ಶಿವಗುರು, ದೇಶಿಕ ಎಂದು ವಿವಿಧ ಹೆಸರುಗಳಿಂದ[೨೭] ಕರೆಯುತ್ತಾರೆ.

ಕಾರ್ತಿಕೇಯನ ಶಿಲ್ಪಗಳ ಪ್ರತಿಮಾಲಕ್ಷಣಗಳಿಗೆ ಸಂಬಂಧಿಸಿದಂತೆ ಈತನಿಗೆ ಆರು ತಲೆಗಳಿದ್ದಾಗ ಹನ್ನೆರಡು ಕೈಗಳಿರುತ್ತವೆ. ಚತುರ್ಭುಜಶಿಲ್ಪಗಳಲ್ಲಿ ಕ್ರಮವಾಗಿ ಘಂಟೆ, ವೈಜಯಂತಿ, ಪತಾಕೆಗಳಿರುತ್ತವೆ.

ದ್ವಿಭುಜ ಶಿಲ್ಪಗಳಲ್ಲಿ ಎಡಗೈಯಲ್ಲಿ ವಜ್ರಾಯುಧ, ಬಲಗೈಯಲ್ಲಿ ಶಕ್ತ್ಯಾಯುಧ ಇರುತ್ತವೆ. ಸ್ಥಾನಕ ಭಂಗಿಯಲ್ಲಿ ಒಂಟಿಯಾಗಿ ಚತುರ್ಭುಜಗಳಿದ್ದ ಸಂದರ್ಭದಲ್ಲಿ ಅದು ರಾಜಸಿಕಶಿಲ್ಪವೆಂದೂ ಆಸೀನ ಭಂಗಿಯಲ್ಲಿದ್ದು ದ್ವಿಭುಜಗಳಿದ್ದ ಸಂದರ್ಭದಲ್ಲಿ ಅದು ಸಾತ್ವಿಕ ಶಿಲ್ಪವೆಂದೂ, ಮಯೂರಾಢನಾಗಿ ಆರು, ಎಂಟು ಅಥವಾ ಹನ್ನೆರಡು ಭುಜಗಳಿದ್ದ ಸಂದರ್ಭದಲ್ಲಿ ಅದು ತಾಮಸ ಶಿಲ್ಪವೆಂದೂ ಕರೆಯಲಾಗುತ್ತದೆ.[೨೮]

ಪ್ರಸ್ತುತ ಕಾಮಲಾಪುರ ಪರಿಸರದಲ್ಲಿ ಲಭ್ಯವಿರುವ ಕಾರ್ತಿಕೇಯ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಕಾಮಲಾಪುರ ಪ್ರದೇಶದ ಕನ್ನಡ ವಿಶ್ವವಿದ್ಯಾಲಯದ ಹೊರ ಆವರಣದಲ್ಲಿ ಭಾರತೀಯ ಪ್ರಾಚ್ಯ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ, ಮತ್ತು ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ, ವರದರಾಜಮ್ಮ ಪಟ್ಟಣದ ಕಾರ್ತೀಕೇಯ ದೇವಾಲಯದ ಗರ್ಭಗೃಹದಲ್ಲಿ ಕಾರ್ತಿಕೇಯ ಶಿಲ್ಪಗಳಿವೆ. ಇವೆಲ್ಲಾ ಶಿಲ್ಪಗಳನ್ನು ಕಪ್ಪುಶಿಲೆ ಮತ್ತು ಬೆಣಚು ಶಿಲೆಯಲ್ಲಿ ಕಂಡರಿಸಲಾಗಿದೆ. ಈ ಎಲ್ಲಾ ಶಿಲ್ಪಗಳು ಕಿರೀಟ ಮಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಕಟಿವಸ್ತ್ರ, ತೊಳುಬಂಧಿ, ಕೈಕಡಗ, ಬೆರಳುಂಗರ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳಿಂದ ಅಲಂಕೃತವಾಗಿರುವುದು ಸಾಮಾನ್ಯವಾಗಿದೆ. ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯ (ಕಮಲಾಪುರ) ದಲ್ಲಿ ಕ್ರಿ.ಶ.೧೧–೧೨ನೇ ಶತಮಾನ ಶಿಲ್ಪದಲ್ಲಿ ಮಯೂರದ ಮೇಲೆ ಸವ್ಯಲಲಿತಾಸನದಲ್ಲಿರುವ ಕಾರ್ತೀಕೇಯನು ಚತುರ್ಭುಜನಾಗಿದ್ದಾನೆ. ಕೈಗಳಲ್ಲಿ ಕ್ರಮವಾಗಿ ಅಭಯಹಸ್ತ, ಪದ್ಮ, ದಂಡ ಮತ್ತು ಫಲಗಳಿವೆ. ಪಂಚಮುಖಗಳನ್ನು ಹೊಂದಿದ್ದು ಕಿವಿಯಲ್ಲಿ ಕರ್ಣ ಕುಂಡಲ ಕೊರಳಲ್ಲಿ ಐದು ಹಂತದ ಮಣಿಸರ, ಪದಕಸರ ಧರಿಸಿರುವುದು. ಈ ಶಿಲ್ಪ ಕೆಂಪು ಮಿಶ್ರಿತ ಮರಳು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕ್ರಿ.ಶ.೧೫ನೇ ಶತಮಾನದ ಇನ್ನೊಂದು ಕಾರ್ತಿಕೇಯ ಶಿಲ್ಪ ಭಾರತೀಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಸ್ಥಾನಿಕ ಭಂಗಿಯಲ್ಲಿದೆ. ನವಿಲನ್ನು ವಾಹನವನ್ನಾಗಿ ಮಾಡಿಕೊಂಡಿದ್ದಾನೆ. ಚತುರ್ಭುಜ ಕೈಗಳಲ್ಲಿ ಕ್ರಮವಾಗಿ ತ್ರಿಶೂಲ, ಬಿಲ್ಲುಬಾಣ, ಪದ್ಮ ಹಿಡಿದಿದ್ದಾನೆ. ಈ ಮೂರ್ತಿಯ ಅಕ್ಕ–ಪಕ್ಕ ದೇವ ಸೇನೆಯರು ನಿಂತ ಭಂಗಿಯಲ್ಲಿದ್ದು ಕೈಯಲ್ಲಿ  ಖಡ್ಗ ಹಿಡಿದಂತಿದೆ. ಇದೇ ಕಾಲದ ಮಯೂರಾ ರೂಢ ಇನ್ನೊಂದು ಕಾರ್ತೀಕೇಯ ಮೂರ್ತಿ ಸುಖಾಸೀನ ಭಂಗಿಯಲ್ಲಿದ್ದು ಎರಡೂ ಕೈಗಳು ಕಟ್ಯಾವಲಂಬಿತವಾಗಿದೆ. ಚತುರ್ಭುಜದಲ್ಲಿದ್ದು ಎರಡು ಕೈಗಳಲ್ಲಿನ ಆಯುಧಗಳು ಭಗ್ನವಾಗಿವೆ.

**ಗಣೇಶ ಶಿಲ್ಪಗಳು:** ಗಣೇಶ ಶಿವ–ಪಾರ್ವತಿಯರ ಮಗ. ಪುರಾಣ. ತಂತ್ರ, ಆಗಮ ಬ್ರಾಹ್ಮಣ ಸೂತ್ರ, ಧರ್ಮಶಾಸ್ತ್ರಗಳಲ್ಲಿ ಗಣೇಶನ ಉಲ್ಲೇಖಗಳಿವೆ. ಹಿಮಪರ್ವತದ ತಪ್ಪಲಿನಲ್ಲಿ ಕಾಮ ಕೇಳಿಯಲ್ಲಿ ನಿರತವಾಗಿದ್ದ ಗಜಗಳ ಮಿಥುನವನ್ನು ಕಂಡು, ತಾವೂ ಕ್ರೀಡಿಸಬೇಕೆಂಬ ಅಲೌಖಿಕ ಆಸೆಯಿಂದ ಶಿವ–ಪಾರ್ವತಿಯರು ಗಜ ರೂಪದಲ್ಲಿ ಕ್ರೀಡಿಸಿ ಫಲವಾಗಿ ಜನಿಸಿದವನೇ ಗಣೇಶ ಎಂದು ಆಗಮವೊಂದು ಉಲ್ಲೇಖಿಸಿದೆ.[೨೯]

ವೈದಿಕ ಸಂಪ್ರದಾಯದ ಹಲವು ದೇವತೆಗಳಂತೆ, ಹಿಂದೂಗಳ ಆದಿದೇವಗಣದಲ್ಲಿ ಗಣೇಶನೂ ಒಬ್ಬನಾಗಿದ್ದಾನೆ. ರುದ್ರನ ಪುತ್ರ 'ವಿನಾಯಕ' ನಾಗಿ ಮೆರೆದು, ಬದ್ಧಿಶೀಲ ಬೃಹಸ್ಪತಿಯಾಗಿದ್ದನು. ವೈದಿಕ ದೇವತೆಗಳೇ ಪುರಾಣಕಾಲದ ಗಜಮುಖ, ವಿನಾಯಕ ಎಂಬುದು ವಿದ್ವಾಂಸರ ಅಭಿಮತವಾಗಿದೆ.[೩೦]

ಪ್ರಾಚೀನ ಕಾಲದಲ್ಲಿ ಗಣೇಶನನ್ನು ಶೂದ್ರರು ಆರಾಧಿಸುತ್ತಿದ್ದರು. ಕಾಲಾಂತರದಲ್ಲಿ ಬ್ರಾಹ್ಮಣರು ಆರಾಧಿಸತೊಡಗಿದರು. ನಂತರ ಗಾಣಪತ್ಯರೆಂಬ ಉಗ್ರ ಪಂಥದವರು ಶಂಕರಾಚಾರ್ಯರ ಕಾಲದಲ್ಲಿ ಮಾತ್ರ ಈತನ ಆರಾಧನೆಯಲ್ಲಿ ತೊಡಗಿದರು. ವಾಸ್ತವ ಈತನನ್ನು ಎಲ್ಲಾಮತದವರೂ ಆರಾಧಿಸುತ್ತಾರೆ.[೩೧] ಗಣೇಶ ರಾಕ್ಷಸರನ್ನು ಸಂಹರಿಸಲು ಭೂತಗಳು ಗಣಗಳ ನಾಯಕತ್ವವನ್ನು ವಹಿಸಿಕೊಂಡಿದ್ದರಿಂದ ಭೂತಗಣ ನಾಯಕನೆಂದು ಸಂಭೋದಿಸಲಾಗಿದೆ.[೩೨] ಅತೀ ಪ್ರಾಚೀನ ಗಣೇಶ ಶಿಲ್ಪಗಳು ಯಾವುದೇ ಬಗೆಯ ಅಲಂಕಾರಗಳಿಲ್ಲದೇ ನಿರಾಭರಣವಾಗಿವೆ. ನಂತರ ಕರಂಡಮಕುಟ, ಜಟಾಮಕುಟ, ರತ್ನಹಾರಗಳು, ಕಂಕಣವಲಯಗಳು, ಉಪವೀತ, ಕಂಠಹಾರ, ನಾಗಯಜ್ಞೋಪವೀತ, ವಸ್ತ್ರಾಭರಣಗಳಿಂದ ಅಲಂಕರಿಸಲ್ಪಟ್ಟಿವೆ.

ಹೆಚ್ಚಾಗಿ ಗಣೇಶನ ಸ್ಥಾನಿಕ ಶಿಲ್ಪಗಳು ಸಮಭಂಗಿ, ದ್ವಿಭಂಗಿ ತ್ರಿಭಂಗಿಗಳಲ್ಲಿ ಇರುತ್ತವೆ. ಅತೀ ಪ್ರಾಚೀನ ಗಣೇಶ ಶಿಲ್ಪಗಳ ಬಳಿ ಮೂಷಿಕವಿರುವುದಿಲ್ಲ. ಈತನಿಗೆ ಗಜಮುಖ ಶೂರ್ಪಕರ್ಣ, ಆನೆಯತಲೆ, ಮೊರದಂತಹ ಕಿವಿಗಳಿರುತ್ತವೆ. ಸೊಂಡಿಲಿನ ವಿನ್ಯಾಸ ಎಡಬದಿಗೆ ಬಾಗಿರುತ್ತದೆ. ದಕ್ಷಿಣ ಭಾರತದಲ್ಲಿ ಸಾಮಾನ್ಯವಾಗಿ ಗಣೇಶನ ಬಲದಂತ ಮುರಿದಂತೆ ಭಗ್ನದಂತ ತೋರಿಸಲಾಗಿರುತ್ತದೆ. ಪರಶುರಾಮನೊಂದಿಗೆ ಅಥವಾ ಚಂದ್ರನೊಂದಿಗೆ ಹೋರಾಡುವಾಗ ಈ ದಂತ ಮುರಿಯಿತೆಂದು ಪುರಾಣಗಳು ಉಲ್ಲೇಖಿಸಿವೆ. ಆಯುಧಗಳಲ್ಲಿ ಮೋದಕ, ಅಂಕುಶ, ಪಾಶ, ಪರಶು, ಬಿಲ್ಲು, ದಂತ, ವಲಯ, ಅಂಗುಳೀಯ ನಾಟ್ಯ ಮುದ್ರೆ, ಗದಾ, ಸರ್ಪ, ಪುಷ್ಪ ಪ್ರಮುಖವಾಗಿವೆ. ಸೊಂಟಕ್ಕೆ ಹುಲಿಯ ಚರ್ಮವಿದ್ದು, ಕೆಲವೆಡೆ ದಿಗಂಬರನಾಗಿರುತ್ತಾನೆ.[೩೩] ಇಂತಹ ಲಕ್ಷಣಗಳಿರುವ ಗಣೇಶನ ಶಿಲ್ಪಗಳು ಕಾಮಲಾಪುರ ಗ್ರಾಮದ ಪರಿಸರದಲ್ಲಿ ಇವೆ.

ಕಾಮಲಾಪುರ ಪ್ರದೇಶದಲ್ಲಿ ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಗಣೇಶನ ಶಿಲ್ಪ ದ್ವಿಭುಜವಾಗಿದೆ. ಕನ್ನಡ ವಿಶ್ವವಿದ್ಯಾಲಯದ ಹೊರ ಆವರಣದಲ್ಲಿ ಇಂತಹ ದ್ವಿಭುಜ ಗಣೇಶ ಶಿಲ್ಪಗಳು ಇವೆ. ಗಾಣಪತ್ಯದಲ್ಲಿ ಕ್ರಿ.ಶ.೧೧-೧೨ನೇ ಶತಮಾನದ ಬಳಪದಕಲ್ಲಿನ ದ್ವಿಬಾಹು ಗಣೇಶನಶಿಲ್ಪ ಭಾರತೀಯ ಪ್ರಾಚ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿದೆ. ಕೈಗಳಲ್ಲಿ ಕ್ರಮವಾಗಿ ಪಾಶ ಮತ್ತು ಅಂಕುಶ ಧರಿಸಿ ಆಸೀನನಾಗಿರುವುದೇ ವಿಶೇಷ. ಕ್ರಿ.ಶ.೧೪ನೇ ಶತಮಾನದ ಗಣೇಶನ ಶಿಲ್ಪ ರಾಜ್ಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ದೊರಕಿದೆ. ಈ ಶಿಲ್ಪ ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಇಲ್ಲಿ ಗಣೇಶ ಸುಖಾಸೀನ ಭಂಗಿಯಲ್ಲಿದ್ದು ಕರಂಡ ಮುಕುಟಧರಿಸಿದ್ದು ಶಿರವು ಸ್ವಲ್ಪ ಶಿಥಿಲವಾಗಿದೆ. ಅಷ್ಟಭುಜಗಳಿವೆ. ಕೈಗಳಲ್ಲಿರುವ ಆಯುಧಗಳು ಶಿಥಿಲವಾಗಿವೆ. ಕೊರಳಲ್ಲಿ ಕಂಠೀಹಾರ, ಪದಕಹಾರ, ಯಜ್ಞೋಪವೀತ ಧರಿಸಿದ್ದಾನೆ. ಉದರಬಂಧವಿದೆ. ಹಾವು (ಸರ್ಪ) ಸುತ್ತಿದ ಉದರ ಬಂಧವಿದೆ. ಈತನ ಎಡಭಾಗದ ತೊಡೆಯ (ಸ್ತ್ರೀ) ಶಕ್ತಿ ಆಸೀನವಾಗಿದ್ದಾಳೆ. ಈ ಶಕ್ತಿಗೆ ಶ್ಯಾಮಲಂಗಿ ಅಥವಾ ಜಯಂತಿ ಎಂದು ಹೆಸರು. ಈಕೆಯ ಕೈಯಲ್ಲಿ ಪದ್ಮವಿದೆ. ಗಣೇಶ ಇವಳನ್ನು ಎಡಗೈಯಲ್ಲಿ ಆಲಂಗಿಸಿಕೊಂಡಿದ್ದಾನೆ. ಶಕ್ತಿದೇವತೆ ಅಗಲವಾದ ಹಾರ, ಮಕುಟ ಕಿರೀಟ, ವೈಜಯಂತಿಹಾರ ಧರಿಸಿದ್ದಾನೆ. ಕ್ರಿ.ಶ.೧೪ನೇ ಶತಮಾನ ಚತುರ್ಭುಜ ಗಣೇಶನ ಶಿಲ್ಪಗಳು ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ, ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದ ಶೈವ ಅಂಕಣದಲ್ಲಿ ಮತ್ತು

ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಮುಂಭಾಗದಲ್ಲಿದ್ದು ಇವೆಲ್ಲವೂ ಕಿರೀಟ ಮುಕುಟ, ಕರ್ಣಕುಂಡಲ, ಮಣಿಸರ, ಕಂಠಹಾರ, ಕಟಿವಸ್ತ್ರ, ಯಜ್ಞೋಪವೀತ, ತೋಳುಬಂಧಿ, ಕೈಕಡಗ, ಬೆರಳುಂಗುರ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿರುವುದು ಸಾಮಾನ್ಯ ಮೂರ್ತಿಲಕ್ಷಣವಾಗಿದೆ.

ಕ್ರಿ.ಶ೧೫-೧೬ನೇ ಶತಮಾನದ ಚತುರ್ಭುಜ ಗಣೇಶ ಶಿಲ್ಪಗಳು. ವರದರಾಜಮ್ಮ ಪಟ್ಟಣದ ಸುಬ್ರಮಣ್ಯ ದೇವಸ್ಥಾನದ ಮುಖಮಂಟಪದಲ್ಲಿ, ಪ್ರಸನ್ನ ಆಂಜನೇಯ ದೇವಸ್ಥಾನದ ಮುಖಮಂಟಪದಲ್ಲಿ, ರಾಜ್ಯ ಪುರಾತತ್ವ ಪ್ರಾಚ್ಯ ವಸ್ತುಸಂಗ್ರಹಾಲಯದಲ್ಲಿ, ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಭಾಗದ ಆವರಣದಲ್ಲಿ, ವೀರಭದ್ರ ದೇವಾಲಯದ ಸಭಾಮಂಟಪದಲ್ಲಿ, ಗಾರಿಬಾವಿ ಆಂಜನೇಯ ದೇವಾಲಯದ ಮುಖಮಂಟಪದಲ್ಲಿ, ನಗರೇಶ್ವರ ದೇವಾಲಯದ ಗರ್ಭಗೃಹದ ಮತ್ತು ಸಭಾ ಮಂಟಪದಲ್ಲಿ ಕಾಳಿಕಾದೇವಾಲಯದ ಹೊರ ಆವರಣದಲ್ಲಿ, ಕೆರೆಯದಿಡ್ಡಿಯ ಮುಂಭಾಗದ ಗಣೇಶ ದೇವಾಲಯದಲ್ಲಿ, ಈಶ್ವರ ದೇವಾಲಯದ ಅಂತರಾಳದಲ್ಲಿ ಪದ್ಮ ಪೀಠದ ಮೇಲೆ ಸುಖಾಸೀನ ಭಂಗಿಯಲ್ಲಿದ್ದು ಬಲಗೈಯಲ್ಲಿ ಪಾಶ ಹಿಡಿದಿದ್ದು ವ್ಯಾಖ್ಯನ ಮುದ್ರೆಯಲ್ಲಿದ್ದ ಶಿಲ್ಪಗಳಿವೆ. ಕೆಲವೊಂದು ಚತುರ್ಭುಜ ಗಣೇಶ ಶಿಲ್ಪಗಳ ಬಲಗೈಗಳಲ್ಲಿ ಅಂಕುಶ ಅಭಯಹಸ್ತ ಎಡಗೈಗಳಲ್ಲಿ ಪಾಶ, ಮೋದಕ ಪಾತ್ರೆ ಇದೆ.

**ವೀರಭದ್ರ ಶಿಲ್ಪಗಳು:** ದಕ್ಷ ಬ್ರಹ್ಮನ ಮಗಳಾದ ದಾಕ್ಷಾಯಿಣಿ, ಶಿವನ ಧರ್ಮಪತ್ನಿ. ದಕ್ಷ ಬ್ರಹ್ಮ ಶಿವನೆಡೆಗೆ ಬಂದಾಗ ಸಭೆಯಲ್ಲಿ ಪತ್ನಿಯೊಂದಿಗೆ ಮಗ್ನನಾದ ಆತನಿಂದ ಆದರಾತಿಥ್ಯ ದೊರೆಯಲಿಲ್ಲವೆಂಬ ಕಾರಣದಿಂದ ಕುಪಿತನಾಗಿ ಆತನನ್ನು ತಾನು ಅವಮಾನಿಸಬೇಕೆಂದು ಯಜ್ಞನೆಡಸಲು ತೀರ್ಮಾನಿಸಿದನು. ಈ ಯಜ್ಞಕ್ಕೆ ಎಲ್ಲಾ ದೇವ-ದೇವತೆಯರನ್ನು ಮತ್ತು ತನ್ನ ಎಲ್ಲ ಅಳಿಯಂದಿರನ್ನು ಆಹ್ವಾನಿಸಿ ಶಿವನನ್ನು ಆಹ್ವಾನಿಸಿರಲಿಲ್ಲ. ಯಜ್ಞ ಪ್ರಾರಂಭವಾಗಲು ದಾಕ್ಷಾಯಿಣಿ ತನ್ನ ತಂದೆಯಿಂದ ಆಹ್ವಾನ ಬರದೆ ಇದ್ದರೂ ಕಾಡಿ ಬೇಡಿ ಶಿವನ ಅನುಮತಿ ಪಡೆದು ಯಜ್ಞಕ್ಕೆ ಹೋಗುತ್ತಾಳೆ. ಆದರೆ ಅಲ್ಲಿ ತಂದೆಯ ವರ್ತನೆಯಿಂದ ಮನನೊಂದು ಅದೇ ಯಜ್ಞಕುಂಡದಲ್ಲಿ ಬಿದ್ದು ಪ್ರಾಣ ಬಿಡುತ್ತಾಳೆ. ಅದರಿಂದ ಕುಪಿತನಾದ ಶಿವನು ತನ್ನ ಜಡೆಯನ್ನು ನೆಲಕ್ಕೆ ಅಪ್ಪಳಿಸಲು ವೀರಭದ್ರನು ಜನ್ಮತಾಳಿ ದಕ್ಷಯಜ್ಞವನ್ನು ಧ್ವಂಸಮಾಡಿ, ಆತನ ಶಿರಚ್ಛೇಧನ ಮಾಡುತ್ತಾನೆ. ದಕ್ಷನ ಪತ್ನಿ ವೀರಭದ್ರನಲ್ಲಿ ತನ್ನ ಪತಿಯನ್ನು ಬದುಕಿಸುವಂತೆ ಅಂಗಲಾಚುತ್ತಾಳೆ. ಆಗ ಅಲ್ಲಿಯೇ ಇದ್ದ ಟಗರಿನ ಮುಖವೊಂದನ್ನು ದಕ್ಷನ ಶರೀರಕ್ಕೆ ಅಂಟಿಸಿ ಆತನನ್ನು ಬದುಕಿಸುತ್ತಾನೆ. ವೀರಭದ್ರನ ಈ ಹಿನ್ನೆಲೆ ವೈದಿಕ ಸಾಹಿತ್ಯ ಲಿಂಗ, ಸ್ಕಂದ, ಶಿವ, ಮತ್ಸ್ಯ, ವಿಷ್ಣು, ವಾಯು, ಬ್ರಹ್ಮಾಂಡ, ಭಾಗವತ ಪುರಾಣಗಳಲ್ಲಿ, ಮಹಾಭಾರತದಲ್ಲೂ ಉಲ್ಲೇಖವಾಗಿದೆ.[೨೪] ಆಂಧ್ರ ಪ್ರದೇಶ ಮತ್ತು ಕನ್ನಡ ನಾಡಿನಲ್ಲಿ ವೀರಭದ್ರನ ಆರಾಧನೆ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಕೆಲವು ಶಾಸನಗಳಲ್ಲಿ ವೀರಭದ್ರನ ಉಲ್ಲೇಖಗಳಿವೆ. ಕ್ರಿ.ಶ ೧೦೪೫ರ ಶಾಸನಗಳಲ್ಲಿ (ಹಾವೇರಿ ತಾಲೂಕಿನ ಕೋಳೂರದ್ದು) ವೀರಭದ್ರ ದೇವರ ಉಲ್ಲೇಖ ಪ್ರಥಮವಾಗಿ ಗೋಚರಿಸುತ್ತದೆ. ಹೀಗೆ ಈ ನಾಡಿನ ಕ್ರಿ.ಶ.೧೧ನೇ ಶತಮಾನದ ಶಾಸನಗಳಲ್ಲಿ ವೀರಭದ್ರನ ಆರಾಧನೆ ಉಲ್ಲೇಖಿತವಾಗಿದೆ.[೨೫] ಬರಬರುತ್ತಾ ಸಾಮಾನ್ಯವಾಗಿ ವೀರಭಧ್ರನು ವೀರಾಸನದಲ್ಲಿ ಅಥವಾ

ಸಮಭಂಗಿಯಲ್ಲಿ ನಿಂತಿರುತ್ತಾನೆ. ದ್ವಿಭುಜ ಕೈಗಳಲ್ಲಿ ಖಡ್ಗ ಮತ್ತು ಖೇಟಕಗಳಿರುತ್ತವೆ. ಪಾರ್ಶ್ವದಲ್ಲಿ ದಕ್ಷಬ್ರಹ್ಮ ಮತ್ತು ಆತನ ಪತ್ನಿ ವೀರಾಣಿ ಅಂಜಲಿ ಮುದ್ರಾಸಕ್ತರಾಗಿ ನಿಂತಿರುವ ನಿರೂಪಣೆಗಳಿರುತ್ತವೆ. ಪ್ರಸ್ತುತ ಕಾಮಲಾಪುರ ಪ್ರದೇಶದಲ್ಲಿ ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ಕ್ರಿ.ಶ.೧೩ನೇ ಶತಮಾನದ ಶಿಲ್ಪವಿದೆ. ಇದು ಸ್ಥಾನಿಕ ಭಂಗಿಯಲ್ಲಿದ್ದು ಕಠಂಡ ಮುಕುಟ, ಕರ್ಣಕುಂಡಲ, ಚತುರ್ಭುಜ, ಕೈಗಳಲ್ಲಿ ಕ್ರಮವಾಗಿ ಬಾಣಖಡ್ಗ, ಬಿಲ್ಲು ಮತ್ತು ಗುರಾಣಿಗಳಿವೆ. ಕೈಗಳಿಗೆ ರುದ್ರಾಕ್ಷಿ, ತೋಳುಬಂದಿ ಕಾಲಲ್ಲಿ ಕಡಗ, ವೀರಗಾಸೆ ಧರಿಸಿದ್ದಾನೆ. ಪಾರ್ಶ್ವದಲ್ಲಿ ದಕ್ಷಬ್ರಹ್ಮ ಅಂಜಲಿ ಮುದ್ರಾಸಕ್ತವಾಗಿ ನಿಂತಿದ್ದಾನೆ. ಶಿಲ್ಪದ ಸುತ್ತಲೂ ಬಳ್ಳಿಯಿಂದ ರೂಪಿತವಾದ ಪ್ರಭಾವಳಿ ಇದೆ. ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಮುಂಭಾಗದಲ್ಲಿ ಚತುರ್ಭುಜ ವೀರಭದ್ರ, ಕ್ರಿ.ಶ.೧೪-೧೫ನೇ ಶತಮಾನದ್ದಾಗಿದ್ದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಇದು ಸ್ಥಾನಿಕ ಭಂಗಿಯಲ್ಲಿದ್ದು, ಕೈಗಳಲ್ಲಿ ಕ್ರಮವಾಗಿ ಖಡ್ಗ, ತ್ರಿಶೂಲ,ಡಮರು ಮತ್ತು ಖೇಟಕಗಳಿವೆ. ಇದೇ ಆವರಣದಲ್ಲಿ ೧೫ನೇ ಶತಮಾನದ ಇನ್ನೊಂದು ವೀರಭದ್ರ ಅಷ್ಟಭುಜ ಉಳ್ಳವನಾಗಿದ್ದು ಸ್ಥಾನಿಕ ಭಂಗಿಯಲ್ಲಿ ಅಂಕುಶ, ತ್ರಿಶೂಲ, ಬಾಣ, ಖಡ್ಗ, ಗುರಾಣಿ, ಪಾಶ, ಕತ್ತಿ, ಬಿಲ್ಲು ಹಿಡಿದಿದ್ದಾನೆ. ರುಂಡಮಾಲೆ ಧರಿಸಿ ವೀರಗಾಸೆ ತೊಟ್ಟಿದ್ದಾನೆ. ಈ ಪರಿಸರದಲ್ಲಿ ವೈಶಿಷ್ಟಮಯವಾದ ಶಿಲ್ಪಿದಾಗಿದೆ. ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಕ್ರಿ.ಶ.೧೫-೧೬ನೇ ಶತಮಾನದ ಎರಡು ಶಿಲ್ಪಗಳಿವೆ. ದ್ವಿಬಾಹು ವೀರಭದ್ರನು ಕೈಗಳಲ್ಲಿ ಖಡ್ಗ ಮತ್ತು ಖೇಟಕಗಳನ್ನು ಧರಿಸಿದ್ದಾನೆ. ಭಾರತೀಯ ಪ್ರಾಚ್ಯ ವಸ್ತು ಸಂಗ್ರಹಾಲಯದಲ್ಲಿ ಕ್ರಿ.ಶ ೧೫-೧೬ನೇ ಶತಮಾನದ ಇನ್ನೂ ಎರಡು ವೀರಭದ್ರಶಿಲ್ಪಗಳು ಚತುರ್ಭುಜಗಳನ್ನು ಒಳಗೊಂಡಿದ್ದು ಕೈಗಳಲ್ಲಿ ಖಡ್ಗ, ಬಾಣ, ಬಿಲ್ಲು ಮತ್ತು ಖೇಟಕ ಆಯುಧಗಳಿವೆ. ಈ ಶಿಲ್ಪದ ಬಲಗಡೆ ಅಂಜಲಿ ಮುದ್ರೆಯಲ್ಲಿ ದಕ್ಷಬ್ರಹ್ಮ ನಿಂತಿದ್ದಾನೆ. ಇದೇ ಕಾಲಮಾನದ ಚಿನ್ನಾಪುರ ರಸ್ತೆಯ ವೀರಭದ್ರ ದೇವಾಲಯದಲ್ಲಿ ಸ್ಥಾನಿಕ ಆಸನದಲ್ಲಿ ವೀರಭದ್ರ ಚತುರ್ಭುಜನಾಗಿದ್ದು, ಕೈಗಳಲ್ಲಿ ಕ್ರಮವಾಗಿ ಕತ್ತಿ, ಬಾಣ, ಬಿಲ್ಲು ಮತ್ತು ಖೇಟಕ ಹಿಡಿದಿದ್ದಾನೆ. ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿನ ಶಿಲ್ಪಗಳಲ್ಲಿ ಇದೇ ರೀತಿಯ ಪ್ರತಿಮಾ ಲಕ್ಷಣಗಳಿರುವ ಶಿಲ್ಪಗಳಂತಿರುವುದು ಇನ್ನೊಂದು ವಿಶೇಷತೆ. ರಾಮನಗರ ರಸ್ತೆಯಬಲಗಡೆ ಎತ್ತರದ ಬೆಟ್ಟದ ಮೇಲಿನ ವೀರಭದ್ರ ದೇವಾಲಯದಲ್ಲಿ ಕ್ರಿಶ ೧೬ನೇ ಶತಮಾನದ ಶಿಲ್ಪವಿದ್ದು. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪದ ಕೈಗಳಲ್ಲಿ ಕ್ರಮವಾಗಿ ಖಡ್ಗ, ಬಾಣ, ಬಿಲ್ಲು ಮತ್ತು ಖೇಟಕ ಆಯುಧಗಳಿವೆ. ಪಾರ್ಶ್ವಗಳಲ್ಲಿ ದಕ್ಷಬ್ರಹ್ಮ ಮತ್ತು ಆತನ ಪತ್ನಿ ವೀರಾಣಿ ಅಂಜಲಿ ಮುದ್ರೆಯಲ್ಲಿ ನಿಂತಿದ್ದಾರೆ. ನಗರೇಶ್ವರ ದೇವಾಲಯದ ಬಲ ಭಾಗದ ಮಂಟಪದಲ್ಲಿ ದ್ವಿಬಾಹುವುಳ್ಳ ವೀರಭದ್ರ ಶಿಲ್ಪವಿದೆ. ಇದರ ಕಾಲ ಕ್ರಿ.ಶ ೧೬ನೇ ಶತಮಾನದ್ದಾಗಿದೆ. ಈಶಿಲ್ಪದ ಪ್ರಭಾವಳಿ ಕೀರ್ತಿ ಮುಖಾಲಂಕೃತವಾಗಿರುವುದು ಸಾಮಾನ್ಯ ಲಕ್ಷಣವಾಗಿದೆ. ಇದೇ ಪ್ರತಿಮಾ ಲಕ್ಷಣಗಳುಳ್ಳ ಮತ್ತೊಂದು ಶಿಲ್ಪ ಇದೇ ದೇವಾಲಯದ ಹೊರ ಆವರಣದಲ್ಲಿ ದೊರೆತಿದೆ. ಆರ್.ಕೆ.ಇ.ಪಿ.ಶಾಲೆಯ ಹತ್ತಿರವಿರುವ ವೀರಭ್ರ ದೇವಾಲಯದಲ್ಲಿ ಇಂತಹ ಮತ್ತೊಂದು ಶಿಲ್ಪವನ್ನು ಕಾಣಬಹುದು.

**ವೈಷ್ಣವ ಶಿಲ್ಪಗಳು:** ವೈಷ್ಣವ ಧರ್ಮದ ಪಂಥಗಳಲ್ಲಿ ಭಾಗವತ ಪಂಥ ಒಂದು. ಇದರ ಅನುಯಾಯಿಗಳು ಕ್ರಿ.ಪೂ.ಕೊನೆಯ ಮತ್ತು ಕ್ರಿ.ಸ್ತಾನಂತರದ ಮೊದಲ ಶತಮಾನಗಳಲ್ಲಿ ವೈಷ್ಣವ

ಕುಲದ ಪಂಚವೀರರರನ್ನು ವಾಸುದೇವ, ಪ್ರದ್ಯುಮ್ನ, ಸಾಂಬ, ಅನಿರುದ್ಧ ಮೂರ್ತಿರೂಪದಿಂದ ಆರಾಧಿಸುತ್ತಿರುವ ವಿಚಾರ, ಸಮಕಾಲೀನ ಪುರಾತತ್ವ ಕುರುಹುಗಳಿಂದ ನಿಖರವಾಗುತ್ತದೆ.[೩೬] ದಕ್ಷಿಣ ಭಾರತದ ಸಂದರ್ಭದಲ್ಲಿ ಕ್ರಿ.ಪೂ.ಸುಮಾರು ೨ನೇ ಶತಮಾನದಿಂದ ಕ್ರಿ.ಶ.ಸುಮಾರು ೫ನೇ ಶತಮಾನದವರೆಗೂ ಪಂಚವೀರರ ಆರಾಧನೆ ಪ್ರಚಲಿತದಲ್ಲಿತ್ತು.[೩೭] ಬನವಾಸಿ ಕದಂಬ, ತಲಕಾಡಿನ ಗಂಗರ ಕಾಲಕ್ಕಾಗಲೀ ಈ ಧರ್ಮ ವ್ಯಾಪಕವಾಗಿ ಪ್ರಚಾರದಲ್ಲಿತ್ತು. ವಿಷ್ಣು ಸರ್ವೋತ್ತಮನೆಂದು ಜನರಲ್ಲಿ ನಂಬಿಕೆ ಬೇರೂರಿತ್ತು. ಸಮಕಾಲೀನ ಶಾಸನಗಳಲ್ಲಿ ವಿಷ್ಣುವಿನ ಮಹಿಮೆಯನ್ನು ವಿವಿಧ ರೂಪಗಳಲ್ಲಿ ವರ್ಣಿಸಲಾಗಿದೆ.[೩೮] ಬಾದಾಮಿ ಚಲುಕ್ಯ ಮನೆತನದ ಪ್ರಾರಂಭದ ಕೆಲವು ಜನ ಅರಸರು ವೈಷ್ಣವ ಧರ್ಮದ ಅನುಯಾಯಿಗಳಾಗಿ ಆಕಾಲದ ಗುಹಾ ಹಾಗೂ ರಾಚನಿಕ ದೇವಾಲಯಗಳಲ್ಲಿ ಮಹಾ ವಿಷ್ಣುವಿನ ವಿವಿಧ ಅವತಾರಗಳ ಶಿಲ್ಪಗಳು ಹೆಚ್ಚಿ ಪ್ರಮಾಣದಲ್ಲಿ ಕಂಡುಬರುತ್ತವೆ. ಮುಂದಿನ ಅರಸರು ವಿಜಯನಗರ ಅರಸರು ವೈಷ್ಣವ ಧರ್ಮವನ್ನು ಪೋಷಿಸಿ ಅಭಿವೃದ್ಧಿಪಡಿಸಿದರು ಎಂಬುದಕ್ಕೆ ಹಂಪೆಯಲ್ಲಿರುವ ಬೃಹದಾಕಾರದ ವೈಷ್ಣವ ದೇವಾಲಗಳೇ ಸಾಕ್ಷಿ. ಈ ಧರ್ಮದ ಶಿಲ್ಪಗಳ ಹಿನ್ನಲೆ ಮತ್ತು ಪ್ರತಿವಾ ಲಕ್ಷಣಗಳು ಮೊದಲಾದ ವಿವರಗಳು ಪಂಚತಂತ್ರಾಗಮ ಪ್ರಾಚೀನ ಕೃತಿಯಲ್ಲಿ ಕೇಶವಾದಿ ೨೪ ಶಿಲ್ಪಗಳ ಬಳಕೆ ಹೆಚ್ಚಾಗಿದೆ.[೩೯] ಬೇಲೂರಿನ ಚೆನ್ನಕೇಶವ ದೇವಾಲಯದ ಭಿತ್ತಿಯಲ್ಲಿ ಈ ೨೪ ಪ್ರಕಾರದ ಶಿಲ್ಪಗಳನ್ನು ಕಂಡರಿಸಿ ತೋರಿಸಾಗಿದೆ. ಈ ರೀತಿ ವಿಷ್ಣುವಿನ ೨೪ ರೂಪಗಳನ್ನು ಕುರಿತು ರೂಪ ಮಂಡನ ಕೃತಿಯಲ್ಲಿ ಸೂಚಿಸಲಾದ ಹೆಸರುಗಳು ಮತ್ತು ಆಯುಧಗಳ ವಿವರಗಳನ್ನು ಪ್ರಸ್ತಾಪಿಸಲಾಗಿದೆ.[೪೦]

ವೈಷ್ಣವ ಪುರಾಣಗಳಲ್ಲಿ ವಿಷ್ಣುವಿನ ದಶಾವತಾರ ವರ್ಣನೆಗಳಿವೆ. ವಿಭಾವಾತಾರವೆಂದರೆ ನಿರ್ದಿಷ್ಠ ಉದ್ದೇಶಕ್ಕಾಗಿ ಭಗವಂತ ವೈಕುಂಠದಿಂದ ಭೂಮಿಗೆ ಇಳಿದು ಬರುವುದು ಎಂದರ್ಥ. ಸೃಷ್ಠಿಯಂತೆ ಪಾಲನವೂ ಆತನ ಕರ್ತವ್ಯ ಧರ್ಮವನ್ನು ರಕ್ಷಿಸಿ ದುಷ್ಠರನ್ನು ಶಿಕ್ಷಿಸುವುದು. ಆ ಅವತಾರ ಹಲವು ವಿಶೇಷವಾಗಿ ಕಥೆ, ಪುರಾಣ ಮತ್ತು ಶಿಲ್ಪಗಳಲ್ಲಿ, ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಘರಾಮ, ಕೃಷ್ಣ ಬುದ್ಧ ಮತ್ತು ಕಲ್ಕ್ಯ ಎಂಬ ೧೦ ಅವತಾರಗಳ ಪ್ರಸ್ತಾವನೆ ಇದೆ.[೪೧] ಪ್ರಸ್ತುತ ಕಾಮಲಾಪುರ ಗ್ರಾಮದ ಪರಿಸರದಲ್ಲಿ ಕಂಡುಬಂದಿರುವ ಇಂತಹ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಕೇಶವ ಶಿಲ್ಪ:** ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ.೧೪-೧೫ನೇ ಶತಮಾನದ ಕೇಶವನ ಶಿಲ್ಪವಿದೆ. ಇದು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಸಮಪಾದದಲ್ಲಿ ನಿಂತಿರುವ ಕೇಶವನು ಚತುರ್ಭುಜನಾಗಿದ್ದಾನೆ. ಕೈಗಳಲ್ಲಿ ಆಯುಧಗಳು ಪದ್ಮ ಶಂಖ ಚಕ್ರ ಮತ್ತು ಗದೆಗಳಿವೆ. ಕೀರಟ ಮಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಕಟಿಸೂತ್ರ, ತೋಳುಬಂಧಿ, ಕೈಗಡಗ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಶಿರದ ಹಿಂಭಾಗದಲ್ಲಿ ಕೀರ್ತಿ ಮುಖದ ಪ್ರಭಾವಳಿ ಅಲಂಕೃತವಾಗಿದೆ. ಪಾರ್ಶ್ವಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರ ಸ್ಥಾನಿಕ ಉಬ್ಬುಶಿಲ್ಪಗಳಿವೆ. ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ಭಾರತೀಯ ಪುರಾತತ್ವ

ವಸ್ತುಸಂಗ್ರಹಾಲಯದಲ್ಲಿ ೧೪-೧೫ನೇ ಶತಮಾನ ಕೇಶವನ ಶಿಲ್ಪಗಳಿವೆ. ಇದರ ಆಸನ ಭುಜ ಆಯುಧ ಮತ್ತು ಪ್ರತಿಮಾ ಲಕ್ಷಣಗಳು ಈ ಮೇಲಿನ ಶಿಲ್ಪವನ್ನು ಹೋಲುತ್ತದೆ.

**ಲಕ್ಷ್ಮಿನಾರಾಯಣ ಶಿಲ್ಪಗಳು:** ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ.೧೪-೧೫ನೇ ಶತಮಾನದ ಶಿಲ್ಪವಿದೆ. ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ನಾರಾಯಣ ಚತುರ್ಭುಜನಾಗಿದ್ದು, ಬಲಗೈಯಲ್ಲಿ ಚಕ್ರ ಮತ್ತೊಂದು ಆಯುಧ ಶಿಥಿಲವಾಗಿದೆ. ಎಡಗೈಯಲ್ಲಿ ಶಂಖ ಮತ್ತೊಂದು ಕೈಯಿಂದ ತನ್ನ ತೊಡೆಯ ಮೇಲೆ ಲಕ್ಷ್ಮಿ ಆಸೀನಳಾಗಿದು ಅವಳ ಸೊಂಟವನ್ನು ಹಿಂಡಿದಂತಿದೆ. ಕಿರೀಟ ಮಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಕಟೀಸೂತ್ರ, ತೋಳುಬಂಧಿ, ಕೈಕಡಗ, ಪಾದಸರ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ದೇವಿ ಸರ್ವಾಲಂಕೃತವಾಗಿ ಪದ್ಮಪೀಠದ ಮೇಲೆ ಕುಳಿತಿದ್ದಾಳೆ. ಇದೇ ಶತಮಾನದ ಇನ್ನೊಂದು ಲಕ್ಷ್ಮಿನಾರಾಯಣ ಶಿಲ್ಪ ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿದೆ. ಇದು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪ ಸ್ಥಾನಿಕ ಭಂಗಿಯಲ್ಲಿದ್ದು ಬಲಗಾಲನ್ನು ಕೆಳಗಿಳಿಸಿದೆ. ಚತುರ್ಭುಜ, ಬಲಗೈಯಲ್ಲಿ ಚಕ್ರ, ಅಭಯ ಹಸ್ತ, ಎಡಗೈಲ್ಲಿ ಶಿಖಾಮಣಿರತ್ನ ಪಟ್ಟಿಕೆಗಳಿವೆ. ಹಣೆಯಲ್ಲಿ ತ್ರಿನಾಮ ತಿಲಕ, ಕಿವಿಯಲ್ಲಿ ವರ್ತುಲಾಕಾರದ ಓಲೆಗಳಿವೆ. ಆದರೆ ಮಕರ ಕುಂಡಲಗಳಿಲ್ಲದಿರುವುದೇ ಈ ಮೂರ್ತಿಶಿಲ್ಪದ ವಿಶಿಷ್ಟ ಲಕ್ಷಣ. ಕೊರಳಲ್ಲಿ ಹಾರ ಜಪಮಾಲೆ ಧರಿಸಿದ್ದಾನೆ. ಯಜ್ಞೋಪವೀತ ಧರಿಸಿದ್ದು ಲಕ್ಷ್ಮಿ ವಿಷ್ಣುವಿನ ತೊಡೆಯ ಮೇಲಿದ್ದಾಳೆ. ಇವು ಈ ಶಿಲ್ಪ ಮೂರ್ತಿಯ ವೈಶಿಷ್ಟ್ಯತೆಯಾಗಿದೆ.

**ಮಾಧವ ಶಿಲ್ಪಗಳು:** ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹಿಂಬದಿಯಲ್ಲಿ ಕ್ರಿ.ಶ.೧೪-೧೫ನೇ ಶತಮಾನದ ಮಾಧವನ ಶಿಲ್ಪವಿದೆ. ಇದು ಕಪ್ಪ್ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಸಮಪಾದದಲ್ಲಿ ನಿಂತಿರುವ ಮಾಧವನು ಚತುರ್ಭುಜನಾಗಿದ್ದು ಕೈಗಳಲ್ಲಿ ಗದೆ, ಚಕ್ರ, ಶಂಖ ಮತ್ತು ಪದ್ಮಗಳಿವೆ. ಕಿರೀಟ ಮಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಕಟಿವಸ್ತ್ರ, ತೋಳುಬಂಧಿ, ಕೈಕಡಗ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಇದೇ ಶತಮಾನದ ಮಾಧವ ಶಿಲ್ಪಗಳು ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದ ಒಳಗೆ ವೈಷ್ಣವ ಅಂಕಣದಲ್ಲಿ ಮತ್ತು ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ ಹಾಗೂ ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿದೆ.

**ಗೋವಿಂದನ ಶಿಲ್ಪಗಳು:** ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ, ಕ್ರಿ.ಶ.೧೫-೧೬ನೇ ಶತಮಾನದ ಗೋವಿಂದನ ಶಿಲ್ಪಗಳಿವೆ. ಇವುಗಳು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ. ಶಿರಭಾಗ ಶಿಥಿಲವಾಗಿವೆ. ಗೋವಿಂದ ಚತುರ್ಭುಜನಾಗಿದ್ದು, ಗದಾ ಪದ್ಮ, ಶಂಖ ಮತ್ತು ಚಕ್ರಗಳಿವೆ. ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಕಟಿಸೂತ್ರ, ತೋಳುಬಂಧಿ, ಕೈಕಡಗ, ಕಾಲ್ಗಡಗ ಮೊದಲಾದ ಆಭರಣಗಳನ್ನು ಧರಿಸಿದ್ದಾನೆ. ಹೂವಿನ ಪೀಠದ ಮೇಲೆ ಸ್ಥಾನಿಕ ಭಂಗಿಯಲ್ಲಿದ್ದಾನೆ. ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಮುಂಭಾಗದಲ್ಲಿ ಕ್ರಿ.ಶ.೧೫ನೇ ಶತಮಾನದ ಗೋವಿಂದನ ಶಿಲ್ಪವಿದೆ. ಇದು ಕಪ್ಪು . ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ.

ಈ ಶಿಲ್ಪ ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಕ್ರಮವಾಗಿ ಶಂಖ, ದೇವಿಯ ಸೊಂಟ, ಚಕ್ರ, ಈಶಿಲ್ಪ ಸ್ಥಾನಿಕ ಭಂಗಿಯಲ್ಲಿದ್ದು ಪಾದ ಭಾಗ ಶಿಥಿಲವಾಗಿದೆ. ದ್ವಿಬಾಹು, ಚಕ್ರ, ಕೈಗಳಲ್ಲಿ ಶಂಖವಿದೆ. ಕಿರೀಟ ಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಕಟೀಸೂತ್ರ, ತೋಳುಬಂಧಿ ಕೈಕಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ದ್ವಿಬಾಹು ಹೊಂದಿರುವುದೇ ಈಶಿಲ್ಪದ ಇನ್ನೊಂದು ವೈಶಿಷ್ಠತೆ.

**ವಿಷ್ಣುವಿನ ಶಿಲ್ಪಗಳು:** ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯದಲ್ಲಿ ಕನ್ನಡ ವಿಶ್ವವಿದ್ಯಾಲಯದ ಹೊರ ವಸ್ತುಸಂಗ್ರಹಾಲಯದ ಮುಂಭಾಗದಲ್ಲಿ, ಕ್ರಿ.ಶ.೧೪-೧೫ನೆ ಶತಮಾನದ ವಿಷ್ಣುವಿನ ಶಿಲ್ಪಗಳಿವೆ. ಇವು ಕಪ್ಪು ಮಿಶ್ರಿತ ನೀಲಿಕಲ್ಲಿನಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪಗಳು ಚತುರ್ಭುಜಗಳನ್ನು ಹೊಂದಿದ್ದು ಆಯುಧಗಳು ಶಿಥಿಲವಾಗಿವೆ. ಈ ಎರಡು ಸ್ಥಾನಿಕ ಶಿಲ್ಪಗಳು ಸಮಪಾದದಲ್ಲಿವೆ. ಕಿರೀಟ, ಮುಕುಟ, ಕರ್ಣ ಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಕಟಿವಸ್ತ್ರ, ತೋಳುಬಂಧಿ, ಕೈಕಡಗ, ಕಾಲ್ಗಡಗ, ಮೊದಲಾದ ವಸ್ತ್ರಾಭರಣಗಳನ್ನು ಧರಿಸಿರುವುದು ಸಾಮಾನ್ಯವಾಗಿದೆ. ಪಾರ್ಶ್ವಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರು ಸರ್ವಾಲಂಕೃತದ ಸ್ಥಾನಿಕ ಉಬ್ಬುಶಿಲ್ಪಗಳಿವೆ. ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯ, ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಇದು ಕಪ್ಪುಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ. ಕ್ರಿ.ಶ.೧೫-೧೬ನೇ ಶತಮಾನದ ವಿಷ್ಣುವಿನ ಶಿಲ್ಪಗಳಿವೆ. ಇವು ಕಪ್ಪುಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ. ಇವು ಸ್ಥಾನಿಕ ಭಂಗಿಯಲ್ಲಿದ್ದು, ವಿಷ್ಣು ಚರ್ತುಬಾಹು ಕೈಗಳಲ್ಲಿ ಕ್ರಮವಾಗಿ ಚಕ್ರ, ಅಭಯಹಸ್ತ ಗದೆ ಮತ್ತು ವರಹ ಮುದ್ರೆಗಳಿವೆ. ಕಿರೀಟ ಮುಕುಟ, ಕಿವಿಯಲ್ಲಿ ಮಕರ ಕುಂಡಲ ಮತ್ತು ಪತ್ರ ಕುಂಡಲಗಳಿವೆ. ಕೊರಳಲ್ಲಿ ಕಂಠಹಾರ, ಮಣಿಸರ, ಯಜ್ಞೋಪವೀತ, ಕಟೀವಸ್ತ್ರ, ತೋಳುಬಂಧಿ, ವಾಜೀಬಂಧ, ಕೈಕಡಗ ಮತ್ತು ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳಿಂದ ಅಲಂಕೃತವಾಗಿವೆ.

**ಹೃಷಿಕೇಶಿ ಶಿಲ್ಪ:** ಕನ್ನಡ ವಿಶ್ವವಿದ್ಯಾಲಯ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ.೧೫-೧೬ನೇ ಶತಮಾನದ ಹೃಷಿಕೇಶಿ ಶಿಲ್ಪವಿದೆ. ಇದು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಿಟ್ಟಿದೆ. ಪದ್ಮಪೀಠದ ಮೇಲೆ ಆಸೀನನಾಗಿ ಚತುರ್ಭುಜನಾಗಿದ್ದು ಕೈಗಳಲ್ಲಿ ಕ್ರಮವಾಗಿ ಚಕ್ರ, ಪದ್ಮ, ಶಂಖ ಮತ್ತು ಗದೆಗಳಿವೆ. ಕಿರೀಟ-ಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಉಧರಬಂಧ, ಕಟೀಸೂತ್ರ ಕೈಗಳಲ್ಲಿ ಕೈಗಡಗ, ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಪಾರ್ಶ್ವಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರ ಸ್ಥಾನಕ ಉಬ್ಬು ಶಿಲ್ಪಗಳಿವೆ. ಹೃಷಿಕೇಶಿ ಶಿಲ್ಪದ ಬಲ ಪಕ್ಕಕ್ಕೆ ಅಂಜಲಿ ಮುದ್ರೆಯ ಗರುಡನ ಉಬ್ಬು ಶಿಲ್ಪವಿದೆ. ಶಿಲ್ಪದ ಸುತ್ತಲೂ ಕೀರ್ತಿಮುಖ ಪ್ರಭಾವಳಿಯ ಸುತ್ತಲೂ ಪರಿಚಾರಿಕೆಯರು ನಿಂತಿರುವುದು ಈ ಮೂರ್ತಿ ಶಿಲ್ಪದ ವೈಶಿಷ್ಟ್ಯತೆಯಾಗಿದೆ.

**ಅನಂತ ಪದ್ಮನಾಭ ಶಿಲ್ಪಗಳು:** ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ಕ್ರಿ.ಶ.೧೬ನೇ ಶತಮಾನಕ್ಕೆ ಸೇರಿದ ಅನಂತ ಪದ್ಮನಾಭ ಶಿಲ್ಪವಿದೆ. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಏಳು ಹೆಡೆಯ ಸರ್ಪದ ಮೇಲೆ ಅನಂತ ಶಯನ ಮಲಗಿದ್ದಾನೆ. ಈ ಶಿಲ್ಪ ಚತುರ್ಭುಜಗಳನ್ನು ಹೊಂದಿದ್ದು ಬಲಗೈ ಚಕ್ರ ಮತ್ತೊಂದು ಕೈ ಶಿರಕ್ಕೆ ತಾಕಿಸಿಕೊಂಡು ಮಲಗಿದ್ದ ಕೆತ್ತನೆ ತುಂಬಾ ಸುಂದರವಾಗಿದೆ. ಎಡಗೈ ಎರಡೂ ಕೈಗಳು ತುಟಿತವಾಗಿದೆ. ಕಿವಿಯಲ್ಲಿ ಕರ್ಣಕುಂಡಲ ಮತ್ತು ಪತ್ರ ಕುಂಡಲಗಳಿವೆ. ಕೊರಳಲ್ಲಿ

ಕಂಠೀಹಾರ, ಮಣಿಸರ, ಯಜ್ಞೋಪವೀತ ಧರಿಸಿದ್ದಾನೆ. ಕೈಗಳಿಗೆ ತೋಳುಬಂಧಿ, ವಾಜೀಬಂಧ, ಕೈಕಡಗ ಧರಿಸಿದ್ದಾನೆ. ಸೊಂಟಕ್ಕೆ ಕಟೀಸೂತ್ರವಿದೆ. ಕಾಲನ್ನು ಒತ್ತುತ್ತಿರುವ ಶ್ರೀದೇವಿ ಮತ್ತು ಭೂದೇವಿಯರ ಶಿಲ್ಪಗಳು ಶಿರಭಾಗ ಶಿಥಿಲವಾಗಿದೆ.

**ಪುರುಷೋತ್ತಮ ಶಿಲ್ಪಗಳು:** ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ.೧೪ ೧೫ನೇಶತಮಾನದ ಪುರುಷೋತ್ತಮ ಶಿಲ್ಪವಿದೆ. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಸಮಪಾದದಲ್ಲಿರುವ ಪುರುಷೋತ್ತಮನು ಪದ್ಮಪೀಠದ ಮೇಲೆ ಚರ್ತುಭುಜನಾಗಿದ್ದು ಕೈಗಳಲ್ಲಿ ಕ್ರಮವಾಗಿ ಚಕ್ರ, ಗದಾ, ಅಭಯಹಸ್ತ ಮತ್ತು ಶಂಕಗಳಿವೆ. ಕಿರೀಟ, ಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ ಕಟೀಸೂತ್ರ, ತೋಳುಬಂಧಿ, ಕೈಕಡಗ ಮತ್ತು ಕಾಲ್ಗಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಕೀರ್ತಿಮುಖ ಪ್ರಭಾವಳಿ ಮೇಲೆ ಬಳ್ಳಿಯಿಂದ ರೂಪಿತವಾಗಿದೆ.

**ನರಸಿಂಹ:** ನರಸಿಂಹನ ಶಿಲ್ಪಗಳಲ್ಲಿ ಮೂರು ರೀತಿಯ ವೈವಿಧ್ಯತೆಯನ್ನು ಕಾಣಬಹುದು. ಪ್ರಸನ್ನ ನರಸಿಂಹ ಲಕ್ಷ್ಮಿನರಸಿಂಹ, ಉಗ್ರನರಸಿಂಹ ಈ ಮೂರು ಶಿಲ್ಪಗಳು ಪ್ರಸ್ತುತ ಕಾಮಲಾಪುರ ಗ್ರಾಮದಲ್ಲಿ ದೊರೆತಿವೆ.

ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದಲ್ಲಿ ಕ್ರಿ.ಶ.೧೬ನೇ ಶತಮಾನದ ಪ್ರಸನ್ನ ನರಸಿಂಹ ಶಿಲ್ಪ ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಇದು ಸ್ಥಾನಿಕ ಭಂಗಿಯಲ್ಲಿದ್ದು ಚತುರ್ಭುಜನಾಗಿ, ಕ್ರಮವಾಗಿ ಬಲಗೈಯಲ್ಲಿ ಚಕ್ರ, ಎಡಗೈಯಲ್ಲಿ ಶಂಖ, ಮತ್ತೊಂದು ಬಲಗೈ ಅಭಯ ಮುದ್ರೆ ಎಡಗೈಯಲ್ಲಿನ ಮತ್ತೊಂದು ಆಯುಧ ಸ್ಪಷ್ಟವಾಗಿಲ್ಲ. ಸಿಂಹಮುಖ ಕಾಲಲ್ಲಿ ಗೆಜ್ಜೆಸರ, ಧೋತ್ರ, ಕೆತ್ತನೆ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ.

ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯ ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಮತ್ತು ಕಾಳಿಕಾದೇವಿಯ ದೇವಾಲಯದ ಹೊರ ಆವರಣದ ಮಂಟಪದಲ್ಲಿ ಕ್ರಿ.ಶ.೧೬ನೇ ಶತಮಾನದ ಎರಡು ಲಕ್ಷ್ಮಿ ನರಸಿಂಹನ ಶಿಲ್ಪಗಳಿವೆ. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ. ಬಲಗಾಲನ್ನು ಕೆಳಗೆ ಬಿಟ್ಟು ಸ್ಥಾನಿಕ ಭಂಗಿಯಲ್ಲಿ ನರಸಿಂಹನ ಎಡಗಡೆ ತೊಡೆಯ ಮೇಲೆ ಲಕ್ಷ್ಮಿ ಆಸೀನಳಾಗಿದ್ದಾಳೆ. ಈಶಿಲ್ಪ ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಕ್ರಮವಾಗಿ ಶಂಖ, ದೇವಿಯ ಸೊಂಟ ಹಿಡಿದು ಚಕ್ರ ಮತ್ತು ಅಭಯ ಹಸ್ತದಲ್ಲಿದೆ. ಕರಂಡ ಮಕುಟ, ಕೊರಳಹಾರ, ಯಜ್ಞೋಪವೀತ ಉದರ ಬಂಧ ಕೈಗಳಿಗೆ ಕಂಕಣ, ವಾಜೀಬಂಧ ತೋಳು ಬಂಧಿಗಳನ್ನು ಧರಿಸಿದೆ. ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಕ್ರಿ.ಶ.೧೬ನೇ ಶತಮಾನದ ಉಗ್ರನರಸಿಂಹ, ಕಪ್ಪುಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಪದ್ಮಾಸೀನನಾಗಿರುವ ಉಗ್ರನರಸಿಂಹ ಚತುರ್ಭುಜನಾಗಿದ್ದು ಎರಡು ಭುಜಗಳು ಶಿಥಿಲವಾಗಿವೆ. ಬಲಗೈ ಅಭಯಹಸ್ತ ಎಡಗೈ ವರದ ಮುದ್ರೆಯಲ್ಲಿದೆ. ಕೊರಳಲ್ಲಿ ಕಂಠಹಾರ ಯಜ್ಞೋಪವೀತ ಉದರಬಂಧ, ಕೈಗಳಿಗೆ ಕಡಗ ತೋಳು ಬಂಧಿಗಳನ್ನು ಧರಿಸಿದ್ದಾನೆ. ಸಿಂಹ ಮುಖ ಮನುಷ್ಯ ದೇಹ ಇವೆರಡರ ಸಮ್ಮಿಲನವೇ ಈ ಮೂರ್ತಿಯ ವೈಶಿಷ್ಟ್ಯತೆಯಾಗಿದೆ. ಕಾಮಲಾಪುರದ ರಾಯರಗುಡಿಯ ಎದುರುಗಿನ ಕೃಷ್ಣಾದೇವಾಲಯದಲ್ಲಿ ೧೫ನೇ ಶತಮಾನದ ಕೃಷ್ಣನ ಶಿಲ್ಪವಿದ್ದು ಇದು ಮೇಲಿನ ಶಿಲ್ಪದ ಪ್ರತಿಮಾ ಲಕ್ಷಣಗಳನ್ನು ಒಳಗೊಂಡಿದೆ.

**ಜನಾರ್ಧನ ಶಿಲ್ಪಗಳು:** ಭಾರತೀಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಕ್ರಿ.ಶ.೧೫ನೇ ಶತಮಾನದ ಜನಾರ್ಧನ ಶಿಲ್ಪವಿದೆ. ಈ ಶಿಲ್ಪ ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಸ್ಥಾನಿಕ ಭಂಗಿಯಲ್ಲಿರುವ ಜನಾರ್ಧನ ಚತುರ್ಭುಜನಾಗಿದ್ದು ಬಲಗೈಯಲ್ಲಿ ಚಕ್ರ, ಗದೆ, ಎಡಗೈಯಲ್ಲಿ ಶಂಖ, ಮಾಲೆ ಹಿಡಿದ ಈ ಮೂರ್ತಿ ಅಭಯ ಹಸ್ತದಲ್ಲಿದೆ. ಕರಂಡ ಮಕುಟ, ವರ್ತುಲಾಕಾರದ ಓಲೆ, ಕರ್ಣಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ, ಉದರಬಂಧ, ಕಟೀಸೂತ್ರ, ತೋಳುಬಂಧಿ, ವಾಜೀಬಂಧ ಕೈಕಡಗ ಮತ್ತು ಕಾಲ್ಗಡಗ ಧರಿಸಿದ್ದಾನೆ. ಪಾರ್ಶ್ವಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರ ಉಬ್ಬುಶಿಲ್ಪಗಳಿವೆ.

**ಕೃಷ್ಣನ ಶಿಲ್ಪಗಳು:** ಭಾರತೀಯ ಪ್ರಾಚ್ಯ ಪುರಾತತ್ವ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ.೧೫ನೇ ಶತಮಾನದ ಕೃಷ್ಣನ ಶಿಲ್ಪವಿದೆ. ಇದು ಕಪ್ಪು ಶಿಲೆಯಿಂದ ಕಂಡರಿಸಲ್ಪಟ್ಟಿದೆ. ಈ ಮೂರ್ತಿ ಸ್ಥಾನಿಕ ಭಂಗಿಯಲ್ಲಿದೆ. ಚತುರ್ಭುಜನಾಗಿದ್ದು ಕೈಗಳಲ್ಲಿ ಚಕ್ರ, ಶಂಖ, ಕೊಳಲು ಹಿಡಿದಿದ್ದಾನೆ. ಕರಂಡ ಮಕುಟ ಹಣೆಯಲ್ಲಿ ತ್ರಿನಾಮ ವರ್ತುಲಾಕಾರದ ಓಲೆ ಮತ್ತು ಪತ್ರ ಕುಂಡಲಗಳಿವೆ. ಕೊರಳಲ್ಲಿ ಕಂಠಹಾರ, ಮಣಿಸರ ಕೈಗಳಿಗೆ ತೋಳುಬಂಧಿ ಕೈಬಳೆ ಕಾಲ್ಗಡಗ ಧರಿಸಿದ್ದಾನೆ. ವೇಣುಗೋಪಾಲ ದೇವಾಲಯದ ಗರ್ಭಗೃಹದಲ್ಲಿನ ಕೃಷ್ಣನ ಶಿಲ್ಪ ಕ್ರಿ.ಶ.೧೫ನೇ ಶತಮಾನದ್ದು. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ. ಈ ಶಿಲ್ಪ ಮೇಲಿನ ಶಿಲ್ಪದ ಪ್ರತಿಮಾಲಕ್ಷಣವನ್ನು ಒಳಗೊಂಡಿದೆ. ತ್ರಿಭಂಗಿಯಲ್ಲಿದ್ದು ಈಶಿಲ್ಪದ ಹಿಂದೆ ಆದಿಶೇಷನಿದ್ದಾನೆ. ಈ ಶಿಲ್ಪದ ಪಾರ್ಶ್ವಗಳಲ್ಲಿ ಗೋವುಗಳು ಸ್ಥಾನಿಕ ಭಂಗಿಯಲ್ಲಿವೆ. ರಾಜ್ಯ ಪುರರಾತತ್ವ ವಸ್ತುಸಂಗ್ರಹಾಲಯದಲ್ಲಿ ಕ್ರಿ.ಶ.೧೬ನೇ ಶತಮಾನದ ಕೃಷ್ಣನ ಶಿಲ್ಪವಿದೆ. ಇದನ್ನು ಬೆಣಚು ಶಿಲೆಯಲ್ಲಿ ಕಂಡರಿಸಲಾಗಿದೆ. ಇದರ ಪ್ರತಿಮಾ ಲಕ್ಷಣಗಳು ಮೇಲಿನ ಶಿಲ್ಪದಂತೆ ಇವೆ. ಆದರೆ ಕಿರೀಟದ ಮೇಲ್ಭಾಗದಲ್ಲಿ ಐದುಹೆಡೆಯ ಸರ್ಪವಿದೆ. ಈ ಶಿಲ್ಪದ ಇಕ್ಕೆಲುಗಳಲ್ಲಿ ಗೋವುಗಳು ಗೋಪಿಕಾ ಸ್ತ್ರೀಯರ ಉಬ್ಬುಶಿಲ್ಪಗಳು ಸ್ಥಾನಿಕ ಭಂಗಿಯಿಲ್ಲಿವೆ.

ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ಕ್ರಿ.ಶ.೧೬ನೇ ಶತಮಾನದ ಕೃಷ್ಣನ ಶಿಲ್ಪವಿದೆ. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪ ಸ್ಥಾನಿಕ ಭಂಗಿಯಲ್ಲಿ ದ್ವಿಬಾಹುನಾಗಿದ್ದು, ಬಲಗೈಯಲ್ಲಿ ಕುದುರೆಯ ಲಗಾಮ ಎಡಗೈ ಅಭಯ ಮುದ್ರೆಯಲ್ಲಿವೆ. ಕರಂಡ ಮುಕುಟ, ಕರ್ಣ ಕುಂಡಲ, ಯಜ್ಞೋಪವೀತ, ಉದರಬಂಧ, ಕಟೀಸೂತ್ರ ಕೈಗಳಲ್ಲಿ ಕಡಗ ಕಾಲ್ಕಡಗ ಇನ್ನೂ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ.

**ಗರುಡ ಶಿಲ್ಪಗಳು:** ವೈದಿಕ ಸಾಹಿತ್ಯದಲ್ಲಿ ಸುಂದರವಾದ ರೆಕ್ಕೆಗಳುಳ್ಳ ಗರುಡ ಪಕ್ಷಿಗೂ ಮತ್ತು ವಿಷ್ಣವಿಗೂ ಸಮೀಕರಿಸಲಾಗಿದೆ. ಹಾಗಾಗಿ ವಿಷ್ಣು ಪಕ್ಷಿವಾಹನ, ಗರುಡ ಧ್ವಜನಾದನು. ಸಾಮಾನ್ಯವಾಗಿ ವಿಷ್ಣುವಿನ ದೇಗುಲದ ಮುಂದೆ ಇಲ್ಲವೆ ಭಿತ್ತಿಗಳ ಮೇಲೆ ಇಲ್ಲವೆ ವಿಷ್ಣುವಿನ ಶಿಲ್ಪಗಳ ಪಾರ್ಶ್ವಗಳಲ್ಲಿ ಗರುಡನನ್ನು ಚಿತ್ರಿಸಲಾಗಿರುತ್ತದೆ. ಕರ್ನಾಟಕದಲ್ಲಿ ಹೊಯ್ಸಳ ಮನೆತನದ ಕಾಲಾವಧಿಯ ಉತ್ತರದಿಂದ ಈಚೆಗೆ ವಿಷ್ಣುವಿನ ದೇವಾಲಯದಮುಂದೆ ದೇವಾ ಕೋಷವಿಕದಲ್ಲಿ ಅಂಜಲಿ ಮುದ್ರಸಕ್ತನಾಗಿ ನಿಂತಿರುವ ಗರುಢ ಶಿಲ್ಪವನ್ನು ರಚಿಸುವ ಪರಂಪರೆ ಬೆಳೆದು ಬಂದಿದೆ. ವೀರಾಸನದಲ್ಲಿ ಆಸೀನನಾಗಿ ಇಲ್ಲವೆ ಸ್ಥಾನಿಕ ಗರುಡ ಅಂಜಲಿ ಮುದ್ರಾಸಕ್ತನಾಗಿರುತ್ತಾನೆ. ದೇಹ ಮತ್ತು ಮುಖ ಮನುಷ್ಯನ ಆಕಾರದಲ್ಲಿ ಇರುತ್ತದೆ. ಬೆನ್ನಹಿಂದೆ ಜೋಡಿ ರೆಕ್ಕೆಗಳು ಇರುತ್ತವೆ. ಕಿರೀಟ ಮಕುಟ, ಕರಂಡ ಮಕುಟ, ಕರ್ಣ

ಕುಂಡಲ, ರತ್ನವಲಯ ಅಥವಾ ಸರ್ಪಕುಂಡಲ, ಸರ್ಪವಲಯ, ಕಂಟಿಹಾರ, ಮಣಿಸರ, ಉತ್ತರೀಯ, ಕಂಕಣ, ತೋಳುಬಂದಿ, ಕೈಕಡಗ, ಕಾಲಕಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾನೆ. ಕೆಲವು ವಿಷ್ಣುವಿನ ದೇವಾಲಯಗಳ ದ್ವಾರ ಬಂಧಗಳ ಲಲಾಟ ಪಟ್ಟಿಯಲ್ಲಿ ಗರುಡನ ಕೈಗಳಲ್ಲಿ ಸರ್ಪವನ್ನು ಹಿಡಿದಿರುವಂತೆ ಚಿತ್ರಿಸಲಾಗಿರುತ್ತದೆ.[೪೨]

ಸೀತಾರಾಮ ತಾಂಡದ ನಲ್ಲಾಪುರ ರಸ್ತೆಗೆ ಹೋಗುವ ಎಡಭಾಗದ ವಿಷ್ಣು ದೇವಾಲಯದಲ್ಲಿನ ಸ್ತಂಭದ ಮೇಲೆ, ಪಟ್ಟಾಭಿರಾಮ ದೇವಾಲಯದ ಮಹಾ ಮಕುಟದ ಸ್ತಂಭದ ಮೇಲೆ, ಹಜಾರರಾಮ ದೇವಾಲಯದ ಮುಖಮಂಟಪದ ಸ್ತಂಭದ ಮೇಲೆ, ಚಂದ್ರಶೇಖರ ದೇವಾಲಯದ ಉತ್ತರಕ್ಕೆ ಇರುವ ಸರಸ್ವತಿ ದೇವಾಲಯದ ನವರಂಗ ಮಂಟಪದ ಸ್ತಂಭದ ಮೇಲೆ, ಕ್ರಿ.ಶ.೧೪ ಮತ್ತು ೧೫ನೇ ಶತಮಾನದ ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟ ಗರುಡ ಶಿಲ್ಪಗಳನ್ನು ಕಾಣಬಹುದು. ಇವು ಸ್ಥಾನಿಕ ಭಂಗಿಯಲ್ಲಿದ್ದು ಅಂಜಲಿ ಮುದ್ರೆ, ಕರಂಡ ಮಕುಟ, ಕರ್ಣಕುಂಡಲ ಅಥವಾ ನಾಗಓಲೆ, ನಾಗವಲಯ, ನಾಗಬಂಧ, ಉದರ, ಸರ್ಪಬಂಧ, ಕಾಲಗಡಗ ಧರಿಸಿದ್ದಾನೆ. ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದ ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿದೆ. ಗಜಶಾಲೆಯ ಹಿಂಭಾಗದ ವಿಷ್ಣುದೇವಾಲಯದ ಸಭಾಮಂಟಪದ ಸ್ತಂಭದ ಮೇಲೆ, ಕೋಟೆಯ ಹಿಂಬದಿಯ ಗೋಪಾಲಕೃಷ್ಣ ದೇವಾಲಯದ ನವರಂಗದ ಸ್ತಂಭದ ಮೇಲೆ, ಗುಂಡುರಾವ್ ದೇಸಾಯಿ ಮನೆಯ ಸಮೀಪದ ಶ್ರೀರಾಮ ದೇವಾಲಯದ ಮುಖ ಮಂಟಪದ ಸ್ತಂಭದ ಮೇಲೆ, ವೇಣುಗೋಪಾಲ ದೇವಾಲಯದ ಎದುರುಗೆ ಇರುವ ವಿಷ್ಣುದೇವಾಲಯದ ನವರಂಗದ ಸ್ತಂಭದ ಮೇಲೆ ಮತ್ತು ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದ ವೈಷ್ಣವ ಅಂಕಣದಲ್ಲಿ ಕ್ರಿ.ಶ.೧೬-೧೭ನೇ ಶತಮಾನದ ಅಂಜಲಿ ಮುದ್ರಾ ಗರುಡ ಶಿಲ್ಪಗಳನ್ನು ಬೆಣಚು ಶಿಲೆಯಲ್ಲಿ ಕಂಡರಿಸಲಾಗಿದೆ. ಬಾಗಿದ ಚೂಪಾದ ಮೂಗು, ಸ್ಥಾನಿಕಭಂಗಿ, ಕರಂಡ ಮಕುಟ ಶಿರದ ಅಕ್ಕ-ಪಕ್ಕ ಚಕ್ರ, ಶಂಖ ಹಾಗೂ ಸರ್ಪಗಳು ಇಲ್ಲಿವೆ. ಕಿವಿಯಲ್ಲಿ ವರ್ತುಲಾಕಾರದ ಓಲೆ ಕೊರಳಹಾರ ನಾಗ ಉದರಬಂಧ, ನಾಗವಲಯ, ನಾಗಬಂಧಗಳಿವೆ, ಸೊಂಟಕ್ಕೆ ಕಟೀಸೂತ್ರ ಉತ್ತರಿಯವಿದೆ. ರಾಜ್ಯಪುರಾತತ್ವ ವಸ್ತು ಸಂಗ್ರಹಾಲಯದಲ್ಲಿನ ೧೬ನೇ ಶತಮಾನದ ಶಿಲ್ಪದಲ್ಲಿ ಬಲಗೈ ಅಭಯ ಹಸ್ತ ಎಡಗೈ ನಾಗಹಿಡಿದು ಸೂಚಿ ಮುದ್ರೆ ಇದೆ. ಹಣೆಯ ಮೇಲೆ ತಿಲಕವಿದೆ. ನಗರೇಶ್ವರ ದೇವಾಲಯದಲ್ಲಿನ ಮುಂಭಾಗದ ಮುಖ ಮಂಟಪದಲ್ಲಿ ಕ್ರಿ.ಶ.೧೭-೧೮ನೇ ಶತಮಾನದ ಗರುಡ ಪಕ್ಷಿಯ ಉಬ್ಬುಶಿಲ್ಪವಿದ್ದು ಇದು ಬೆಣಚು ಶಿಲೆಯ ಮೇಲೆ ಸುಂದರವಾಗಿ ಕಂಡರಿಸಲ್ಪಸಟ್ಟಿದೆ.

**ಶ್ರೀದೇವಿ ಮತ್ತು ಭೂದೇವಿಯ ಶಿಲ್ಪಗಳು:** ಸಾಮಾನ್ಯವಾಗಿ ವಿಷ್ಣುವಿನ ಶಿಲ್ಪಗಳ ಪಕ್ಕ ಲಕ್ಷ್ಮಿ ಇರುತ್ತಾಳೆ. ಸ್ಥಾನಿಕ ಭಂಗಿಯಲ್ಲಿರುವ ವಿಷ್ಣುಶಿಲ್ಪಗಳಲ್ಲಿ ಆತನ ಅಕ್ಕ-ಪಕ್ಕ ಶ್ರೀದೇವಿ ಭೂದೇವಿಯರ ಸ್ಥಾನಿಕ ಉಬ್ಬು ಶಿಲ್ಪಗಳು ಇರುತ್ತವೆ. ವಿಷ್ಣುವಿನ ಆಸೀನ ಶಿಲ್ಪವಾದರೆ. ಎಡ ತೊಡೆಯ ಮೇಲೆ ಲಕ್ಷ್ಮಿ ಆಸೀನಳಾಗಿರುತ್ತಾಳೆ. ಇಂತಹ ಶಿಲ್ಪಗಳನ್ನು ಲಕ್ಷ್ಮಿನಾರಾಯಣ ಶಿಲ್ಪಗಳೂ ಕರೆಯಲಾಗುತ್ತದೆ. ಇಂತಹ ಶಿಲ್ಪಗಳು ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ, ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಹಾಗೂ ಕಾಳಿಕಾ ದೇವಾಲಯದ ಮುಖ ಮಂಟಪದಲ್ಲಿ ವಿಷ್ಣು ದೇವಾಲಯದ ಸ್ತಂಭಗಳ ಮೇಲಿನ ಉಬ್ಬುಶಿಲ್ಪಗಳಲ್ಲಿ, ಕ್ರಿ.ಶ.೧೪-೧೫ನೇ ಶತಮಾನದ ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ.

**ಹನುಮಂತನ ಶಿಲ್ಪಗಳು:** ಆಗಮಗಳಲ್ಲಿ, ಹನುಮಂತನನ್ನು ಆಂಜನೇಯನ ಮಗನೆಂದೂ, ರುದ್ರಾಂಶ ಸಂಭೂತವೆಂದೂ ಭಾವಿರುದ್ರನೆಂದೂ ಸೂರ್ಯಪುತ್ರನೆಂದೂ, ವಾಯುಪುತ್ರನೆಂದೂ, ಮರುದ್ಗಣಗಳಿಗೆ ಸಂಬಂಧಿಸಿದವನೆಂದೂ, ರಾಮಭಕ್ತನೆಂದೂ, ಮುಖ್ಯ ಪ್ರಾಣನೆಂದೂ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಮಧ್ವಾಚಾರ್ಯರು ಹನುಮಂತನ ಅವತಾರವೆಂದೂ ಹೇಳಲಾಗುತ್ತದೆ. ಮಾಧ್ವ ಸಂಪ್ರದಾಯದ ಪ್ರಭಾವದಿಂದಾಗಿ ಹನುಮಂತನ ಶಿಲ್ಪಗಳು ಕನ್ನಡ ನಾಡಿನಲ್ಲಿ ಹರಡಿದವು. ವ್ಯಾಸತೀರ್ಥರು ಹೋದಲ್ಲೆಲ್ಲಾ ಹನುಮಂತನ ಶಿಲ್ಪಗಳನ್ನು ಪ್ರತಿಷ್ಠಾಪಿಪನೆಮಾಡಿದರು. ಜಾನಪದರು ಹನುಮಂತನ್ನು ದುಷವಿಶಕ್ತಿಗಳನ್ನು ಶತ್ರುಗಳನ್ನು ನಾಶ ಮಾಡುವವನು, ರೋಗ ಪೀಡೆಗಳನ್ನು ಪರಿಸಹಿಸುವುದು ಭಯ ಭೀತಿಯನ್ನು ಹೋಗಲಾಡಿಸುವುದು, ಬಯಕೆಗಳನ್ನು ತೀರಿಸುವುದು, ಇವೆಲ್ಲಾ ಈತನ ನೆರವಿಂದಲೇ ನಡೆಯಬೇಕೆಂದು ಪ್ರತಿಯೊಂದು ಗ್ರಾಮದಲ್ಲಿ ಈತನನ್ನು ಆರಾಧಿಸುವ ಪದ್ಧತಿ ಇದೆ. ಪ್ರಾಚೀನ ಕಾಲದಲ್ಲಿ ಅರಸರು ತಮ್ಮ ಸೈನಿಕರಲ್ಲಿ ರಾಜಭಕ್ತಿ ಮತ್ತು ಸಾಹಸ ಕಾರ್ಯಸಕ್ತಿಯನ್ನು ಮೂಡಿಸಲೆಂದು ಕೋಟೆ, ಪಟ್ಟಣಗಳ ದ್ವಾರಗಳಲ್ಲಿ ಹನುಮಂತನ ಶಿಲ್ಪಗಳನ್ನು ಪ್ರತಿಷ್ಠಾಪಿಸುತ್ತಿದ್ದರು.[೪೩] ದಕ್ಷಿಣ ಭಾರತದ ಅನೇಕ ರಾಜಮನೆತನಗಳು ಆತನ ಚಿತ್ರವನ್ನು ತಮ್ಮ ನಾಣ್ಯ, ಧ್ವಜ ಹಾಗೂ ಲಾಂಛನದಲ್ಲಿ ಮುದ್ರಿಸುತ್ತಿದ್ದರು. ಹೊಯ್ಸಳರ ಮನೆತನದ ಕಾಲಾವಧಿಯ, ಉತ್ತರಾರ್ಧದಿಂದ ಶ್ರೀರಾಮ ದೇವಾಲಯದ ಮುಂದೆ, ಅಂಜಲಿ ಮುದ್ರಾಸಕ್ತ ಹನುಮಂತನ ಶಿಲ್ಪವನ್ನು ಪ್ರತಿಷ್ಠಾಪಿಸುವ ಪರಂಪರೆ ಬೆಳೆದು ಬಂದಿತು.[೪೪] ವಿಜಯನಗರ ಕಾಲದಲ್ಲಿ ಅನೇಕ ಹನುಮಂತನ ದೇವಾಲಯಗಳು ನಿರ್ಮಾಣವಾಗಿ ಆತನ ಆರಾಧನೆ ವಿಶೇಷವಾಗಿ ಹಂಪಿ, ಆನೆಗೊಂದಿಯ ಪರಿಸರದಲ್ಲಿದ್ದಂತೆ ತೋರುತ್ತದೆ. ಇಂತಹ ಶಿಲ್ಪಗಳಲ್ಲಿ ವೀರಾಂಜನೆಯ ಶಿಲ್ಪಗಳೇ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬಂದಿವೆ. ನಿಂತಿರುವ, ಕುಳಿತಿರುವ ನಡೆಯುತ್ತಿರುವ ಓಡುತ್ತಿರುವ ಭಂಗಿಗಳಲ್ಲಿ ತೋರಿಸಿ, ಮರದ ರಂಬೆಯನ್ನು ಹಿಡಿದು ಎಡಗೈಯನ್ನು ಸೊಂಟದ ಮೇಲಿಟ್ಟು ಹೊಡೆಯಲು ಬಲಗೈಯನ್ನೆತ್ತಿ ಅಡಿಗೆ ಬಿದ್ದ ರಾಕ್ಷಸರನ್ನು ತುಳಿಯುತ್ತಿರುವಂತೆ ಆತನನ್ನು ಚಿತ್ರಿಸಿದ್ದಾರೆ. ಇದು ಸಾಮಾನ್ಯ ಸ್ಥಾನಿಕ ಹನುಮಂತ ಶಿಲ್ಪಗಳಲ್ಲಿ ೫ ಮುಖಗಳು. ಕೈಗಳಲ್ಲಿ ಖಡ್ಗ, ತ್ರಿಶೂಲ, ಶಂಖ, ಚಕ್ರ ಪಾಶ ಅಂಕುಶ ಪರ್ವತ, ಗದೆ, ಮುಷ್ಠಿ, ಆಯುಧಗಳನ್ನು, ತೋರಿಸುವುದು ವೈಶಿಷ್ಯತೆಯಾಗಿದೆ. ಕೆಲವು ಹನುಮಂತ ಶಿಲ್ಪಗಳಿಗೆ ಕೈಗಳಲ್ಲಿ, (ಆನೆಗೊಂದಿಯ ಹತ್ತಿರ ರಘುನಾಥರ ಬೃಂದಾವನದ ಮುಂಭಾಗ) ಶಂಖ, ಚಕ್ರ ಫಲಗಳಿವೆ.[೪೫.೪೬] ಕಮಲಾಪುರ ಪ್ರದೇಶದ ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಕ್ರಿ.ಶ. ಸುಮಾರು ೧೫ ನೇ ಶತಮಾನದ ಹನುಂತನ ಶಿಲ್ಪ, ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪವು ವೀರಾಸನದಲ್ಲಿದ್ದು, ದ್ವಿಬಾಹು, ಬಲಗೈ ಅಭಯಹಸ್ತ ಎಡಗೈಯಲ್ಲಿ ಮರದ ಕೊಂಬೆಯನ್ನು ಹಿಡಿದುಕೊಂಡಿದ್ದು ಸೊಂಟದ ಮೇಲಿಟ್ಟಿದ್ದಾನೆ. ಬಲಗಾಲಿನಿಂದ ಕೆಳಗೆ ಬಿದ್ದ ಅಕ್ಷಯಕುಮಾರ (ರಾಕ್ಷಸ)ನ ಮೇಲಿಟ್ಟಿದ್ದಾನೆ. ಶಿಖೆ ಕಟ್ಟಲಾಗಿದೆ. ಕಿವಿಯಲ್ಲಿ ಕರ್ಣಕುಂಡಲ, ಕಂಠಹಾರ, ಯಜ್ಞೋಪವೀತ ಜಪಮಾಲೆ, ಉದರ ಬಂಧ, ಕಟೀಸೂತ್ರ, ತೋಳು ಬಂಧಿ, ಕೈಕಡಗ, ಕಾಲ್ಕಡಗ ಧರಿಸಿದ್ದಾನೆ. ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದ ವೈಷ್ಣವ ಅಂಕಣದಲ್ಲಿ ಕ್ರಿ.ಶ.೧೫ ನೇ ಶತಮಾನದ ಹನುಮಂತ ಶಿಲ್ಪವನ್ನು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದ್ದು. ಮೇಲಿನ ಶಿಲ್ಪದ ಪ್ರತಿಮಾ ಲಕ್ಷಣಗಳನ್ನು

ಹೊಂದಿದೆ. ಈ ಹನುಮಂತ ಶಿಲ್ಪದ ಶಿರದ ಅಕ್ಕ-ಪಕ್ಕ ಶಂಖ ಚಕ್ರ ಮುದ್ರೆಗಳಿವೆ. ಶಿರದ ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಚಿಹ್ನೆಗಳಿವೆ. ಕ್ರಿ.ಶ.೧೫-೧೬ ನೇ ಶತಮಾನದ ಇಂತಹ ಹನುಮಂತನ ಶಿಲ್ಪಗಳು ಭಾರತೀಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ವರದ ರಾಜಮ್ಮ ಪಟ್ಟಣದಲ್ಲಿ, ರಾಮನಗರ ರಸ್ತೆಯ ಬಲಗಡೆ ಬೆಟ್ಟದ ಮೇಲೆ, ಡೂಮ್ ಗೇಟ್‌ನ ಪ್ರವೇಶ ದ್ವಾರ ಮಂಟಪದ ಬಲಗಡೆ ಮಂಟಪದಲ್ಲಿ, ಬೆಟ್ಟದ ಆಂಜನೇಯ ದೇವಾಲಯದಲ್ಲಿ ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ, ನಲ್ಲಾಪುರ ಕಾಲುವೆಯ ದಂಡೆಯ ಮೇಲಿನ ಹನುಮಂತ ದೇವಾಲಯದಲ್ಲಿ ಇವೆ.

ಕ್ರಿ.ಶ. ಸುಮಾರು ೧೦ ೧೭ ನೇ ಶತಮಾನದ ಹನುಮಂತನ ಶಿಲ್ಪಗಳನ್ನು ಭಾರತೀಯ ಪ್ರಾಚ್ಯ ಪುರಾತತ್ವ ವಸ್ತು ಸಂಗ್ರಹಾಲಯದ ವೈಷ್ಣವ ಅಂಕಣದಲ್ಲಿ ಹಿಂಭಾಗದ ಆವರಣದಲ್ಲಿ, ಅಕ್ಕ ತಂಗಿಯರ ಬೆಟ್ಟದ ಹತ್ತಿರ ಹನುಮಂತ ದೇವಾಲಯದಲ್ಲಿ, ವಾಮನಾಚಾರ್ ಮನೆಯ ಹತ್ತಿರ, ಆಂಜನೇಯ ದೇವಾಲಯದಲ್ಲಿ ನಗರೇಶ್ವರ ದೇವಾಲಯದ ಹಿಂಬದಿಯಲ್ಲಿ, ಸಟಗಿ ಶ್ರೀನಿವಾಸರಾವ್ ಮನೆಯ ಪೂರ್ವ ದಿಕ್ಕಿನ ವೀರ ಆಂಜನೇಯ ದೇವಾಲಯದಲ್ಲಿ, ಗಾಳೆಮ್ಮಗುಡಿಗೆ ಹೋಗುವ ರಸ್ತೆಯ ಬಲಗಡೆಯ ದೇವಾಲಯದಲ್ಲಿ, ಕೆರೆ ತಾಂಡ ರಸ್ತೆಯ ಬಲಭಾಗದಲ್ಲಿ ಹೇಮಗಿರಿ ಆಂಜನೇಯ ದೇವಾಲಯಗಳಲ್ಲಿ ಕಾಣಬಹುದು. ಇವು ಬೆಣಚು ಶಿಲೆಯಲ್ಲಿ ಮಾಡಿದ್ದು. ಸ್ಥಾನಿಕ ಭಂಗಿಯಲ್ಲಿ ಎಡಗಡೆ ಮುಖ ಮಾಡಿಕೊಂಡಿದೆ. ಬಲಗೈ ಅಭಯಹಸ್ತ ಎಡಗೈಯಲ್ಲಿ ಗದೆ ಹಿಡಿದಿದ್ದಾರೆ. ಶಿಖೆಕಟ್ಟಲಾಗಿದೆ. ಕರ್ಣಕುಂಡಲ, ಕೈಗಳಲ್ಲಿ ತೋಳುಬಂಧಿ, ವಾಜೀಬಂಧ, ಲಂಗೋಟಿ ಧರಿಸಿದೆ. ಕಾಲಲ್ಲಿ ಕಾಲ್ಗಡ, ಕೀರ್ತಿ ಮುಖದ ಪ್ರಭಾವಳಿ ನವಿಲು ಹೂಗಳಿಂದ ಅಲಂಕೃತವಾಗಿದೆ. ಎರಡೂ ಪಾದಗಳ ನಡುವೆ ಅಕ್ಷಯ ಕುಮಾರ ಲಿಂಗವನ್ನು ತಬ್ಬಿಕೊಂಡು ಮಲಗಿರುವ ದೃಶ್ಯ ಅತ್ಯಂತ ಸೂಕ್ಷ್ಮವಾಗಿ ಕೆತ್ತಲಾಗಿದೆ. ಇವು ಈ ಶಿಲ್ಪಮೂರ್ತಿಗಳ ವೈಶಿಷ್ಟ್ಯತೆಯಾಗಿದ್ದು. ಹನುಮಂತನ ಶಿಲ್ಪಗಳು ಇದ್ದು. ಇವು ವೈಷ್ಣವ ಪಂಥ ಪ್ರಚಲಿತದಲ್ಲಿವೆ ಎಂಬುದನ್ನು ಸಾಬೀತು ಮಾಡಿವೆ.

**ಶಾಕ್ತ ಪಂಥದ ಶಿಲ್ಪಗಳು:** ಕನ್ನಡ ನಾಡಿನಲ್ಲಿ ಕ್ರಿ.ಶ. ೬ ನೇಯ ಶತಮಾನದಿಂದಲೇ ಶಕ್ತಿಯ ವಿವಿಧ ರೂಪದ ಶಿಲ್ಪಗಳು ಕಾಣಿಸಿಕೊಳ್ಳುತ್ತವೆ. ಸಪ್ತಶತಿ ಅಥವಾ ಚಂಡಿ ಎಂಬ ಮಾರ್ಕಂಡೇಯ ಪುರಾಣದ ೨೦೦ ಶ್ಲೋಕಗಳು. ಮಹಾಮಾತೆಯ ಅವತಾರ ಮತ್ತು ಮಹಾತ್ಮೆಯನ್ನು ಪ್ರಸ್ತಾಪಿಸಿವೆ. "ಶ್ರೀ ವಿದ್ಯಾರ್ವರ್ಣವ" ತಂತ್ರದಲ್ಲಿ ೮೫ ದೇವತಾಶಿಲ್ಪಗಳ ಪ್ರತಿಮಾಲ ಕ್ಷಣಗಳಿವೆ. ಸಮಸ್ತ ಸೃಷ್ಠಿಗೆ ಮೂಲಕಾರಣ ಕರ್ತೃ ಶಕ್ತಿ. ಈ ಶಕ್ತಿಯೇ ದೇವಿ. ಇವಳ ಉಗಮದ ಬಗ್ಗೆ ಒಂದು ಐತಿಹ್ಯವಿದೆ. ಶಿವನ ಪತ್ನಿ ದಾಕ್ಷಾಯಿಣಿ ಆಮಂತ್ರಣವಿಲ್ಲದೇ ತನ್ನ ತಂದೆ ದಕ್ಷಬ್ರಹ್ಮನು ನಡೆಸಿದ ಯಜ್ಞಮಂಟಪಕ್ಕೆ ಹೋಗಿ ಅವಮಾನಿತಳಾಗಿ ಆ ಯಜ್ಞಕುಂಡದಲ್ಲಿಯೇ ಬಿದ್ದು ಮರಣವನ್ನಪ್ಪಿದಳು. ಪತ್ನಿಯ ವಿರಹವನ್ನು ತಾಳದೆ ಶಿವನು ಅವಳ ಶವವನ್ನು ಹೊತ್ತುಕೊಂಡು ದಿಕ್ಕೆಟ್ಟು ತಿರುಗಲು ಆತನನ್ನು ಸಮಾಧಾನಪಡಿಸಲು ವಿಷ್ಣು ಆ ಶವವನ್ನು ಹೊಕ್ಕು ಅದನ್ನು ತುಂಡರಿಸಲು ಪ್ರಾರಂಭಿಸಿದನು. ಹೀಗೆ ತುಂಡರಿಸಲ್ಪಟ್ಟ ಆ ದೇಹದ ಭಾಗಗಳು ಬಿದ್ದ ಸ್ಥಳಗಳು ವಿವಿಧ ಶಕ್ತಿ ಪೀಠಗಳಾಗಿ ತಾಂತ್ರಿಕ ಆಚರಣೆ, ಆರಾಧನೆಯ ಪ್ರಮುಖ ಕೇಂದ್ರಗಳಾದವು. ಇವು ಶಾಸ್ತ್ರಗಳಲ್ಲಿ ೧೦೮ ಶಕ್ತಿತೀರ್ಥಗಳಾಗಿ ಉಲ್ಲೇಖವಾಗಿವೆ.[೪೭] ಶಕ್ತಿಯ ವಿವಿಧ ಅವತಾರಗಳಾದ ಚಂಡಿ, ಕಾಳಿ, ದುರ್ಗೆ, ಊರಮ್ಮ, ಲಕ್ಷ್ಮಿ, ಮಹಿಷಾಸುರ ಮರ್ಧಿನಿ ಹೀಗೆ

ನಾನಾ ಹೆಸರುಗಳಿಂದ ಪ್ರಖ್ಯಾತಿ ಪಡೆದಿದ್ದಾಳೆ. ಈ ಪಂಥ ಎಲ್ಲಾ ಕಾಲದಲ್ಲಿಯೂ ಜನ ಸಾಮಾನ್ಯರಲ್ಲಿ ಬೇರು ಬಿಟ್ಟಿರುವ ಪಂಥವಾಗಿದೆ.[೪೮] ಪ್ರಸ್ತುತ ಕಮಲಾಪುರದ ಪರಿಸರದಲ್ಲಿ ಶಾಕ್ತ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಮಹಿಷಾಸುರ ಮರ್ಧಿನಿ ಶಿಲ್ಪಗಳು:** ಈಕೆಯು ಶಕ್ತಿದೇವತೆಗಳಲ್ಲೊಬ್ಬಳು. ಶಿಲ್ಪಶಾಸ್ತ್ರದ ಪ್ರಕಾರ ಈ ದೇವತೆಗೆ ಹತ್ತು ಕೈಗಳು. ಮೂರು ಕಣ್ಣುಗಳಿರುತ್ತವೆ. ಸುಮಾರು ೧೦೮ ಶಕ್ತಿದೇವತೆಗಳಲ್ಲೆಲ್ಲ ವಿಶೇಷ ವ್ಯಕ್ತಿತ್ವವುಳ್ಳವಳೆಂದರೆ ಮಹಿಷಾಸುರ ಮರ್ಧಿನಿ.[೪೯] ಗೌರಿಯು ಅರುಣಾಚಲದಲ್ಲಿ ಬಟುಕುಗಳ ರಕ್ಷಣೆಯಲ್ಲಿ ಧರ್ಮಕಾರ್ಯನಿರತಳಾಗಿದ್ದಾಗ ಸೈನ್ಯ ಸಮೇತವಾಗಿ ಅಲ್ಲಿಗೆ ಬಂದು ಮಹಿಷಾಸುರನು ಆಕೆಯ ಸೌಂದರ್ಯಕ್ಕೆ ಮರುಳಾಗಿ ಮೋಹಿಸಿ ಆಕೆಯನ್ನು ಮದುವೆಯಾಗಲು ಬಯಸಿದನು. ಆಕೆ ನಿರಾಕರಿಸಿದಾಗ ಮಾಯಾಪಾಶದಲ್ಲಿ ಸಿಲುಕಿ ಮಹಿಷನು ಚತುರೋಕ್ತಿಯಿಂದ ಆಕೆಯನ್ನು ಒಲಿಸಿಕೊಳ್ಳಲು ನೋಡಿದನು. ಅದೂ ಸಾಧ್ಯವಾಗದಿದ್ದಾಗ ಅಸುರೀ ಶಕ್ತಿಯ ಪ್ರಯೋಗಕ್ಕೆ ಮುಂದಾದನು. ಈ ಕಾರಣ ಯುದ್ಧದಲ್ಲಿ ಮಹಿಷನನ್ನು ಸಂಹರಿಸಿದಳೆಂದು ಸ್ಕಂದ ಪುರಾಣದಲ್ಲಿದೆ.[೫೦] ಮತ್ತೊಂದು ಐತಿಹ್ಯದ ಪ್ರಕಾರ ಸ್ತ್ರೀಯರನ್ನು ಬಿಟ್ಟುದೇವ ಗಂಧರ್ವರಾದಿಯಾಗಿ ಯಾರಿಂದಲೂ ಸಾವು ಬರಬಾರದೆಂಬ ವರವನ್ನು ಮಹಿಷನು ಪಡೆದಿದ್ದನು. ಮೂರು ಲೋಕಗಳನ್ನು ವಶಪಡಿಸಿಕೊಂಡು ದೇವತೆಗಳನ್ನು ಆತಂಕಕ್ಕೀಡು ಮಾಡಿದನು ಇದರಿಂದ ಅವಮಾನಿತರಾದ ದೇವತೆಗಳು ತಮ್ಮ ಶಕ್ತಿಹೀನ ವೀರ್ಯಕ್ಕೆ ನಾಚಿಕೆ ಪಟ್ಟು ಅದನ್ನು ಹೊರಹಾಕಿದರು. ಅದು ಒಂದುಗೂಡಿ ಸುಂದರ ಹೆಣ್ಣಿನ ರೂಪ ತಳೆಯಿತು. ಅವಳು ಶಿವನಿಂದ ತ್ರಿಶೂಲ ವಿಷ್ಣುವಿನಿಂದ ಚಕ್ರ, ಯಮನಿಂದ ಕೆದರಿದ ಜಟರಾಶಿ, ಮತ್ತು ಇತರರಿಂದ ಸೂಕ್ತ ಆಯುಧಗಳನ್ನು ಪಡೆದಳು. ಹಿಮವಂತನು ಅವಳಿಗೆ ದೇಹವನ್ನು ವಾಹನವಾಗಿ ಕೊಟ್ಟನು. ದುಷ್ಟ ಮಹಿಷಾಸುರನನ್ನು ತನ್ನ ಮಾಯಾಜಾಲದಲ್ಲಿ ಬಂಧಿಸಿ ಸಂಹರಿಸಿದಳು.[೫೧] ಭಾಗವತ ಪುರಾಣಗಳಲ್ಲೂ ಮಹಿಷಾಸುರ ಮರ್ಧಿನಿಯ ಉಲ್ಲೇಖಗಳು ದೊರಕುತ್ತವೆ. ಮಹಿಷಾ ಮರ್ಧಿನಿಯನ್ನು ತ್ರಿಪುರಾಂತಿಕೆ, ಕಾತ್ಯಾಯಿನಿ, ವಿಂಧ್ಯವಾಹಿನಿ ಎಂತಲೂ ಕರೆಯುತ್ತಾರೆ. ಶಾಸನಗಳಲ್ಲಿ ವಿಂದ್ಯಾವಾಹಿನಿ, ಮಹಾಮುನಿದೇವತೆ ಎಂದೂ ಕರೆಯಲಾಗಿದೆ. ಅವಳು ತನ್ನ ಇಚ್ಛಾನುಸಾರ (೩) ಮೂರು ಭಿನ್ನ ರೂಪಗಳನ್ನು ಸೃಷ್ಟಿಸಿದಳು. ಮಧು ಕೈಟಭರು ಎಂಬ ದೈತ್ಯರ ನಾಶಕ್ಕೆ ತಮೋಗುಣದ ಮಹಾಕಾಳಿಯಾದಳು. ಇಂದ್ರಾದಿ ದೇವತೆಗಳ ಮೋಭಿಷ್ಟಸಿದ್ಧಿಗಾಗಿ, ರಜೋಗುಣದ ಮಹಾಲಕ್ಷ್ಮಿ, ಮಹಿಷಾಸುರನನ್ನು ಸಂಹರಿಸಿ ಮಹಿಷಾ ಮರ್ಧಿನಿಯಾದಳು. ಶುಂಭ ನಿಶುಂಭರೆಂಬ ರಕ್ಕಸರನ್ನು ಮತ್ತು ಅವರ ಸೇನಾಧಿಪತಿಗಳಾದ ಚಂಡ, ಮುಂಡ, ಮತ್ತು ರಕ್ತ ಬೀಜಾಸುರನನ್ನು ಸಂಹರಿಸಲು ಚಾಮುಂಡಿಯಾದಳು. ದುರ್ಗೆ ತನ್ನ ಸಂಹಾರ ಕಾರ್ಯದಲ್ಲಿ ಸಹಕರಿಸಲು ತಾನೇ ದುರ್ಗಾ, ಜಯದುರ್ಗಾ, ವಿಂದ್ಯಾವಾಸಿನಿದುರ್ಗಾ, ವನದುರ್ಗಾ, ರುದ್ರದುರ್ಗಾ, ಲವರಾಮದುರ್ಗಾ, ಭೀಮದುರ್ಗಾ, ಕಾತ್ಯಾಯಿನಿ ದುರ್ಗಾ ಎಂಬ ಇತ್ಯಾದಿ ರೂಪಗಳಲ್ಲಿ ಕಾಣಿಸಿಕೊಂಡಳು. ಆರೂಪಗಳನ್ನು ನವದುರ್ಗೆಯರು ಎಂದು ಕರೆದರು. ಶಿಲ್ಪಗಳಲ್ಲಿ ಸಾಮಾನ್ಯವಾಗಿ ಸಿಂಹ ವಾಹಿನಿಯಾಗಿ ಅಸುರನನ್ನು ಸಂಹರಿಸುತ್ತಿರುವ ಸಂದರ್ಭದಲ್ಲಿ, ಇವಳಿಗೆ ಎಂಟು ಕೈಗಳಿರುತ್ತವೆ. ಹೆಚ್ಚಿನ ಮಟ್ಟಿಗೆ ಸ್ಥಾನಿಕ ಭಂಗಿಯಲ್ಲಿ ನಾಲ್ಕು ಕೈಗಳಿರುತ್ತವೆ. ಬಾಣ, ಶೂಲ, ಖಡ್ಗ, ಚಕ್ರ, ಶಂಖ, ಧನಸ್ಸು, ಖೇಚಕ ಆಯುಧಗಳಾಗಿವೆ. ಮಹಿಷನ ದೇಹವನ್ನು ಮೆಟ್ಟಿ,

ಆತನ ತಲೆಯನ್ನು ಸಂಹರಿಸಿದ ಚಿತ್ರಣ, ಕೆಲವೊಮ್ಮೆ ಸಂಹರಿಸಿದ ಮಹಿಷನ ತಲೆಕೆಳಗೆ ಬಿದ್ದಿದ್ದರೆ, ಮನುಷ್ಯನ ರೂಪವನ್ನು ತಾಳಿದ ಅಸುರನ ಹೆಡೆಮುರಿ ಕಟ್ಟಿರುವ ದೃಶ್ಯವೂ ಕಂಡು ಬರುತ್ತದೆ. ಕೆಲವು ಶಿಲ್ಪಗಳಲ್ಲಿ ಮಹಿಷದ ತಲೆಯ ಮೇಲೆ ನಿಂತಿರುವಂತೆ ತೋರಿಸಲಾಗಿರುತ್ತದೆ. ಮಹಿಷಾಸುರನನ್ನು ಕೊಲ್ಲುತ್ತಿರುವಂತೆ ಇರುವ ಶಿಲ್ಪಗಳಲ್ಲಿ ಸಿಂಹವಾಹಿನಿಯಾಗಿರುತ್ತಾಳೆ. ಪ್ರಸ್ತುತ ಕಮಲಾಪುರ ಪರಿಸರದಲ್ಲಿ ಲಭ್ಯವಾಗಿರುವ ಇಂತಹ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ. ೧೦ ೧೨ನೇ ಶತಮಾನದ ಮಹಿಷ ಮರ್ಧಿನಿಯ ಶಿಲ್ಪವಿದೆ. ಇದು ಕಪ್ಪು ಮಿಶ್ರಿತ ನೀಲಿ ಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ತ್ರಿಭಂಗಿಯಲ್ಲಿ ನಿಂತಿರುವ ಈ ಮಹಿಷ ಮರ್ಧಿನಿ ಅಷವಿಭುಜೆಯಾಗಿದ್ದು ಕೈಗಳಲ್ಲಿ ಆಯುಧಗಳಾದ ಪಾಶ, ಖಡ್ಗ, ಕತ್ತಿ ಅಂಕುಶ, ಗುರಾಣಿ ಮತ್ತು ಖೇಚಕ ಹಿಡಿದಿವೆ. ಇನ್ನೂ ಎರಡು ಆಯುಧಗಳು ಶಿಥಿಲವಾಗಿದೆ. ಬಲಗೈಯಲ್ಲಿನ ಕತ್ತಿಯಿಂದ ಮಹಿಷನನ್ನು ತಿವಿದು ಬಲಗಾಲನ್ನು ಆತನ ಶಿರದ ಮೇಲೆ ಇಟ್ಟಿದ್ದಾಳೆ. ಕರಂಡಮಕುಟ, ಕರ್ಣಕುಂಡಲ, ರತ್ನಹಾರ, ಮಣಿಸರ, ಸ್ತನಪಟ್ಟಿ, ಕಟಿವಸ್ತ್ರ, ಕೈ ಬಳೆ, ಕಾಲ್ಕಡಗ, ತೋಳು ಬಂಧಿ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾಳೆ.

ಪಟ್ಟಣದ ಎಲ್ಲಮ್ಮದೇವಾಲಯದ ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಿದ ಮಹಿಷಾಸುರ ಮರ್ಧಿನಿಯ ಶಿಲ್ಪ ಕ್ರಿ.ಶ. ೧೫ ನೇ ಶತಮಾನದ್ದಾಗಿದೆ. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಸಿಂಹಮುಖದ ಪೀಠದ ಮೇಲೆ ಆಸೀನಗಳಾದ ದೇವಿ ಚತುರ್ಭುಜ ಉಳ್ಳವಳು. ಬಲಗಾಲನ್ನು ಮಹಿಷನ ಮೇಲೆ ಊರಿ ಎಡಗಾಲನ್ನು ಮಡಚಿ ಆಸೀನ ಭಂಗಿಯಲ್ಲಿದ್ದಾಳೆ. ಕೈಗಳಲ್ಲಿ ಡಮರುಗ, ಖಡ್ಗ, ತ್ರಿಶೂಲ ಬಟ್ಟಲು ಹಿಡಿದಿದ್ದಾಳೆ. ಕರಂಡ ಮಕುಟ, ವರ್ತುಲಾಕಾರದ ಓಲೆ, ತೋಳು ಬಂಧಿ, ನಾಗಬಂಧ ಬಳೆ, ಕೊರಳಲ್ಲಿ ಹಾರ, ಮಣಿಸರ, ಕಂಠೀಹಾರ, ಪದಕಸರ, ವೈಜಯಂತಿಹಾರ, ರುಂಡಮಾಲೆಗಳನ್ನು ಧರಿಸಿದ್ದಾಳೆ.

ಗಾಳೆಮ್ಮ ದೇವಾಲಯದ ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಿದ ಮಹಿಷಾಸುರ ಮರ್ಧಿನಿ ಕ್ರಿ.ಶ. ೧೬ನೇ ಶತಮಾನದ್ದಾಗಿದೆ. ಇದು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಹಿಂಭಾಗ ಸಿಂಹಮುಖದ ಪ್ರಭಾವಳಿ ತ್ರಿಭಂಗಿಯಲ್ಲಿ ಆಸೀನಳಾದ ದೇವಿ ಅಷ್ಟಭುಜವುಳ್ಳವಳು. ತನ್ನ ಎಡಗಾಲನ್ನು ಮಹಿಷನ ಶಿರದ ಮೇಲೆ ಊರಿ, ಬಲಗಾಲನ್ನು ಪೀಠದ ಮೇಲೆ ಮಡಚಿಕೊಂಡಿದ್ದಾಳೆ. ಕೈಗಳಲ್ಲಿ ಆಯುಧಗಳು ತ್ರಿಶೂಲ, ಡಮರು, ಪಾಶ, ರುಂಡ, ಕುಂಕುಮ ಭರಣಿ, ವಜ್ರ, ಘಂಟೆ, ಅಗ್ನಿ ಹಿಡಿದಿದ್ದಾಳೆ. ಕರಂಡಮಕುಟ, ವರ್ತುಲಾಕಾರದ ಓಲೆ, ಕಂಠೀಹಾರ, ಮುತ್ತಿನ ಸರ, ವೈಜಯಂತಿ ಹಾರ, ಕಟಿಬಂಧ, ಉದರಬಂಧ, ಕೈಗಳಿಗೆ, ತೋಳುಬಂಧಿ, ಕೈಕಡಗ, ಕಾಲ್ಕಡಗ ಗೆಜ್ಜೆಧರಿಸಿರುವುದು ಈ ಮೂರ್ತಿ ಶಿಲ್ಪದ ವೈಶಿಷ್ಟ್ಯತೆಯಾಗಿದ್ದು ಇಲ್ಲಿನ ಶಾಕ್ತ ಪಂಥ ಹೆಚ್ಚು ಪ್ರಚಲಿತದಲ್ಲಿತ್ತೆಂಬುದನ್ನು ತೋರಿಸುತ್ತದೆ.

**ಕಾಳಿಯ ಶಿಲ್ಪಗಳು:** ಕಾಳಿಯು ದುರ್ಗೆಯ ವಿವಿಧ ಅವತಾರಗಳಲ್ಲಿ ಒಬ್ಬಳಾಗಿದ್ದು ದಕ್ಷಿಣ ಭಾರತದಲ್ಲಿ ಇವಳನ್ನು ಚಾಮುಂಡಿ ಎಂಬ ಹೆಸರಿನಿಂದ ಕರೆಯಲಾಗುತ್ತಿದೆ. ಕಷವಿಗಳನ್ನು ಪರಿಹರಿಸುವವಳು, ದುರ್ಗಮ ಎಂಬ ಅಸುರನನ್ನು ಸಂಹರಿಸಿ ಅವಳು ದುರ್ಗತಿನಾಶಿನಿಯಾದಳು ಎಂದು ವರ್ಣಿಸಲಾಗಿದೆ. ಇವಳ ಕಲ್ಪನೆ ತುಂಬಾ ಪ್ರಾಚೀನ. ಚಂಡ ಮತ್ತು ಮುಂಡ ಎಂಬ ದೈತ್ಯರು

ದೇವಿಯ ಮೇಲೆ ನುಗ್ಗಿ ಬರಲು ಆಕೆ ಕೋಪದಿಂದ ಕಪ್ಪಾಗಲು ಆಕೆಯ ಹಣೆಯಿಂದ ಕಾಳಿ ಉದ್ಭವಿಸಿದವಳೆಂದು 'ಮಾರ್ಕಂಡೇಯ ಪುರಾಣ'ವು ಉಲ್ಲೇಖಿಸಿದೆ.[೫೨] ಕಾಳೀ ವಿಲಾಸತಂತ್ರ, ರುದ್ರಯಾಮಳ ಮೊದಲಾದ ತಾಂತ್ರಿಕ ಕೃತಿಗಳಲ್ಲಿಯೂ ಚಾಮುಂಡಿಯ ಉಲ್ಲೇಖಗಳಿವೆ. ಭಯಾನಕ ಮುಖ ಕೈಯಲ್ಲಿ ಖಡ್ಗ, ಗದೆ ಪಾಶಗಳಿದ್ದು ಕೊರಳಲ್ಲಿ ರುಂಡಮಾಲೆ ಇರುತ್ತದೆ. ಸೊಂಟಕ್ಕೆ ಹುಲಿಚರ್ಮ ಕೆಂಬಣ್ಣ ನಾಲಿಗೆ, ಹೊರಚಾಚಿ ಹಾವಿನ ಹೆಡೆಯಂತೆ ಓಲಾಡುತ್ತಿರುತ್ತದೆ. ತಂತ್ರಸಾರ ಕೃತಿಯಲ್ಲಿ ದಕ್ಷಿಣ ಕಾಳಿ, ಸ್ಮಶಾನಕಾಳಿ, ಗುಹ್ಯಕಾಳಿ, ಭದ್ರಕಾಳಿ, ಸಿದ್ಧಕಾಳಿ, ಚಾಮುಂಡಾ ಮೊದಲಾದ ಪ್ರಬೇದಗಳನ್ನು ಹೇಳಲಾಗಿದೆ. ತಂತ್ರಲೋಕ ಕೃತಿಯಲ್ಲಿ ಸೃಷಿವಿಕಾಳಿ, ಸಂಹಾರಕಾಳಿ, ಸ್ಥಿತಿಕಾಳಿ, ರಕ್ತಕಾಳಿ ಸುಕಾಳಿ, ಯಮಕಾಳಿ, ಮೃತ್ಯಕಾಳಿ ಎಂಬ ಮೂರ್ತಿ ಪ್ರಭೇದಗಳನ್ನು ಹೇಳಿಲಾಗಿದೆ.[೫೩] ಕಾಳಿಯ ಶಿಲ್ಪವು ಸಾಮಾನ್ಯವಾಗಿ ಭಯಾನಕವಾಗಿರುತ್ತದೆ. ಕೋರೆ ದಾಡಿಗಳಿರುವ ಬಾಯಿ, ಹೊರಚಾಚಿದ ನಾಲಿಗೆ, ಕೆದರಿದ ಜಟಾರಾಶಿ, ಬುಸುಗುಟ್ಟುವ ಸರ್ಪಗಳು ಹಣೆಯ ಮೇಲೆ ಕೆಂಡಗಣ್ಣು ೪/೮/೧೦/೧೨/೧೬ ಕೈಗಳಿದ್ದು ಅವುಗಳಲ್ಲಿ ಶಂಖ, ಚಕ್ರ, ಬಿಲ್ಲು, ಬಾಣ, ಖಡ್ಗ, ಖೇಟಕ ಮೊದಲಾದ ಆಯುಧಗಳಿರುವುದು ಈ ಶಿಲ್ಪಮೂರ್ತಿಯ ವೈಶಿಷ್ಟ್ಯ. ಹೆಚ್ಚಿನ ಮಟ್ಟಿಗೆ ಪಾರ್ಶ್ವಗಳಲ್ಲಿ ವೀರಭದ್ರ ವಿಘ್ನೇಶ್ವರ ಇರುತ್ತಾರೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯ ಮುಂಭಾಗದ ಆವರಣದಲ್ಲಿ ಕ್ರಿ.ಶ. ೧೨ನೇ ಶತಮಾನದ ಕಾಳಿ ಶಿಲ್ಪವಿದ್ದು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಪದ್ಮಾಸನದಲ್ಲಿದ್ದು ದ್ವಿಬಾಹು, ಖಡ್ಗ, ಮತ್ತೊಂದು ಕೈಯನ್ನು ತೊಡೆಯ ಮೇಲೆ ಇಟ್ಟಿದ್ದಾಳೆ. ಕರಂಡಮುಕುಟ, ವರ್ತುಲಾಕಾರಾದ ಓಲೆ, ಕೊರಳಲ್ಲಿ ಪದಕಸರ, ಮಣಿಸರ, ಕೈಬಳೆ, ಸೊಂಟಪಟ್ಟಿ, ಕಾಲ್ಕಡಗ ಗೆಜ್ಜೆ ಧರಿಸಿದ್ದಾಳೆ. ಕಾಮಲಾಪುರ ಪ್ರದೇಶದ ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯಲ್ಲಿದ್ದ ಕಾಳಿ ಕ್ರಿ.ಶ. ೧೧-೧೨ ನೇ ಶತಮಾನದ್ದಾಗಿದೆ. ಇದು ನೀಲಿ ಮಿಶ್ರಿತ ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕಾಳಿ ಪದ್ಮಪೀಠದ ಮೇಲೆ ಆಸೀನಳಾಗಿದ್ದಾಳೆ. ಶಿರಭಾಗ ಶಿಥಿಲವಾಗಿದೆ, ದ್ವಿಬಾಹುಗಳಿದ್ದು ಅವುಗಳಲ್ಲಿ ಕ್ರಮವಾಗಿ ಖಡ್ಗ, ಕಪಾಲಗಳಿವೆ. ಕೊರಳಲ್ಲಿ ಕಂಠೀಹಾರ, ಪದಕಹಾರ ಧರಿಸಿದ್ದು ಕಾಲಲ್ಲಿ ಗೆಜ್ಜೆ, ಪಾದದಲ್ಲಿ ಸರಗಳಿವೆ. ಇದೇ ಸ್ಥಳದಲ್ಲಿ ಕ್ರಿ.ಶ.೧೪-೧೫ನೇ ಶತಮಾನದ ದುರ್ಗಿ ಶಿಲ್ಪವು ನೀಲಿ ಮಿಶ್ರಿತ ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಮಕುಟ ಕಿರೀಟ, ವರ್ತುಲಾಕಾರದ ಓಲೆ, ಎದೆಬಂಧ, ಕೊರಳಲ್ಲಿ ಪದಕಸರ, ಮಾಂಗಲ್ಯ, ವೈಜಯಂತೀಹಾರ ಧರಿಸಿದ್ದಾಳೆ. ಈ ಮೂರ್ತಿ ಚತುರ್ಭುಜ ಹೊಂದಿದ್ದು, ಕೈಗಳಲ್ಲಿ ಕ್ರಮವಾಗಿ ತ್ರಿಶೂಲ ಕತ್ತಿ, ಡಮರು, ಪಾನಪಾತ್ರೆ ಹಿಡಿದಿದ್ದಾಳೆ. ಕೈಗಳಲ್ಲಿ ತೋಳುಬಂಧಿ ಬಳೆ, ಕಾಲಲ್ಲಿ ಗೆಜ್ಜೆ, ಪಾದಸರ ಧರಿಸಿದ್ದು, ಬಲಗಾಲನ್ನು ಇಳಿ ಬಿಟ್ಟು ಎಡಗಾಲನ್ನು ಮಡಚಿದ್ದಾಳೆ. ಈ ಶಿಲ್ಪದ ಸುತ್ತಲೂ ಕೀರ್ತಿಮುಖದ ಪ್ರಭಾವಳಿಯಿದೆ. ಇದೇ ಸ್ಥಳದಲ್ಲಿ ಇದೇ ಶತಮಾನದ ಮತ್ತೊಂದು ಕಾಳಿ ಶಿಲ್ಪವಿದೆ. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಮಾತಂಗ ಪರ್ವತಕ್ಕೆ ಹೋಗುವ ರಸ್ತೆಯ ಬಾಳೆ ತೋಟದ ಎಡಬದಿಯಲ್ಲಿ, ಕ್ರಿ.ಶ.೧೫ನೇ ಶತಮಾನದ ಕಾಳಿ ಶಿಲ್ಪ, ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕರಂಡ ಮಕುಟ ವರ್ತುಲಾಕಾರದ ಓಲೆ, ಕೊರಳಲ್ಲಿ ಪದಕಸರ, ರುಂಡಮಾಲೆ, ರೌದ್ರವತಾರ ಮುಖಚರ್ಯೆ ಕೆದರಿದ ಜಟರಾಶಿದ, ದಶಭುಜವುಳ್ಳವಳು, ಕೈಗಳಲ್ಲಿ ಆಯುಧಗಳು ಬಿಲ್ಲು, ಚಂದ್ರ, ಭರ್ಜಿ, ತಮಟೆ, ಖೇಟಕ ಕುಡುಗೋಲು, ಪಾಶ, ಕೀರುಗತ್ತಿ ಹಿಡಿದಿದಾಳೆ. ಇನ್ನೊ ಕೈ ಗಳಲ್ಲಿ ಹಿಡಿದ ಆಯುಧ ಅಸ್ಪಷ್ಟ ಕೈಗಳಿಗೆ

ತೋಳುಬಂದಿ ಸೊಂಟಪಟ್ಟಿ, ಕಾಲಲ್ಲಿ ಕಾಲ್ಗಡಗ, ಗೆಜ್ಜೆ ಧರಿಸಿದ್ದಾಳೆ. ಶಿಲ್ಪದ ಹಿಂಭಾಗ ಕೀರ್ತಿ ಮುಖದ ಪ್ರಭಾವಳಿ ಇದೆ. ಕಮಲಾಪುರದಲ್ಲಿ ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ಕ್ರಿ.ಶ.೧೫ನೇ ಶತಮಾನದ ಕಾಳಿ ಶಿಲ್ಪವಿದೆ. ಅಸೀನ ಭಂಗಿಯಲ್ಲಿದ್ದು, ಚತುರ್ಭುಜ ಹೊಂದಿದ್ದು ಕೈಗಳಲ್ಲಿ ಕ್ರಮವಾಗಿ ಖಡ್ಗ ಡಮುರಗ,ತ್ರಿಶೂಲ, ಬಟಲು ಹಿಡಿದ್ದಾಳೆ. ಕರಂಡ ಮಕುಟ, ವರ್ತುಲಾಕಾರದ ಓಲೆ, ಕೈಗಳಿಗೆ ತೋಳುಬಂಧಿ, ನಾಗಬಂಧ ಬಳೆ, ಕೊರಳಲ್ಲಿ ಕಂಠಹಾರ, ಮಣಿಸರ, ಪದಕಸರ, ಕಟಿಬಂಧ ಧರಿಸಿದ್ದಾಳೆ. ಪಾದಗಳಲ್ಲಿ ಗೆಜ್ಜೆ ಪಾದಸರಗಳಿವೆ. ಕೋಟೆ ಆಂಜನೇಯ ದೇವಾಲಯದ ಮುಂಭಾಗದಲ್ಲಿ ಕ್ರಿ.ಶ.೧೫ನೇ ಶತಮಾನದ ಕಾಳಿ ಶಿಲ್ಪವಿದೆ. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಬಲಗಾಲನ್ನು ರುಂಡದ ಮೇಲೆ ಊರಿ ಎಡಗಾಲನ್ನು ಮಡಚಿ ಆಸೀನಗಳಾಗಿದ್ದಾಳೆ. ಚತುರ್ಭುಜ ಹೊಂದಿದ್ದು ಮೇಲಿನ ಶಿಲ್ಪದಂತೆ ಆಯುಧ ಮತ್ತು ಆಭರಣಗಳನ್ನು ಧರಿಸಿದ್ದಾಳೆ. ರಾಮನಗರದ ರಸ್ತೆಯ ಎಡಗಡೆ ಗುಡ್ಡಗಳ ಮಧ್ಯೆ ಕ್ರಿ.ಶ.೧೬ನೇ ಶತಮಾನದ ರುದ್ರಕಾಳಿ ಶಿಲ್ಪವಿದ್ದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಆಸೀನ ಭಂಗಿಯಲ್ಲಿದೆ. ಚತುರ್ಭುಜಗಳಾಗಿದು ಕೈಗಳಲ್ಲಿ ಆಯುಧಗಳು ಕತ್ತಿ, ಡಮರುಗ, ತ್ರಿಶೂಲ, ಅಕ್ಷಯಪಾತ್ರ ಹಿಡಿದಿದ್ದಾಳೆ. ಕರಂಡ ಮುಕುಟ, ವರ್ತುಲಾಕಾರದ ಓಲೆ, ಕೊರಳಲ್ಲಿಸರ, ರುಂಡಮಾಲೆ ಧರಿಸಿದ್ದಾಳೆ. ಕಾಮಲಾಪುರ ವೀರಭದ್ರ ದೇವಾಲಯದಲ್ಲಿ ಕ್ರಿ.ಶ.೧೬ನೇ ಶತಮಾನದ ಭದ್ರಕಾಳಿ ಶಿಲ್ಪವಿದ್ದು, ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಬಲಗಾಲನ್ನು ಕೆಳಗೆ ಬಿಟ್ಟು ಎಡಗಾಲನ್ನು ಮಡಚಿ ಸುಖಾಸೀನಳಾಗಿದ್ದಾಳೆ. ಇವಳು ಚತುರ್ಭುಜಳಾಗಿದ್ದು ಕೈಗಳಲ್ಲಿ ಕ್ರಮವಾಗಿ ಖಡ್ಗ, ಡಮರು, ತ್ರಿಶೂಲ ಮತ್ತು ಬಟ್ಟಲು ಹಿಡಿದಿದ್ದಾಳೆ. ಉಳಿದ ಪ್ರತಿಮಾ ಲಕ್ಷಣಗಳು ಮೇಲಿನ ಶಿಲ್ಪದಂತೆ ಇವೆ. ಕಾಳಿಕಾದೇವಾಲಯದ ಗರ್ಭಗೃಹದಲ್ಲಿ ಕ್ರಿ.ಶ.೧೬ನೇ ಶತಮಾನದ ಕಾಳಿಕಾ ಶಿಲ್ಪವಿದೆ. ಇದು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಉಳಿದ ಪ್ರತಿಮಾ ಲಕ್ಷಣಗಳು ಮೇಲಿನ ಶಿಲ್ಪದಂತೆ ಇವೆ. ಕಮಲಾಪುರದ ಕಮ್ಮಾರ ದಿಬ್ಬದ ಮೇಲಿನ ಕಾಳಿಕಾ ದೇವಾಲಯದ ಗರ್ಭಗೃಹದಲ್ಲಿ ೧೬ನೇ ಶತಮಾನದ ಶಿಲ್ಪವಿದೆ. ಇದು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕೈಗಳಲ್ಲಿನ ಆಯುಧಗಳಲ್ಲಿ ಡಮರು, ಕತ್ತಿ, ತ್ರಿಶೂಲ ಮತ್ತು ವರದ ಮುದ್ರೆಯಲ್ಲಿದೆ. ಈ ಶಿಲ್ಪದ ಸುತ್ತ ಕೀರ್ತಿಮುಖದ ಪ್ರಭಾವಳಿ ಇದೆ.

**ಲಕ್ಷ್ಮಿಯ ಶಿಲ್ಪಗಳು:** ವೈದಿಕ ಸಂಸ್ಕೃತಿಯ ಪೂರ್ವದಲ್ಲಿ ಲಕ್ಷ್ಮಿ ಬೇಸಾಯಗಾರರ ಧಾನ್ಯದೇವತೆಯಾಗಿದ್ದಳು. ಋಗ್ವೇದದ ತ್ರಿಸೂಕ್ತ, ಶತಪಥ ಬ್ರಾಹ್ಮಣ, ಶಾಂಖಾಯನನ ಗೃಹ್ಯ ಸೂತ್ರ, ಮೊದಲಾದ ಕೃತಿಗಳಲ್ಲಿ ಲಕ್ಷ್ಮಿಯ ಉಲ್ಲೇಖಗಳಿವೆ. ಇವಳ ಕುರಿತಾಗಿ, ಮಹಾಭಾರತದಲ್ಲಿ, ದೇವಾಸುರರು ಅಮೃತದ ಆಸೆಯಿಂದ ಹಾಲ್ಗಡಲನ್ನು ಕಡೆದಾಗ, ಅದರಲ್ಲಿ ಅತಿ ಅಲಂಕಾರ ಭೂಷಿತಳೂ ಸುಂದರಳೂ ಆದ ಕನ್ಯೆ, ಬೆಣ್ಣೆಯಂತೆ ತೇಲಿ ಬಂದಳು. ಸಮುದ್ರ ಮಂಥನವನ್ನು ನೋಡುತ್ತಾ ನಿಂತಿದ್ದ ತ್ರಿಲೋಕಸುಂದರನಾದ ವಿಷ್ಣು ಅವಳನ್ನು ಕಂಡು ಮೋಹಿಸಿ ಕೈಹಿಡಿದು ವಕ್ಷ ಸ್ಥಲವಾಸಿನಿಯನ್ನಾಗಿ ಮಾಡಿಕೊಂಡನೆಂದು ಪ್ರಸ್ತಾಪವಿದೆ. ಅಲ್ಲಿಂದ ಮುಂದಕ್ಕೆ ಲಕ್ಷ್ಮಿ ವಿಷ್ಣುವಿನ, ಶಕ್ತಿಯೆಂಬ ಪರಿಕಲ್ಪನೆ ಮೂಡಿತು. ಋಗ್ವೇದದ ಶ್ರೀ ಸೂಕ್ತವು ಶ್ರೀ ಮತ್ತು ಲಕ್ಷ್ಮಿಯರಿಬ್ಬರೂ ಒಂದೇ ಎಂಬುದನ್ನು ಪ್ರಸ್ತಾಪಿಸಿದೆ.[೫೪] ಸಂಪತ್ತು, ಸಂಮೃದ್ಧಿ, ವೈಭವ, ಪೂಜ್ಯತೆ, ಯಶಸ್ಸು ಮೊದಲಾದವುಗಳನ್ನು ಸೂಚಿಸುವ ಲಕ್ಷ್ಮಿಗೆ ಶತಪಥ ಬ್ರಾಹ್ಮಣದಲ್ಲಿ ವ್ಯಕ್ತಿರೂಪ ಲಭ್ಯವಾಗಿದೆ. ಪ್ರಜಾಪತಿ ತಪಸ್ಸಿನಿಂದ ಅವನಲ್ಲಿಯೇ ಇದ್ದ "ಶ್ರೀ" ಹೊರಬಂದು ದೇವತಾ ಸ್ತ್ರೀಯಂತೆ

ಪ್ರಕಾಶಮಾನವಾಗಿ ಮನೋಹರವಾಗಿ, ಕಾಣಿಸಿಕೊಂಡಳು. ವಿಷ್ಣುಧರ್ಮೋತ್ತರ ಮತ್ತು ಶಿಲ್ಪ ರತ್ನಗಳಲ್ಲಿ ಲಕ್ಷ್ಮಿಯ ಪ್ರತಿಮಾ ಲಕ್ಷಣಗಳನ್ನು ಹೇಳಲಾಗಿದೆ. ದ್ವಿಭುಜೆಯಾದ ಇವಳಬಲಗೈಯಲ್ಲಿ ಪದ್ಮ ಎಡಗೈಯಲ್ಲಿ ಬಿಲ್ವ ಮತ್ತು ಫಲವೂ ಇರಬೇಕು. ವಿಷ್ಣು ವಿನೊಂದಿಗೆ ಇವಳನ್ನು ತೋರಿಸುವಾಗಲೂ ಮತ್ತು ಎರಡೂ ಕೈಗಳಿರಬೇಕು. ಇವಳನ್ನು ಸ್ವತಂತ್ರವಾಗಿ ಚಿತ್ರಿಸುವಾಗ ನಾಲ್ಕು ಕೈಗಳಿದ್ದು ಅವುಗಳಲ್ಲಿ ಕ್ರಮವಾಗಿ ಪದ್ಮ ಬಿಲ್ವಫಲ, ಶಂಖ,ಅಮೃತ ಕುಂಭಗಳಿರುತ್ತವೆ. ಪಾರ್ಶ್ವಗಳಲ್ಲಿ ಎರಡು ಆನೆಗಳು ಸೊಂಡಿಲುಗಳಲ್ಲಿ ಕುಂಭಗಳನ್ನು ಹಿಡಿದು ಕೊಂಡು ಅಭಿಷೇಕದಲ್ಲಿ ತೊಡಗಿರುತ್ತವೆ. ಇವಳನ್ನು ಮಹಾಲಕ್ಷ್ಮಿ, ಧನಲಕ್ಷ್ಮಿ, ಧಾನ್ಯಲಕ್ಷ್ಮಿ, ಧೈರ್ಯಲಕ್ಷ್ಮಿ, ವೀರಲಕ್ಷ್ಮಿ, ವಿದ್ಯಾಲಕ್ಷ್ಮಿ, ಸಂತಾನಲಕ್ಷ್ಮಿ, ಭಾಗ್ಯಲಕ್ಷ್ಮಿ ಎಂದು ಎಂಟು ರೂಪಗಳಲ್ಲಿ ಕಲ್ಪಿಸಿಕೊಂಡು ಅವರನ್ನು ಅಷ್ಟಲಕ್ಷ್ಮಿಯರೆಂದು ಪೂಜಾ ಕಲ್ಪದಲ್ಲಿ ಅಳವಡಿಸಿಕೊಳ್ಳಲಾಗಿದೆ.[೫೫] ಕಮಲದ ಮೇಲೆ (ಪದ್ಮಪೀಠ) ಪದ್ಮಾಸನದಲ್ಲಿ ಆಸೀನಳಾದ ದ್ವಿಭುಜ ಅಥವಾ ಚತುರ್ಭುಜ ಲಕ್ಷ್ಮಿಯ ಶಿಲ್ಪಗಳು ಪ್ರಾಚೀನ ಕಾಲದಿಂದಲೂ ಕಾಣಸಿಗುತ್ತವೆ. (ಉದಾ:- ಮಾರ್ಕಂಡೇಯ ಪುರಾಣದಲ್ಲಿ ಅಷ್ಟದಶ ಭುಜ ಲಕ್ಷ್ಮಿಯ ಉಲ್ಲೇಖವಿದೆ.) ಪ್ರಸೂತಿ ಲಾಂಛನವಾದ ಸೌಭಾಗ್ಯ ಚಿಹ್ನೆಯಾದ ಕಮಲದ ಹೂ ಲಕ್ಷ್ಮಿಗೆ ಹೊಂದಿಕೊಂಡು ಬಂದಿದೆ. ವಿಷ್ಣುವಿನ ಶಿಲ್ಪದೊಂದಿಗೆ ಆತನ ಪತ್ನಿಯಾಗಿ ಈಕೆಯನ್ನು ಚಿತ್ರಿಸುವಾಗ ಕೇವಲ ಎರಡು ಕೈಗಳಿರಬೇಕೆಂದು ಹೇಳಲಾಗಿದೆ. ಎರಡು ಕೈಗಳ ಲಕ್ಷ್ಮಿಯನ್ನು 'ಮಾನಸಾರ' ಕೃತಿಯಲ್ಲಿ "ಸಾಮಾನ್ಯ ಲಕ್ಷ್ಮಿ" ಎಂದೂ ಶಿಲ್ಪಸಾರ ಕೃತಿಯಲ್ಲಿ "ಇಂದ್ರ ಲಕ್ಷ್ಮಿ" ಎಂದೂ ಕರೆಯಲಾಗಿದೆ. ಶಿರದಲ್ಲಿ ಲಿಂಗವುಳ್ಳ ಮಹಾಲಕ್ಷ್ಮಿಗೆ ನಾಲ್ಕು ಕೈಗಳಿದ್ದು ಅವುಗಳಲ್ಲಿ ಮೇಲಿನೆರಡು ಕೈಗಳಲ್ಲಿ ಪದ್ಮಗಳಿದ್ದು, ಕೆಳಗಿನೆರಡು ಕೈಗಳು ವರದ ಮುದ್ರೆ ಮತ್ತು ಅಭಯ ಮುದ್ರೆಯಲ್ಲಿವೆ. ಎಂಟು ಕೈಗಳ ಲಕ್ಷ್ಮಿಯನ್ನು "ವೀರಲಕ್ಷ್ಮಿ"ಎಂದು ಕರೆಯಲಾಗುತ್ತದೆ. ಪದ್ಮ ಶ್ರೀಫಲ, ಶಂಖ, ಅಮೃತ, ಘಟ, ಮಾತುಲಂಗ ಫಲ, ಖೇಟಕ, ಗದಾ, ಕೌಮೇದಕಿ ಮೊದಲಾದವುಗಳು ಈಕೆಯ ವಿಶಿಷ್ಟವಾದ ಆಯುಧಗಳಾಗಿವೆ.

ಪ್ರಸ್ತುತ ಕಾಮಲಾಪುರ ಪ್ರದೇಶದ ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ಕ್ರಿ.ಶ.೧೬ನೇ ಶತಮಾನದ ಲಕ್ಷ್ಮಿ ಶಿಲ್ಪವಿದೆ. ಕಪ್ಪು ಶಿಲೆಯಲ್ಲಿ ಈ ಶಿಲೆ ಕಂಡರಿಸಲ್ಪಟ್ಟಿದೆ. ಲಕ್ಷ್ಮೀ ಪದ್ಮಾಸೀನಗಳಾಗಿದ್ದಾಳೆ. ಚತುರ್ಭುಜೆಯಾಗಿದ್ದು, ಬಲಬದಿಯ ಕೆಳಗಿನ ಕೈ ಅಭಯ ಮುದ್ರೆಯಲ್ಲಿದ್ದು, ಮೇಲಿನ ಕೈಯಲ್ಲಿ ಚಕ್ರವಿದೆ. ಎಡಬದಿಯ ಕೆಳಗಿನ ಕೈ ವರದ ಮುದ್ರೆಯಲ್ಲಿದ್ದು, ಮೇಲಿನ ಕೈಯಲ್ಲಿ ಶಂಖವಿದೆ. ಕಿರೀಟ ಮಕುಟ, ಕರ್ಣಕುಂಡಲ, ತೋಳುಬಂಧಿ, ಕೈಬಳೆ, ಕೊರಳಲ್ಲಿ ವೈಜಯಂತಿಹಾರ, ಬೆರಳುಂಗುರ, ಕಾಲ್ಗಡಗ ಧರಿಸಿದ್ದಾಳೆ. ಕೆರೆ ತಾಂಡಕ್ಕೆ ಹೋಗುವ ದಾರಿಯ ಬಲಬದಿಯಲ್ಲಿ ಹೇಮಗಿರಿ ಆಂಜನೇಯ ದೇವಾಲಯದ ಎದುರಿಗೆ ಕ್ರಿ.ಶ.೧೬ ನೇ ಶತಮಾನದ ಲಕ್ಷ್ಮಿಶಿಲ್ಪವಿದೆ. ಈ ಶಿಲ್ಪ ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ದೇವಿಯು ಪದ್ಮಾಸನದಲ್ಲಿ ಆಸೀನಳಾಗಿದ್ದಾಳೆ. ದ್ವಿಬಾಹು ಹೊಂದಿದ್ದು, ಬಲಗೈಯಲ್ಲಿ ಪದ್ಮ ಎಡಗೈಯಲ್ಲಿ ಬಿಲ್ವ ಫಲವೂ ಇದೆ. ಕರಂಡ ಮಕುಟ, ವರ್ತುಲಾಕಾರದ ಓಲೆ, ಕೊರಳಲ್ಲಿ ಕಂಠಹಾರ, ಸ್ತನಹಾರ, ಪದಕಸರ ಧರಿಸಿದ್ದಾಳೆ. ಕೈಗಳಿಗೆ ತೋಳುಬಂಧಿ, ಬಳೆ ಧರಿಸಿದ್ದಾಳೆ.

**ಗಜಲಕ್ಷ್ಮಿ ಶಿಲ್ಪಗಳು:** ಗಜಲಕ್ಷ್ಮಿಯ ಕುರಿತು ವೈದಿಕ ಸಾಹಿತ್ಯ ಹಾಗೂ ವಿಷ್ಣು ಧರ್ಮೋತ್ತರ ಪುರಾಣ ಋಗ್ವೇದದ ಶ್ರೀ ಸೂಕ್ತ ಮತ್ತು ಮತ್ಸ್ಯ ಪುರಾಣಗಳೂ ಉಲ್ಲೇಖಿಸುತ್ತವೆ. ಕೌಶಾಂಬಿಯಲ್ಲಿ ಕ್ರಿ.ಪೂ

ಸುಮಾರು ೨-೧ನೆಯ ಶತಮಾನದಲ್ಲಿ ವಿಶಾಖದೇವ ಶಿವದತ್ತ ಉಜ್ಜೈನಿಯ ಬ್ರಹ್ಮಮಿತ್ರ, ಸೂರ್ಯಮಿತ್ರರ ನಾಣ್ಯಗಳಲ್ಲದೇ ಪರಕೀಯ ಅರಸರಾದ ರಜವಲ, ಶೋಢಾಸ, ಹಗಾಮಾಸ ಮೊದಲಾದವರ ನಾಣ್ಯಗಳ ಮೇಲೆ ಗಜಲಕ್ಷ್ಮಿ ಕೈಗಳಲ್ಲಿ ಪದ್ಮವನ್ನು ಹಿಡಿದು ಪದ್ಮಗಳಿಂದ ಸುತ್ತುವರಿದ ಪದ್ಮಾಲಯೆಯರ ಚಿತ್ರಣಗಳಿವೆ. ಆಕಾಲಕ್ಕೆ ಪುಷ್ಕಲಾವತಿಯ ಅಭಿಮಾನಿ ದೇವತೆ ಲಕ್ಷ್ಮಿಯೆಂದು ಪ್ರಸಿದ್ಧಿಯಿದ್ದಿತು. ಗಜಲಕ್ಷ್ಮಿಯನ್ನು ಶಿಲ್ಪದಲ್ಲಿ ತೋರಿಸುವ ಪದ್ಧತಿ ಕ್ರಿ.ಪೂ.೨ ೩ನೇ ಶತಮಾನದಲ್ಲಿ ಬೌದ್ಧ ವ್ಯಾಪಾರಿಗಳಿಂದ ಪ್ರಾರಂಭವಾಯಿತು. ಕಾಲಾಂತರದಲ್ಲಿ ವಿವಿಧ ಧರ್ಮದವರೂ ಈಕೆಯನ್ನು ಶಿಲ್ಪದಲ್ಲಿ ತೋರಿಸಿ ಆರಾಧಿಸುವುದು ಪ್ರಚಲಿತವಾಯಿತು. ಕನ್ನಡ ನಾಡಿನಲ್ಲಿ ಪ್ರಾಚೀನ ಗಜಲಕ್ಷ್ಮಿ ಶಿಲ್ಪಗಳು ಬಾದಾಮಿ ಚಾಲುಕ್ಯರ ಬಾದಾಮಿಯ ೧ ಮತ್ತು ೨ನೇಯ ಲಯನಗಳ ಕಂಬಗಳ ಮೇಲೆ ಮತ್ತು ಪಟ್ಟದಕಲ್ಲಿನ ಪಾಪನಾಥ ದೇವಾಲಯದಲ್ಲಿ ಕಂಡು ಬರುತ್ತದೆ.[೫೬]

ಹೆಚ್ಚಿನ ಮಟ್ಟಿಗೆ ಈ ಶಿಲ್ಪಗಳು ಗಜಲಕ್ಷ್ಮಿ ಪದ್ಮಪೀಠದ ಮೇಲೆ ಪದ್ಮಾಸನದಲ್ಲಿ ಆಸೀನಳಾಗಿರುತ್ತಾಳೆ. ಕೈಗಳಲ್ಲಿ ಶಂಖ ಮತ್ತು ಪದ್ಮಗಳಿರುತ್ತವೆ. ಇಕ್ಕೆಲುಗಳಲ್ಲಿ ೨ ಆನೆಗಳು ಸೊಂಡಿಲುಗಳಲ್ಲಿ ಕುಂಭಗಳನ್ನು ಹಿಡಿದುಕೊಂಡು ಅಭಿಶೇಕ ಮಾಡುತ್ತಿರುವಂತೆ ತೋರಿಸಲಾಗಿರುತ್ತದೆ. ಈ ಎರಡೂ ಆನೆಗಳು ಮತ್ತು ಕೈಗಳಲ್ಲಿರುವ ಶಂಖ, ಪದ್ಮಗಳು ಶಂಖ ಮತ್ತು ಪದ್ಮ ನಿಧಿಗಳನ್ನು ಸೂಚಿಸುತ್ತವೆ. ಇದರಿಂದ ಲಕ್ಷ್ಮಿಗೂ ನಿಧಿಪತಿಯಾದ ಕುಬೇರನಿಗೂ ಇರುವ ಸಂಬಂಧ ಧ್ವನಿತವಾಗುತ್ತದೆ. ಕೆಲವೊಂದು ಗಜಲಕ್ಷ್ಮಿ ಶಿಲ್ಪಗಳಲ್ಲಿ ಈಕೆಯ ಪಾರ್ಶ್ವದಲ್ಲಿ ೪ ಆನೆಗಳು ಸೊಂಡಿಲಿನಿಂದ ನೀರನ್ನು ಸುರಿದು ಅಭಿಷೇಕ ಮಾಡುತ್ತಿರುವಂತೆ ಮತ್ತು ಸಾಮಾನ್ಯವಾಗಿ ಶಂಖನಿಧಿ ಪದ್ಮನಿಧಿ ಹಾಗೂ ಗಂಧರ್ವರ ಶಿಲ್ಪಗಳನ್ನು ತೋರಿಸಲಾಗಿರುತ್ತದೆ.

ಕಾಮಲಾಪುರದಲ್ಲಿ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ.೭ನೇ ಶತಮಾನದ ಗಜಲಕ್ಷ್ಮಿ ಶಿಲ್ಪವಿದ್ದು. ಕೆಂಪು ಮಿಶ್ರಿತ ಮರಳು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಪದ್ಮ ಪೀಠದ ಮೇಲೆ ಅರ್ಧ ಪದ್ಮಾಸನದಲ್ಲಿರುವ ಲಕ್ಷ್ಮಿ ದ್ವಿಭುಜೆಯಾಗಿದ್ದು ಮಕುಟಕಿರೀಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಕಟಿವಸ್ತ್ರ, ತೋಳುಬಂಧಿ, ಕೈಬಳೆ, ಬೆರಳುಂಗುರ, ಕಾಲ್ಕಡಗ ಮೊದಲಾದ ವಸ್ತ್ರಾಭರಣಗಳನ್ನು ಧರಿಸಿದ್ದಾಳೆ. ಆನೆ ತನ್ನ ಮುಂದಿನ ಎರಡು ಕಾಲುಗಳನ್ನು ಎತ್ತಿ ಸೊಂಡಿಲಿನಿಂದ ನಮಸ್ಕರಿಸುವ ಚಿತ್ರವಿದೆ.

ಗಾಣಗಿತ್ತಿ ಕುಂತುನಾಥ ಜೈನ ಬಸದಿಯ ಗರ್ಭಗೃಹದ ಲಲಾಟ ಬಿಂಬದಲ್ಲಿ ಕ್ರಿ.ಶ.೧೩ನೇ ಶತಮಾನದ ಗಜಲಕ್ಷ್ಮಿ ಶಿಲ್ಪವಿದೆ. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಗಜಲಕ್ಷ್ಮಿ ಮೇಲಿನ ಶಿಲ್ಪದಂತೆ ಪ್ರತಿಮಾ ಲಕ್ಷಣಗಳನ್ನು ಹೊಂದಿದ್ದು, ಪಾರ್ಶ್ವಗಳಲ್ಲಿ ಆನೆಗಳು ಸೊಂಡಿಲಿನಿಂದ ನೀರೆರೆಚಿ ಜಲಾಭಿಶೇಷಕ ಮಾಡುತ್ತಿವೆ. ಸೀತಾರಾಂ ತಾಂಡದ ಪಶ್ಚಿಮ ಭಾಗದಲ್ಲಿ ಮಲ್ಲಿಕಾರ್ಜುನ ದೇವಾಲಯದ ಗರ್ಭಗೃಹದ ಲಲಾಟ ಬಿಂಬದಲ್ಲಿ ಕ್ರಿ.ಶ.೧೪ನೇ ಶತಮಾನದ ಗಜಲಕ್ಷ್ಮಿ ಶಿಲ್ಪವನ್ನು ಕಾಣಬಹುದು. ಈ ಶಿಲ್ಪ ಗ್ರನೈಟ್ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಶಿಲ್ಪದಂತೆ ಪ್ರತಿಮಾ ಲಕ್ಷಣಗಳನ್ನು ಹೊಂದಿದೆ. ಹಜಾರಾಮ ದೇವಾಲಯದ ಗರ್ಭಗೃಹದ ದ್ವಾರದ ಲಲಾಟ ಬಿಂಬದಲ್ಲಿ ಕ್ರಿ.ಶ.೧೫ನೇ ಶತಮಾನದ ಗಜಲಕ್ಷ್ಮಿ ಶಿಲ್ಪವನ್ನು ಕಾಣಬಹುದು. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಇದೇ ತರಹದ

ಮತ್ತೊಂದು ಗಜಲಕ್ಷ್ಮಿ ಶಿಲ್ಪವನ್ನು ಕಾಮಲಾಪುರದ ಏಳನೇ ವಾರ್ಡ್‌ನ ಈಶ್ವರ ದೇವಾಲಯದ ಗರ್ಭಗೃಹದ ಲಲಾಟ ಬಿಂಬದಲ್ಲಿದೆ. ವೀರಭದ್ರ ದೇವಾಲಯದ ಗರ್ಭಗೃಹದ ಬಾಗಿಲಿನ ಲಲಾಟ ಬಿಂಬದಲ್ಲಿ, ಗೋಪಾಲಕೃಷ್ಣ ದೇವಾಲಯದ ಪ್ರವೇಶ ದ್ವಾರದ ಲಲಾಟಬಿಂಬದಲ್ಲಿ, ಸಿಂಗಾರದ ಬಾಗಿಲಿನ ಸಮೀಪ, ವಿಷ್ಣು ದೇವಾಲಯದ ಗರ್ಭಗೃಹದ ಬಾಗಿಲು ವಾಡದ ಲಲಾಟ ಬಿಂಬದಲ್ಲಿ, ಗಜಶಾಲೆಯ ಹಿಂಭಾಗದಲ್ಲಿನ ವಿಷ್ಣು ದೇವಾಲಯದ ಅಂತರಾಳದ ಲಲಾಟ ಬಿಂಬದಲ್ಲಿ ಮತ್ತು ವೇಣುಗೋಪಾಲ ದೇವಾಲಯದ ಎದುರುಗಡೆಯ ವಿಷ್ಣು ದೇವಾಲಯದ ಗರ್ಭಗೃಹದ ಲಲಾಟ ಬಿಂಬದಲ್ಲಿ ಕ್ರಿ.ಶ.೧೬ನೇ ಶತಮಾನದ ಗಜಲಕ್ಷ್ಮಿ ಶಿಲ್ಪಗಳನ್ನು ಕಾಣಬಹುದು. ಈ ಶಿಲ್ಪಗಳಲ್ಲಿ ಲಕ್ಷ್ಮಿ ದ್ವಿಭುಜೆ, ಕರಂಡ ಮುಕುಟ, ವರ್ತುಲಾಕಾರದ ಓಲೆ, ಪದಕಸರ, ಕಂಠಹಾರ ತೋಳುಬಂಧಿ, ಕೈಬಳೆ ಕಾಲ್ಕಡಗಗಳಿಂದ ಅಲಂಕೃತಳಾಗಿ ಪದ್ಮಾಸನದಲ್ಲಿ ಧ್ಯಾನಸಕ್ತಳಾಗಿರುವುದು ಈ ಶಿಲ್ಪದ ವೈಶಿಷ್ಟತೆ.

**ಸಪ್ತ ಮಾತೃಕೆಯರ ಶಿಲ್ಪಗಳು:** ಋಗ್ವೇದದಲ್ಲಿ ಅಗ್ನಿಗೆ ಏಳು ಜನ ತಾಯಂದಿರು. ಇವರೇ ಸಪ್ತ ಮಾತೃಕೆಯರು. ಪರಿವಾರ ದೇವತೆಗಳ ಸಮೂಹದಲ್ಲಿ ಬರುವ ಸಪ್ತ ಮಾತೃಕೆಯರು ಕನ್ನೆಯರೆಂದು, ಅಮ್ಮನವರೆಂದು ಪ್ರಸಿದ್ಧಿಯಾಗಿದ್ದಾರೆ. ವರಹಾ ಪುರಾಣದಲ್ಲಿ ಶಿವನ ಬಾಯಿಯಿಂದ ಬಂದ ಜ್ವಾಲೆಯಿಂದ ಜನಿಸಿದ ಯೋಗೀಶ್ವರಿ ಹಾಗೂ ಬೇರೆ ಬೇರೆ ದೇವತೆಗಳೆಂದೂ ಮಾರ್ಕಂಡೇಯ ಪುರಾಣದಲ್ಲಿ ದೇವಿಯು ಶುಂಭ ಮತ್ತು ನಿಶುಭಂರನ್ನು ಸಂಹರಿಸಲು ಹೊರಟಾಗ ಬ್ರಹ್ಮ, ಕಾರ್ತಿಕೇಯ, ವಿಷ್ಣು ಮತ್ತುಇಂದ್ರರಿಂದ ಎಂಟು ಜನ ಶಕ್ತಿಯರು ಸೃಷಿವಿಯಾದರೆಂದು ಹೇಳಲಾಗಿದೆ. ಬ್ರಹ್ಮನು ನಿರ್ರಿತನನ್ನು ಸಂಹರಿಸಲು ಏಳು ಜನ ಮಾತೃಕೆಯರನ್ನು ಸೃಷಿವಿಸಿದನೆಂದು "ಸುಪ್ರಭೇದಾಗಮ" ದಲ್ಲಿ ಉಲ್ಲೇಖಿಸಿದೆ.[೫೭]

ಕಾಳಿಕಾ ಪುರಾಣವು ಕಾಳಿಕಾ ದೇವಿಯ ಶರೀರದ ವಿವಿಧ ಭಾಗಗಳಿಂದ ಸಪ್ತ ಮಾತೃಕೆಯರು ಜನಿಸಿದರೆಂಬ ಉಲ್ಲೇಖವಿದೆ. ಬೃಹತ್ಸಂಹಿತೆ ವ್ಯಾಖ್ಯಾನಕಾರ ಉತ್ಪಲನು ಬ್ರಾಹ್ಮಿ, ವೈಷ್ಣವಿ, ರೌದ್ರಿ, ಕೌಮಾರಿ, ಐಂದ್ರಿ, ಯಮಿ, ವಾರುಣಿ, ಕೌಬೇರಿ, ಎಂಬ ಎಂಟು ಜನ ಮಾತೃಕೆಯರನ್ನು ಹೆಸರಿಸಿದ್ದಾನೆ. ಹೀಗೆ ಮಾತೃಕೆಯರ ಸಂಖ್ಯೆ ೭,೮,೯ ಕೆಲವೊಮ್ಮೆ ೧೬ ಎಂದೂ ಹೇಳಲಾಗುತ್ತದೆ. ರೂಪಧ್ಯಾನ, ರತ್ನಾವಳಿ, ಎಂಬ ಕೃತಿಯಲ್ಲಿ ಸಪ್ತ ಮಾತೃಕೆಯರ ಪ್ರತಿಮಾ ಲಕ್ಷಣಗಳನ್ನು ಈ ರೀತಿ ಉಲ್ಲೇಖಿಸಿದೆ.[೫೮]

ಬ್ರಾಹ್ಮಿ ಚುತುರ್ಮುಖಗಳನ್ನು ಹೊಂದಿದೆ. ಹಂಸ ಅವಳ ವಾಹನ. ೬ ಕೈಗಳಿರುತ್ತವೆ. ಎರಡು ಕೈಗಳು ವರದ ಮತ್ತು ಅಭಯ ಮುದ್ರೆಯಲ್ಲಿದ್ದು ಉಳಿದ ಕೈಗಳಲ್ಲಿ ಕ್ರಮವಾಗಿ ಪಾಶ, ಸ್ರುವ, ಪುಸ್ತಕ, ಕಮಂಡಲ, ಇರುತ್ತವೆ. ವರಾಹಿ ವರಹಾ ಮುಖವನ್ನು ಹೊಂದಿರುತ್ತಾಳೆ. ಮಹಿಷ ಅವಳ ವಾಹನ ವಾಗಿದೆ ಆರು (೬) ಕೈಗಳಿರುತ್ತವೆ. ಎರಡು ಕೈಗಳು ವರದ ಮತ್ತು ಆಭಯ ಮುದ್ರೆ ಉಳಿದ ಕೈಗಳಲ್ಲಿ ಖಡ್ಗ, ದಂತ, ಪಾನಪಾತ್ರೆ ಇರುತ್ತವೆ. ಕೌಮರಿ ಆರು ಮುಖ, ಮಯೂರ ವಾಹನ, ೧೨ ಕೈಗಳಿರುತ್ತವೆ. ಎರಡು ಕೈಗಳು ವರದ ಮತ್ತು ಅಭಯ ಮುದ್ರೆಯಲ್ಲಿದ್ದು ಉಳಿದ ಶೈಗಳಲ್ಲಿ ಶಕ್ತಿ ಪತಾಕೆ, ದಂತ, ಪಾತ್ರೆ, ಬಾಣ, ಪರಶು, ಕುಕ್ಕಟ, ಪದ್ಮ ಗಂಟೆ, ಬಿಲ್ಲು ಇರುತ್ತವೆ. ವೈಷ್ಣವಿಗೆ ಗರುಡವು ವಾಹನವಾಗಿದೆ. ಆರು ಕೈಗಳಿರುತ್ತವೆ. ಅವುಗಳಲ್ಲಿ ಎರಡು ಕೈಗಳು ವರದ ಮತ್ತು ಅಭಯ ಮುದ್ರೆಯಲ್ಲಿವೆ. ಉಳಿದ ಕೈಗಳಲ್ಲಿ ಕ್ರಮವಾಗಿ ಗದೆ, ಪದ್ಮ, ಚಕ್ರ, ಶಂಖ ಇರುತ್ತದೆ. ಇಂದ್ರಾಣಿಗೆ ಸಾವಿರ ಕಣ್ಣುಗಳಿರುತ್ತವೆ. ಗಜ ಅವಳ ವಾಹನ. ಆರು ಕೈಗಳಿರುತ್ತವೆ. ಮುಂದಿನ ಕೈಗಳು ವರದ ಮತ್ತು ಅಭಯ ಮುದ್ರೆಯಲ್ಲಿವೆ.

ಉಳಿದ ಕೈಗಳಲ್ಲಿ ಕ್ರಮವಾಗಿ ಸೂತ್ರ, ವಜ್ರ, ಪಾತ್ರೆ, ಪದ್ಮ ಇರುತ್ತದೆ. ಮಹೇಶ್ವರಿ ಐದು ಮುಖಗಳನ್ನು ಹೊಂದಿರುತ್ತಾಳೆ. ಮೂರು ಕಣ್ಣುಗಳಿರುತ್ತವೆ. ವೃಷಭ ಅವಳ ವಾಹನವಾಗಿದೆ. ೧೦ ಕೈಗಳಿರುತ್ತವೆ. ಒಂದು ವರದ ಮುದ್ರೆ ಉಳಿದವುಗಳಲ್ಲಿ ಖಡ್ಗ ಒನಕೆ, ಚಕ್ರ ಚಾಮರ, ಖೇಟಕ, ಪಾಶ, ದಂತ, ಪರಶು ಬಿಲ್ಲು ಇರುತ್ತವೆ. ಇವರನ್ನು ಶಿಲ್ಪದಲ್ಲಿ ಒಂದೇ ಫಲಕದಲ್ಲಿ ಸಾಲಾಗಿ ಕಂಡರಿಸುತ್ತಾರೆ. ಕೆಲವೊಮ್ಮೆ ಯೋಗಿಯಾಗಿ (ಯೋಗೇಶ್ವರಿ) ಕಂಡು ಬರುತ್ತಾಳೆ, ಆಗ ಆಶಿಲ್ಪ ಪಟ್ಟಿಕೆ ಅಷ್ಠಮಾತೃಕೆಯರ ಸಾಲಿನಲ್ಲಿ ಗುರುತಿಸಲಾಗುತ್ತದೆ. ಯೋಗಿನಿ ದ್ವಿಭುಜೆ, ಕೈಯನ್ನು ತೊಡೆಯ ಮೇಲೇರಿಸಿಕೊಂಡು ಇನ್ನೊಂದು ಕೈಯಲ್ಲಿ ಫಲವನ್ನು ಹಿಡಿದಿರುತ್ತಾಳೆ. ಇವರೆಲ್ಲರೂ ಸವ್ಯಲಲಿತಾಸನ ಇಲ್ಲವೇ ಸುಖಾಸನದಲ್ಲಿ ಆಸೀನರಾಗಿದ್ದು ಪಾದ ಪೀಠದಲ್ಲಿ ವಾಹನಗಳಿರುತ್ತವೆ. ಕಾಮಲಾಪುರ ಪ್ರದೇಶದ ಕನ್ನಡ ವಿಶ್ವದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ.೬–೭ನೇ ಶತಮಾನದ ಸಪ್ತ ಮಾತೃಕೆಯರ ಶಿಲ್ಪ ಪಟ್ಟಿಕೆಗಳಿವೆ. ಈ ಶಿಲ್ಪಗಳನ್ನು ಕೆಂಪು ಮಿಶ್ರಿತ ಮರಳು ಶಿಲೆಯಲ್ಲಿ ಕಂಡರಿಸಲಾಗಿದೆ. ಆದರೆ ಈ ಪಟ್ಟಿಕೆಯ ಅರ್ಧಭಾಗ ಶಿಥಿಲವಾಗಿದೆ. ಈ ಪಟ್ಟಿಕೆಯಲ್ಲಿ ಇಂದ್ರಾಣಿ ಚಾಮುಂಡಿ, ವರಾಹಿ ಶಿಲ್ಪಗಳು ಮಾತ್ರ ಇವೆ. ಉಳಿದವು ನಶಿಸಿವೆ. ಇವರು ಸವ್ಯಲಲಿತಾಸನದಲ್ಲಿದ್ದು ಆಸೀನರಾಗಿದ್ದಾರೆ. ವರಾಹಿ ಚತುರ್ಭುಜೆಯಾಗಿದ್ದು ಬಲಬದಿಯ ಕೆಳಗಿನ ಕೈ ವರದ ಮುದ್ರೆಯಲ್ಲಿದೆ. ಮೇಲಿನ ಕೈಯಲ್ಲಿ ಖಡ್ಗವಿದೆ. ಎಡಬದಿಯ ಕೆಳಗಿನ ಕೈ ಅಭಯ ಮುದ್ರೆಯಲ್ಲಿದೆ. ಮೇಲಿನ ಕೈಯಲ್ಲಿ ಖೇಟಕವಿದೆ. ಪೀಠದಲ್ಲಿ ಅವಳ ವಾಹನ ಮಹಿಷ ಇದೆ. ಇಂದ್ರಾಣಿ ಚತುರ್ಭುಜೆಯಾಗಿದ್ದು ಬಲಬದಿಯ ಕೆಳಗಿನ ಕೈ ವರದ ಮುದ್ರೆಯಲ್ಲಿದೆ. ಮೇಲಿನ ಕೈಯಲ್ಲಿ ವಜ್ರವಿದೆ. ಎಡಬದಿಯ ಕೆಳಗಿನ ಕೈ ಅಭಯ ಮುದ್ರೆಯಲ್ಲಿದೆ. ಮೇಲಿನ ಕೈಯಲ್ಲಿ ಪದ್ಮವಿದೆ. ಪೀಠದಲ್ಲಿ ಆನೆಯಿದೆ. ಚಾಮುಂಡಿ ಚತುರ್ಭುಜೆಯಾಗಿದ್ದು ಅವುಗಳಲ್ಲಿ ಕ್ರಮವಾಗಿ ಖಡ್ಗ, ಚಕ್ರ, ಖೇಟಕ ಮತ್ತು ಪಾಶಗಳಿವೆ. ಪೀಠದಲ್ಲಿ ಅವಳ ವಾಹನ ಸಿಂಹವಿದೆ. ಇವಳು ಕರಂಡ ಮುಕುಟ, ಕರ್ಣಕುಂಡಲ, ಕಂಠಹಾರ, ಮಣಿಸರ, ಕಟೀವಸ್ತ್ರ, ತೋಳುಬಂಧಿ, ಕೈಬಳೆ, ಕಾಲ್ಗಡಗ, ಬೆರಳುಂಗರ ಧರಿಸಿದ್ದಾಳೆ. ಚಾಮುಂಡಿಯ ಎಡಬದಿಯಲ್ಲಿ ಗಣೇಶನಿದ್ದು ಪೀಠದಲ್ಲಿ ಮೂಷಕವಿದೆ. ಈ ಎಲ್ಲಾ ಪಟ್ಟಿಕೆಗೆ ಪ್ರಭಾವಳಿ ತೋರಿಸಲಾಗಿದೆ.

ಇದೇ ಸ್ಥಳದಲ್ಲಿ ಕಲ್ಯಾಣ ಚಾಲುಕ್ಯ ಕಾಲದ ಸಪ್ತ ಮಾತೃಕೆಯರ ಶಿಲ್ಪಪಟ್ಟಿಕೆಯಿದ್ದು. ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಸಪ್ತಮಾತೃಕೆಯರಲ್ಲಿ ಎರಡು ಶಿಲ್ಪಗಳು ನಶಿಸಿವೆ. ಕೇವಲ ಐದು ಶಿಲ್ಪಗಳು ಮಾತ್ರ ಉಳಿದಿವೆ. ಕೌಮುರಿ, ವೈಷ್ಣವಿ, ವರಾಹಿ, ಇಂದ್ರಾಣಿ ಮತ್ತು ಚಾಮುಂಡಿ ಶಿಲ್ಪಗಳು ಸವ್ಯಲಲಿತಾಸನದಲ್ಲಿ ಆಸೀನರಾಗಿದ್ದಾರೆ. ಕೌಮುರಿ ವಾಹನ ಮುಯೂರವಾಗಿದೆ. ಕೈಗಳಲ್ಲಿ ಆಯುಧಗಳು ಕ್ರಮವಾಗಿ ಶಕ್ತಿ, ಪತಾಕೆ, ಪರಶು, ಮತ್ತು ಪದ್ಮಗಳಿವೆ. ವೈಷ್ಣವಿಯ ವಾಹನ ಗರುಡ. ಇವಳ ಕೈಗಳಲ್ಲಿ ಆಯುಧಗಳು ಕ್ರಮವಾಗಿ ಗದೆ, ಪದ್ಮ ಚಕ್ರ ಮತ್ತು ಶಂಖಗಳಿವೆ. ವರಾಹಿಯ ಕೈಗಳಲ್ಲಿ ಖಡ್ಗ, ದಂಡ, ಖೇಟಕ ಮತ್ತು ಪಾನಪಾತ್ರೆಗಳಿವೆ. ಇದ್ರಾಣಿಯ ಕೈಗಳಲ್ಲಿ ಕ್ರಮವಾಗಿ ಸೂತ್ರ, ವಜ್ರ, ಪದ್ಮ ಪಾನಪಾತ್ರಗಳಿವೆ. ಚಾಮುಂಡಿ ಕೈಗಳಲ್ಲಿ ಕ್ರಮವಾಗಿ ಖಡ್ಗ, ಚಕ್ರ, ಖೇಟಕ ಮತ್ತು ಪಾಶಗಳಿವೆ. ಆಸನ ಭುಜ ಆಭರಣ ಮತ್ತು ವಾಹನಗಳು ಮೇಲಿನ ಶಿಲ್ಪಗಳಂತಿವೆ.

**ನಾಗ ಶಿಲ್ಪಗಳು:** ನಾಗಾರಾಧನೆ ಪ್ರಾಗೈತಿಹಾಸಿಕ ಕಾಲದಿಂದಲೂ ರೂಢಿಗತವಾಗಿದೆ. ಉದಾ ಸಿಂಧೂ ನಾಗರೀಕತೆಯ ನೆಲಗಳಲ್ಲಿ ದೊರೆತ ಎರಡು ಮುದ್ರಗಳ ಮೇಲೆ ಜೋಡು ಹೆಡೆಗಳಿವೆ. ಇದನ್ನು ಎಸ್.ರಾಧಾಕೃಷ್ಣನ್‌ರವರು ಭಾರತದ ಅತೀ ಪುರಾತನ ಜನಾಂಗ ನಾಗನನ್ನು ಪೂಜಿಸುತ್ತಿದ್ದ ಇವರು ನಾಗರೆಂದೂ ವ್ಯಕ್ತ ಪಡಿಸಿದ್ದಾರೆ.[೫೯] ವೇದ, ಉಪನಿಷತ್, ಪುರಾಣಗಳಲ್ಲಿ ನಾಗಾರಾಧನೆ ಕುರಿತಾಗಿ ಅನೇಕ ಉಲ್ಲೇಖಗಳಿವೆ. ಜನಪದ ಧರ್ಮವಾಗಿ ಬೆಳೆದು ಬಂದ ಈ ನಾಗಾರಾಧನೆ ಶೈವ, ಬೌದ್ಧ, ವೈಷ್ಣವ, ಜೈನ ಎಲ್ಲಾ ಧರ್ಮಗಳೂ ತಮ್ಮಲ್ಲಿ ಅಳವಡಿಸಿಕೊಂಡಿವೆ. ಈ ಆರಾಧನೆ ಸಂತಾನ ಮತ್ತು ಸಂಮೃದ್ಧಿಯ ಮಳೆ, ಕ್ಷಾಮ ನಿವಾರಣೆಗಾಗಿ ಈ ಆರಾಧನೆ ಆಚರಿಸಲಾಗುತ್ತದೆ. ನಾಗಗಳು ಕ್ಷೇತ್ರಪಾಲಕ ನಿಧಿ ರಕ್ಷಣೆ ಮಾಡುವದೆಂಬುದು ಪ್ರತೀತಿ ಇದೆ. ಕನ್ನಡ ನಾಡಿನಲ್ಲಿ ೧/೨/೫/೭ ಹೆಡೆಗಳುಳ್ಳ ಶಿಲೆ, ಇಲ್ಲವೆ ಲೋಹಗಳಲ್ಲಿ ಮಾಡಿಸಿ ದೇವಾಲಯಗಳ ಆವರಣದಲ್ಲಿ, ಮರದಡಿಯಲ್ಲಿ, ಬಾವಿ, ಕೆರೆಗಳ ದಂಡೆಗಳಲ್ಲಿ ಮನೆಗಳಲ್ಲಿ ಪ್ರತಿಷ್ಠಾಪಿಸುತ್ತಿದ್ದರು. ಪ್ರಸ್ತುತ ಕಾಮಲಾಪುರ ಪರಿಸರದಲ್ಲಿ ಲಭ್ಯವಾದ ಪ್ರತಿಮಾ ಲಕ್ಷಣಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಕಾಮಲಾಪುರ ಪ್ರದೇಶದ ಪರಿಸರದ ಸುತ್ತಮುತ್ತ ಕ್ರಿ.ಶ.೧೫ನೇ ಶತಮಾನದಿಂದ ೧೯ನೇ ಶತಮಾನದವರೆಗಿನ ನಾಗ ಶಿಲ್ಪಗಳಿವೆ. ಇವೆಲ್ಲವನ್ನು ಬೆಣಚು ಮತ್ತು ಕಪ್ಪು ಶಿಲೆಯಲ್ಲಿ ಕಂಡರಿಸಲಾಗಿದೆ. ಭಾರತೀಯ ಪುರಾತತ್ವ ವಸ್ತು ಸಂಗ್ರಹಾಲಯದ ನಾಲ್ಕನೇ ಅಂಕಣದಲ್ಲಿ, ಹೊರ ಭಾಗದ ಆವರಣದಲ್ಲಿ, ಕ್ರಿ.ಶ.೧೫ನೇ ಶತಮಾನದ ನಾಗಿಣಿ ಶಿಲ್ಪಗಳಿವೆ. ಈ ಶಿಲ್ಪ ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕೆಳಭಾಗ ಸರ್ಪಾಕಾರ ಮತ್ತು ಮೇಲಿನ ಭಾಗ ಮನುಷ್ಯಾಕಾರ ರೂಪದಲ್ಲಿದೆ. ಎರಡು ಕೈಗಳು ಕರಂಡ ಮುಕುಟ ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೈಗಳಿಗೆ ನಾಗವಲಯ, ಬಳೆ ಧರಿಸಿದ್ದಾಳೆ. ಕೊರಳಲ್ಲಿ ಕಂಠೀಹಾರವಿದೆ. ಅಂಜಲಿ ಮುದ್ರೆಯಲ್ಲಿ ಕರ ಜೋಡಿಸಿ ಸ್ಥಾನಕ ಭಂಗಿಯಲ್ಲಿದೆ. ಅದೇ ಸ್ಥಳದಲ್ಲಿ ಕ್ರಿ.ಶ.೧೫ನೇ ಶತಮಾನದ ಗ್ರಥಿತನಾಗ ಶಿಲ್ಪವಿದೆ. ಬಳಪದ ಕಲ್ಲಿನಲ್ಲಿ ಇದು ಕಂಡರಿಸಲ್ಪಟ್ಟಿದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ೧೬ನೇ ಶತಮಾನದ ನಾಗ ಮತ್ತು ನಾಗಿಣಿ ಶಿಲ್ಪವನ್ನು ಕಾಣಬಹುದು. ಕೆಂಪು ಮಿಶ್ರಿತ ಬೆಣಚು ಕಲ್ಲಿನಲ್ಲಿ ಕಂಡರಿಸಲ್ಪಟ್ಟಿದೆ. ಐದು ಹೆಡೆಯ ಸರ್ಪಕಿರೀಟದಾರಿ ಪದ್ಮಾಸನದಲ್ಲಿದೆ. ಕಠಂಡ ಮಕುಟ, ನಾಗೋಲೆ, ಕೊರಳಲ್ಲಿ ಮಣಿಸರ ಯಜ್ಞೋಪವೀತ ಉದರ ಬಂಧ ಧರಿಸಿದ್ದಾನೆ. ಕೈಗಳಲ್ಲಿ ಕ್ರಮವಾಗಿ ಖಡ್ಗ ಮತ್ತೊಂದು ಆಯುಧ ಶಿಥಿಲವಾಗಿದೆ. ನಾಗಿಣಿ ಮುಕುಟ ಕಿರೀಟ, ಕಂಠೀಹಾರ, ಉದರಬಂಧ, ಬಲಗೈಯಲ್ಲಿ ಅಂಕುಶ ಮತ್ತೊಂದು ಆಯುಥ ಶಿಥಿಲವಾಗಿದೆ. ಕೈಗಳಿಗೆ ನಾಗಬಂಧ, ಬಳೆ ಧರಿಸಿದ್ದಾಳೆ. ಮಾತಂಗ ಪರ್ವತಕ್ಕೆ ಹೋಗುವ ರಸ್ತೆಯ ಬಲಭಾಗ ಬಾಳೆ ತೊಟದಲ್ಲಿ ಕ್ರಿ.ಶ.೧೬-೧೭ನೇ ಶತಮಾನದ ನ್ಯಾಗದೇವತೆ ಶಿಲ್ಪಗಳಿವೆ. ಇವು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಏಳು ಹೆಡೆಯ ಕರಂಡ ಮಕುಟ, ವರ್ತುಲಾಕಾರದ ಓಲೆ, ಕೊರಳಲ್ಲಿ ನಾಗಬಂಧ ಸರ, ಪದಕಸರ, ಕೈಗಳು ಅಂಜಲಿ ಮುದ್ರೆ, ಕೈಗಳಲ್ಲಿ ಸರ್ಪಗಳನ್ನು ಹಿಡಿದಿದ್ದಾಳೆ. ತೋಳು ಬಂಧಿ, ಬಳೆ, ಕಂಕಣ, ಧರಿಸಿದ್ದಾಳೆ. ಮೇಲ್ಭಾಗ ಮನುಷ್ಯನ ದೇಹ ಕೆಳಭಾಗ ಅರ್ಧ ಸರ್ಪದೇಹವಿದೆ.

ಈ ಮೂರ್ತಿಯ ಅಕ್ಕ-ಪಕ್ಕ ನಾಗಬಂಧಗಳಿವೆ. ನಗರೇಶ್ವರ ದೇವಾಲಯದ ಹೊರಭಾಗದಲ್ಲಿ ಗಾರಿಬಾವಿ ಆಂಜನೇಯ ದೇವಾಲಯದ ಹಿಂಬದಿಯಲ್ಲಿ ಕ್ರಿ.ಶ.೧೬ನೇ ಶತಮಾನದ ನಾಗಿಣಿ ಶಿಲ್ಪವಿದೆ. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪ ಮೇಲಿನ ಶಿಲ್ಪದ ಪ್ರತಿಮಾ ಲಕ್ಷಣಗಳನ್ನು ಹೋಲುತ್ತದೆ. ಕಾಮಲಾಪುರದಲ್ಲಿನ ರಾಜ್ಯ ಪುರಾತತ್ವ ವಸ್ತು ಸಂಗ್ರಹಾಯದಲ್ಲಿ ಕ್ರಿ.ಶ.೧೮ನೇ ಶತಮಾನದ ಸಪ್ತ ಹೆಡೆಗಳುಳ್ಳ ನಾಗ ದೇವತೆ ಶಿಲ್ಪವನ್ನು ಕಾಣಬಹುದು. ಈ ಶಿಲ್ಪ ಕೆಂಪು ಮಿಶ್ರಿತ ಬೆಣಚು ಕಲ್ಲಿನಲ್ಲಿ ಕಂಡರಿಸಲ್ಪಟ್ಟಿದೆ. ಕರಂಡ ಮುಕುಟ, ಹಣೆಗೆ ನಾಮ, ವರ್ತುಲಾಕಾರದ ಓಲೆ ಕೊರಳಲ್ಲಿ ಪದಕಸರ, ಸೊಂಟಪಟ್ಟಿ ಧರಿಸಿ, ಅಭಯ ಮುದ್ರೆಯಲ್ಲಿದ್ದು ಸರ್ಪ ಹಿಡಿದಿದ್ದಾಳೆ. ಸೊಂಟಪಟ್ಟಿ ಧರಿಸಿದ್ದಾಳೆ. ಈಶ್ವರ ದೇವಾಲಯದ ಮುಂಭಾಗದಲ್ಲಿ ಸತ್ಯಮ್ಮ ದೇವಾಲಯದ ಮುಂಭಾಗದಲ್ಲಿ, ಕಾಳಿಕಾ ದೇವಾಲಯದ ಹೊರ ಮಂಟಪದಲ್ಲಿ, ಗಾರಿಬಾವಿ ಆಂಜನೇಯ ದೇವಾಲಯದ ಹೊರ ಆವರಣದಲ್ಲಿ, ನಗರೇಶ್ವರ ದೇವಾಲಯದ ಮುಖಮಂಟಪದಲ್ಲಿ, ಕ್ರಿ.ಶ.೧೮-೧೯ನೇ ಶತಮಾನದ ನಾಗ ಶಿಲ್ಪಗಳಿವೆ. ಇವುಗಳಲ್ಲಿ ಕೆಲವು ಜೋಡು ನಾಗಗಳಿದ್ದು ಒಂದಕ್ಕೊಂದು ಪರಸ್ಪರ ಹೆಣೆದು ಕೊಂಡಂತಿವೆ.

**ಜೈನ ಮೂರ್ತಿ ಶಿಲ್ಪಗಳು:** ಭಾರತೀಯ ಸಂಸ್ಕೃತಿಗೆ ಧರ್ಮ, ದರ್ಶನ, ಸಾಹಿತ್ಯ, ಕಲೆ ಪ್ರಮುಖವಾದ ಅಂಗಗಳು. ಕರ್ನಾಟಕದಲ್ಲಿ ಜೈನಧರ್ಮ ಕ್ರಿ.ಪೂ.ಕಾಲದಿಂದಲೇ ಪ್ರವಹಿಸಿತ್ತು ಎಂಬುದಕ್ಕೆ ಸಾಹಿತ್ಯಿಕ ಹಾಗೂ ಶಾಸನ ಆಧಾರಗಳು ಹೇರಳವಾಗಿ ಸಿಗುತ್ತವೆ. ಜೈನ ತೀರ್ಥಂಕರರು ಬಾಹ್ಯ ಸೌಂದರ್ಯಕ್ಕಿಂತ ಅಂತರ್ಮುಖ ಸೌಂದರ್ಯಕ್ಕೆ ಹೆಚ್ಚು ಗಮನ ನೀಡಿದರು. ಹೀಗಾಗಿ ಆತ್ಮದ ಪರಿಶುದ್ಧತೆಯನ್ನು ಹೊರ ತರುವುದು ಹಾಗೂ ಆತ್ಮದ ಉನ್ನತಿಗಾಗಿ ವ್ಯವಹಾರಿಕ ಮತ್ತು ಸುಮಧುರವಾದ ಹಿನ್ನೆಲೆಯನ್ನು ಏರ್ಪಡಿಸುವುದು ಜೈನ ಸಾಹಿತಿಯ ಕಲೆಯ ಮತ್ತು ಮೂರ್ತಿಶಿಲ್ಪದ ಪ್ರಧಾನ ಉದ್ದೇಶ.[೬೦] ಜೈನಾಗಮಗಳ ಪ್ರಕಾರ ವಜ್ರಾಸನ ವೀರಾಸನ, ಕುಕ್ಕು ಟಾಸನ ಮೊದಲಾದ ಆಸನಗಳಿಗಿಂತ ಪರ್ಯಂಕಾಸನ ಅಥವಾ ಪದ್ಮಾಸನ ಮತ್ತು ಖಡ್ಗಾಸನ ಅಥವಾ ಕಾಯೋತ್ಸರ್ಗ ಎಂಬ ಎರಡು ಆಸನಗಳು ಧ್ಯಾನವನ್ನು ಕೈಗೊಂಡು ಮೋಕ್ಷವನ್ನು ಸಾಧಿಸಲು ತುಂಬಾ ಉಪಯುಕ್ತವಾಗಿವೆ.[೬೧] ಹೀಗಾಗಿ ತೀರ್ಥಂಕರ ಶಿಲ್ಪಗಳು ಆಸೀನ ಇಲ್ಲವೆ ಸ್ಥಾನಕ್ಕೆ (ಪದ್ಮಾಸನ ಕಾರ್ಯೋತ್ಸರ್ಗ) ಭಂಗಿಯಲ್ಲಿರುತ್ತವೆ. ಜೊತೆಗೆ ಶಾಂತ ಪ್ರಸನ್ನ-ಮಧ್ಯಸ್ಥನಾಸಗ್ರಸ್ಥಿತವೂ ಆದ ಅವಿಕಾರ ದೃಷಿವಿಯನ್ನು ಹೊಂದಿರುತ್ತವೆ. ಇವುಗಳ ಪ್ರಾಚೀನತೆಯ ಕುರಿತು ಕೆಲವು ಕುರುಹುಗಳು ದೊರತಿವೆ. ಸಿಂಧೂ ನಾಗರೀಕತೆಯು ಮೆಲೆಂಜೋದಾರೋ ನೆಲೆಯ ಉತ್ಪನ್ನದಲ್ಲಿ ಕಾಯೋತ್ಸರ್ಗದಲ್ಲಿರುವ ದ್ಯಾನಮಗ್ನ ನಗ್ನ ಶಿಲ್ಪ ದೊರೆತಿದೆ. ಆ ಶಿಲ್ಪದ ಶಿರದ ಮೇಲೆ ತ್ರಿರತ್ನ ಸೂಚಕವಾಗಿ ತ್ರಿಶೂಲಾಕೃತಿಯಿದೆ. ಇದನ್ನು ಒಂದನೇ ತೀರ್ಥಂಕರ ವೃಷಭನಾಥನೆಂದು ವಿದ್ವಾಂಸರುತರ್ಕಿಸಿದ್ದಾರೆ. ಕ್ರಿ.ಪೂ.೫-೪ನೇ ಶತಮಾನದಲ್ಲಿ ತೀರ್ಥಂಕರ ಶಿಲ್ಪಗಳ ಪ್ರಷ್ಠಾಪನೆ, ಪೂಜೆ ನಡೆಯುತ್ತಿದ್ದವು ಖಾರದೇಲನ ಹಾದಿಗುಂಪಾ ಶಾಸನದಿಂದ ಸಾಕ್ಷಿಯಾಗಿವೆ. ಪ್ರಾಚೀನ ಕರ್ನಾಟಕದಲ್ಲಿ ಶ್ರವಣಬೆಳಗೊಳ, ಬನವಾಸಿ, ಕೊಪ್ಪಳ, ಹಲಸಿ, ಹೊನಸೋಗಿ, ಹುಂಚ ಮೊದಲಾದ ಕಡೆಗಳಲ್ಲಿಯೂ ಜೈನ ಕೇಂದ್ರಗಳು ಪ್ರವರ್ಧಮಾನಕ್ಕೆ ಬಂದವು. ಮೂರ್ತಿ ಶಿಲ್ಪ ವೈಶಿಷ್ಟತೆಗೆ ಸಂಬಂಧಿಸಿದಂತೆ ಒಂದನೇ ತೀರ್ಥಂಕರನಾದ ವೃಷಭನಾಥನು ತಪಸ್ಸನ್ನು ಮಾಡುವ ಸಂದರ್ಭದಲ್ಲಿ ಆತನ ಕೂದಲುಗಳು

ಜಡೆ ಗಟ್ಟಿ ಜಟಾಧಾರಿಯಾಗಿ ಅಲೆದಾಡುತ್ತಿದ್ದ ಹಿನ್ನೆಲೆಯಲ್ಲಿ ಅತಿ ಪ್ರಾಚೀನ ಶಿಲ್ಪಗಳಲ್ಲಿ ಈತನ ಭುಜಗಳ ಪಾರ್ಶ್ವದಲ್ಲಿ ಇಳೆಬಿದ್ದ ಜಟೆಗಳನ್ನು ತೋರಿಸಲಾಗಿರುತ್ತದೆ. ಏಳನೇ ತೀರ್ಥಂಕರ ಸುಪಾರ್ಶ್ವನಾಥನ ಶಿಲ್ಪಗಳಲ್ಲಿ ಶಿರದ ಮೇಲೆ ಐದು ಹೆಡೆಯ ಸರ್ಪವನ್ನು ತೋರಿಸಲಾಗಿರುತ್ತದೆ. ಇಪ್ಪತ್ಮೂರನೇ ತೀರ್ಥಂಕರ ಪಾರ್ಶ್ವನಾಥ ಶಿಲ್ಪಗಳು ಆತನ ಪೂರ್ವಭವಾಳಿಗಳಿಗೆ ಸಂಬಂಧಿಸಿದ ಕಮಠೋಪಸರ್ಗದ ಕಥಾನಿರೂಪಣೆಯ ಸಂಯೋಜನೆಯಲ್ಲಿ ಈ ಶಿಲ್ಪಗಳು ಮೂಡಿ ಬಂದಿರುತ್ತವೆ. ಜೊತೆಗೆ ಶಿರದ ಮೇಲೆ ಏಳು ಅಥವಾ ಹೆಚ್ಚಿನ ಸಂಖ್ಯೆಯ ಹೆಡೆಗಳುಳ್ಳ ಸರ್ಪವನ್ನು ತೋರಿಸಲಾಗುತ್ತಿದೆ.

ಜೈನ ಪರಂಪರೆಯ ದಿಗಂಬರ ಪಂಥದ ಸಂಹಿತೆಗಳ ಪ್ರಕಾರ ವರ್ತಮಾನ ಕಾಲದ ೨೪ ತೀರ್ಥಂಕರ ಸಹಚರರು, ಮತ್ತು ಲಾಂಛನ ಹೀಗಿವೆ.೨

| ಕ್ರ.ಸಂ. | ತೀಥಂಕರರು | ಲಾಂಛನಗಳು | ಯಕ್ಷರು | ಯಕ್ಷಿಣಿಯರು |
|---|---|---|---|---|
| ೦೧ | ವೃಷಭನಾಥ | ಎತ್ತು | ಗೋಮುಖ | ಚಕ್ರೇಶ್ವರಿ |
| ೦೨ | ಅಜಿತನಾಥ | ಆನೆ | ಮಹಾಯಕ್ಷ | ರೋಹಿಣಿ |
| ೦೩ | ಶಂಭವನಾಥ | ಕುದರೆ | ತ್ರಿಮುಖ | ಪ್ರಜ್ಞಪ್ತಿ |
| ೦೪ | ಅಬಿನಂಧನನಾಥ | ಮಂಗ | ಯಕ್ಷೇಶ್ವರ | ವಜ್ರಶಂಖಲಾ |
| ೦೫ | ಸುಮತಿನಾಥ | ಚಕ್ರವಾಕಪಕ್ಷಿ | ತುಂಬರು | ಪುರುಷದತ್ತೆ |
| ೦೬ | ಪದ್ಮಪ್ರಭನಾಥ | ಕಮಲ | ಕುಸಮಾವರ | ಮನೋವೇಗೆ |
| ೦೭ | ಸುಪಾರ್ಶ್ವನಾಥ | ಸ್ವಸ್ತಿಕ | ವರನಂದಿ | ಕಾಳಿ |
| ೦೮ | ಚಂದ್ರಪ್ರಭನಾಥ | ಚಂದ್ರ | ಶ್ಯಾಮ | ಜ್ವಾಲಾಮಾಲಿನಿ |
| ೧೦ | ಪುಷ್ಪದಂತನಾಥ | ಮೊಸಳೆ | ಅಜಿತ | ಮಹಾಕಾಳಿ |
| ೧೧ | ಶೀತಲನಾಥ | ಕಲ್ಪವೃಕ್ಷ | ಬ್ರಹ್ಮ | ಮಾನವಿ |
| ೧೨ | ಶ್ರೇಯಾಂಸನಾಥ | ಖಡ್ಗಮೃಗ | ಈಶ್ವರ | ಗೌರಿ |
| ೧೩ | ವಾಸುಪೂಜ್ಯನಾಥ | ಕೋಣ | ಕುಮಾರ | ಗಾಂಧಾರಿ |
| ೧೪ | ವಿಮಲನಾಥ | ಹಂದಿ | ಷಣ್ಮುಖ | ವೈರೂಟಿ |
| ೧೫ | ಅನಂತನಾಥ | ಕರಡಿ | ಪಾತಾಳ | ಅನಂತಮತಿ |
| ೧೬ | ಧರ್ಮನಾಥ | ವಜ್ರ | ಕಿನ್ನರ | ಮಾನವಿ |
| ೧೭ | ಶಾಂತಿನಾಥ | ಜಿಂಕೆ | ಗರುಡ | ಮಹಾಮಾನಸಿ |
| ೧೮ | ಕುಂಥುನಾಥ | ಕುರಿ | ಗಂಧರ್ವ | ಜಯೆ |
| ೧೯ | ಅರನಾಥ | ಮೀನು | ಮಹೇಂದ್ರ | ವಿಜಯೆ |
| ೨೦ | ಮಲ್ಲಿನಾಥ | ಕುಂಭ | ಕುಬೇರ | ಅಪರಾಜಿತೆ |

| | | | | |
|---|---|---|---|---|
| ೨೧ | ಮನಿಸವ್ರನಾಥ | ಆಮೆ | ವರುಣ | ಬಹುರೂನಣಿ |
| ೨೨ | ನಮಿನಾಥ | ನೀಲಕಮಲ | ವಿದಯತ್ಪ್ರಭ | ಚಾಮುಂಡಿ |
| ೨೩ | ನೇಮಿನಾಥ | ಶಂಖ | ಸರ್ವಾಹಣ | ಕೂಷ್ಮಾಂಡಿಗಿ |
| ೨೪ | ಪಾರ್ಶ್ವನಾಥ | ಸರ್ಪ | ಧರಣೇಂದ್ರ | ಪದ್ಮಾವತಿ |
| ೨೫ | ಮಹಾವೀರ | ಸಿಂಹ | ಮಾತಂಗ | ಸಿದ್ಧಾಯಿನಿ |

ಈ ೨೪ ಜನ ತೀರ್ಥಕರ ಶಿಲ್ಪಗಳು ಸ್ವಂತ್ರ ಹಾಗೂ ಒಮ್ಮೊಮ್ಮೆ ಒಂದೇ ಪಟ್ಟಿಕೆಯಲ್ಲಿಯೂ ಗೋಚರಿಸುತ್ತವೆ. ಪ್ರತ್ಯೇಕ ರೂಪದ ಶಿಲ್ಪಗಳಲ್ಲಿ ಒಬ್ಬ ತೀರ್ಥಂಕರ ಸುತ್ತಲಿನ ಪ್ರಭಾವಳಿಯಲ್ಲಿ ಅಷ್ಟವಿಧ ಮಹಾಪಾತ್ರಿಹಾರ್ಯಗಳು ಹಾಗೂ ಇಕ್ಕೆಲುಗಳಲ್ಲಿ ಯಕ್ಷ-ಯಕ್ಷಿಣಿಯರನ್ನು ತೋರಿಸಲಾಗಿರುತ್ತದೆ.ಸಂಕೀರ್ಣ ರೂಪದ ಶಿಲ್ಪಗಳಲ್ಲಿ ಒಬ್ಬ ತೀರ್ಥಂಕರ, ಕುದುರೆ ಚಿಹ್ನೆ ಇದೆ. ಆದಕಾರಣ ಈ ತೀರ್ಥಂಕರನ ಹೆಸರು ಶಂಭವನಾಥ. ಈ ಶಿಲ್ಪದ ಅಕ್ಕ-ಪಕ್ಕ ತ್ರಿಮುಖ ಪ್ರಜ್ಞಾಪ್ತಿ ಎಂಬ ಯಕ್ಷಿ-ಯಕ್ಷಿಣಿಯರು ಇದ್ದಾರೆ. ಸುತ್ತಲಿನ ಪ್ರಭಾವಳಿಯಲ್ಲಿ ೨೩ ಜನ ತೀರ್ಥಂಕರನ್ನು ತೋರಿಸಲಾಗಿರುತ್ತದೆ. ಮಧ್ಯದಲ್ಲಿರುವ ತೀರ್ಥಂಕರನ ಹೆಸರಿನಿಂದಲೇ ಆ ಶಿಲ್ಪವನ್ನು ಗುರುತಿಸಲಾಗುತ್ತದೆ. ಪ್ರಸ್ತುತ ಕಾಮಲಾಪುರ ಗ್ರಾಮದ ಪರಿಸರದಲ್ಲಿ ಲಭ್ಯವಿರುವ ಜೈನ ಧರ್ಮದ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಇಲ್ಲಿ ಸೆರೆಹಿಡಿಯಲಾಗಿದೆ.

**ಶಂಭವನಾಥ ತೀಥಂಕರ:** ಕಾಮಲಾಪುರದ ರಾಜ್ಯ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ಈ ಶಿಲ್ಪವಿದೆ. ಕ್ರಿ.ಶ.೧೬ನೇ ಶತಮಾನದ್ದಾಗಿದ್ದು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕಾರ್ಯೋತ್ಸರ್ಗ ಭಂಗಿಯಲ್ಲಿದ್ದು ಪೀಠದ ಮುಂಭಾಗದಲ್ಲಿ ಕುದುರೆ ಚಿಹ್ನೆ ಇದೆ. ಕಾರಣ, ಈ ತೀರ್ಥಂಕರನ ಹೆಸರು ಶಂಭವನಾಥ, ಈ ಶಿಲ್ಪದ ಅಕ್ಕ-ಪಕ್ಕ ತ್ರಿಮುಖ, ತ್ರಿಮುಖಿ ಪ್ರಜ್ಞಾಪ್ತಿ ಎಂಬ ಯಕ್ಷ-ಯಕ್ಷಿಣಿಯರು ಇದ್ದಾರೆ.

**ಸುಪಾರ್ಶ್ವನಾಥ ತೀರ್ಥಂಕರರ ಶಿಲ್ಪಗಳು:** ಕನ್ನಡ ವಿಶ್ವವಿದ್ಯಾಲದ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ.೧೫ನೇ ಶತಮಾನದ ಸುಪಾರ್ಶ್ಚನಾಥ ತೀರ್ಥಂಕರ ಶಿಲ್ಪವಿದೆ. ಈ ಶಿಲ್ಪ ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪ ಪರ್ಯಂಕಾಸನ ಭಂಗಿಯಲ್ಲಿದೆ. ಯೋಗ ಮುದ್ರಯಂತೆ ಕೈಗಳಿವೆ.

**ಶಾಂತಿನಾಥ ತೀರ್ಥಂಕರ ಶಿಲ್ಪ:** ಕಾಮಲಾಪುರದ ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ಕ್ರಿ.ಶ.೧೪ನೇ ಶತಮಾನದ ಶಾತಿನಾಥ ತೀಥಂಕರ ಶಿಲ್ಪವಿದೆ. ಈ ಶಿಲ್ಪ ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪ ಕಾಯೋತ್ಸರ್ಗಭಂಗಿಯಲ್ಲಿದೆ. ಈ ತೀರ್ಥಂಕರ ಅಕ್ಕ-ಪಕ್ಕ ಗರುಡ ಮತ್ತು ಮಹಾಮಾನಸಿ ಎಂಬ ಯಕ್ಷ-ಯಕ್ಷಿಣಿಯರು ಆಸೀನ ಭಂಗಿಯಲ್ಲಿದ್ದಾರೆ. ಕೆಳಭಾಗದ ಪೀಠದಲ್ಲಿ ಜಿಂಕೆಯ ಉಬ್ಬು ಶಿಲ್ಪವಿದೆ.

**ಚತುರ್ವಿಂಶತಿ ತೀರ್ಥಂಕರ ಶಿಲ್ಪಗಳು:** ಪ್ರಸ್ತುತ ಕಾಮಲಾಪುರದ ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಕ್ರಿ.ಶ.೧೧-೧೨ನೇ ಶತಮಾನದ ಶಿಲ್ಪವಿದೆ. ಈ ಶಿಲ್ಪ ಕಪ್ಪು ಮಿಶ್ರಿತ ನೀಲಿ ಛಾಯೆಯ ಬಳಪದ ಶಿಲೆಯಲ್ಲಿದೆ. ಕಾಯೋತ್ಸರ್ಗದಲ್ಲಿರುವ ಈತನ ಶಿರದ ಹಿಂಭಾಗದ ಮೇಲ್ಭಾಗದಲ್ಲಿ

ಏಳು ಹೆಡೆಯ ಸರ್ಪವಿದೆ. ಅದರ ಮೇಲೆ ರತ್ನತ್ರೆಯ ಪ್ರತೀಕವಾದ ಮುಕ್ಕೊಡೆಯಿದೆ. ಪಾರ್ಶ್ವಗಳಲ್ಲಿ ಎರಡು ಚಾಮರಗಳಿವೆ. ಶಿಲ್ಪದ ಪ್ರಭಾವಳಿಯಲ್ಲಿ ಬಲಗಡೆ ೧೨ ತೀರ್ಥಂಕರು ಎಡಗಡೆ ೧೧ ಜನ ತೀರ್ಥಂಕರು ಇದ್ದಾರೆ. ಈತನ ಪಾರ್ಶ್ವಗಳಲ್ಲಿ ಧರಣೇಂದ್ರ ಮತ್ತು ಪದ್ಮಾವತಿ ಎಂಬ ಯಕ್ಷ-ಯಕ್ಷಿಣಿ ತಮ್ಮ ಚತುರ್ಭುಜಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದುಕೊಂಡು ಸರ್ವಾಲಂಕೃತರಾಗಿ ಸವ್ಯಲಲಿತಾಸನದಲ್ಲಿ ಆಸೀನರಾಗಿದ್ದಾರೆ.

ಕಾಮಲಾಪುರದ ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಮುಂಭಾಗದಲ್ಲಿ ಕ್ರಿ.ಶ.೧೫-೧೬ನೇ ಶತಮಾನದ ಪಾರ್ಶ್ವನಾಥ ಶಿಲ್ಪವಿದೆ. ಈ ಶಿಲ್ಪ ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಪದ್ಮಾಸೀನ ಭಂಗಿಯಲ್ಲಿದ್ದು ಶಿರದ ಮೇಲೆ ಏಳು ಹೆಡೆಯ ಸರ್ಪ ತಲೆಯ ಮೇಲೆ ರಕ್ಷಣೆ ನೀಡುವಂತಿದೆ. ನಿರಾಭರಣ ಪೂರ್ಣನಗ್ನನಾಗಿರುತ್ತಾನೆ. ಅಕ್ಕ-ಪಕ್ಕ ಧರಣೇಂದ್ರ ಮತ್ತು ಪದ್ಮಾವತಿ ಎಂಬ ಯಕ್ಷ-ಯಕ್ಷಿಣಿಯರು ಇದ್ದಾರೆ.

**ಬಾಹುಬಲಿ ಶಿಲ್ಪ:** ಕಾಮಲಾಪುರದ ಪ್ರಾಚ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಕ್ರಿ.ಶ.೧೫ನೇ ಶತಮಾನದ ಕಪ್ಪ್. ಶಿಲೆಯ ಶಿಲ್ಪವಿದೆ. ಇದು ಕಾಯೋತ್ಸರ್ಗ ಭಂಗಿಯಲ್ಲಿದ್ದು ನಗ್ನ ನಿರಾಭರಣನಾಗಿದ್ದಾನೆ. ದೇಹದ ಸುತ್ತಲೂ ಹೂ-ಬಳ್ಳಿ ಅಲಂಕೃತವಾಗಿ ಸುತ್ತುವರೆದಿವೆ. ಗುಂಗರು ಕೂದಲು ಧ್ಯಾನ ಮುದ್ರೆ ಈ ಶಿಲ್ಪ ವೈಶಿಷ್ಟತೆಯಾಗಿದೆ.

**ತೀರ್ಥಂಕರರ ಶಿಲ್ಪಗಳು:** ಪ್ರಾಚೀನ ತಿರ್ಥಂಕರರ ಶಿಲ್ಪಗಳನ್ನು ಗುರುತಿಸಲು ಅವರ ವಿಶೇಷ ಪ್ರತಿಮಾ ಲಕ್ಷಣಗಳನ್ನು ಪಾದ ಪೀಠದ ಮೇಲಿರುವ ಶಾಸನಗಳು ಮತ್ತು ಅವರ ಪಾದಗಳ ಪಾರ್ಶ್ವಗಳಲ್ಲಿರುವ ಯಕ್ಷ-ಯಕ್ಷಿಣಿಯರ ಶಿಲ್ಪಗಳು ಸಹಾಯಕವಾಗುತ್ತವೆ.

ಕಾಮಲಾಪುರ ಭಾರತೀಯ ಪ್ರಾಚ್ಯ ಪುರಾತತ್ವ ವಸ್ತು ಸಂಗ್ರಹಾಲಯ ಹಿಂಬದಿಯಲ್ಲಿ ಕ್ರಿ.ಶ.೧೪-೧೫ನೇ ಶತಮಾನದ ತೀರ್ಥಂಕರ ಶಿಲ್ಪವಿದೆ. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಪರ್ಯಂಕಾಸನ ಭಂಗಿಯಲ್ಲಿ ಕುಳಿತು ಧ್ಯಾನ ಮಗ್ನನಾಗಿರುವಂತಿದೆ. ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ.೧೪ನೇ ಶತಮಾನದ ತೀರ್ಥಂಕರ ಶಿಲ್ಪ ಕೆಂಪು ಮಿಶ್ರಿತ ಹಸಿರು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ ಪೀಠದ ಮೇಲೆ ಪದ್ಮಾಸನದಲ್ಲಿ ಧ್ಯಾನ ಮಗ್ನನಾಗಿದ್ದಾನೆ. ಕಾಮಲಾಪುದ ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯಲ್ಲಿ ಕ್ರಿ.ಶ.೧೪-೧೫ನೇ ಶತಮಾನದ ತೀರ್ಥಂಕರ ಶಿಲ್ಪವಿದೆ. ಇದು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಪೀಠದ ಮೇಲೆ ಪರ್ಯಂಕಾಸನದ ಭಂಗಿಯಲ್ಲಿ ಧ್ಯಾನ ಮಗ್ನನಾಗಿದ್ದಾನೆ. ಈ ಎಲ್ಲಾ ಮೂರ್ತಿ ಶಿಲ್ಪಗಳು ಇಲ್ಲಿ ಜೈನ ಧರ್ಮದ ಅಸ್ತಿತ್ವನ್ನು ಸಾಬೀತು ಪಡಿಸುತ್ತವೆ.

ಯಕ್ಷ-ಯಕ್ಷಿಯರ ಶಿಲ್ಪಗಳು ಇವರಿಗೆ ಜೈನ ಪರಂಪರೆಯಲ್ಲಿ ಅಗ್ರ ಸ್ಥಾನವಿದೆ. ವಸುನುದಾರ್ಯನು ಪ್ರತಿಷ್ಠಪಾದ ಕೃತಿಯಲ್ಲಿ ಆಯಾ ತೀರ್ಥಂಕರರಿಗೆ ನಿಯಮಿತವಾಗಿರುವ ಯಕ್ಷನನ್ನು ಬಲಬದಿಯಲ್ಲಿಯೂ ಶಾಸನ ದೇವಿಯಾದ ಯಕ್ಷಿಯನ್ನು ಎಡಬದಿಯಲ್ಲಿಯೂ, ಪಾದ ಪೀಠದಲ್ಲಿ ಅವರವರ ಲಾಂಛನವನ್ನೂ ಸ್ಥಾಪಿಸಬೇಕೆಂದು ಸೂಚಿಸಿದ್ದಾನೆ. ಜಯಸೇನನ್ನು, ಪ್ರತಿಷ್ಠಾಪಾಠ ಕೃತಿಯಲ್ಲಿ, ಜಿನ ಪ್ರತಿಮೆಯು

ಅಷ್ಟವಿಧ, ಮಹಾ ಪ್ರಾತಿದಾರ್ಯಗಳುಳ್ಳದ್ದೂ, ಸ್ಥಿರ ಮತ್ತು ಚರ ಬಿಂಬಗಳ ಪಾದಪೀಠದಲ್ಲಿ ಲಾಂಛನವುಳ್ಳದ್ದೂ ಬಲಬದಿಯಲ್ಲಿ ಯಕ್ಷ ಮತ್ತು ಎಡಬದಿಯಲ್ಲಿ ಯಕ್ಷಿಯುಳ್ಳದ್ದೂ ಆಗಿರಬೇಕೆಂದು ಸೂಚಿಸಿದ್ದಾನೆ. ಅದೇ ರೀತಿ ತಿಯೋಪದ್ಧತ್ತಿ ಪ್ರವಚನ ಸಾರೋದ್ಧಾರ, ಅಭಿದಾನ ಚಿಂತಾಮಣಿ, ಪ್ರತಿಷ್ಠಾರಸುಗ್ರಹ, ಪ್ರತಿಷ್ಠ ಸಾರೋದ್ಧಾರ, ಪ್ರತಿಷ್ಠತಿಲಕ, ನಿರ್ವಾಣಕಲಿಕಾ ಮತ್ತು ಅಪರಾಜಿತ ಪೃಚ್ಛಾ, ರೂಪ ಮಂಡನ ಮೊದಲಾದ ಶಿಲ್ಪಶಾಸ್ತ್ರಗಳಲ್ಲೂ ಹಾಗೂ ಧಾರ್ಮಿಕ ವಿಧಿ ವಿಧಾನಗಳಲ್ಲೂ ಯಕ್ಷ-ಯಕ್ಷಿಯರ ವಿವರಣೆಗಳು ದೊರೆಯುತ್ತವೆ. ಪ್ರತಿಯೊಬ್ಬ ತೀರ್ಥಂಕರನಿಗೂ ಪ್ರತ್ಯೇಕ ಯಕ್ಷ-ಯಕ್ಷಿ ಇರುತ್ತಾರೆ. ಅವರನ್ನು ಜನ ಶಾಸನ ದೇವತೆಗಳೆಂದೂ ಕರೆಯಲಾಗುತ್ತದೆ. ತೀರ್ಥಂಕರರಿಗೆ ತಪಸ್ಸಿನ ಸಂದರ್ಭದಲ್ಲಿ ಉಂಟಾಗುವ ಉಪಸರ್ಗಾರಿಗಳನ್ನು ಯಕ್ಷ-ಯಕ್ಷಿಯರು ತಮ್ಮ ಆತ್ಮ ಪ್ರೇರಣೆಯಿಂದ ಮುಂದಾಗಿ ಪರಿಹರಿಸುತ್ತಾರೆ. ಹೀಗಾಗಿ ಅವರನ್ನು ತೀರ್ಥಂಕರರ ರಕ್ಷಕರೆಂತಲೂ ಕರೆಯಲಾಗುತ್ತದೆ. ದಿಗಂಬರ ಪರಂಪರೆ, ಅನುಗುಣವಾಗಿ ಯಕ್ಷರ ವಿವರಗಳು ಈ ಕೆಳಗಿನಂತಿವೆ.[೬೩]

| ಸಂ | ಯಕ್ಷರು | ಬಣ್ಣ | ವಾಹನ | ಕೈಗಳು | ಆಯುಧಗಳು |
|---|---|---|---|---|---|
| ೧. | ಗೋಮುಖ | ಸುವರ್ಣ | ವೃಷಭ | ನಾಲ್ಕು | ಪರಶು, ಬಿಜಪೂರ, ಅಕ್ಷಸೂತ್ರ, ವರದ |
| ೨. | ಮಹಾಯಕ್ಷ | ಸುವರ್ಣ | ಗಜ | ಎಂಟು | ಖಡ್ಗ, ದಂಡ, ಪರಶು, ವರದ, ಚಕ್ರ, ತ್ರಿಶೂಲ, ಕಮಲ, ಅಂಕುಶ |
| ೩. | ತ್ರಿಮುಖ | ಶ್ಯಾಮ | ಮಯೂರ | ಆರು | ದಂಡ, ತ್ರಿಶೂಲ, ಕಾತಿಕಾ, ಚಕ್ರ, ಅಸಿ, ಸೃಣಿ |
| ೪. | ಯಕ್ಷೇಶ್ವರ | ಶ್ಯಾಮ | ಗಜ | ನಾಲ್ಕು | ಬಾಣ, ಖಡ್ಗ, ಬಿಲ್ಲು, ಗುರಾಣಿ |
| ೫. | ತುಂಬರು | ಶ್ಯಾಮ | ಗರುಡ | ನಾಲ್ಕು | ಸರ್ಪ, ವರದ, ಫಲ |
| ೬. | ಕುಸುಮಾತರ | ಶ್ಯಾಮ | ಮೃಗ | ನಾಲ್ಕು | ಗುರಾಣಿ, ಅಭಯ, ಕುಂತ, ವರದ |
| ೭. | ವರನಂದಿ | ಶ್ಯಾಮ | ಸಿಂಹ | ಎರಡು | ಶೂಲ, ದಂಡ |
| ೮. | ಶ್ಯಾಮ | ಶ್ಯಾಮ | ಕಪೋತ | ನಾಲ್ಕು | ಅಕ್ಷಸೂತ್ರ, ವರದ, ಪರಶು, ಫಲ |
| ೯. | ಅಜಿತ | ಶ್ವೇತ | ಕೂರ್ಮ | ನಾಲ್ಕು | ಅಕ್ಷಸೂತ್ರ, ವರದ, ಶಕ್ತಿ, ಫಲ |
| ೧೦. | ಬ್ರಹ್ಮ | ಶ್ವೇತ | ಪದ್ಮ | ಎಂಟು | ಬಾಣ, ಬಿಲ್ಲು, ಪರಶು, ದಂಡ, ಕತ್ತಿ, ಗುರಾಣಿ, ವರದ, ವಜ್ರ |
| ೧೧. | ಈಶ್ವರ | ಶ್ವೇತ | ವೃಷಭ | ನಾಲ್ಕು | ಅಕ್ಷಸೂತ್ರ, ಪದ್ಮ, ತ್ರಿಶೂಲ, ದಂಡ |
| ೧೨. | ಕುಮಾರ | ಶ್ಯಾಮ | ಹಂಸ | ಆರು | ಬಾಣ, ಗದೆ, ವರದ, ಬಿಲ್ಲು, ನಕುಲ, ಫಲ |
| ೧೩. | ಷಣ್ಮುಖ | ಶ್ವೇತ | ಮಯೂರ | ಹನ್ನೆರಡು | ಎಂಟುಕೈಗಳಲ್ಲಿ ಪರುಶು, ಶೇಷಿ, ನಾಲ್ಕು ಕೈಗಳಲ್ಲಿ ಕತ್ತಿ, ಅಕ್ಷಸೂತ್ರ, ಗುರಾಣಿ, ದಂಡ |
| ೧೪. | ಪಾತಾಲ | ಕೆಂಪು | ಮಕರ | ಆರು | ಅಂಕುಶ, ಶೂಲ, ಕಮಲ, ಶಕಾ, ಫಲಫಲ |

| | | | | | |
|---|---|---|---|---|---|
| ೧೫. | ಕಿನ್ನರ | ಕೆಂಪು | ಮೀನು | ಆರು | ಬೀಜಪೂರ, ಗದೆ, ಅಭಯ, ನಕುಲ, ಪದ್ಮ, ಅಕ್ಷಸೂತ್ರ |
| ೧೬. | ಗರುಡ | ಶ್ಯಾಮ | ವರಹಾ | ನಾಲ್ಕು | ವಜ್ರ, ಪದ್ಮ, ಚಕ್ರ, ಫಲ |
| ೧೭. | ಗಂಧರ್ವ | ಶ್ಯಾಮ | ಪಕ್ಷಿ | ನಾಲ್ಕು | ನಾಗ, ಪಾಶ, ಬಾಣ, ಬಿಲ್ಲು |
| ೧೮. | ಮಹೇಂದ್ರ | ಶ್ಯಾಮ | ಶುಖ | ಹನ್ನೆರಡು | ಬಾಣ, ಕಮಲ, ಫಲ, ಮಾಲಾ, ಅಕ್ಷಸೂತ್ರ, ಅಭಯ, ಬಿಲ್ಲು, ವಜ್ರ, ಪಾಶ, ಮುದ್ಗುರ, ಅಂಕುಶ, ವರದ. |
| ೧೯. | ಕುಬೇರ | ಇಂದ್ರಧನುಷ್ | ಗಜ | ಎಂಟು | ಶೂಲ, ಪರಶು, ಅಭಯ, ವರದ, ಮುದ್ಗರ, ಅಕ್ಷಸೂತ್ರ, ಬೀಜಪೂರ ಶಕ್ತಿ |
| ೨೦. | ವರುಣ | ಶ್ವೇತ | ವೃಷಭ | ನಾಲ್ಕು | ವರದ,ಕತ್ತಿ,ಗುರಾಣಿ,ಫಲ |
| ೨೧. | ವಿದ್ಯುತ್ಪ್ರಭ | ಸುವರ್ಣ | – | ಎಂಟು | ಗುರಾಣಿ, ಅಸಿ, ಬಿಲ್ಲು, ಬಾಣ, |
| ೨೨. | ಸರ್ವಾಹ್ಣ | ಶ್ಯಾಮ | ನೃವಾಹನ | ಆರು ವರದ. | ಮುದ್ಗರ, ಕಠಾರ, ದಂಡ, ಫಲ, ವಜ್ರ, |
| ೨೩. | ಧರಸೇಂದ್ರ | | ಕೂರ್ಮ | ನಾಲ್ಕು | ನಾಗ, ವರದಾ, ನಾಗ, ಪಾಶ. |
| ೨೪. | ಮಾತಂಗ | ಮುದ್ಗ | ಆನೆ | ಎರಡು | ವರದ, ಫಲ. |

## ಯಕ್ಷಿಯರ ವಿವರಗಳು

| ಕ್ರಸಂ | ಯಕ್ಷಿಯರು | ಬಣ್ಣ | ವಾಹನ | ಕೈಗಳು | ಆಯುಧಗಳು |
|---|---|---|---|---|---|
| ೧. | ಚಕ್ರೇಶ್ವರಿ | ಸುವರ್ಣ | ಗರುಡ | ನಾಲ್ಕು | ಚಕ್ರ, ಚಕ್ರ, ವರದ, ಫಲ. |
| ೨. | ರೋಹಿಣಿ | ಪೀತ | ಲೋಹಾಸನ | ನಾಲ್ಕು | ಚಕ್ರ, ಶಂಖ, ಅಭಯ, ವರದ. |
| ೩. | ಪ್ರಜ್ಞಪ್ತಿ | ಶ್ವೇತ | ಪಕ್ಷಿ | ಆರು | ಅರ್ಧಚಂದ್ರ, ಪರಶು, ಫಲ, ಕತ್ತಿ, ಕಮಂಡಲ, ವರದ. |
| ೪. | ವಜ್ರಶಂಖಲಾ | ಸುವರ್ಣ | ಹಂಸೆ | ನಾಲ್ಕು | ನಾಗಪಾಶ, ಅಕ್ಷಯಸೂತ್ರ, ಫಲ, ವರದ. |
| ೫. | ಪುರುಷದತ್ತೆ | ಸುವರ್ಣ | ಗಜ | ನಾಲ್ಕು | ಚಕ್ರ, ವಜ್ರ, ಫಲ, ವರದ |
| ೬ | ಮನೋವೇಗೆ | ಸುವರ್ಣ | ಅಶ್ವ | ನಾಲ್ಕು | ವರದ, ಅಸಿ, ಗುರಾಣಿ, ಫಲ. |
| ೭ | ಕಾಳಿ | ಶ್ವೇತ | ವೃಷಭ | ನಾಲ್ಕು | ಘಂಟೆ, ತ್ರಿಶೂಲ, ಫಲ, ವರದ. |
| ೮. | ಜ್ವಾಲಾಮಾಲಿನಿ | ಶ್ವೇತ | ಮಹಿಷಿ | ಎಂಟು | ಚಕ್ರ, ಬಿಲ್ಲು, ಆಶ, ಗುರಾಣಿ, ತ್ರಿಶೂಲ, ಬಾಣ, ಮತ್ಸ್ಯ, ಕತ್ತಿ. |
| ೯. | ಮಹಾಕಾಳಿ | ಕೃಷ್ಣ | ಕೂರ್ಮ | ನಾಲ್ಕು | ವಜ್ರ, ಫಲ, ಮುದ್ಗರ, ವರದ. |
| ೧೦. | ಮಾನವಿ | ಹರಿತ್ | ವರಾಹ | ನಾಲ್ಕು | ಮಾಲಾ, ವರದ, ಮತ್ಸ್ಯ, ಫಲ. |
| ೧೧. | ಗೌರಿ | ಸುವರ್ಣ | ಮೃಗ | ನಾಲ್ಕು | ಮುದ್ಗರ, ಕಮಲ, ಕಲಶ, ವರದ. |

| | | | | | |
|---|---|---|---|---|---|
| ೧೨. | ಗಾಂಧಾರಿ | ಹರಿತ್ | ಮಕದ | ನಾಲ್ಕು | ಪದ್ಮ, ವರದ, ಕಮಲ, ಮುಸಲ. |
| ೧೩. | ವೈರೋಟ | ಹರಿತ್ | ಹೆಬ್ಬಾವು | ನಾಲ್ಕು | ಎರಡು ಕೈಗಳಲ್ಲಿ ಸರ್ಪ, ಧನುಷ್, ಬಾಣ. |
| ೧೪. | ಅನಂತಮತಿ | ಸುವರ್ಣ | ಹಂಸ | ನಾಲ್ಕು | ಬಿಲ್ಲು, ಆಣ, ಫಲ, ವರದ. |
| ೧೫. | ಮಾನಸಿ | ಹವಳ | ವ್ಯಾಘ್ರ | ಆರು | ಕಮಲ, ಬಿಲ್ಲು, ವರದ, ಅಂಕುಶ, ಬಾಣ, ಕಮಲ. |
| ೧೬. | ಮಹಾಮಾನಸಿ | ಸುವರ್ಣ | ಮಯೂರ | ನಾಲ್ಕು | ಫಲ, ಚಕ್ರ, ಖಡ್ಗ, ವರದ. |
| ೧೭. | ಜಯಾ | ಸುವರ್ಣ | ವರಾಹ | ನಾಲ್ಕು | ಶಂಖ, ಅಸಿ, ಚಕ್ರ, ವರದ. |
| ೧೮. | ತಾರಾವತಿ | ಸುವರ್ಣ | ಹಂಸ | ನಾಲ್ಕು | ಸರ್ಪ, ವಜ್ರ, ಮೃಗ, ವರದ. |
| ೧೯. | ಅಪರಾಜಿತ್ | ಹರಿತ್ | ಅಷ್ಟಪದ | ನಾಲ್ಕು | ಗುರಾಣಿ, ಕತ್ತಿ, ಫಲ, ವರದ. |
| ೨೦. | ಬಹುರೂಪಿಣಿ | ಪೀತ | ನಾಗ | ನಾಲ್ಕು | ಗುರಾಣಿ, ಕತ್ತಿ, ಫಲ, ವರದ. |
| ೨೧. | ಚಾಮುಂಡಿ | ಹರಿತ್ | ಮಕರ | ನಾಲ್ಕು | ಯಷ್ಟಿ, ಗುರಾಣಿ, ಅಕ್ಷಸೂತ್ರ, ಕತ್ತಿ. |
| ೨೨. | ಕೂಷ್ಮಾಂಡಿನಿ | ಹರಿತ್ | ಸಿಂಹ | ಎರಡು | ಅಮ್ರಸ್ತಬಕ, ಪುತ್ರನಿಗೆ ಶುಭಕೋರುವ ಹಸ್ತ. |
| ೨೩. | ಪದ್ಮಾವತಿ | ರಕ್ತ | ಪದ್ಮ | ನಾಲ್ಕು | ಅಂಕುಶ, ಅಕ್ಷಸೂತ್ರ, ಕಮಲ, ವರದ ವರದ, ಹಸ್ತಪ್ರತಿ. |

ಕಾಮಲಾಪುರ ಪ್ರದೇಶದಲ್ಲಿ ಪ್ರತ್ಯೇಕವಾಗಿ ಪ್ರತಿಷ್ಠಾಪಿಸಲ್ಪಟ್ಟ ಯಕ್ಷ-ಯಕ್ಷಿಣಿಯ ಶಿಲ್ಪಗಳು ದೊರೆತಿಲ್ಲ. ಈ ಮೇಲೆ ಚರ್ಚಿಸಲಾದ ತೀರ್ಥಂಕರರ ಶಿಲ್ಪಗಳಲ್ಲಿಯೇ ಆಯಾ ತೀರ್ಥಂಕರರಿಗೆ ಸಂಬಂಧಿಸಿದ ಯಕ್ಷ-ಯಕ್ಷಿಯ ಉಬ್ಬು ಶಿಲ್ಪಗಳು ಇವೆ.

**ಸೂರ್ಯ ಶಿಲ್ಪಗಳು:** ಪ್ರಪಂಚದ ಪ್ರಾಚೀನ ವಿವಿಧ ಧಾರ್ಮಿಕ ಪಂಥಗಳಲ್ಲಿ ಸೂರ್ಯ ಪಂಥವೂ ಒಂದಾಗಿದೆ. ಜಗತ್ತಿನ ವಿವಿಧ ಭಾಗಗಳಲ್ಲಿ ವಿವಿಧ ಕಾಲಗಳಲ್ಲಿ ಇದು ಮಿಥ್ರ, ಮಸ್‌ಡರಾಯ್, ಸೌರ ಮೊದಲಾದ ಹೆಸರುಗಳಿಂದ ಪ್ರಚಲಿತದಲ್ಲಿತ್ತು. ಇಂದಿಗೂ ಕೆಲವು ಆದಿವಾಸಿ, ಬಡಕಟ್ಟುಗಳಲ್ಲಿ ರೂಢಿಯಲ್ಲಿದೆ. ಋಗ್ವೇದದ ಒಂದನೇ ಮಂಡಲದಲ್ಲಿ ಅಗ್ನಿ ಮತ್ತು ಸೂರ್ಯನಿಗೆ ಬಹು ಸಾಮಿಪ್ಯವನ್ನು ಕಲ್ಪಿಸಲಾಗಿದೆ. ಐದನೇ ಮಂಡಲದಲ್ಲಿ ಸೂರ್ಯನ ರಥ ಮತ್ತು ಏಳು ಕುದುರೆಗಳು ಹಾಗೂ ಹತ್ತನೆಯ ಮಂಡಲದಲ್ಲಿ ಅವನ ವಿವಾಹದ ಉಲ್ಲೇಖಗಳಿವೆ. ಹೀಗೆ ಋಗ್ವೇದದ ಉದ್ದಕ್ಕೂ ಪ್ರಸ್ತಾಪಿಸಿದ ಆತನ ವೈವಾಹಿಕ ವಿಚಾರಗಳು ಸೂರ್ಯೋಪಾಸನೆ ವೈದಿಕ ಸಂಸ್ಕೃತಿಯ ಕಾಲಕ್ಕಾಗಲೇ ಪರಿಪೂರ್ಣವೂ ಪ್ರಭಾವ ಶಾಲಿಯೂ ಆಗಿತ್ತು.[೬೪] ಸೌರ ಪುರಾಣವು ಸೂರ್ಯೋಪಾಸನೆ ಮತ್ತು ಬ್ರಹ್ಮೋಪಾಸನೆಗಳನ್ನು ಪ್ರನಿಧಿಸುತ್ತವೆ. ಇದರೊಂದಿಗೆ ಸಂಸ್ಕೃತಕವಿ ಮಯೂರನು ರಚಿಸಿದ ಸೂರ್ಯಶತಕು ಕೃತಿ, ಪ್ರಸಿದ್ದವಾಗಿದೆ.[೬೫] ಸ್ಯೂರ್ಯನು ಕಶ್ಯಪಋಷಿ, ಮತ್ತು ಅದಿತಿಯ ಎಂಟು ಜನ ಮಕ್ಕಳಲ್ಲಿ ಒಬ್ಬನು ಆದುದರಿಂದ ಈತನನ್ನು ಆದಿತ್ಯ ಎಂದು ಕರೆಯವಾಗಿದೆ. ಈತನು ತ್ವಷ್ಟೆ ದೇವನ ಮಗಳಾದ ಸಂಜ್ಞಾದೇವಿಯನ್ನು ವಿವಾಹವಾಗಿ ಆಕೆಯಿಂದ ಮೂರು ಮಕ್ಕಳನ್ನು ಪಡೆದನು. ಬ್ರಾಹ್ಮಣ ಸಂಹಿತೆ, ಪುರಾಣಗಳಲ್ಲಿ ಉಲ್ಲೇಖಿತ ವಿವರಣೆಯಂತೆ ಸೂರ್ಯನಿಗೆ ಉಪೋದೇವಿ, ರಾತ್ರಿದೇವಿ, ಶರಣ್ಯದ್ಯೌ, ಎಂಬ ನಾಲ್ಕು

ಜನ ಪತ್ನಿಯರು. ವೈವಸ್ಥಮಗು ಯಮ ಯಮಿ ಅಶ್ವಿನಿ, ಸುಗ್ರೀವ, ಕರ್ಣ, ಶನಿ, ಇವರೆಲ್ಲರೂ ಸೂರ್ಯನ ಮಕ್ಕಳೆಂದೇ ಹೇಳಲಾಗಿದೆ. ವೇದಾಂತಿಗಳು ಸೂರ್ಯನನ್ನು ಆದಿತ್ಯನೆಂದೂ ವೈಷ್ಣವರು ವಿಷ್ಣುವೆಂದೂ, ಶೈವರು ಸಾಂಬನೆಂದೂ ಶಂಕ್ತರು ಮಾರ್ತಾಂಡ ಭೈರವಿ ಎಂದೂ ಆರಾಧಿಸುತ್ತಿದ್ದರು.

ವಿಷ್ಣು ಧರ್ಮೋತ್ತರ ಪುರಾಣದಂತೆ ಸೂರ್ಯನಿಗೆ ಸೊಗಸಾದ ಗಡ್ಡ ಮೀಸೆಗಳಿರಬೇಕು. ರಮ್ಯವಾದ ಆಕಾರ ಸರ್ವಾಭರಣಗಳಿಂದ ಭೂಷಿತನಾಗಿರಬೇಕು ನಾಲ್ಕು ಕೈಗಳಿರಬೇಕು. ಎರಡು ಕೈಗಳಲ್ಲಿ ಶೂಲ ಮತ್ತು ಗುರಾಣಿಗಳಿರಬೇಕು. ಎಡ ಬದಿಯಲ್ಲಿ ದಂಡನೂ ಬಲಬದಿಯಲ್ಲಿ ಪಿಂಗಳನೂ ಇರಬೇಕು ಅವರಿಬ್ಬರ ತಲೆಯ ಮೇಲೆ ತನ್ನು ಇನ್ನುಳಿದ ಎರಡು ಕೈಗಳನ್ನಿಟ್ಟಿರಬೇಕು. ಅರುಣನೆಂಬ ಕಂಟನು ಆತನ ಸಾರಥಿಯಾಗಿರಬೇಕು. ಸಿಂಹ ಧ್ವಜವು ಸೂರ್ಯನ ಎಡಬದಿಯಲ್ಲಿ ರಾರಾಜಿಸುತ್ತಿರಬೇಕೆಂದು ಹೇಳಲಾಗಿದೆ. ಮತ್ಸ ಪುರಾಣದಲ್ಲಿ ದಂಡ ಮತ್ತು ಪಿಂಗಳರೊಂದಿಗೆ ಕೈಯಲ್ಲಿ ಲೇಖನಿ ಹಿಡಿದ ಧಾತೃಗಳೊಂದಿಗೆ, ರಥದಲ್ಲಿ ಆಸೀನನಾಗುವಂತೆ ಸೂರ್ಯ ಶಿಲ್ಪವನ್ನು ರಚಿಸಬೇಕೆಂದು ಹೇಳಲಾಗಿದೆ. ಸೂರ್ಯನ ಕೈಗಳಲ್ಲಿ ಕಮಲಗಳಿರಬೇಕು. ಸೂರ್ಯನನ್ನು ಪ್ರತ್ಯೇಕವಾಗಿ ಚಿತ್ರಿಸುವಾಗ ನಾಲ್ಕು ಕೈಗಳಿರುವಂತೆಯೂ ನವಗ್ರಹಗಳೊಂದಿಗೆ ಇರುವಾಗ ಎರಡು ಕೈಗಳಿರುವಂತೆ ಚಿತ್ರಸಬೇಕೆಂದು ಸೂಚಿಸಲಾಗಿದೆ.[೬೬] ಬೃಹತ್ಸಂಹಿತೆ ಮತ್ತು ಭವಿಷ್ಯ ಪುರಾಣಗಳಲ್ಲಿ ಸೂರ್ಯನ ಶಿಲ್ಪದಲ್ಲಿ ಆತನ ಪಾದಗಳು ಪಾದ ರಕ್ಷೆಗಬಂದ ಮುಚ್ಚಿರುವಂತೆ ಚಿತ್ರಿಸಬೇಕೆಂದು ಸೂಚಿಸಲಾಗಿದೆ. ಸಾಮಾನ್ಯವಾಗಿ ಸೂರ್ಯನನ್ನು ಮನುಷ್ಯಾಕಾರದಲ್ಲಿ ರಚಿಸಿ ಒಂದೇ ಚಕ್ರವಿರುವ ರಥವನ್ನು ಅವನಿಗೆ ಸಲ್ಲಿಸಲಾಗಿದೆ. ರಥವನ್ನು ಎಳೆಯಲು ನಾಲ್ಕು ಅಥವಾ ಏಳು ಕುದುರೆಗಳು ಒಮ್ಮೊಮ್ಮೆ ಏಳು ತಲೆಗಳ ಒಂದೇ ಕುದುರೆಯನ್ನು ಅಳವಡಿಸಿರುವುದು ಗೋಚರಿಸುತ್ತದೆ. ಅರುಣ ರಥದ ಸಾರಥಿ ಆತನಿಗೆ ಸೊಂಟದಿಂದ ಕೆಳಗೆ ಶರೀರ ಇರುವುದಿಲ್ಲ. ಸೂರ್ಯನ ಶಿಲ್ಪಕ್ಕೆ ಎರಡು ಕೈಗಳಿದ್ದುಅವುಗಳನ್ನು ಭುಜಗಳ ಸಮಾನದಲ್ಲಿ ಮೇಲಕೆತ್ತಿ, ಪದ್ಮದಳಗಳನ್ನು ಹಿಡಿದಿರುವಂತೆ ತೋರಿಸುವುದು ವಾಡಿಕೆ. ಶಿರದ ಹಿಂಭಾಗದಲ್ಲಿ ಪ್ರಭಾ ಮಂಡಲವಿರುತ್ತದೆ.

ಕಾಮಲಾಪುರದ ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಕ್ರಿ.ಶ.೧೧-೧೨ನೇ ಶತಮಾನದ ಸೂರ್ಯ ಶಿಲ್ಪವು ಕೆಂಪು ಮಿಶ್ರಿತ ಮೀಲಿ ಬಣ್ಣದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಸಮಪಾದದಲ್ಲಿ ನಿಂತಿರುವ ಸೂರ್ಯನು ದ್ವಿಭುಜನಾಗಿದ್ದ ಎರಡು ಕೈಗಳಲ್ಲಿ ಕಮಲ ಹೂಗಳಿವೆ. ಕಿರೀಟ ಮಕುಟ, ಕರ್ಣ ಕುಂಡಲ, ಕಂಠಹಾರ, ಮಣಿಸರ, ಯಜ್ಞೋಪವೀತ ಕೈಗಳಲ್ಲಿ ತೋಳುಬಂಧಿ, ಕಂಕಣ ಉದರ ಬಂಧ ಕಟೀಸೂತ್ರ ಕಾಲ್ಕಡಗ ವಸ್ತ್ರಾಭರಣಗಳಿಂದ ಅಲಂಕೃತವಾಗಿರುವುದು ಈ ಶಿಲ್ಪದ ವೈಶಿಷ್ಟ್ಯತೆಯಾಗಿದೆ. ಕಮಲಾಪುರದ ಭಾರತೀಯ ಪ್ರಾಚ್ಯಾ ವಸ್ತು ಸಂಗ್ರಹಾಲಯದಲ್ಲಿ ಸೂರ್ಯ ಶಿಲ್ಪವಿದೆ. ಇದರ ಕಾಲ ಕ್ರಿ.ಶ.೧೪-೧೫ನೇ ಶತಮಾನ. ಈ ಶಿಲ್ಪವು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಸಮಭಂಗಿಯಲ್ಲಿದ್ದು ಎರಡೂ ಕೈಗಳಲ್ಲಿ ಕಮಲದ ಹೂಗಳಿವೆ. ಮಕುಟ ಕಿರೀಟ, ಕಂಠಹಾರ, ನಡುಪಟ್ಟಿ ಯಾಜ್ಞೋಪವೀತ ಕರ್ಣಕುಂಡಲಗಳನ್ನು ಧರಿಸಿದ್ದು ಸೂರ್ಯ ಧೋತ್ರ ಮತ್ತು ಕಾಲಲ್ಲಿರುಳಿಗಳನ್ನು ಧರಿಸಿದ್ದಾನೆ. ಪ್ರಭಾವಳಿಯ ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ಅದೇ ಪೀಠದ ಮೇಲೆ ಬಲಭಾಗದಲ್ಲಿ ಉಷಾ ದೇವಿ ಹಾಗೂ

ಎಡಭಾಗದಲ್ಲಿ ಪ್ರತ್ಯುಷಾದೇವಿ ತ್ರಿಭಂಗಿಯಲ್ಲಿ ನಿಂತಿದ್ದಾರೆ. ಇವರಿಬ್ಬರೂ ಕಿರೀಟ ಮಕುಟ ಕುಂಡಲ, ಕಂಠಹಾರ, ಮತ್ತು ಇನ್ನಿತರ ಆಭರಣಗಳನ್ನು ಧರಿಸಿದ್ದಾರೆ.[೬೭]

ಹೀಗೆ ಕಾಮಲಾಪುರ ಪ್ರದೇಶದಲ್ಲಿರುವ ಶೈವ ವೈಷ್ಣವ ಜೈನ ಧರ್ಮಗಳ ಮತ್ತು ಗಾಣ ಪತ್ಯ, ಸೌರ, ಶಾಕ್ತ ಪಂಥಗಳ ಮೂರ್ತಿಶಿಲ್ಪಕಲೆಯಲ್ಲಿ ವೈವಿಧ್ಯತೆ ಇದೆ. ಇವು ಸಮಕಾಲೀನ ಶಿಲ್ಪಗಳ ಮೇಲೆ ಬೆಳಕು ಚೆಲ್ಲಿವೆ. ಇವು ಆಗಿನ ಆಚಾರ–ವಿಚಾರಗಳು, ನಂಬಿಕೆ–ಸಂಪ್ರದಾಯಗಳು, ಪ್ರತಿಮಾ ಲಕ್ಷಣಗಳು, ಧರ್ಮದ ಅಭಿವೃದ್ಧಿ ಮತ್ತು ವಿಸ್ತರಣೆ ಮೊದಲಾದ ಸಂಗತಿಗಳ ಅಭ್ಯಾಸಕ್ಕೆ ಬಹು ಪ್ರಮುಖ ಆಕರಗಳಾಗಿವೆ. ಒಟ್ಟಿನಲ್ಲಿ ಇವು ಈ ಪ್ರದೇಶದ ಸಮಕಾಲೀನ ಸಾಂಸ್ಕೃತಿಕ ಇತಿಹಾಸದ ವಿವಿಧ ಮುಖಗಳ ಪರಿಚಯಿಸಿ ಅಧ್ಯಯನಕ್ಕೆ ಅಪಾರವಾದ ಕೊಡುಗೆ ಸಲ್ಲಿಸಿರುವುದು ಈ ಮೇಲಿನ ಶಿಲ್ಪಗಳಿಂದ ಧೃಡಪಡುತ್ತದೆ.

**ಸ್ಮಾರಕ ಶಿಲ್ಪಗಳು:** ಕನ್ನಡಿಗರು ಪ್ರಾಚೀನ ಕಾಲದಿಂದಲೂ ಸದ್ಗತಿ ಸಂಪಾದಿಸಲು ತಮ್ಮ ಗುರಿಯಾಗಿಟ್ಟುಕೊಂಡು ಬದುಕುತ್ತಿದ್ದಾರೆ. ಇದಕ್ಕೆ ಆತ್ಮಾನುಸಂಧಾನ, ಆದರ್ಶನುಸಂಧಾನ, ಮತ್ತು ಮೌಲ್ಯಾನುಸಂಧಾನಗಳನ್ನು ಸಾಧನಗಳನ್ನಾಗಿ ಪರಿಭಾವಿಸಿಕೊಂಡಿದ್ದಾರೆ. ಆತ್ಮಾನುಸಂಧಾನದಿಂದ ಸಮಾಧಿಮರಣ, ಮೌಲ್ಯಾನುಸಂಧಾನದಿಂದ ಬಲಿದಾನ ಮರಣ ಮತ್ತು ವೀರ ಮರಣಗಳು ಸದ್ಗತಿಯ ಹೆಸರಿನಲ್ಲಿ ಒಂದು ಸಮಾಜವು ಕಾಲದೇಶ ಬದ್ಧವಾಗಿ ರೂಪಿಸಿಕೊಂಡ ಆಚರಣೆಗಳಾಗಿವೆ.[೬೮] ಇಂತಹ ಅಸಮಾನ್ಯ ಮರಣಗಳು ಪ್ರಾಚೀನಕಾಲದಿಂದಲೂ ಪ್ರಚಲಿತದಲ್ಲಿವೆ. ಇದರ ನೆನಪಿಗಾಗಿ ವೀರ ಗುಡಿಗಳನ್ನು ನಿರ್ಮಿಸುವ, ವೀರಲಿಂಗಗಳನ್ನು ಪ್ರತಿಷ್ಠಾಪಿಸುವ ವೀರಗಲ್ಲು ಮಹಾಸತಿಗಲ್ಲು ಮತ್ತು ನಿಷೇಧಿಗಲ್ಲುಗಳನ್ನು ನಿಲ್ಲಿಸುವ ಪರಂಪರೆಯಾಗಿ ಬೆಳೆದು ಬಂದಿದೆ. ವೀರನ ತ್ಯಾಗ, ಬಲಿದಾನ, ಮಹಾಸತಿಯರ ಆದರ್ಶಗುಣ ಸನ್ಯಾಸಿಗಳ, ಪಾರಮಾರ್ಥಿಕ ಗುಣಗಳನ್ನು ತಿಳಿಸುವ ಮಾಧ್ಯಮಕ್ಕೆ ಸ್ಮಾರಕ ಶಿಲ್ಪಗಳೆಂದು ಹೆಸರು.[೬೯] ಈ ಸ್ಮಾರಕ ಶಿಲೆಗಳು ಮೂಲತಃ ದಾಖಲೆ, ವ್ಯಕ್ತಿ ಗುಣಗಾನಗಳಾಗಿದ್ದರೂ ಇವು ನಾಡಿನ ಪ್ರಾಚೀನ ಮೌಲ್ಯಗಳನ್ನು ಪ್ರಚುರಪಡಿಸುವ ಫಲಕಗಳಾಗಿವೆ. ಯುದ್ಧವೀರ, ದಾನವೀರ, ಮಹಾಸತಿ ಮೊದಲಾದವರ ಆದರ್ಶಗಳನ್ನು ಸೂಚಿಸುವ ಸೂಚನಾ ಫಲಕಗಳಾಗಿವೆ. ಇವು ಸಮಾಜದ ಮೌಲ್ಯಗಳನ್ನು ಜೀವಂತವಾಗಿ ಸೆರೆಹಿಡಿಯುವಲ್ಲಿ ಸ್ಮಾರಕ ಶಿಲೆಗಳು ಮಹತ್ವದ ಪಾತ್ರವಹಿಸಿವೆ.[೭೦] ಸ್ಮಾರಕ ಶಾಸನ ಶಿಲ್ಪಗಳಲ್ಲಿ ಕೆಲವೊಮ್ಮೆ ಬರವಣಿಗೆ ಇರುತ್ತದೆ. ಶಿಲ್ಪ ತನ್ನ ಭಾವನೆಗಳ ಚಿತ್ರಗಳ ಮೂಲಕ ವ್ಯಕ್ತಪಡಿಸುತ್ತವೆ. ಈಗಾಗಿ ಶಾಸನ ಶಿಲ್ಪಗಳಲ್ಲಿ ಶಾಸನ ರೂಪ ತಾಳಿತು. ಅನಕ್ಷರಸ್ಥರಿಗೂ ವಿಷಯ ತಿಳಿಯಲಿ ಎಂಬುದು ಇದರ ಮೂಲ ಉದ್ದೇಶ.[೭೧] ಇಂತಹ ಸ್ಮಾರಕಗಳು ಅಂದಿನ ಮಾನವನ ಜೀವನ ವಿಧಾನ, ಜೀವನದ ಬಗ್ಗೆ ಅವನಿಗೆ ಇರುವ ಧೋರಣೆ ಅಂದಿನ ಅವನ ನಾಗರೀಕತೆ ಮತ್ತು ಆತನ ಸುಸಂಸ್ಕೃತಿಯನ್ನು ತಿಳಿಸಿ ಕೊಡುವ ಪುರಾವೆಗಳಾಗಿವೆ. ಇವು ಸತ್ತ ವ್ಯಕ್ತಿಯ ನೆನಪನ್ನುಂಟು ಮಾಡುವ ಸಂಕೇತಗಳು ಹಾಗೂ ಆವ್ಯಕ್ತಿಯ ನೆನಪನ್ನು ಅಭಿವ್ಯಕ್ತಗೊಳಿಸುವ ಸಾಧನಗಳು.[೭೨] ಈ ಸ್ಮಾರಕ ಶಿಲ್ಪಗಳ ವೈವಿಧ್ಯಮಯವಾಗಿವೆ. ಅವುಗಳೆಂದರೆ ವೀರಗಲ್ಲುಗಳು ಮಹಾಸತಿಗಲ್ಲುಗಳು ಮತ್ತು ನಿಷೆಧಿಗಲ್ಲುಗಳು ಆಯಾಧರ್ಮದ ದೇವಾಲಯದ ಮತ್ತು ಆಚಾರ್ಯರಿಗೆ ದಾನಮಾಡಿದ ಭೂಮಿಯ ಮೇರೆಗಳನ್ನು ತಿಳಿಸುವ ಸೂಚಕಗಳೇ ಲಿಂಗಮುದ್ರೆಗಲ್ಲು, ವಾಮನ ಮುದ್ರೆಗಲ್ಲು, ಮುಕ್ಕೊಡೆಗಲ್ಲುಗಳು. ಪ್ರಸ್ತುತ ಕಾಮಲಾಪುರದ ಪ್ರದೇಶದ ಸುತ್ತಮುತ್ತಲಿನ ಪರಿಸರದಲ್ಲಿ ಲಭ್ಯವಾದ ಈ ಎಲ್ಲಾ ಸ್ಮಾರಕ ಶಿಲ್ಪಗಳ ಲಕ್ಷಣಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ವೀರಗಲ್ಲುಗಳು ವೀರತನದಿಂದ ಜೀವಿಸುತ್ತಿದ್ದ ಕನ್ನಡಿಗರು ವಿವಿಧ ಸನ್ನಿವೇಶಗಳಲ್ಲಿ ಹೋರಾಡಿ ವೀರಮರಣವನ್ನಪ್ಪಿದ ಹಾಗೆ ತನ್ನ ಕೋರಿಕೆಯನ್ನು ಈಡೇರಿಸಲು ಪ್ರಾಣವನ್ನು ಅರ್ಪಿಸಿದ ಪರೋಕ್ಷ ವಿನಯಾರ್ಥವಾಗಿ ವೀರಗಲ್ಲುಗಳನ್ನು ನಿಲ್ಲಿಸುವ ಪರಂಪರೆ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ.[೨೩] ಮಾನವನ ಸಮಾಧಿ ಮಾಡಿ ಮಡಿದವನ ಸ್ಮರಣೆ ಬರುವಂತೆ ಸಂಕೇತಕ್ಕಾಗಿ ನಿಲ್ಲಿಸಿದ ಶಿಲೆಯೇ ವೀರಗಲ್ಲು ಶಾಸನಗಳು.[೨೪] ಸಂಕೇತಕ್ಕಾಗಿ ನಿಲ್ಲಿಸಿದ ಈ ಶಿಲೆಗಳು ವೀರನ ಜೀವನ ವಿಧಾನವನ್ನು ಮತ್ತು ಆತನ ಧೋರಣೆಯನ್ನು ಅಂದಿನ ನಾಗರಿಕತೆಯನ್ನು ಮತ್ತು ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ನಿಧನಹೊಂದಿದ ವ್ಯಕ್ತಿಯ ನೆನಪನ್ನು ಅಭಿವ್ಯಕ್ತಗೊಳಿಸುವ ಸಾಧನ ವೇದಗಳಲ್ಲಿ ಶತಪಥ ಬ್ರಾಹ್ಮಣಕದಲ್ಲಿ ಇಂತಹ ಸ್ಮಾರಕಗಳ ಉಲ್ಲೇಖವಿದೆ.[೨೫] ಕರ್ನಾಟಕದಲ್ಲಿ ಇಂತಹ ವೀರಗಲ್ಲುಗಳು ಸಾಕಷ್ಟಿವೆ. ವೀರ ಎಂಬ ಪದದ ಮೂಲತಃ ಸಂಸ್ಕೃತ ಭಾಷೆ. ಈಪದ ವ್ಯಕ್ತಿಯ ಪರಾಕ್ರಮ ಶಕ್ತಿ ಮೊದಲಾದ ದೈಹಿಕ ಗುಣಗಳನ್ನು ಸೂಚಿಸುವ ಗುಣವಾಚಕ.[೨೬] ಇದರ ತದ್ಭವ ರೂಪವೇ ವೀರ. ಆಂಗ್ಲ ಭಾಷೆಯಲ್ಲಿ 'Hero'ಎಂಬಪದ ಕನ್ನಡಲ್ಲಿ 'ವೀರ ವೀರತ್ವ' ಎಂಬುದನ್ನು ಪ್ರತಿಬಿಂಬಿಸುವ ಪದ. ಗಲ್ಲು ಎಂದರೆ ಕಲ್ಲು ಎಂದರ್ಥ. ಇಂಗ್ಲಿಷ್ ಭಾಷೆಯಲ್ಲಿ ಇದಕ್ಕೆ ಸಂಪಾದಿಯಾಗಿ Stone ಎಂಬಪದ ಬಳಸುತ್ತಾರೆ. ಒಟ್ಟಿನಲ್ಲಿ Hero Stone ಎಂದರೆ ಕನ್ನಡದ ಸಂವಾದಿಪದ "ವೀರಗಲ್ಲು".

ರಣರಂಗಣದಲ್ಲಿ ಜಯಶಾಲಿಯಾಗಿ ಬಂದ ಯೋಧನಿಗೆ ಯೋಗ್ಯವಾದ ಮರ್ಯಾದೆ ನೀಡಿ ವೀರ ಮರಣ ಪಡೆದ ವ್ಯಕ್ತಿಯ ಹೆಸರಿನಲ್ಲಿ ನೀಡುವ ಕೊಡುಗೆ ದಾನ ದತ್ತಿ ಬಿಟ್ಟುಕೊಟ್ಟು ಅವರ ಸ್ಮರಣಾರ್ಥ ಕವಾಗಿ ನಿಲ್ಲಿಸಿದ ಸ್ಮಾರಕ ಶಿಲೆಗಳೇ ವೀರಗಲ್ಲುಗಳು.

ಇವುಗಳ ಉದ್ದೇಶ ವೀರರ ಪರಾಕ್ರಮವನ್ನು ಎತ್ತಿ ಹಿಡಿಯುವಂತಹದ್ದು ಈ ವೀರಗಲ್ಲು ಶಿಲ್ಪಗಳು ಹೆಚ್ಚಿನ ದುಡ್ಡಿಗೆ ಮೂರು ನಾಲ್ಕು ಪಟ್ಟಿಕೆಗಳನ್ನು ಒಳಗೊಂಡಿರುತ್ತವೆ. ಮೇಲ್ಭಾಗದ ಹಂತ ಶಿವನ ಸಾನಿಧ್ಯ ಪಡೆದಂತಹ ಚಿತ್ರಣ, ಮಧ್ಯದ ಹಂತದಲ್ಲಿ ಅಪ್ಸರೆಯರು ವೀರನನ್ನು ಕೈಲಾಸಕ್ಕೆ ಕೊಂಡೊಯ್ಯುವಂತಹ ಚಿತ್ರ, ಕೊನೆಯ ಹಂತ ವೀರನು ಯುದ್ಧದಲ್ಲಿ ಹೋರಾಡುತ್ತಿರುವ ಚಿತ್ರಣ.[೨೭] ವೀರಗಲ್ಲುಗಳ ಶಿಲ್ಪಗಳಲ್ಲಿ ಹಲವಾರು ವೈವಿಧ್ಯತೆಗಳಿವೆ. ಪ್ರಸ್ತುತ ಕಾಮಲಾಪುರ ಪರಿಸರದಲ್ಲಿ ಹೆಚ್ಚಾಗಿ ತುರುಗೋಳ್ ಪ್ರಸಂಗಕ್ಕೆ ಸಂಬಂಧಿಸಿದವು. ವ್ಯಕ್ತಿ ವ್ಯಕ್ತಿಯೊಡನೆ ಹೋರಾಡುತ್ತಿರುವ ವೀರಗಲ್ಲು, ವ್ಯಕ್ತಿ ಪ್ರಾಣಿಗಳ ಮಧ್ಯದಲ್ಲಿ ಜರುಗಿದ ಹೋರಾಟದ ವೀರಗಲ್ಲುಗಳು ದೊರಕಿವೆ. ಪ್ರಸ್ತುತ ಕಮಲಾಪುರದಲ್ಲಿ ದೊರೆತ ಇಂತಹ ಶಿಲ್ಪಮೂರ್ತಿಗಳ ವೈಶಿಷ್ಟ್ಯತೆಯನ್ನು ಇಲ್ಲಿ ಹೇಳಲಾಗಿದೆ.

**ತುರುಗೋಳ್ ವೀರಗಲ್ಲು:** ಪಂಪನ 'ಕೊಡುವ ಬಾಡಕ್ಕಂ ಜೀವಧನಂಗಳಂ ಬಿಡುವೆಣ್ಗಂ ಲೆಕ್ಕವಿಲ್ಲ' ಎಂಬ ಬೇಳಿಕೆಯ 'ಜೀವಧನ' ಎಂಬ ಪದವು ಆಕಳನ್ನು ಕುರಿತಾಗಿ ಸೂಚಿಸುತ್ತದೆ.[೨೮] ಆಕಳನ್ನು ಸೆರೆಹಿಡಿಯುವುದು ಲೌಕಿಕವಾಗಿ ದೊಡ್ಡ ಹಾನಿ ಎನಿಸಿದರೆ ಸೆರೆಹಿಡಿದುದ್ದನ್ನು, ನೋಡುತ್ತ ನಿಲ್ಲುವುದು, ಪಾರಲೌಕಿಕವಾಗಿ ದೊಡ್ಡ ಪಾಪವೆನಿಸಿತ್ತು. ಆದ್ದರಿಂದ ಗೋವುಗಳನ್ನು ಸೆರೆಹಿಡಿದವರ ವಿರುದ್ಧ ಸಮರಸಾರಿ ಅವುಗಳನ್ನು ಬಿಡಿಸಿ ತರುವುದು ಆಗಿನ ಕಾಲದ ವೀರರ ಪ್ರಮುಖ ಕರ್ತವ್ಯವಾಗಿತ್ತು.[೨೯] ಅಜ್ಞಾನ ವಾಸದಲ್ಲಿದ್ದ ಪಾಂಡವರನ್ನು ಪತ್ತೆಹಚ್ಚುವುದಕ್ಕಾಗಿ ಕೌರವನು ವಿರಾಟರಾಜನ, ಗೋವುಗಳನ್ನು ಸೆರೆಹಿಡಿದ ಪ್ರಸಂಗದಿಂದ, ತುರುಗೋಳ್ ಯುದ್ಧದ ಪ್ರಾಚೀನತೆಯನ್ನು ಅಂದಿನಿಂದಲೇ ಗುರುತಿಸಬಹುದು.

ಪಂಪನ ವಿಕ್ರಮಾರ್ಜುನ ವಿಜಯ ಕುಮಾರ ವ್ಯಾಸನ 'ಗದುಗಿನ ಭಾರತ' ಕರ್ಣಪಾರ್ಯನ 'ನೇಮಿನಾಥ ಪುರಾಣ' ಬಂಧುವರ್ಮನ 'ಹರಿವಂಶಾಭ್ಯದಯ' ಕೃತಿಗಳಲ್ಲಿ ಉಲ್ಲೇಖಿತ ಗೋಗ್ರಹ ಪ್ರಸಂಗಗಳು ಮತ್ತು ಸಮಕಾಲೀನ ವೀರಗಲ್ಲುಗಳ ಮೇಲಿನ ಶಿಲ್ಪಗಳ ನಿರೂಪಣೆಗಳು ತುರುಗೋಳ್ ಯುದ್ಧದ ವಿವರಣೆಯನ್ನು ನೀಡುತ್ತವೆ.[೮೦]

ತುರುಗೋಳ್ ವೀರಗಲ್ಲುಗಳು ಸಾಮಾನ್ಯವಾಗಿ ಎರಡರಿಂದ ಆರು ಶಿಲ್ಪಪಟ್ಟಿಕೆಗಳನ್ನು ಒಳಗೊಂಡಿರುತ್ತವೆ. ಒಂದನೇ ಪಟ್ಟಿಕೆಯಲ್ಲಿ ವೀರ ಮತ್ತು ವೈರಿಗಳ ಮಧ್ಯದಲ್ಲಿ ಪರಸ್ಪರ ಜರುಗುತ್ತಿರುವ ಯುದ್ಧದ ನಿರೂಪಣೆ ಮತ್ತು ವೀರನ ಹಿಂಭಾಗದಲ್ಲಿ ಪ್ರಾಣಿ (ಆಕಳು, ಎತ್ತು) ಗಳ ಚಿತ್ರಣ ಇರುತ್ತದೆ. ಎರಡನೇ ಪಟ್ಟಿಕೆಯಲ್ಲಿ ವೈರಿಗಳೊಂದಿಗೆ ಹೋರಾಡುತ್ತ ವೀರ ಮರಣವನ್ನಪ್ಪಿದ ವೀರನನ್ನು ದೇವಲೋಕದ ಅಪ್ಸರೆಯರು ಪುಷ್ಪಕ ವಿಮಾನದಲ್ಲಿ ಇಲ್ಲವೇ ಕಂಠಾಶ್ಲೇಷ ಭಂಗಿಯಲ್ಲಿ ಹೊತ್ತುಕೊಂಡು ದೇವಲೊಕಕ್ಕೆ ಕರೆದೊಯ್ಯುತ್ತಿರುವ ಚಿತ್ರಣ ಇರುತ್ತದೆ. ಮೂರನೆಯ ಪಟ್ಟಿಕೆ ದೇವಲೋಕದ ಪ್ರತಿರೂಪದಲ್ಲಿರುತ್ತದೆ. ಅದರಲ್ಲಿ ವೀರನು ವೀರ ಮರಣವನ್ನಪ್ಪಿ ಶೈವನಾಗಿದ್ದರೆ ಶಿವಲಿಂಗ ವೈಷ್ಣವನಾಗಿದ್ದರೆ ವಿಷ್ಣು ಜೈನನಾಗಿದ್ದರೆ ತೀರ್ಥಂಕರನ ಸನ್ನಿಧಿಯಲ್ಲಿ ಅಂಜಲಿ ಮುದ್ರಾಸಕ್ತನಾಗಿ ಆಸೀನನಾಗಿದ್ದು, ಪಾರ್ಶ್ವಗಳಲ್ಲಿ ಪೂಜೆಯಲ್ಲಿ ನಿರತನಾದ ಯತಿ, ಕೆಲವು ಸಲ ಆಯಾ ಧರ್ಮದ ಸಂಕೇತ ಮತ್ತು ಸೂರ್ಯ ಚಂದ್ರರ ಉಬ್ಬುಶಿಲ್ಪಗಳ ನಿರೂಪಣೆಗಳಿರುತ್ತವೆ.

ಹೆಸರು :– ತುರುಗೋಳ್ (ವೀರಗಲ್ಲು)

ಸ್ಥಳ :– ಕನ್ನಡ ವಿಶ್ವ ವಿದ್ಯಾಲಯದ ವಸ್ತು ಸಂಗ್ರಹಾಲಯದ ಒಳ ಆವರಣದಲ್ಲಿ ನಿಲ್ಲಿಸಿರುವ ವೀರಗಲ್ಲು

ಕಾಲ :– ೧೭ನೇ ಶತಮಾನ

ರಾಜವಂಶ :– ವಿಜಯನಗರೋತ್ತರ

ವಸ್ತು :– ಹಸಿರು ಮಿಶ್ರಿತ ಕಪ್ಪುಶಿಲೆ

ಸಿಂಹಮುಖದ ಅಲಂಕೃತ ಕೆತ್ತನೆಯ ಪ್ರಭಾವಳಿಯಲ್ಲಿ ಪದ್ಮ ಪೀಠದ ವೀರ ಸ್ಥಾನಕ ಭಂಗಿಯಲ್ಲಿದ್ದು ಹಿಂಬದಿಗೆ ತುರುಬು ಕಟ್ಟಲಾಗಿದೆ. ವರ್ತುಲಾಕಾರದ ಓಲೆ, ಕೈಗಳಿಗೆ ತೋಳುಬಂಧಿ ಕಡಗ ಧರಿಸಿದ್ದಾನೆ. ಅಂಜಲಿ ಮುದ್ರೆಯಲ್ಲಿದ್ದು ಸೊಂಟಪಟ್ಟಿಯನ್ನು ಧರಿಸಿ ಅದರ ಬಲಕ್ಕೆ ಕಿರುಗತ್ತಿ ಸಿಕ್ಕಿಸಿಕೊಂಡು ವೀರಗಾಸೆ ತೊಟ್ಟಿದ್ದು, ಬಲಗೈಯ ಮೊಣಕೈಯ ಮಧ್ಯೆ ಖಡ್ಗ ಇದೆ. ಕೊರಳಲ್ಲಿ ಪದಕಹಾರ, ಮಣಿಸರ ಧರಿಸಿದ್ದಾನೆ. ವೀರನ ಬಲಗಡೆ ಹಸುವಿನ ಉಬ್ಬು ಶಿಲ್ಪವಿದೆ. ಎಡಗಡೆ ತ್ರಿಶೂಲ, ಆಯುಧ ವಿದೆ. ಶತ್ರುಗಳಿಂದ ದನಗಳನ್ನು ರಕ್ಷಿಸಿಕೊಳ್ಳಲು ಪ್ರಾಣವನ್ನು ಲೆಕ್ಕಿಸದೆ ಹೋರಾಡಿದ ವೀರನು ಸಾವನ್ನಪ್ಪಿದರೆ ಇಂತಹ ವೀರರ ಸ್ಮರಣಾರ್ಥವಾಗಿ ನಿಲ್ಲಿಸಿದ ಗಲ್ಲುಗಳೇ ತುರುಗೋಳ್ ವೀರಗಲ್ಲುಗಳಾಗಿವೆ.

ಹೆಸರು :– ತುರುಗೋಳ್ (ವೀರಗಲ್ಲು)

ಸ್ಥಳ :– ಕನ್ನಡ ವಿಶ್ವವೀದ್ಯಾಲಯದ ಹೊರ ಆವರಣ

ಕಾಲ :– ೧೭ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರನ ಹಿಂಬದಿಗೆ ಸಿಂಹಮುಖ ಕೀರ್ತಿಮುಖದ ಪ್ರಭಾವಳಿ ಇದೆ. ವೀರ ಎಡಗಡೆ ಮುಡಿಕಟ್ಟಿದ್ದಾನೆ. ವರ್ತುಲಾಕಾರದ ಓಲೆಗಳನ್ನು ಧರಿಸಿದ್ದು ಕೈಗಳಿಗೆ ತೋಳುಬಂಧಿ ಕಡಗಗಳನ್ನು ಧರಿಸಿದ್ದಾನೆ. ಬಲಗೈಯಲ್ಲಿ ಕತ್ತಿ ಹಿಡಿದಿದ್ದಾನೆ. ಎಡಗೈಸೊಂಟದ ಮೇಲಿದೆ. ವೀರಗಾಸೆಯನ್ನು ಧರಿಸಿದ್ದು ವೀರನ ಸಮೀಪದ ಅಕ್ಕ ಪಕ್ಕಗಳಲ್ಲಿ ದನಗಳ ಶಿಲ್ಪಗಳಿವೆ. ದನಗಳನ್ನು ರಕ್ಷಿಸುವುದಕ್ಕೆ ವೀರನು ಹೋರಾಡಿರುವುದರ ನೆನಪಿಗಾಗಿ ನಿಲ್ಲಿಸಿದ ಶಿಲ್ಪ ಇದಾಗಿದೆ. ವೀರನ ವೀರತ್ವವನ್ನು ಈ ಶಿಲ್ಪದಲ್ಲಿ ಬಿಂಬಿಸಲಾಗಿದೆ. ವ್ಯಕ್ತಿ-ವ್ಯಕ್ತಿಗಳ ಮಧ್ಯದಲ್ಲಿ ನಡೆದ ಹೋರಾಟದ ವೀರಗಲ್ಲು. ಪ್ರಾಚೀನ ಕಾಲದಲ್ಲಿ ರಾಜ ಮನೆತನಗಳ ನಡುವೆ ಪರಸ್ಪರ ನಡೆಯಿತ್ತಿದ್ದ ಕಾಳಗಗಳಲ್ಲಿ ವೀರಮರಣವನ್ನಪ್ಪುತ್ತಿದ್ದ ವೀರರ ನೆನಪಿಗಾಗಿ ವೀರಗಲ್ಲುಗಳನ್ನು ನಿಲ್ಲಿಸಲಾಗುತ್ತಿತ್ತು. ಅಂತಹ ಕೆಲವು ವೀರಗಲ್ಲುಗಳ ಪಟ್ಟಿಕೆಗಳ ಮೇಲೆ ಅರಸು ಮನೆತನದ ಅರಸನಕಾಲ ಹೆಸರು, ಊರು ಪರೋಕ್ಷ ವಿನಯಾರ್ಥವಾಗಿ ವೀರಗಲ್ಲನ್ನು ನಿಲ್ಲಿಸಿದ ನಿರ್ಮಾತೃರು ದಾನ-ದತ್ತಿಗಳು ಮೊದಲಾದ ವಿವರಗಳನ್ನೊಳಗೊಂಡ ವಿಷಯ ಇರುತ್ತವೆ. ಈ ಪ್ರಕಾರದ ವೀರಗಲ್ಲುಗಳಲ್ಲಿ ೨/೪/೫/೬/೭ ಶಿಲ್ಪ ಪಟ್ಟಿಕೆಗಳಿರುತ್ತವೆ. ಪ್ರಸ್ತುತ ಕಾಮಲಾಪುರದಲ್ಲಿ ದೊರಕಿರುವ ವೀರಗಲ್ಲುಗಳಲ್ಲಿ ಇಲ್ಲಿ ೨ ರಿಂದ ೩ ಪಟ್ಟಿಕೆಯ ವೀರಗಲ್ಲುಗಳು ದೊರಕಿವೆ.

ಹೆಸರು :- ವೀರಗಲ್ಲು

ಸ್ಥಳ :- ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣ

ಕಾಲ :- ಕ್ರಿ.ಶ. ೧೧-೧೨ನೇ ಶತಮಾನ

ವಸ್ತು :- ನೀಲಿ ಮಿಶ್ರಿತ ಕಪ್ಪುಶಿಲೆ

ಕೆಳಭಾಗದ ಪಟ್ಟಿಕೆಯಲ್ಲಿ ವೀರನು ವೀರಗಾಸೆ ತೊಟ್ಟು, ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಅಗಲವಾದ ಗುರಾಣಿ ಹಿಡಿದುಕೊಂಡು ಶತ್ರುಗಳ ಜೊತೆಗೆ ಹೋರಾಡುತ್ತಿರುವ ವೀರ ಮತ್ತು ಸೈನಿಕರ ಚಿತ್ರ. ಮಧ್ಯ ಪಟ್ಟಿಕೆಯಲ್ಲಿ ಅಪ್ಸರೆಯರು ಅಲಂಕೃತ ಮಂಟಪದ ಪಲ್ಲಕ್ಕಿ ಒಳಗೆ ಕುಳ್ಳರಿಸಿ ಛತ್ರಿ, ಧ್ವಜ, ಚಾಮರಗಳ ಸೇವೆಗಳ ಮೂಲಕ ಕರೆದುಕೊಂಡು ಹೋಗುತ್ತಿರುವುದು. ಮೂರನೇ ಮೇಲ್ಭಾಗದ ಪಟ್ಟಿಕೆಯಲ್ಲಿ ಶಿವನಲ್ಲಿ ಧ್ಯಾನಾಸಕ್ತನಾಗಿರುವುದು ಬಿಂಬಿತವಾಗಿದೆ. ಇಲ್ಲಿ ನಂದಿ ಮತ್ತು ಭಕ್ತನ ಶಿಲ್ಪಗಳು ಕೆತ್ತಲ್ಪಟ್ಟಿವೆ. ಇಲ್ಲಿನ ಧ್ವಜ ದಿಗ್ವಿಜಯದ ಸಂಕೇತವೂ ಹೌದು. ಸೈನ್ಯದ ಪ್ರತಿಷ್ಠೆಯ ರಾಜ ಲಾಂಛನದ ಸಂಕೇತವೂ ಇದಾಗಿದೆ.

ಹೆಸರು :- ವೀರಗಲ್ಲು

ಸ್ಥಳ :- ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣ

ಕಾಲ :- ಕ್ರಿ.ಶ ೧೧-೧೨ನೇ ಶತಮಾನ,

ವಸ್ತು :- ಬೆಣಚುಕಲ್ಲು

ಕೆಳಭಾಗ ಪಟ್ಟಿಕೆಯ ಅರ್ಧ ಭಾಗ ನಾಶವಾಗಿದೆ. ವೀರ ಬಲಗೈಯಲ್ಲಿ ಕತ್ತಿಯನ್ನು (ಖಡ್ಗ) ಹಿಡಿದು ನಿಂತಿರುವ ದೃಶ್ಯ, ಎರಡನೇಯ ಪಟ್ಟಿಕೆಯಲ್ಲಿ ವೀರನನ್ನು ದೇವಲೋಕದ ಅಪ್ಸರೆಯರು ಕರೆದುಕೊಂಡು ಹೋಗುತ್ತಿರುವ ದೃಶ್ಯ. ಮೂರನೇ ಪಟ್ಟಿಕೆಯಲ್ಲಿ ವೀರ ಮಂಟಪದೊಳಗೆ ಪದ್ಮಾಸನದಲ್ಲಿ ಕುಳಿತುಕೊಂಡಿರುವುದು ಯಕ್ಷ-ಯಕ್ಷಿಣಿಯರು ಚಾಮರ ಹಿಡಿದು ನಿಂತಿದ್ದಾರೆ.

ಹೆಸರು :- ವೀರಗಲ್ಲು

ಸ್ಥಳ :- ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣ

ಕಾಲ :- ಕ್ರಿ.ಶ ೧೧-೧೨ನೇ ಶತಮಾನ

ವಸ್ತು :- ನೀಲಿ ಮಿಶ್ರಿತ ಕೆಂಪು ಶಿಲೆ

ವೀರ ಮತ್ತು ಸೈನಿಕರು ಕುದರೆಯ ಮೇಲೆ ಈಟಿ, ಭರ್ಚಿ, ಬಾಣಗಳನ್ನು ಎಸೆಯುತ್ತಿರುವ ದೃಶ್ಯವಿದೆ. ಎರಡನೆಯ ಪಟ್ಟಿಕೆಯಲ್ಲಿ ವೀರನನ್ನು ಅಪ್ಸರೆಯರು ಮತ್ತು ಯಕ್ಷ-ಯಕ್ಷಿಣಿಯರು ದೇವ ಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೂರನೇ ಪಟ್ಟಿಕೆಯಲ್ಲಿ ವೀರನು ದೇವರ ಸಾನಿಧ್ಯದಲ್ಲಿ ಭಕ್ತಿ ನಿರತನಾಗಿದ್ದಾನೆ.

ಹೆಸರು :- ವೀರಗಲ್ಲು

ಸ್ಥಳ :- ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ

ಕಾಲ :- ಕ್ರಿ.ಶ ೧೧-೧೨ನೇ ಶತಮಾನ

ವಸ್ತು :- ನೀಲಿ ಮಿಶ್ರಿತ ಕೆಂಪು ಶಿಲೆ

ಕೆಳಭಾಗದ ಪಟ್ಟಿಕೆಯಲ್ಲಿ ವೀರನು ಮತ್ತು ಸೈನಿಕರು ಯುದ್ಧದಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ವೈರಿಗಳೊಡನೆ ಹೋರಾಡುತ್ತಿರುವುದು. ಮಧ್ಯ ಭಾಗದ ಪಟ್ಟಿಕೆಯಲ್ಲಿ ವೀರನನ್ನು ಅಪ್ಸರೆಯರು ಮಂಟಪದ ಒಳಗಡೆ ಕೂಡಿಸಿ ಧ್ಯಾನಾಸಕ್ತನಾಗುರುವನು. ಮೂರನೇ ಪಟ್ಟಿಕೆಯಲ್ಲಿ ವೀರನು ಶಿವನ ಸಾನಿಧ್ಯ ಸೇರಿ ಭಕ್ತಿಯಿಂದ ವಂದಿಸುತ್ತಿರುವ ದೃಶ್ಯ ನೈಜಕತೆಗೆ ಪ್ರಾಧಾನ್ಯತೆ ನೀಡಲಾಗಿದೆ.

ಹೆಸರು :- ವೀರಗಲ್ಲು

ಸ್ಥಳ :- ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ

ಕಾಲ :- ಕ್ರಿ.ಶ ೧೧-೧೨ನೇ ಶತಮಾನ

ವಸ್ತು :- ಬೆಣಚುಕಲ್ಲು

ವೀರಗಲ್ಲಿನ ಕೆಳಭಾಗದ ಪಟ್ಟಿಕೆಯಲ್ಲಿ ವೀರ ಗುರಾಣಿ ಕತ್ತಿ ಸೈನಿಕರು ಬಿಲ್ಲು-ಬಾಣಗಳನ್ನು ಹಿಡಿದು ವೀರಗಾಸೆ ಧರಿಸಿ, ಶತ್ರುಸೈನ್ಯದ ಜೊತೆಗೆ ಯುದ್ಧದಲ್ಲಿ ನಿರತನಾಗಿರುವ ದೃಶ್ಯವಿದೆ. ಮಧ್ಯ ಪಟ್ಟಿಕೆಯಲ್ಲಿ ವೀರನು ಮಂಟಪದೊಳಗೆ ಅಂಜಲಿ ಮುದ್ರೆಯಲ್ಲಿ ಪದ್ಮಾಸನದಲ್ಲಿ ಕುಳಿತುಕೊಂಡಿರುವುದು ವೀರನ ಎರಡೂಬದಿಯಲ್ಲಿ ಅಂಗರಕ್ಷಕರು ಶ್ವೇತಛತ್ರಿ ಹಿಡಿದು ನಿಂತಿರುವುದು ಮೇಲ್ಭಾಗದ ಪಟ್ಟಿಕೆಯಲ್ಲಿ ಅಂಜಲಿಮುದ್ರೆಯಲ್ಲಿ ವೀರ ಶಿವಲಿಂಗಕ್ಕೆ ವಂದಿಸುತ್ತಿರುವ ಶೈಲಿ ಈ ಶಿಲ್ಪದ ವೈಶಿಷ್ಟ್ಯತೆಯಾಗಿದೆ.

ಹೆಸರು :- ವೀರಗಲ್ಲು

ಸ್ಥಳ :- ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ

ಕಾಲ :- ಕ್ರಿ.ಶ ೧೧-೧೨ನೇ ಶತಮಾನ

ವಸ್ತು :- ಬೆಣಚುಕಲ್ಲು

ಕೆಳಭಾಗದ ಪಟ್ಟಿಕೆಯಲ್ಲಿ, ಬಿಲ್ಲು-ಬಾಣಗಳನ್ನು ಹಿಡಿದು ವೀರ ಮತ್ತು ಸೈನಿಕರು ಶತ್ರುಗಳೊಡನೆ ಹೋರಾಡುತ್ತಿರುವುದು ಮಧ್ಯಭಾಗದಲ್ಲಿ ಮಂಟಪದ ಒಳಗೆ ಅಂಜಲಿಮುದ್ರೆಯಲ್ಲಿ ಪದ್ಮಾಸನದಲ್ಲಿ ಆಸೀನನಾಗಿದ್ದಾನೆ. ಮಂಟಪದ ಎರಡೂ ಬದಿಯಲ್ಲೂ ಯಕ್ಷಿಯರು ಚಾಮರಗಳನ್ನು ಹಿಡಿದು ನಿಂತಿದ್ದಾರೆ. ಮೇಲ್ಭಾಗದ ಪಟ್ಟಿಕೆಯಲ್ಲಿ ಗುರು ಶಿವಲಿಂಗವನ್ನು ಪೂಜೆಮಾಡುತ್ತಿರುವುದು ವೀರ ಪದ್ಮಾಸನದಲ್ಲಿ ಆಸೀನನಾಗಿರುವ ದೃಶ್ಯ ಹಾಗೂ ನಂದಿಯ ಉಬ್ಬು ಶಿಲ್ಪವನ್ನು ಇಲ್ಲಿ ಚಿತ್ರಿಸಲಾಗಿದೆ.

ಹೆಸರು :- ವೀರಗಲ್ಲು

ಸ್ಥಳ :- ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣದಲ್ಲಿ

ಕಾಲ :- ಕ್ರಿ.ಶ ೧೧-೧೨ನೇ ಶತಮಾನ

ವಸ್ತು :- ನೀಲಿ ಮಿಶ್ರಿತ ಕಪ್ಪು ಶಿಲೆ

ಕೆಳಭಾಗದ ಪಟ್ಟಿಕೆಯಲ್ಲಿ ವೀರರು ಈಟಿ ಹಿಡಿದು ಕುದರೆಯ ಸವಾರರಾಗಿ ಸೈನಿಕರ ಜೊತೆಗೆ ಹೋರಾಡುತ್ತಿದ್ದಾನೆ. ಎರಡನೆಯ ಪಟ್ಟಿಕೆಯಲ್ಲಿ ವೀರರು ಕುದರೆಯ ಮೂಗುದಾಣ ಹಿಡಿದು, ಈಟಿ, ಭರ್ಚಿಗಳಿಂದ ಶತ್ರುಗಳ ವಿರುದ್ಧ ಹೋರಾಡುತ್ತಿದ್ದಾನೆ. ಮೂರನೇ ಪಟ್ಟಿಕೆಯಲ್ಲಿ ಯಕ್ಷ ಯಕ್ಷಿಣಿಯರು ಅಲಂಕೃತ ಮಂಟಪದಲ್ಲಿ ವೀರನನ್ನು ಕರೆದೊಯ್ಯುತ್ತಿರುವುದು. ನಾಲ್ಕನೇ ಪಟ್ಟಿಕೆಯಲ್ಲಿ ವೀರನು ಲಿಂಗದ ಸಾನಿಧ್ಯದಲ್ಲಿ ಕುಳಿತು ಅಂಜಲಿಮುದ್ರೆಯಲ್ಲಿರುವುದು ಚಿತ್ರಣವಿದೆ. ಅಕ್ಕ ಪಕ್ಕ ಶೈವ ದ್ವಾರಪಾಲಕರು ಸ್ಥಾನಕ ಭಂಗಿಯಲ್ಲಿದ್ದಾರೆ.

ಹೆಸರು :- ವೀರಗಲ್ಲು

ಸ್ಥಳ :- ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದ ಹಿಂಬದಿಯಲ್ಲಿ

ಕಾಲ :- ೧೪ನೇ ಶತಮಾನ

ವಸ್ತು :- ಬೆಣಚುಕಲ್ಲು

ವೀರ ಮುಡಿಕಟ್ಟಿದ್ದಾನೆ. ಕೈಗಳಿಗೆ ಕಡಗ ಧರಿಸಿದ್ದಾನೆ. ಬಲಗೈಯಲ್ಲಿ ಬಾಕು ಹಿಡಿದು ಎಡಗೈಯನ್ನು ಮೇಲಕ್ಕೆ (ಅಭಯಹಸ್ತ)ದಿಂದ ಎತ್ತಿದ್ದಾನೆ. ತಲೆಗೆ ಪೇಟ ಸುತ್ತಿಕೊಂಡು ಸ್ಥಾನಕ ಭಂಗಿಯಲ್ಲಿದ್ದಾನೆ.

ಹೆಸರು :- ವೀರಗಲ್ಲು[೮೧]

ಸ್ಥಳ :- ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯ ಕಾಮಲಾಪುರ

ಕಾಲ :- ೧೪-೧೫ನೇ ಶತಮಾನ

ವಸ್ತು :- ಬೆಣಚುಕಲ್ಲು

ವೀರ ಸ್ಥಾನಿಕಭಂಗಿಯಲ್ಲಿದ್ದಾನೆ. ಎಡಗಡೆ ಮುಡಿ ಕಟ್ಟಿಕೊಂಡಿದ್ದಾನೆ. ಕಿವಿಯಲ್ಲಿ ರುದ್ರಾಕ್ಷಿ ಮಣಿಯ ಓಲೆ ಧರಿಸಿದ್ದಾನೆ. ವೀರನ ಮೇಲ್ಭಾಗದ ಅಕ್ಕ-ಪಕ್ಕ ಶಿವಲಿಂಗ ಸೂರ್ಯ ಮತ್ತು ಚಂದ್ರನ ಉಬ್ಬು ಶಿಲ್ಪಗಳಿವೆ. ಕೊರಳಲ್ಲಿ ರುದ್ರಾಕ್ಷಿಮಣಿ ಸರ, ವೈಜಯಂತಿಹಾರ, ಶಿವಲಿಂಗ, ಹಾರ, ಕೈಗಳಿಗೆ ತೋಳುಬಂಧಿ ಮತ್ತು ಕಡಗ ಧರಿಸಿದ್ದಾನೆ. ಬಲಗೈಯಲ್ಲಿ ಕತ್ತಿಯನ್ನು ಎತ್ತಿಹಿಡಿದು ಎದೆಯ

ಮುಂಭಾಗದವರೆಗೂ ಚಾಚಿದ್ದಾನೆ. ಬಲಗೈ ಎತ್ತಿ ಅಭಯಹಸ್ತ ಹಿಡಿದಿದ್ದಾನೆ. ವೀರಗಾಸೆ ಧರಿಸಿ ಬಲಗಡೆ ಸೊಂಟಕ್ಕೆ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಎಡಗಾಲನ್ನು ಮುಂದಕ್ಕೆ ಇಟ್ಟು, ನಡೆಯುತ್ತಿರುವ ಚಿತ್ರ ಚಿತ್ರಿಸಲಾಗಿದೆ. ಬಲಗಾಲಲ್ಲಿ  ಗೆಜ್ಜೆ, ಕಡಗ ಧರಿಸಿದ್ದಾನೆ. ವೀರನ ವೀರತ್ವ ಕೋರೆಮೀಸೆಯ ಚಿತ್ರಣ ಮೇಲೆ ಬಿಂಬಿತವಾಗಿದೆ.

ಹೆಸರು :– ವೀರಗಲ್ಲು[೮೨]

ಸ್ಥಳ :– ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯ, ಕಾಮಲಾಪುರ

ಕಾಲ :– ಕ್ರಿ.ಶ ೧೪–೧೫ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರಗಲ್ಲು ಕಾಳಗದ ಬಗ್ಗೆ ವಿವರಣೆ ನೀಡುತ್ತದೆ. ಕೆಳಭಾಗದ ಹಂತದಲ್ಲಿ ಇಬ್ಬರು ವೀರರು ಬಲಗಡೆ ಮುಡಿಕಟ್ಟಿ ಕಿವಿಯಲ್ಲಿ ಲೋಲಕ ಧರಿಸಿ, ಕೈಗಳಿಗೆ ತೋಳುಬಂಧಿ, ಕಡಗ ಧರಿಸಿ ಕೊರಳಲ್ಲಿ ಕಂಠೀಹಾರ, ರುದ್ರಾಕ್ಷಿಮಾಲೆ ಇದೆ. ವೀರಗಾಸೆ ತೊಟ್ಟು ಎಡಗೈಗಳನ್ನು ಮೇಲಕ್ಕೆ ಎತ್ತಿ ಬಲಗೈಯಿಂದ ಕಠಾರಿ ಹಿಡಿದು ಹೋರಾಡುತ್ತಿರುವ ದೃಶ್ಯ ತುಂಬಾ ನೈಜವಾಗಿ ಮೂಡಿದೆ. ವೀರನ ಪಾದಗಳಲ್ಲಿ ಕಡಗ  ಪಾದಸರ ಇದೆ.

ಹೆಸರು :– ವೀರಗಲ್ಲು[೮೩]

ಸ್ಥಳ :– ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯ, ಕಾಮಲಾಪುರ

ಕಾಲ :– ಕ್ರಿ.ಶ ೧೪–೧೫ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರಸ್ಥಾನಕ ಭಂಗಿಯಲ್ಲಿದ್ದಾನೆ. ಎಡಗಡೆ ವೀರ ಮುಡಿ ಕಟ್ಟಿದ್ದಾನೆ, ಕಿವಿಯಲ್ಲಿ ವರ್ತುಲಾಕಾರದ ಕುಂಡಲಗಳನ್ನು ಧರಿಸಿದ್ದಾನೆ. ಕೊರಳಲ್ಲಿ ವೈಜಯಂತಿ ಹಾರ ಧರಿಸಿ ಜನಿವಾರವನ್ನು ಧರಿಸಿದ್ದಾನೆ. ಕೈಯಲ್ಲಿ ಕಡಗ ಧರಿಸಿದ್ದಾನೆ. ಎಡಗೈಯಲ್ಲಿ ಬಿಲ್ಲು ಹಿಡಿದು ಬಾಣವನ್ನು ಕಿವಿಯ (ಕರ್ಣದ)ವರೆಗೂ ಎಳೆದು ಬಿರುಸಿನಿಂದ ಬಾಣ ಬಿಡುತ್ತಿರುವ ದೃಶ್ಯವಿದೆ. ನೆರಿಗೆಯುಳ್ಳ ಧೋತ್ರದ ಕೆತ್ತನೆ ಇದೆ. ಬಲಗಡೆ ಕಿರುಗತ್ತಿ ಸಿಕ್ಕಿಸಿಕೊಂಡಿದ್ದಾನೆ. ವೀರನನ್ನು ಒಂದು ಚೌಕಟ್ಟಿನಲ್ಲಿ ಚಿತ್ರಿಸಿ ವೀರನದೇಹದ ಹಿಂದೆ ಸುತ್ತಲೂ ಬಾಣಗಳು ಬಲೆಯಂತೆ ಹಬ್ಬಿಕೊಂಡಿವೆ. ಇದು ವೀರವೇಶದಿಂದ ಹೋರಾಡಿದುದನ್ನು ಹಾಗೂ ಶತ್ರುಗಳನ್ನು ನಾಶ ಮಾಡಿದ್ದರ ಸಂಕೇತವಾಗಿ ಇಲ್ಲಿ ಚಿತ್ರಿಸಲಾಗಿದೆ.

ಹೆಸರು :– ವೀರಗಲ್ಲು

ಸ್ಥಳ :– ಕಾಮಲಾಪುರದ ಪ್ರಾಚ್ಯವಸ್ತು ಸಂಗ್ರಹಾಲಯದ ಹಿಂಬದಿಯಲ್ಲಿ

ಕಾಲ :– ಕ್ರಿ.ಶ ೧೫ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಬಿಲ್ಲುಗಾರನಾಗಿದ್ದು, ಸ್ಥಾನಿಕ ಭಂಗಿಯಲ್ಲಿದ್ದಾನೆ. ವೀರನು ಎಡಗಡೆ ಮುಡಿಕಟ್ಟಿದ್ದಾನೆ. ಎಡಗೈಯಲ್ಲಿ ಬಿಲ್ಲು ಬಲಗೈಯಲ್ಲಿ ಬಾಣಹಿಡಿದು ಎಡಗಾಲು ಮಡಿಚಿ ಬಲಗಾಲನ್ನು ಮುಂದಕ್ಕೆ ಮಡಚಿಕೊಂಡಿದ್ದಾನೆ. ಕೊರಳಲ್ಲಿ ಸರ, ಪದಕಸರ ಧರಿಸಿರುವುದು ಈ ಶಿಲ್ಪದ ಲಕ್ಷಣಗಳಾಗಿವೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ

ಕಾಲ :– ಕ್ರಿ.ಶ.೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಈ ಕೆಳಭಾಗದ ಪಟ್ಟಿಕೆಯಲ್ಲಿ ಕುದರೆಯ ಮೇಲೆ ಆಸೀನನಾದ ವೀರ ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಕುದರೆಯ ಲಗಾಮು ಹಿಡಿದಿದ್ದಾನೆ. ವೀರನ ಹಿಂದೆ ಲಾಂಛನ, ಧ್ವಜ ಹಿಡಿದು ಬರುತ್ತಿರುವ ಸೈನಿಕರ ಚಿತ್ರಣವಿದೆ. ಎರಡನೇ ಹಂತದಲ್ಲಿ ಅಪ್ಸರೆಯರು ಬಲಗೈಯನ್ನು ಎತ್ತಿ ಮಧ್ಯೆ ವೀರನನ್ನು ಹಿಡಿದು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವಂತೆ ಶಿಲ್ಪ ಮನಮುಟ್ಟುವಂತೆ ಚಿತ್ರಿಸಿದ್ದಾನೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣದ ಹಿಂಬದಿಯಲ್ಲಿ ಕಾಮಲಾಪುರ

ಕಾಲ :– ಕ್ರಿ.ಶ೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಈ ಶಿಲ್ಪ ವೀರನ ವೀರತ್ವದ ಬಗ್ಗೆ ಹಾಗೂ ಅವನ ಹೋರಾಟದ ದೃಶ್ಯವನ್ನು ಬಿಂಬಿಸುವಂತಿದೆ. ವೀರನು ಮುಡಿಯನ್ನು ಕಟ್ಟಿದ್ದಾನೆ. ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೊರಳಲ್ಲಿ ಸರ, ಕೈಗಳಿಗೆ ತೋಳುಬಂಧಿ, ಕಡಗ, ಧರಿಸಿದ್ದು ವೀರಗಾಸೆಯನ್ನು ಧರಿಸಿದ್ದು ಸೊಂಟದ ಬಲಕ್ಕೆ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಕಾಲುಗಳಲ್ಲಿ ಕಡಗ ಧರಿಸಿ, ಬಲಗೈಯಲ್ಲಿ ಬಾಕು ಹಿಡಿದು ಶತ್ರುಗಳ ಗುರಾಣೆಗೆ ತಿವಿಯುತ್ತಿರುವ ದೃಷ್ಯ ಈ ಶಿಲ್ಪದ ಲಕ್ಷಣಗಳಾಗಿವೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಪ್ರಾಚ್ಯ ವಸ್ತು ಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ೧೫:೧೬ನೇ ಶತಮಾನ

ವಸ್ತು :– ಬಿಳಿಕಣ ಶಿಲೆ

ವೀರ ಕುದರೆಯ ಮೇಲೆ ಆಸೀನನಾಗಿದ್ದು ವೈರಿಪಡೆಯ ರಾವುತನೊಂದಿಗೆ ಯುದ್ಧದಲ್ಲಿ ಹೋರಾಟ ನಿರತನಾಗಿದ್ದಾನೆ. ಅನೇಕ ಸೈನಿಕರು ರುಮಾಲು ಧರಿಸಿದ್ದು, ಕಿವಿಯಲ್ಲಿ ಲೋಲಕ ಧರಿಸಿ ಕೈಗೆ ತೋಳುಬಂದಿ, ಕಡಗ ಧರಿಸಿದ್ದಾನೆ. ಸೊಂಟದ ಬಲಕ್ಕೆ ಕಿರುಗತ್ತಿ ಇದೆ. ಬಲಗೈಯಲ್ಲಿ ಕತ್ತಿಯನ್ನು

ಹಿಡಿದು ಎಡಗೈಯಲ್ಲಿ ಫಲ ಹಿಡಿದಿದ್ದಾನೆ ಕಾಲ್ಗಡಗ ಧರಿಸಿದ್ದು ಎರಡು ಪಾದಗಳ ಮಧ್ಯ ಶತ್ರುವನ್ನು ಸದೆ ಬಡಿಯುತ್ತಿರುವದನ್ನು ಈ ಶಿಲ್ಪದಲ್ಲಿ ಚಿತ್ರಿಸಲಾಗಿದೆ.

ಹೆಸರು :– ವೀರಗಲ್ಲು (ಕುದುರೆ ಕಾಳಗ)

ಸಿಕ್ಕಸ್ಥಳ :– ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ

ಕಾಲ :– ಕ್ರಿ.ಶ೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಕುದುರೆಯ ಮೇಲೆ ಕುಳಿತು, ವೈರಿ ಪಡಿಯ ರಾವುತನೊಂದಿಗೆ ಯುದ್ಧದಲ್ಲಿ ನಿರತನಾಗಿದ್ದಾನೆ. ಆತನ ಹಿಂದೆ ಅನೇಕ ಸೈನಿಕರು ಯುದ್ಧದಲ್ಲಿ ಮಡಿದವರ ದೃಶ್ಯವಿದೆ. ಆತನ ಹಿಂದೆ ಅನೇಕ ಸೈನಿಕರು ಯುದ್ಧದಲ್ಲಿ ಮಡಿದವರ ಚಿತ್ರಣವಿದೆ. ಬಿಲ್ಲು–ಬಾಣ–ಖಡ್ಗಗಳನ್ನು ಹಿಡಿದು ವೀರಾವೇಶದಿಂದ ಹೋರಾಟ ಮಾಡುವ ಚಿತ್ರಣ ಈ ಶಿಲ್ಪದ ವಿಶೇಷತೆಯಾಗಿದೆ.

ಹೆಸರು :– ವೀರಗಲ್ಲು (ಕುದುರೆ ಕಾಳಗ)

ಸಿಕ್ಕಸ್ಥಳ :– ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ

ಕಾಲ :– ಕ್ರಿ.ಶ೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಮುಡಿಕಟ್ಟಿದ್ದಾನೆ ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೊರಳಲ್ಲಿ ಪದಕ ಹಾರ ಕೈಗಳಿಗೆ ತೋಳುಬಂಧಿ ಕಡಗ ಧರಿಸಿದ್ದಾನೆ. ಬಲಗೈಯಲ್ಲಿ ಈಟಿ, ಎಡಲೈಯಲ್ಲಿ ಕುದುರೆಯ ಮುಗುದಾಣ ಹಿಡಿದು ಭರ್ಜಿಯಿಂದ ಕುದುರೆಗೆ ತಿವಿಯುತ್ತಿರುವ ದೃಶ್ಯವಿದೆ. ವೀರಗಾಸೆ ಧರಿಸಿ ಕಾಲಲ್ಲಿ ಕಡಗ ಧರಿಸಿದ್ದಾನೆ. ವೀರನ ಬಲಗಡೆ ಅಂಜಲಿ ಮುದ್ರೆಯಲ್ಲಿ ಸ್ಥಾನಿಕ ಭಂಗಿಯಲ್ಲಿರುವ ಕಿರೀಟಧಾರಿ ವ್ಯಕ್ತಿಯ ಚಿತ್ರಣವಿದೆ.

ಹೆಸರು :– ವೀರಗಲ್ಲು

ಸಿಕ್ಕ ಸ್ಥಳ :– ಕನ್ನಡ ವಿಶ್ವವಿದ್ಯಾಲಯದ ಪ್ರಾಚ್ಯವಸ್ತು ಸಂಗ್ರಹಾಲಯದ ಹೊರ ಆವರಣ

ಕಾಲ :– ಕ್ರಿ.ಶ ೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಕೆಳಭಾಗದ ಪಟ್ಟಿಕೆಯಲ್ಲಿ ವೀರರು ಗುರಾಣಿ ಬಿಲ್ಲು ಬಾಣಗಳಿಂದ ಹೋರಾಡುತ್ತಿರುವುದು ಅಪ್ಸರೆಯರು ವೀರನ ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಿರುವುದು ಎರಡನೇ ಪಟ್ಟಿಕೆಯಲ್ಲಿ ಮೂರನೇ ಪಟ್ಟಿಕೆಯಲ್ಲಿ ವೀರ ಶಿವನ ಸಾನಿಧ್ಯವನ್ನು ಪಡೆದುಕೊಂಡಿರುವುದು ಈ ಶಿಲ್ಪದ ವೈಶಿಷ್ಯತೆಯಾಗಿದೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ

ಕಾಲ :– ಕ್ರಿಶ ೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಅಶ್ವಾರೋಹಿಯಾಗಿದ್ದಾನೆ. ಕಿರೀಟಧಾರಿ ವರ್ತುಲಾಕಾರದ ಓಲೆ, ಬಲಗೈಯಲ್ಲಿ ಕತ್ತಿಹಿಡಿದು ಎಡಗೈಯಿಂದ ಕುದರೆಯಲಗಾಮ ಹಿಡಿದಿದ್ದಾನೆ. ವೀರನ ಹಿಂದೆ ರಾಣಿಯೂ ಆಸೀನಳಾಗಿದ್ದಾಳೆ. ಬಲಕ್ಕೆ ಈ ರಾಜನ ಶತ್ರುವಿನ ಆನೆ ಸೊಂಡಿಲೆತ್ತಿಕೊಂಡು ಓಡುವ ಚಿತ್ರಣವಿದೆ. ರಾಜ (ವೀರ) ತನ್ನ ಬಲಗೈಯಲ್ಲಿರುವ ಆಯುಧವಾದ ಕತ್ತಿಯಿಂದ ಆನೆಗೆ ತಿವಿಯುತ್ತಿರುವುದು ಮತ್ತೊಂದು ಕೈಯಿಂದ ಆನೆಯ ಎಡಕೋರೆ ಹಲ್ಲನ್ನು ಹಿಡಿದುಕೊಂಡಿರುವುದು ಇದು ವೀರನ ಧೈರ್ಯ, ವೀರತ್ವವನ್ನು ಎತ್ತಿ ತೋರಿಸುತ್ತದೆ. ರಾಣಿ ಸರ್ವಾಲಂಕೃತಳಾಗಿ ಅಂಜಲಿ ಮುದ್ರೆಯಲ್ಲಿದ್ದಾಳೆ. ವೀರನ ಬಲಗಡೆ ಸೂರ್ಯ, ಎಡಗಡೆ ಚಂದ್ರ, ಮಧ್ಯೆ ಶಿವಲಿಂಗದ ಉಬ್ಬು ಚಿತ್ರವಿದೆ. ಈ ಸಂಕೇತಗಳನ್ನು ಗಮನಿಸಿದಾಗ ಈ ವೀರಶಿಲ್ಪ ಶೈವ ಧರ್ಮಕ್ಕೆ ಸಂಬಂಧಿಸಿದೆಂದು ತಿಳಿದುಬರುತ್ತದೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಕನ್ನಡ ವಿಶ್ವವಿದ್ಯಾಲಯದ ಹೊರ ಆವರಣ

ಕಾಲ :– ಕ್ರಿ.ಶ೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಬಗಡೆ ಮುಡಿ ಕಟ್ಟಿದ್ದಾನೆ. ಕೊರಳಲ್ಲಿ ಮಣಿಸರ ವೈಜಯಂತಿ ಹಾರ ಧರಿಸಿದ್ದಾನೆ. ಕೈಗಳಿಗೆ ತೋಳು ಬಂಧಿ ಕಡಗಧರಿಸಿದ್ದಾನೆ. ಬಲಗೈ ಬಾಣ, ಎಡಗೈ ಬಿಲ್ಲು ಹಿಡಿದು ವೀರಾವೇಶದಲ್ಲಿ ಸ್ಥಾನಿಕ ಭಂಗಿಯಲ್ಲಿ ನಿಂತಿದ್ದಾನೆ. ಬಲಸೊಂಟಕ್ಕೆ ಕಿರುಕತ್ತಿ ಸಿಕ್ಕಿಸಿ, ವೀರಗಾಸೆ ತೊಟ್ಟು ಪಾದಗಳಲ್ಲಿ ಕಡಗ ಧರಿಸಿದ್ದಾನೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಭಾರತೀಯ ಪ್ರಾಚ್ಯ ಪುರಾತತ್ವ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ

ಕಾಲ :– ಕ್ರಿ.ಶ. ೧೬ನೇ ಶತಮಾನ

ವಸ್ತು :– ಬಿಳಿಕಣ ಶಿಲೆ

ವೀರ ಕುದುರೆಯ ಮೇಲೆ ಆಸೀನನಾಗಿದ್ದು ವೈರಿ ಪಡೆಯು ರಾವುತನೊಂದಿಗೆ ಯುದ್ಧದಲ್ಲಿ ಹೋರಾಟ ನಿರತನಾಗಿದ್ದಾನೆ. ಅನೇಕ ಸೈನಿಕರು, ವೀರ ರುಮಾಲು ಧರಿಸಿದ್ದು ಕಿವಿಯಲ್ಲಿ ಲೋಲಕ ಧರಿಸಿ, ಕೈಗೆ ತೋಳುಬಂಧಿ ಕಡಗಧರಿಸಿ, ವೀರಗಾಸೆ ತೊಟ್ಟು, ಸೊಂಟದ ಬಲಕ್ಕೆ ಕಿರುಗತ್ತಿ ಇಟ್ಟಿದ್ದಾನೆ.

ಬಲಗೈಯಲ್ಲಿ ಕಿರುಗತ್ತಿ ಎತ್ತಿ ಹಿಡಿದು ಎಡಗೈಯಲ್ಲಿ ಫಲಹಿಡಿದಿದ್ದಾನೆ. ಕಾಲಲ್ಲಿ ಕಡಗ ಧರಿಸಿದ್ದು ಎರಡು ಪಾದಗಳ ಮಧ್ಯೆ ಶತ್ರುವನ್ನು ಸದೆಬಡಿಯುತ್ತಿರುವುದು ಈ ಶಿಲ್ಪದಲ್ಲಿ ಚಿತ್ರಿಸಲಾಗಿದೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹಿಂಬದಿಯ ಆವರಣದಲ್ಲಿ

ಕಾಲ :– ಕ್ರಿ.ಶ. ೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಕೆಳಭಾಗದ ಪಟ್ಟಿಕೆಯು ದೊಡ್ಡದಾಗಿದೆ. ವೀರನು ಬಲಗಡೆ ಮುಡಿಕಟ್ಟಿದ್ದಾನೆ. ಕಿವಿಯಲ್ಲಿ ವರ್ತುಲಾಕಾರದ ಓಲೆಗಳನ್ನು ಧರಿಸಿದ್ದಾನೆ. ಕೊರಳಲ್ಲಿ ಮಣಿಸರ ಧರಿಸಿದ್ದಾನೆ. ಬಲಗೈಯಲ್ಲಿ ಖಡ್ಗ ಹಿಡಿದಿದ್ದಾನೆ. ಎಡಗೈ ಮೇಲಕ್ಕೆ ಎತ್ತಿದ್ದಾನೆ. ಕೈಗಳಿಗೆ ತೋಳುಬಂಧಿ, ಕಡಗ ಧರಿಸಿ, ವೀರಗಾಸೆ ಧರಿಸಿದ್ದಾನೆ. ಪಾದಗಳಲ್ಲಿ ಪಾದಸರಧರಿಸಿ ವೀರನು ವೈರಿಯನ್ನು ಕಾಲಿನಿಂದ ತುಳಿಯುತ್ತಿರುವ ದೃಶ್ಯ ಈ ಶಿಲ್ಪದಲ್ಲಿ ತೋರಿಸಲಾಗಿದೆ. ಎರಡನೇ ಪಟ್ಟಿಕೆಯಲ್ಲಿ ವೀರನನ್ನು ಅಪ್ಸರೆಯರು ಹೆಗಲ ಮೇಲೆ ಕೈ ಹಾಕಿಕೊಂಡು ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಿರುವ ದೃಶ್ಯವಿದೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ

ಕಾಲ :– ಕ್ರಿ.ಶ. ೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರನ ಕಿವಿಯಲ್ಲಿ ವರ್ತುಲಾಕಾರದ ಓಲೆಗಳಿವೆ. ಕೊರಳಲ್ಲಿ ಮಣಿಸರ, ಸರಪಣಿ ಧರಿಸಿದ್ದಾನೆ. ಕೈಗಳಿಗೆ ತೋಳುಬಂಧಿ, ಕಡಗ ಧರಿಸಿದ್ದಾನೆ. ವೀರಗಾಸೆಯನ್ನು ಧರಿಸಿರುವುದರ ಮೂಲಕ ಕಾಲಲ್ಲಿ ಕಡಗ ಧರಿಸಿ ಎರಡೂ ಕೈಗಳಿಂದ ಕತ್ತಿಯನ್ನು ಹಿಡಿಯುವ ಕೆತ್ತನೆ ತುಂಭಾ ಕಲಾತ್ಮಕವಾಗಿದೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ

ಕಾಲ :– ಕ್ರಿ.ಶ.೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಸ್ಥಾನಕ ಭಂಗಿಯಲ್ಲಿದ್ದಾನೆ. ವೀರನು ಮುಡಿಕಟ್ಟಿದ್ದಾನೆ. ಕೊರಳಲ್ಲಿ ಮಣಿಸರ, ಪದಕಸರ ಧರಿಸಿದ್ದಾನೆ. ಕೈಗಳಿಗೆ ತೋಳುಬಂಧ ಕಡಗ ಧರಿಸಿದ್ದು ಎಡಗೈಯಲ್ಲಿ ಬಿಲ್ಲುಹಿಡಿದು ಬಲಗೈಯಿಂದ ಸೊಂಟದಲ್ಲಿನ ಕಿರುಗತ್ತಿಯನ್ನು ಮೇಲಕ್ಕೆ ಎತ್ತಿರುವುದನ್ನು ನೈಜವಾಗಿ ಚಿತ್ರಿಸಲಾಗಿದೆ. ವೀರನ ಪಾದಗಳಲ್ಲಿ ಕಡಗ ಇದೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ

ರಾಜವಂಶ :– ವಿಜಯನಗರೋತ್ತರ

ಕಾಲ :– ಕ್ರಿ.ಶ. ೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಸ್ಥಾನಿಕ ಭಂಗಿಯಲ್ಲಿದ್ದು ವೀರ ಮುಡಿಕಟ್ಟಿದ್ದಾನೆ. ವರ್ತುಲಾಕಾರದ ಓಲೆ ಧರಿಸಿ, ಬಲಗೈ ಅಭಯಹಸ್ತ ಎಡಗೈ ಕಟ್ಯಾವಲಂಬಿತವಾಗಿದೆ.

ಹೆಸರು :– ಕುದುರೆ ಕಾಳಗ

ಸಿಕ್ಕಸ್ಥಳ :– ಕಾಮಲಾಪುರ ಪ್ರಾಚ್ಯವಸ್ತು ಸಂಗ್ರಹಾಲಯದ ಹಿಂಬದಿ

ರಾಜವಂಶ :– ವಿಜಯನಗರೋತ್ತರ

ಕಾಲ :– ಕ್ರಿ.ಶ.೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಕೆಳಭಾಗದ ಪಟ್ಟಿಕೆಯಲ್ಲಿ ವೀರನು ಮುಡಿಕಟ್ಟಿ ಖಡ್ಗ ಹಿಡಿದು, ಕುದುರೆ ಮೇಲೆ ಕುಳಿತು ಹೋರಾಡುತ್ತಿರುವುದು ಮಧ್ಯಭಾಗದ ಪಟ್ಟಿಕೆಯಲ್ಲಿ ವೀರ ಅಂಜಲಿ ಮುದ್ರೆಯಲ್ಲಿ ನಿಂತಿದ್ದು, ಅಕ್ಕ–ಪಕ್ಕ ಇಬ್ಬರು ಅಪ್ಸರೆಯರು ಬಲಗೈ ಎತ್ತಿ ಎಡಗೈಯನ್ನು ಇಳೆಬಿಟ್ಟು ನಿಂತಿರುವ ದೃಶ್ಯವಿದೆ. ಮೇಲ್ಭಾಗದಲ್ಲಿ ವೀರ ಸ್ವರ್ಗಸ್ಥನಾಗಿ ಶಿವಲಿಂಗವನ್ನು ಪೂಜಿಸುತ್ತಿರುವುದು ನಂದಿ, ಸೂರ್ಯ ಮತ್ತು ಚಂದ್ರರ ಉಬ್ಬುಶಿಲ್ಪಗಳಿವೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಒಳ ಆವರಣ

ಕಾಲ :– ಕ್ರಿ.ಶ.೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಬಲಗಡೆ ಮುಡಿಕಟ್ಟಿದ್ದಾನೆ. ವರ್ತುಲಾಕಾರದ ಓಲೆ, ಕೊರಳಲ್ಲಿ ಮಣಿಸರ ಧರಿಸಿದ್ದು ಕೈಗಳಿಗೆ ತೋಳುಬಂಧಿ, ಕಡಗ ಧರಿಸಿ ವೀರಗಾಸೆ ತೊಟ್ಟು ಕಾಲಲ್ಲಿ ಕಡಗ ಧರಿಸಿದ್ದಾನೆ. ವೀರನ ಎಡಭಾಗ ಖಡ್ಗವಿದ್ದು. ಅದನ್ನು ಹಿಡಿದುಕೊಳ್ಳುವ ದೃಶ್ಯವಿದೆ. ಇವು ಈ ಶಿಲ್ಪದ ಲಕ್ಷಣಗಳಾಗಿವೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರ ಭಾರತೀಯ ಪ್ರಾಚ್ಯವಸ್ತುಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ. ೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಇಬ್ಬರು ವೀರರು ಸ್ಥಾನಿಕ ಭಂಗಿಯಲ್ಲಿದ್ದು ಬಲಗಡೆ ವೀರ ಮುಡಿಕಟ್ಟಿ ಎಡಗೈ ಅಭಯಹಸ್ತ ಬಲಗೈ ಕೆಳಗೆ ಬಿಟ್ಟಿದ್ದಾನೆ. ಎಡಗಡೆ ವೀರ ಬಲಗೈ ಮೇಲಕ್ಕೆ ಎತ್ತಿ, ಎಡಗೈಯಲ್ಲಿ ಬಿಲ್ಲು ಹಿಡಿದಿದ್ದಾನೆ. ಇಬ್ಬರೂ ವೀರಗಾಸೆ ಧರಿಸಿ ಕಾಲ್ಗಡಗ ಧರಿಸಿದ್ದಾರೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಭಾರತೀಯ ಪುರಾತತ್ವ ಪ್ರಾಚ್ಯವಸ್ತುಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ. ೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಸ್ಥಾನಿಕ ಭಂಗಿಯಲ್ಲಿದ್ದು ಬಲಗೈಯಲ್ಲಿ ಖಡ್ಗ ಎಡಗೈಯಲ್ಲಿ ಗುರಾಣಿಹಿಡಿದಿದ್ದಾನೆ. ವೀರಗಾಸೆ ಧರಿಸಿ, ಕಾಲಲ್ಲಿ ಕಡಗ ತೊಟ್ಟು ಸೈನಿಕ ವಸ್ತ್ರಧರಿಸಿ, ಸೈನಿಕನ ಭಂಗಿಯಲ್ಲಿ ನಿಂತಿದ್ದಾನೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರ ಭಾರತೀಯ ಪ್ರಾಚ್ಯ ವಸ್ತು ಸಂಗ್ರಹಾಲಯದಲ್ಲಿ

ಕಾಲ :– ಕ್ರಿ.ಶ. ೧೬–೧೭ನೇ ಶತಮಾನ

ವಸ್ತು :– ಬಿಳಿಕಣಶಿಲೆ

ಇಬ್ಬರು ವೀರರು ಸ್ಥಾನಿಕ ಭಂಗಿಯಲ್ಲಿದ್ದು, ಮುಡಿ ಕಟ್ಟಿಕೊಂಡಿದ್ದಾರೆ. ಇವರಿಬ್ಬರ ಅಕ್ಕ–ಪಕ್ಕ ಸೂರ್ಯ–ಚಂದ್ರರ ಉಬ್ಬು ಶಿಲ್ಪಗಳಿವೆ. ಇಬ್ಬರು ಕೈಗಳಿಗೆ ತೋಳುಬಂಧಿ ಕಾಲಲ್ಲಿ ಕಡಗಧರಿಸಿದ್ದಾರೆ. ವೀರಗಾಸೆಯನ್ನು ಸಹ ಧರಿಸಿದ್ದಾರೆ. ಬಲಗಡೆಯಲ್ಲಿರುವ ವೀರನ ಬಲಗೈಯಲ್ಲಿ ಖಡ್ಗ ಎಡಗೈಯಲ್ಲಿ ಪುಷ್ಪದ ಮೊಗ್ಗು ಇದೆ. ಎಡಗಡೆ ವೀರ ಎರಡೂ ಕೈಗಳಿಂದ ಖಡ್ಗ ಹಿಡಿದಿದ್ದಾನೆ. ಇವು ಈ ಶಿಲ್ಪದ ವೈಶಿಷ್ಟ್ಯತೆಯಾಗಿದೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣ

ಕಾಲ :– ಕ್ರಿ.ಶ. ೧೬–೧೭ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಕುದರೆಯ ಮೇಲೆ ಕುಳಿತು ಸವಾರಿ ಮಾಡುತ್ತಿದ್ದಾನೆ. ಕಿವಿಯಲ್ಲಿ ವರ್ತುಲಾಕಾರ ಓಲೆ, ಕೊರಳಲ್ಲಿಹಾರ ಕೈಗಳಿಗೆ ತೋಳುಬಂಧಿ, ಕಡಗ ಧರಿಸಿದ್ದು ಬಲಗೈಯಲ್ಲಿ ಬಿಲ್ಲು ಹಿಡಿದು ಮೇಲಕ್ಕೆತ್ತಿ, ಶತ್ರುವಿಗೆ ಎಸೆಯುವಂತಿದೆ. ವೀರನು ವೀರಗಾಸೆ ಧರಿಸಿದ್ದಾನೆ. ಎಡಗಡೆ ಸೈನಿಕ ಕತ್ತಿ, ಛತ್ರಿ ಹಿಡಿದು ಸ್ಥಾನಿಕ ಭಂಗಿಯಲ್ಲಿದ್ದಾನೆ.

ಹೆಸರು :– ವೀರರು

ಸಿಕ್ಕಸ್ಥಳ :– ಪ್ರಾಚ್ಯ ವಸ್ತು ಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ.೧೬–೧೭ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಸ್ಥಾನಕ ಭಂಗಿಯಲ್ಲಿದ್ದು, ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೊರಳಲ್ಲಿ ಮುತ್ತಿನಸರ, ಮಣಿಸರ, ಪದಕಸರಗಳನ್ನು ಧರಿಸಿದ್ದಾನೆ. ಬಲಗೈಯಲ್ಲಿ ಕತ್ತಿಯನ್ನು ಎತ್ತಿ ಹಿಡಿದು ಎಡಗೈಯಲ್ಲಿ ಚಾಕು ಹಿಡಿದು ನೀಳವಾಗಿ ಕೆಳಗಡೆ ಬಿಟ್ಟಿದ್ದಾನೆ. ಕೈಗಳಿಗೆ ತೋಳುಬಂಧಿ, ಕಡಗ ಧರಿಸಿ ಕಾಲಲ್ಲಿ ಕಡಗ ಧರಿಸಿದೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಭಾರತೀಯ ಪ್ರಾಚ್ಯ ವಸ್ತು ಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ. ೧೭ನೇ ಶತಮಾನ

ವಸ್ತು :– ಬಿಳಿಕಣಶಿಲೆ

ಇಬ್ಬರು ವೀರರು ಸ್ಥಾನಕ ಭಂಗಿಯಲ್ಲಿದ್ದಾರೆ. ಮುಡಿ ಕಟ್ಟಿ ಕಿವಿಯಲ್ಲಿ ಲೋಲಕ ಧರಿಸಿ ಕೈಯಲ್ಲಿಕಡಗ, ತೋಳುಬಂಧಿ ಧರಿಸಿದ್ದಾರೆ. ಬಲಗಡೆ ವೀರ, ಬಲಗೈಯನ್ನು ಕೆಳಗೆ ಬಿಟ್ಟು ಎಡಗೈಯಲ್ಲಿ ಕತ್ತಿ ಹಿಡಿದಿದ್ದಾನೆ. ವೀರಗಾಸೆ ತೊಟ್ಟು ಕಾಲಲ್ಲಿ ಕಡಗ ಧರಿಸಿದ್ದಾನೆ. ಎಡಗಡೆ ವೀರ ಬಲಗೈಯಲ್ಲಿ ಪಂಚು ಹಿಡಿದು ಎಡಗೈ ಇಳಿಬಿಟ್ಟಿದ್ದಾನೆ. ಇಲ್ಲಿ ವೀರನ ಹೋರಾಟದ ದೃಶ್ಯವನ್ನು ಚಿತ್ರಿಸಲಾಗಿದೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಪ್ರಾಚ್ಯ ವಸ್ತು ಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ. ೧೭ನೇ ಶತಮಾನ

ವಸ್ತು :– ಕಪ್ಪು ಶಿಲೆ

ವೀರ ಕಿವಿಯಲ್ಲಿ ಕುಂಡಲಧರಿಸಿ, ಕೊರಳಲ್ಲಿ ಮಣಿಸರ, ಪದಕಸರ, ಸೊಂಟಪಟ್ಟಿ ಧರಿಸಿದ್ದಾನೆ. ಕೈಗಳಿಗೆ ತೋಳುಬಂಧಿ, ಕಡಗಧರಿಸಿ ಬಲಗೈಯಲ್ಲಿ ಉದ್ದವಾದ ಖಡ್ಗ ಎಡಗೈಯಲ್ಲಿ ಕಿರುಗತ್ತಿ ಹಿಡಿದು ಸೈನಿಕ ಟೋಪಿ ಧರಿಸಿದ ವಸ್ತ್ರದ ಕೆತ್ತನೆ ತುಂಬಾ ಕಲಾತ್ಮಕವಾಗಿದೆ.

ಹೆಸರು :– ವೀರಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಪ್ರಾಚ್ಯ ವಸ್ತು ಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ.೧೭ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ತಲೆಯ ಮೇಲೆ ಟೋಪಿಗೆ, ಎಡಗಡೆ ಕಿರುಕತ್ತಿ, ಬಲಗಡೆ ತುರುಬು ಬೆನ್ನಹಿಂದೆ ವಸ್ತ್ರದ ವಿನ್ಯಾಸ, ಕಿವಿಯಲ್ಲಿ ಕುಂಡಲಗಳು, ಕೊರಳಲ್ಲಿಸರ, ಪದಕಸರ, ಕೈಗಳಿಗೆ ತೋಳುಬಂಧಿ, ಕಡಗ ಬಲಗೈಯಲ್ಲಿ ಉದ್ದವಾದ ಖಡ್ಗ ಹಿಡಿದಿದ್ದಾನೆ. ಇವು ಈ ಶಿಲ್ಪದ ವೈಶಿಷ್ಟ್ಯತೆಯಾಗಿದೆ.

ಒಟ್ಟಾರೆ ದೊರೆತ ಸ್ಮಾರಕಗಳಲ್ಲಿ ಇಂತಹ ಹೆಚ್ಚಿನವು ವಿಜಯ ನಗರ, ವಿಜಯ ನಗರೋತ್ತರಕಾಲದ್ದಾಗಿದೆ. ಹೆಚ್ಚಿನ ಶಿಲ್ಪಗಳು ಕಾಮಲಾಪುರ ಮತ್ತು ಕಾಮಲಾಪುರ ಗ್ರಾಮದ ಪರಿಸರಕ್ಕೆ ಸಂಬಂದಿಸಿದವರಿಂದ, ಇಲ್ಲಿ ಇಲ್ಲಿನ ಸಂಸ್ಕೃತಿಯನ್ನು ಬಿಂಬಿಸುವ ಕುರುಹುಗಳಾಗಿವೆ.

**ಮಹಾ ಸತಿಗಲ್ಲುಗಳು:** ಕನ್ನಡ ನಾಡಿನಲ್ಲಿ ಬನವಾಸಿ ಕದಂಬ ಮನೆತನದ ರವಿವರ್ಮನ ರಾಣಿಯ ಸಹಗಮನವನ್ನು ಸೂಚಿಸುವ ಸೊರಬ ತಾಲೂಕಿನ ಕವಡಿಯ ಕ್ರಿ.ಶ. ೬ನೇಯ ಶತಮಾನದ ಶಾಸನವು ಮಹಾಸತಿ ಮರಣದ ಪ್ರಥಮ ದಾಖಲೆಯಾಗಿದೆ.[೮೪] ನಂತರ ಕ್ರಿ.ಶ. ೯ನೇಯ ಶತಮಾನದಿಂದ ವಿಜಯನಗರ ಮನೆತನದವರೆಗೆ ಅಲ್ಲಲ್ಲಿ ಸತಿ ಘಟನೆಗಳು ನಡೆದಿವೆ. ಆದರೆ ವಿಜಯನಗರ ಆಳ್ವಿಕೆಯ ಕಾಲದ ಅಧಿಕವಾಗಿ ಸತಿ ಘಟನೆಗಳು ಜರುಗಿದವು ಕ್ರಿ.ಶ.೧೬ನೇಯ ಶತಮಾನದಲ್ಲಿ ಅತೀ ವಿರಳವಾಗಿ ದೊರೆಯುತ್ತವೆ. ೧೮ನೇ ಶತಮಾನದ ನಂತರದ ಶಾಸನಗಳಲ್ಲಿ ಸತಿ ಘಟನೆಯ ಉಲ್ಲೇಖಗಳು ದೊರೆಯುವುದಿಲ್ಲ.[೮೫]

ಪತಿಯ ಮೇಲಿನ ಅತಿಯಾದ ಪ್ರೇಮ ಪತಿವ್ರತ್ಯಿರ ವೈಭವೀಕರಣ ವೈಯುಕ್ತಿಕ ಪ್ರತಿಷ್ಠೆಮಾನರಕ್ಷಣೆಯ ವ್ಯವಸ್ಥೆ, ವಿಧವೆಯ ನಿಕೃಷ್ಟ ಜೀವನ ಮೊದಲಾದ ವೈಯುಕ್ತಿಕ ಹಾಗೂ ಪತ್ನಿ ಅಗಲ ಬಾರದೆಂಬ ಪುರುಷನ ಸ್ವಾರ್ಥ, ಪತ್ನಿ ಇನ್ನೊಬ್ಬರ ವಶವಾಗಬಾರದೆಂಬ ಪುರುಷನ ಇಚ್ಛೆ, ಸಂಪತ್ತು ಪಡೆಯುವ ಸಂಚು, ಮನೆತನ ಹಾಗೂ ಸಮಾಜದ ಪ್ರತಿಷ್ಠೆ, ಸತ್ತವನೊಂದಿಗೆ ಪ್ರಿಯ ವಸ್ತುಗಳನ್ನು ಕಳಿಸುವ ನಂಬಿಕೆ, ಸತಿ–ಪತಿಗಳಿಬ್ಬರು ಸ್ವರ್ಗ ಪಡೆಯುವ ನಂಬಿಕೆ ಮೊದಲಾದ ಪರಲೋಕ ಕಲ್ಪನೆಗಳು, ಮುಲರ್ಜನ್ಮ ಕಲ್ಪನೆ ಮೊದಲಾದ ಅಲೌಕಿಕ ಕಾರಣಗಳ ಸತಿ ಪದ್ಧತಿಯ ಉಗಮಕ್ಕೂ ಅದರ ಬೆಳವಣಿಗೆಗೂ ಕಾರಣವಾಗಿದೆ.

ಮಹಾಸತಿಯ ತದ್ಭವ ರೂಪವೇ ಮಾಸ್ತಿ. ತನ್ನಗಂಡ ಮಡಿದಾಗ ಕೆಲವೊಮ್ಮೆ ತನ್ನ ಆತ್ಮೀಯರು ಮಡಿದಾಗ ತನ್ನ ಪ್ರಾಣವನ್ನು ಕಳೆದು ಕೊಳ್ಳುವ ಸ್ತ್ರೀಯರು ಮಹಾಸತಿ ಎಂದೆನಿಸುತ್ತಾರೆ. ಆದರೆ ಮಾಸ್ತಿಯಾದವರನೆಲ್ಲ ಮಹಾಸತಿಯರೆಂದು ಕರೆಯ ಬಹುದಾದಂತೆ ಮಹಾ ಸತಿಯರನ್ನೆಲ್ಲ ಮಾಸ್ತಿಯರೆಂದು ಕರೆಯುವಂತಿಲ್ಲ. ಸಮಕಾಲೀನ ಶಾಸನಗಳಲ್ಲಿ ಸತಿ, ಮಹಾಸತಿ, ಮಾಸ್ತಿ ಪರಗಮನ ಅನುಗಮನ ಸಹಮರಣ ಅನುಮರಣ ತೋಳುಗಮ್ ಕೊಡು, ಪುರುಷ ವ್ರತ ಸಹಾನು ಭೂತಿ ಹೊಂದು, ಅಗ್ನಿ ಪ್ರವೇಶ ಮಾಡು ಇತ್ಯಾದಿ ಹೆಸರುಗಳು ಇವೆ.[೮೬] ಪ್ರಾಣತ್ಯಾಗ ಮಾಡುವ ಪದ್ಧತಿ ಎರಡು ರೀತಿಯದು ೧. ಸಹಗಮನ, ೨.ಅನುಗಮನ ಪತಿಯು ಮಡಿದಾಗ ಆತನ ಶವದ ಜೊತೆಯಲ್ಲಿ ಚಿತೆಗೆ ಬಿದ್ದು ಪ್ರಾಣತ್ಯಾಗ ಮಾಡುವುದು ಸಹಗಮನ. ತನ್ನ ಪತಿ ಮಡಿದ ಸುದ್ಧಿಯನ್ನು ಕೇಳಿ ಸ್ವತಃ ಚಿತೆಯನ್ನು ನಿರ್ಮಿಸಿ ಅಗ್ನಿ ಪ್ರವೇಶ ಮಾಡುವುದು ಅನುಗಮನ. ಈ ಪದ್ಧತಿ ನಮಗೆ ಇಂದು ವಿಕೃಷ್ಟವೆನಿಸಿದರೂ ಅಂದಿನ ಸಂಸ್ಕೃತಿಯನ್ನು ಪ್ರತಿ ಬಿಂಬಿಸುವುದೇ ಇದರ ಉದ್ದೇಶ ಪ್ರಸ್ತುತ ಕಾಮಲಾಪುರ ಗ್ರಾಮವನ್ನು ಸೀಮಿತ ಮಾಡಿಕೊಂಡು ಇಲ್ಲಿ ದೊರೆತ ಮಹಾ ಸತಿಗಲ್ಲುಗಳ ದಾಖಲೆಗಳನ್ನು ಇಲ್ಲಿ ಮಾಡಲಾಗಿದೆ.

ಹೆಸರು :- ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :- ಕಾಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯ

ಕಾಲ :- ಕ್ರಿ.ಶ. ೧೪-೧೫ನೇ ಶತಮಾನ

ವಸ್ತು :- ಬೆಣಚುಕಲ್ಲು

ವೀರ ಎಡಗಡೆ ಮುಡಿಕಟ್ಟಿದ್ದು ಕೊರಳಲ್ಲಿ ಪದಕಸರ, ಕೈಯಲ್ಲಿ ತೋಳುಬಂಧಿ, ಕಡಗ ಧರಿಸಿದ್ದು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಕಿರುಕತ್ತಿ ಎತ್ತಿ ಹಿಡಿದಿದ್ದಾನೆ. ವೀರಗಾಸೆ ತೊಟ್ಟುಸೊಂಟದ ಬಲಗಡೆ ಕಿರುಕತ್ತಿ ಸಿಕ್ಕಿಸಿಕೊಂಡಿದ್ದಾನೆ. ಬಲಗಾಲಲ್ಲಿ ಗೆಜ್ಜೆಯಾಕಾರದ ಕಡಗ, ಪಾದಸರ ಧರಿಸಿದ್ದು ಎಡಗಾಲಲ್ಲಿ ಯಾವ ಆಭರಣವಿಲ್ಲ.

ಹೆಸರು :- ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :- ಕಾಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ

ಕಾಲ :- ಕ್ರಿ.ಶ. ೧೫-೧೬ನೇ ಶತಮಾನ

ವಸ್ತು :- ಬೆಣಚುಕಲ್ಲು

ಮೇಲ್ಭಾಗದಲ್ಲಿ ನಂದಿ, ಶಿವಲಿಂಗ ವೀರ, ಮಹಿಳೆಯರ ಉಬ್ಬು ಶಿಲ್ಪಗಳಿವೆ. ಬಲಗಡೆ ವೀರ ಅಂಜಲಿ ಮುದ್ರೆಯಲ್ಲಿದ್ದು ಸ್ಥಾನಿಕ ಭಂಗಿಯಲ್ಲಿದ್ದಾನೆ. ತೋಳುಬಂಧಿ, ವೀರಗಟ್ಟೆ ತೊಟ್ಟು ಕೊರಳಲ್ಲಿ ಮಣಿಸರ ಸರಪಣಿಯಾಕಾರ ಸರ ಧರಿಸಿದ್ದು ಕಿವಿಯಲ್ಲಿ ಲೋಲಕ ಧರಿಸಿದ್ದು ಕಾಲಲ್ಲಿ ಕಡಗ ಧರಿಸಿದ್ದಾನೆ. ಮಹಿಳೆ ಕಿವಿಯಲ್ಲಿ ವರ್ತುಲಾಕಾರದ ಓಲೆ ಧರಿಸಿ ಮುಡಿ ಕಟ್ಟಿದ್ದಾಳೆ. ಬಲಗೈ ಅಭಯ ಹಸ್ತ, ಎಡಗೈಯಲ್ಲಿ ಕಮಂಡಲ ಹಿಡಿದಿದ್ದಾಳೆ. ಸೀರೆಯ ನೆರಿಗೆಯ ಕೆತ್ತನೆ ತುಂಬಾ ಕಲಾತ್ಮಕವಾಗಿದೆ.

ಹೆಸರು :- ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :- ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹಿಂಬದಿ

ಕಾಲ :- ಕ್ರಿ.ಶ. ೧೫-೧೬ನೇ ಶತಮಾನ

ವಸ್ತು :- ಬೆಣಚುಕಲ್ಲು

ವೀರ ಮತ್ತು ಸತಿ ಅಲಂಕೃತರಾಗಿ ವೀರ ತನ್ನ ಹೆಂಡಿತಿಯನ್ನು ಎಡಗೈಯಿಂದ ಹಿಡಿದು ಕೊಂಡಿರುವ ಭಂಗಿಯು ತುಂಬಾ ಕಲಾತ್ಮಕವಾಗಿ ಚಿತ್ರಿಸಲಾಗಿದೆ.

ಹೆಸರು :- ವೀರ ಮಾಸ್ತಿಕಲ್ಲು

ಸಿಕ್ಕಸ್ಥಳ :- ಕಾಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ

ಕಾಲ :- ಕ್ರಿ.ಶ.೧೫-೧೬ನೇ ಶತಮಾನ

ವಸ್ತು :- ಬೆಣಚುಕಲ್ಲು

ಮೇಲ್ಭಾಗದಲ್ಲಿ ಸೂರ್ಯ, ಶಿವಲಿಂಗ, ಚಂದ್ರ, ನಂದಿ, ಉಬ್ಬು ಶಿಲ್ಪಗಳಿವೆ. ವೀರ ಮುಡಿ ಕಟ್ಟಿ ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ವರ್ತುಲಾಕಾರದ ಗುರಾಣಿ ರಕ್ಷಣೆಗೆ ಹಿಡಿದಿದ್ದಾನೆ. ವೀರ, ಕಡಗ, ಕೈಗಳಿಗೆ ಧರಿಸಿದ್ದು ವೀರ ಕಚ್ಚೆಹಾಕಿ, ಕಾಲಲ್ಲಿ ಕಡಗ ಧರಿಸಿದ್ದಾನೆ. ಮಹಿಳೆ ತುರುಬುಕಟ್ಟಿ, ಕಿವಿಯಲ್ಲಿ ವರ್ತುಲಾಕಾರದ ಓಲೆ ಕೊರಳಲ್ಲಿ ಸರ, ಸೀರೆ ನೆರಿಗೆಯನ್ನು ಧರಿಸಿದ ರೀತಿ ತುಂಬಾ ಕಲಾತ್ಮಕವಾಗಿದೆ. ಬಲಗೈ ಎತ್ತಿ ಅಭಯಹಸ್ತ, ಎಡಗೈಯು ಕಟ್ಯಾವಲಂಬಿತವಾಗಿದೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ.೧೫–೧೬ನೇ ಶತಮಾನ

ವಸ್ತು :– ಬಿಳಿಕಣ ಶಿಲೆ

ಕೆಳಭಾಗದಲ್ಲಿ ಪಟ್ಟಿಕೆಯಲ್ಲಿ ವೀರನ ಬಲಗಡೆ ಇಬ್ಬರು ಮಹಿಳೆಯರು, ಎಡಗಡೆ ಒಬ್ಬ ಮಹಿಳೆ ಸ್ಥಾನಿಕ ಭಂಗಿಯಲ್ಲಿದ್ದಾರೆ. ವೀರನು ಇಲ್ಲಿ ಮುಡಿಕಟ್ಟಿ, ಲೋಲಕದಂತಹ ಓಲೆ ಧರಿಸಿದ್ದು ವೀರ ಕಚ್ಚೆ ತೊಟ್ಟು ಕೈಯಲ್ಲಿ ಕಡಗ, ತೋಳುಬಂಧಿ, ಧರಿಸಿ ಅಂಜಲಿ ಮುದ್ರೆಯಲ್ಲಿದ್ದಾನೆ. ಮಹಿಳೆಯರ ಕಿವಿಯಲ್ಲಿ ಓಲೆ, ಕೈಗಳಿಗೆ ಕಡಗ ತೋಳುಬಂಧಿ ಧರಿಸಿದ್ದು ಬಲಗೈಯಲ್ಲಿ ಅಭಯ ಹಸ್ತ ಎಡಗೈಯಲ್ಲಿ ನಿಂಬೆಹಣ್ಣುಗಳನ್ನು ಹಿಡಿದಿದ್ದಾರೆ. ಮೇಲ್ಭಾಗದ ಪಟ್ಟಿಕೆಯಲ್ಲಿ ವೀರ ಶಿವ ಪೂಜೆ ಮಾಡುತ್ತಿರುವುದು, ಇಬ್ಬರು ಮಹಿಳೆಯರು ಅಂಜಲಿ ಮುದ್ರೆಯಿಂದ ಪದ್ಮಾಸನದಲ್ಲಿ ಕುಳಿತಿದ್ದಾಳೆ. ಮೇಲೆ ಶಿವಲಿಂಗ, ನಂದಿ ಶಿಲ್ಪ ಕೆತ್ತಲಾಗಿದೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ.೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಶಿಲ್ಪದ ಮೇಲ್ಭಾಗದಲ್ಲಿ ಸೂರ್ಯ, ಲಿಂಗ, ಚಂದ್ರರಿದ್ದಾರೆ. ಭಕ್ತ ದಂಪತಿಗಳು ಅಂಜಲಿ ಮುದ್ರೆಯಲ್ಲಿ ಆಸೀನರಾಗಿದ್ದಾರೆ. ಎಡಗಡೆ ವೀರ ಮುಡಿಕಟ್ಟಿ, ರೌದ್ರಮೀಸೆ, ಕೈಗಳಿಗೆ ತೋಳುಬಂಧಿ, ಕಡಗ, ಧರಿಸಿ ಅಂಜಲಿ ಮುದ್ರೆಯಲ್ಲಿ ಸ್ಥಾನಕ ಭಂಗಿಯಲ್ಲಿರುವುದು, ವೀರಗಾಸೆ ತೊಟ್ಟು ಸೊಂಟಪಟ್ಟಿ ಧರಿಸಿ ಕಾಲಲ್ಲಿ ಕಡಗ, ಸರ, ಬಲಕ್ಕೆ ಸ್ತ್ರೀ ತುರುಬು, ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೈಗಳಿಗೆ ಕಡಗ, ಬಳೆ, ತೋಳುಬಂಧಿ ಧರಿಸಿದ್ದು ಪಾದಗಳಲ್ಲಿ ಪಾದಸರ ಗೆಜ್ಜೆ ಧರಿಸಿರುವುದು ಈ ಶಿಲ್ಪದ ವೈಶಿಷ್ಟತೆಯಾಗಿದೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ. ೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ತಲೆಗೂದಲನ್ನು ಕೆದರಿಸಿಕೊಂಡು ಬಲಗೈಯಲ್ಲಿ ಕುಡುಗೋಲು, ಎಡಗೈ ನೀಳ್ಗತ್ತಿ ಹಿಡಿದು ನಿಂತಿದ್ದಾನೆ. ಇವನ ಬಲಗಡೆ ಸ್ತ್ರೀ ತುರುಬು ಕಟ್ಟಿ ಅಂಜಲಿ ಮುದ್ರೆಯಲ್ಲಿ ಸ್ಥಾನಕ ಭಂಗಿಯಲ್ಲಿದ್ದಾಳೆ.

ಹೆಸರು :– ಮಾಸ್ತಿಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿಶ. ೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಸ್ತ್ರೀ ಕುದುರೆಯ ಮೇಲೆ ಕುಳಿತು ವೀರಾವೇಶದಿಂದ ಕುದುರೆ ಸವಾರಿ ಮಾಡುತ್ತಿದ್ದಾಳೆ. ಕಿರೀಟ ಧರಿಸಿದ್ದು, ಜಡೆ ಕಲಾತ್ಮಕ ವಿನ್ಯಾಸದಿಂದ ಕೂಡಿದೆ. ಬಲಗೈಯಲ್ಲಿ ನೀಳ್ಗತ್ತಿ ಹಿಡಿದು ಎಡಗೈಯಲ್ಲಿ ಕುದುರೆಯ ಲಗಾಮ ಹಿಡಿದಿರುವಂತೆ ಚಿತ್ರಿಸಲಾಗಿದೆ. ಕುದುರೆಯ ಮುಂಗಾಲುಗಳನ್ನು ಎತ್ತಿ ಓಡುತ್ತಿರುವಂತೆ ಚಿತ್ರಿಸಲಾಗಿದೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ

ಕಾಲ :– ಕ್ರಿ.ಶ.೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಬಲಗಡೆ ಅಂಜಲಿ ಮುದ್ರೆಯಲ್ಲಿ ಸ್ಥಾನಕ ಭಂಗಿಯಲ್ಲಿದೆ. ಕೊರಳಲ್ಲಿ ಮಣಿಸರ, ತೋಳುಬಂಧಿ ಕಡಗ ಧರಿಸಿದ್ದಾನೆ. ಎಡಗಡೆ ಸ್ತ್ರೀ ಬಲಗೈ ಅಭಯ ಹಸ್ತ, ಎಡಗೈಯಲ್ಲಿ ಕಮಂಡಲ ಹಿಡಿದಿದ್ದಾಳೆ. ಕೊರಳಲ್ಲಿ ಸರ ಸೀರೆಯ ನೆರಿಗೆ, ಸೊಂಟಪಟ್ಟಿಯ ಅಲಂಕೃತ ಕೆತ್ತನೆ ತುಂಬಾ ಕಲಾತ್ಮಕವಾಗಿದೆ. ಮೇಲ್ಗಡೆ ಸೂರ್ಯ, ಚಂದ್ರ, ಶಿವಲಿಂಗ, ನಂದಿಯ ಉಬ್ಬು ಶಿಲ್ಪಗಳಿವೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ. ೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಎಡಕ್ಕೆ ತುರುಬುಕಟ್ಟಿ ಕಿವಿಯಲ್ಲಿ ಕುಂಡಲಗಳನ್ನು ಧರಿಸಿ ಕೊರಳಲ್ಲಿ ಪದಕಸರ, ವೈಜಯಂತಿಹಾರ, ಧರಿಸಿದ್ದಾನೆ. ಕೈಯಲ್ಲಿ ಕಡಗ, ತೋಳುಬಂಧಿ, ಅಂಜಲಿ ಮುದ್ರೆಯಲ್ಲಿ ನಿಂತಿದ್ದು ಸೊಂಟಪಟ್ಟಿ ಧರಿಸಿದ್ದಾನೆ. ಬಲಗಾಲಲ್ಲಿ ಪಾದಸರ, ಕಡಗವಿದೆ. ಉಳಿದ ಶಿಲ್ಪಕ್ಕೆ ಹೋಲಿಸಿದರೆ ಎಡಗಾಲಲ್ಲಿ ಕಡಗ ಇಲ್ಲದಿರುವುದೇ ಮೂಲರೂಪದಂತಿದೆ. ಸ್ತ್ರೀ ತುರುಬು ಕಟ್ಟಿ ವರ್ತುಲಾಕಾರದ

ಓಲೆ ಧರಿಸಿದ್ದು ಬಲಗೈ ಅಭಯ ಹಸ್ತ ಎಡಗೈಯಲ್ಲಿ ನಿಂಬೆಹಣ್ಣು ಹಿಡಿದಿದ್ದಾಳೆ. ಕೈಗೆ ಕಡಗ, ಬಳೆ, ತೋಳುಬಂಧಿ, ಧರಿಸಿದ್ದಾಳೆ. ಸೊಂಟಪಟ್ಟಿ, ಸೀರೆಯ ನೆರಿಗೆ ತುಂಬಾ ಕಲಾ ವಿನ್ಯಾಸದಿಂದ ಕೂಡಿದೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ, ಕಾಮಲಾಪುರ

ಕಾಲ :– ಕ್ರಿ.ಶ.೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಬಲಗಡೆ ವೀರ ಕೈ ಮುಗಿದು ಸ್ಥಾನಿಕ ಭಂಗಿಯಲ್ಲಿದ್ದಾನೆ. ಕಟಿಬಂಧ, ಕೊರಳಲ್ಲಿ ಮಣಿಸರ ಪದಕಸರ ಧರಿಸಿ, ಮುಡಿಕಟ್ಟಿದ್ದಾನೆ. ವೀರಗಾಸೆ ಧರಿಸಿ, ಕಿವಿಯಲ್ಲಿ ಲೋಲಕ ಧರಿಸಿದ್ದಾನೆ. ವೀರನ ಎಡಗಡೆ ಸ್ತ್ರೀ ತುರುಬು ಕಟ್ಟಿ, ಕಿವಿಯಲ್ಲಿ ವರ್ತುಲಂಕಾರದ ಓಲೆ ಧರಿಸಿ, ಎಡಗೈ ಕೆಳಗೆ ಬಿಟ್ಟು, ನಿಂಬೆಹಣ್ಣು ಹಿಡಿದುಕೊಂಡಿದ್ದಾಳೆ. ಬಲಗೈ ಮೇಲಕ್ಕೆ ಎತ್ತಿದೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ, ಕಾಮಲಾಪುರ

ರಾಜವಂಶ :– ವಿಜಯನಗರೋತ್ತರ

ಕಾಲ :– ಕ್ರಿ.ಶ.೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಬಲಗಡೆ ಶಿವಲಿಂಗ ದೇವಕೋಷ್ಟಕದಲ್ಲಿ ಆಸೀನನಾಗಿದ್ದು ಅದರ ಹತ್ತಿರ ನಂದಿಯ ಉಬ್ಬು ಶಿಲ್ಪವಿದೆ. ವೀರ ಮುಡಿಕಟ್ಟಿ ಓಲೆ ಧರಿಸಿ ಕೈಗಳಿಗೆ ಕಡಗ, ತೋಳುಬಂದಿ ಆಭರಣಗಳಿಂದ ಅಂಜಲಿಮುದ್ರೆಯಲ್ಲಿ ಪದ್ಮಾಸೀನಳಾಗಿದ್ದಾಳೆ. ವೀರನ ಎಡಗಡೆ ಮಹಿಳೆಯು ಅಂಜಲಿ ಮುದ್ರೆಯಲ್ಲಿ ಕುಳಿತಿದ್ದಾಳೆ.

ಹೆಸರು :– ವೀರ ಮಾಸ್ತಿ ಗಲ್ಲು

ಸಿಕ್ಕಸ್ಥಳ :– ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ, ಕಾಮಲಾಪುರ

ಕಾಲ :– ಕ್ರಿ.ಶ. ೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರನು ಮುಡಿಕಟ್ಟಿ ಕಿವಿಯಲ್ಲಿ ವರ್ತುಲಾಕಾರದ ಓಲೆ ಕೈಗಳಿಗೆ ಕಡಗ ಧರಿಸಿದ್ದು ಬಲಗೈಯಲ್ಲಿ ಬಾಣವನ್ನು ಬತ್ತಳಿಕೆಯಿಂದ ಹೊರ ತೆಗೆಯುತ್ತಿರುವುದು ಎಡಗೈಯಲ್ಲಿ ಬಿಲ್ಲು ಹಿಡಿದ್ದಾನೆ. ವೀರಗಾಸಿ ತೊಟ್ಟ ಬಲಗಡೆ ಕಿರುಗತ್ತಿ ಸಿಕ್ಕಿಸಿಕೊಂಡಿದ್ದಾನೆ. ಕಾಲಲ್ಲಿ ಕಡಗ ಪಾದಸರ ಧರಿಸಿದ್ದಾನೆ. ವೀರನ ಬಲಗಡೆ ವೀರವನಿತೆ ಮುಡಿಕಟ್ಟಿ ವರ್ತುಲಾಕಾರದ ಓಲೆ, ಕೊರಳಲ್ಲಿ ಮಣಿಸರ, ಪದಕಸರ, ಕೈಗಳಿಗೆ

ತೋಳುಂಬಿ, ಬಳೆ ಧರಿಸಿದ್ದಾಳೆ. ಬಲಗೈಯ ಅಭಯ ಹಸ್ತದಲ್ಲಿದೆ. ಎಡಗೈಯ ನಿಂಬೆಹಣ್ಣು ಹಿಡಿದ್ದಿದ್ದಾಳೆ. ವೀರ ವನಿತೆಯು ಸೀರೆಯ ನೆರಿಗೆಯ ಕೆತ್ತನೆ ಕಲಾತ್ಮಕವಾಗಿದೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಕಾಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ. ೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಮಹಿಳೆಯು ಸ್ಥಾನಿಕ ಭಂಗಿಯಲ್ಲಿದ್ದಾಳೆ. ಇವಳ ಕಿವಿಯಲ್ಲಿ ವರ್ತುಲಾಕಾರದ ಓಲೆ, ಬಲಗಡೆ ತುರುಬುಕಟ್ಟಿ, ಕೊರಳಲ್ಲಿ ಮಣಿಸರ, ಪದಕಸರ ಧರಿಸಿದ್ದಾಳೆ. ಕೈಗಳಿಗೆ ತೋಳುಬಂಧಿ ಬಳೆ ಸೊಂಟಪಟ್ಟಿಯನ್ನು ಧರಿಸಿದ್ದಾಳೆ. ಮಹಿಳೆಯು ಎಡಗೈಯಲ್ಲಿ ನಿಂಬೆಹಣ್ಣು ಹಿಡಿದಿದ್ದಾಳೆ. ಬಲಗೈಯನ್ನು ಅಭಯ ಹಸ್ತದಿಂದ ಮೇಲಕ್ಕೆ ಎತ್ತಲಾಗಿದೆ. ಎಡಗಡೆ ವೀರ ಮುಡಿ ಕಟ್ಟಿ ಕಿವಿಯಲ್ಲಿ ಕುಂಡಲಗಳನ್ನು ಧರಿಸಿ, ಕೊರಳಲ್ಲಿ ಮಣಿಸರ, ವೈವಿಧ್ಯಮಯ ಸರಗಳಿಂದ ಅಲಂಕರಿಸಲಾಗಿದೆ. ವೀರ ಅಂಜಲಿ ಮುದ್ರೆಯಲ್ಲಿದ್ದಾನೆ. ಕೈಗೆ ಕಡಗ, ತೋಳುಬಂಧಿ ಧರಿಸಿದ್ದು ವೀರ ಕಚ್ಚೆ ಹಾಕಿ ಬಲಗಾಲಿಗೆ ಕಡಗ ಪಾದಸರ ಧರಿಸಿರುವುದು ಈ ಶಿಲ್ಪದ ವೈಶಿಷ್ಟಗಳಾಗಿವೆ.

ಹೆಸರು :– ವೀರ ಮಾಸ್ತಿಗಲ್ಲು [೮೭]

ಸಿಕ್ಕಸ್ಥಳ :– ಕಾಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ. ೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಸತಿಯಿಂದ ಭಾಷೆ ತೆಗೆದು ಕೊಳ್ಳುತ್ತಿರುವ ಶಿಲ್ಪವಾಗಿರಬೇಕು. ವೀರ ಆಸೀನ ಭಂಗಿಯಲ್ಲಿದ್ದು ಮುಡಿ ಕಟ್ಟಿದ್ದಾನೆ. ಕೊರಳಲ್ಲಿ ಮಣಿಸರ, ಪದಕಸರ, ಸರಪಣಿಸರ ಧರಿಸಿದ್ದು ಬಲಗೈ ಇಳೆ ಬಿಟ್ಟು ಎಡಗೆಯನ್ನು ತನ್ನ ಹತ್ತಿರದ ಕಮಂಡಲದ ಮೇಲೆ ಇಟ್ಟಿದ್ದಾನೆ. ಮಹಿಳೆ ವರ್ತುಲಾಕಾರದ, ಓಲೆ ಧರಿಸಿ ಮುಡಿಕಟ್ಟಿ ಬಲಗೈಯನ್ನು ಎತ್ತಿ ಎಡಗೈ ಇಳಿ ಬಿಟ್ಟಿರುವುದು ಇವು ಶಿಲ್ಪದ ವೈಶಿಷ್ಯತೆಯಾಗಿದೆ.

ಹೆಸರು :– ಮಾಸ್ತಿಗಲ್ಲು

ಸಿಕ್ಕಸ್ಥಳ :– ಪ್ರಾಚ್ಯವಸ್ತು ಸಂಗ್ರಹಾಲಯದ ಹಿಂಬದಿ, ಕಾಮಲಾಪುರ

ಕಾಲ :– ಕ್ರಿ.ಶ.೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಇಬ್ಬರು ಮಹಿಳೆಯರು ಅಂಜಲಿ ಮುದ್ರೆಯಲ್ಲಿದ್ದು ಮಧ್ಯೆ ಮಹಾಸತಿ ತುರುಬು ಕಟ್ಟಿದ್ದಾಳೆ. ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೈಗಳಿಗೆ ತೋಳುಬಂಧಿ, ಬಳೆ ಧರಿಸಿದ್ದಾರೆ, ಮಹಾಸತಿ ಅಂಜಲಿ ಮುದ್ರೆಯಲ್ಲಿದ್ದು ಪದ್ಮಾಸನದಲ್ಲಿ ಆಸೀನಳಾಗಿದ್ದಾರೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಪ್ರಾಚ್ಯ ಪುರಾತತ್ವ ವಸ್ತುಸಂಗ್ರಹಾಲಯದ ಹಿಂಬದಿ, ಕಾಮಲಾಪುರ

ಕಾಲ :– ಕ್ರಿ.ಶ.೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಕೆಳಭಾಗದ ಪಟ್ಟಿಕೆಯಲ್ಲಿ ವೀರರು ಕತ್ತಿಗಳನ್ನು ಎರಡೂ ಕೈಗಳಿಂದ ಹಿಡಿದು ಹೋರಾಡುತ್ತಿದ್ದಂತೆ ಚಿತ್ರಿತವಾಗಿದೆ. ವೀರರು ತುರುಬುಕಟ್ಟಿದ್ದಾರೆ. ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೈಗಳಿಗೆ ಬಳೆ ಕಡಗ ವೀರಕಚ್ಚೆಹಾಕಿರುವ ದೃಶ್ಯ ಚಿತ್ರಿತವಾಗಿದೆ. ವೀರನ ಹಿಂದೆ ಧ್ವಜವನ್ನು ಹಿಡಿದ ಮತ್ತೊಬ್ಬ ಪುರುಷನ ಚಿತ್ರವಿದೆ. ಮೇಲ್ಭಾಗದಲ್ಲಿ ಸೂರ್ಯ–ಚಂದ್ರರ ಉಬ್ಬು ಶಿಲ್ಪಗಳಿವೆ ವೀರ ಅಂಜಲಿ ಮುದ್ರೆಯಲ್ಲಿದ್ದು ಸ್ಥಾನಕ ಭಂಗಿಯಲ್ಲಿದ್ದಾನೆ. ಮಹಿಳೆ ಬಲಗೈಯನ್ನು ಮೇಲಕ್ಕೆ ಎತ್ತಿದ್ದಾಳೆ. ಎಡಗೈ ಕೆಳಗೆ ಬಿಟ್ಟು ನಿಂಬೆಹಣ್ಣು ಹಿಡಿದಿದ್ದಾಳೆ. ಮುತ್ತೈದೆಯ ಸತಿ–ಸಹಗಮನದ ಸಂಕೇತ ಇದಾಗಿದೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ, ಕಾಮಲಾಪುರ

ಕಾಲ :– ಕ್ರಿ.ಶ.೧೬ – ೧೭ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ–ಸತಿ (ವನಿತೆ)ಯರು ಸರ್ವ ಅಲಂಕೃತರಾಗಿ ಅಂಜಲಿ ಮುದ್ರೆಯಲ್ಲಿ ಪದ್ಮಾಸನದಲ್ಲಿ ಕುಳಿತಿದ್ದಾರೆ. ಸತಿಯ ಬಲಗೈ ಮೇಲಕ್ಕೆ ಎತ್ತಿ ಎಡಗಡೆ ಬಿಟ್ಟಿದ್ದಾಳೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹಿಂಬದಿ

ಕಾಲ :– ಕ್ರಿ.ಶ.೧೬ – ೧೭ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರನೊಡನೆ ಆತನ ಪತ್ನಿ ಎಡಗಡೆ ನಿಂತಿದ್ದಾಳೆ. ವೀರಮುಡಿ ಕಟ್ಟಿದ್ದಾನೆ. ಕೊರಳಲ್ಲಿ ಪದಕಸರ, ಮಣಿಸರ ಧರಿಸಿದ್ದಾನೆ. ಎರಡೂ ಕೈಗಳಿಂದ ಖಡ್ಗವನ್ನು ಹಿಡಿದು, ವೀರಗಾಸೆಯನ್ನು ಧರಿಸಿದ್ದಾನೆ. ವೀರ ಸೊಂಟದ ಬಲಗಡೆ ಕತ್ತಿ ಸಿಕ್ಕಿಸಿಕೊಂಡಿದ್ದಾನೆ. ಸ್ತ್ರೀಯರು ಬಲಗಡೆ ಮುಡಿ ಕಟ್ಟಿದ್ದಾಳೆ. ಕಿವಿಯಲ್ಲಿ ವರ್ತುಲಾಕಾರದ ಓಲೆ ಕೊರಳಲ್ಲಿ ಸರ ಧರಿಸಿದ್ದಾಳೆ. ಬಲಗೈಯಲ್ಲಿ ಚಿಕ್ಕ ಕತ್ತಿ ಹಿಡಿದು ತನ್ನ ಕುತ್ತಿಗೆ ತನಕ ಮೇಲಕ್ಕೆ ಎತ್ತಿದ್ದಾಳೆ. ಎಡಗೈಯಲ್ಲಿ ಕನ್ನಡಿ ಹಿಡಿದು ಮೇಲಕ್ಕೆ ಎತ್ತಿದ್ದಾಳೆ. ಸೀರೆಯ ನೆರಿಗೆಯ ಕೆತ್ತನೆ ತುಂಬಾ ಕಲಾತ್ಮಕವಾಗಿದೆ. ಈ ಶಿಲ್ಪವು ತನ್ನ ವೀರ ಪತಿಯೊಂದಿಗೆ ಆತನ ಪತ್ನಿ ಸಹಗಮನ ಮಾಡಿರುವ ವಿಷಯವಿದೆ. ಈ ಶಿಲ್ಪದಲ್ಲಿ ಬಲಗೈಯಲ್ಲಿನ ಕತ್ತಿ ಕೊರಳಿಗೆ ತಾಕಿರುವಂತೆ ಇಲ್ಲಿ ಮಹಿಳೆಯು ಪತಿ ಭಕ್ತಿಯನ್ನು ಶಿಲ್ಪದ ಮೂಲಕ ಕಡೆಯಲಾಗಿದೆ.

ಹೆಸರು :– ವೀರ ಮಾಸ್ತಿಗಲ್ಲು

ಸಿಕ್ಕಸ್ಥಳ :– ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ, ಕಾಮಲಾಪುರ

ಕಾಲ :– ಕ್ರಿ.ಶ.೧೬–೧೭ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ–ಮಹಾಸತಿ ಕುದುರೆಯ ಮೇಲೆ ಆಸೀನರಾಗಿ, ಯುದ್ಧಕ್ಕೆ ಹೊರಡುತ್ತಿರುವ ದೃಶ್ಯವಿದೆ. ಕಿರೀಟಧಾರಿ, ವೀರ ಬಲಗೈಯಲ್ಲಿ ಖಡ್ಗ ಹಿಡಿದು ಎಡಗೈಯಲ್ಲಿ ಲಗಾಮು ಹಿಡಿದಿದ್ದಾನೆ. ವೀರನ ಹಿಂದೆ ರಾಣಿ ಕಿವಿಯಲ್ಲಿ ಓಲೆ, ಕೊರಳಲ್ಲಿಸರ, ಕೈಗೆ ಬಳೆಧರಿಸಿದ್ದಾಳೆ. ಬಲಗೈ ಅಭಯಹಸ್ತ ಎಡಗೈಯಲ್ಲಿ ಪುಷ್ಪದ ಮೊಗ್ಗು ಹಿಡಿದಿದ್ದಾಳೆ. ಕಾಲಲ್ಲಿ ಕಡಗ ಧರಿಸಿದ್ದಾರೆ. ಪುಷ್ಪದ ಮೊಗ್ಗು ಇದು ಮುತ್ತೈದೆಯ ಸಂಕೇತವೂ ಹೌದು.

ಹೆಸರು :– ವೀರ ಮಾಸ್ತಿ ಗಲ್ಲು

ಸಿಕ್ಕಸ್ಥಳ :– ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣ

ಕಾಲ :– ಕ್ರಿ.ಶ. ೧೬–೧೭ನೇ ಶತಮಾನ

ವಸ್ತು :– ಬೆಣಚುಕಲ್ಲು

ವೀರ ಬಲಗಡೆ ನಿಂತು ಅತನ ಪತ್ನಿ ಎಡಗಡೆ ನಿಂತಿದ್ದಾಳೆ. ವೀರ ಮುಡಿಕಟ್ಟಿದ್ದಾನೆ. ಕೊರಳಲ್ಲಿ ಪದಕಸರ ಮಣಿಸರ ಧರಿಸಿದ್ದಾನೆ. ಎರಡೂ ಕೈಗಳಿಂದ ಖಡ್ಗವನ್ನು ಹಿಡಿದು ವೀರಗಾಸೆಯನ್ನು ಧರಿಸಿದ್ದಾನೆ. ವೀರ ಸೊಂಟದ ಬಲಗಡೆ ಕತ್ತಿ ಸಿಕ್ಕಿಸಿಕೊಂಡಿದ್ದಾನೆ. ಸ್ತ್ರೀಯರು ಬಲಗಡೆ ಮುಡಿ ಕಟ್ಟಿದ್ದಾರೆ. ಕಿವಿಯಲ್ಲಿ ವರ್ತುಲಾಕಾರದ ಓಲೆಗಳು ಕೊರಳಲ್ಲಿಸರ ಧರಿಸಿದ್ದಾಳೆ. ಬಲಗೈಯಲ್ಲಿ ಚಿಕ್ಕ ಕತ್ತಿ ಹಿಡಿದು ತನ್ನ ಕುತ್ತಿಗೆ ತನಕ ಮೇಲಕ್ಕೆ ಎತ್ತಿದ್ದಾಳೆ. ಎಡಗೈಯಲ್ಲಿ ಕನ್ನಡಿ ಹಿಡಿದು ಮೇಲಕ್ಕೆ ಎತ್ತಿದ್ದಾಳೆ. ಸೀರೆಯ ನೆರಿಗೆಯ ಕೆತ್ತನೆ ತುಂಬಾ ಅಲಂಕೃತವಾಗಿದೆ. ಈ ಶಿಲ್ಪವು ಪತಿಯೊಂದಿಗೆ ಆತನ ಪತ್ನಿ ಸಹಗಮನ ಮಾಡಿರುವ ವಿಷಯ ಈ ಶಿಲ್ಪದಲ್ಲಿ ಬಲಗೈಯಲ್ಲಿನ ಕತ್ತಿ ಕೊರಳಿಗೆ ತೂಕದಂತೆ ಚಿತ್ರಿಸಲಾಗಿದೆ. ಇಲ್ಲಿ ಮಹಿಳೆಯರು ಪತಿ ಭಕ್ತಿಯನ್ನು ಶಿಲ್ಪಿ ಶಿಲ್ಪದಲ್ಲಿ ಮೂಡಿಸಿದ್ದಾನೆ.

ಹೆಸರು :– ಒಕ್ಕೈ ಮಾಸ್ತಿಗಲ್ಲು

ಸಿಕ್ಕಸ್ಥಳ :– ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿ, ಕಾಮಲಾಪುರ

ಕಾಲ :– ಕ್ರಿ.ಶ.೧೬–೧೭ನೇ ಶತಮಾನ

ವಸ್ತು :– ಬಿಳಿಕಣಶಿಲೆ

ಕೆಳಭಾಗದ ಪಟ್ಟಿಕೆಯಲ್ಲಿ ಕುದುರೆ ಸವಾರರಾದ ಇಬ್ಬರು ವೀರರು, ಬಲಗೈಯಲ್ಲಿ ಈಟಿ ಎಡಗೈಯಲ್ಲಿ ಖಡ್ಗಗಳನ್ನು ಹಿಡಿದು ಹೋರಾಡುತ್ತಿರುವ ದೃಶ್ಯ ಮೇಲ್ಭಾಗದ ಪಟ್ಟಿಕೆಯಲ್ಲಿ ರಾಜದಂಪತಿಗಳ ಬಲಕ್ಕೆ

ಕಂಬದಿಂದ ಹೊರಟ ಕೈಯನ್ನು ಚಿತ್ರಿಸಲಾಗಿದೆ. ರಾಜದಂಪತಿಗಳು ಮುಡಿಕಟ್ಟಿ ಪದ್ಮಾಸನದಲ್ಲಿ ಕುಳಿತು ಅಂಜಲಿ ಮುದ್ರೆಯಲ್ಲಿದ್ದಾರೆ. ದೇವ ಕೋಷ್ಟಕದಲ್ಲಿ ಶಿವಲಿಂಗವಿದೆ. ಅದರ ಅಕ್ಕ-ಪಕ್ಕ ಸೂರ್ಯ ಚಂದ್ರರ ಉಬ್ಬುಶಿಲ್ಪಗಳಿವೆ. ಇಂತಹ ಶಿಲ್ಪಗಳನ್ನು ತೋಳುಗ್ಯೆ, ವ್ಯಾಸನ ತೋಳು, ಒಕ್ಕೈಮಾಸ್ತಿ ಮುಂತಾದ ಹೆಸರಿನಿಂದ ಕರೆಯುತ್ತಾರೆ. ಮಹಾಸತಿ ಬೆಂಕಿಯ ಕೊಂಡಕ್ಕೆ ಬೀಳುವಾಗ ಎಲ್ಲರಿಗೂ ತನ್ನ ಬಲಗೈಯನ್ನು ಎತ್ತಿದಂತಿದೆ. ಹರಸುತ್ತಿದ್ದಳು ಅವಳ ಸಾವಿನ ನಂತರ ಅವಳು ಹರಿಸಿದ ಕೈಯ ರೂಪವನ್ನು ಶಿಲೆಗಳ ಮೇಲೆ ಕೆತ್ತಿ ಸ್ಮಾರಕವಾಗಿ ನಿಲ್ಲಿಸುತ್ತಿದ್ದರು. ಇಲ್ಲಿ ಕೇವಲ ಒಂದು ತೋಳನ್ನು ಮಾತ್ರ ಬಿಡಿಸಿದ್ದು ಇದರ ತಳಭಾಗ ಕಂಬದಂತೆ ಇದ್ದು ಇದರ ಮೇಲ್ಭಾಗ ಫಲಕದಂತೆ ಆಕಾರದಂತಿದೆ. ಈ ಫಲಕದಲ್ಲಿ ಸಾಂಕೇತಿಕವಾಗಿ ತೋಳನ್ನು ಮಾತ್ರ ಬಿಡಿಸಲಾಗಿದೆ.

**ನಿಷಿಧಿಗಲ್ಲುಗಳು:** ಜೈನ ಪರಂಪರೆಯಲ್ಲಿ ತಮ್ಮ ಆತ್ಮೀಯರು, ಬಂಧುಗಳು, ಗುರುಗಳು, ಪೂಜ್ಯ ವ್ಯಕ್ತಿಗಳು ತಮ್ಮ ಬದುಕಿನ ಪರಮ ಗುರಿಯಾದ ಸದ್ಗತಿ (ಮೋಕ್ಷ) ಸಂಪಾದನೆಗಾಗಿ ಸಲ್ಲೇಖನದಿಂದ ಮರಣವನ್ನು ಅಪ್ಪಿದಾಗ ಅವರ ಪರೋಕ್ಷ ವಿನಯಾರ್ಥವಾಗಿ ಜಿನಾಲಯಗಳನ್ನು ನಿರ್ಮಿಸುವುದು, ನಿಷಿಧಿಗಲ್ಲುಗಳನ್ನು ನಿಲ್ಲಿಸುವುದು. ನಿಷಧಿ ಮಂಟಪಗಳನ್ನು ಕಟ್ಟಿಸುವುದು, ಶಾಸನಗಳನ್ನು ಹಾಕಿಸುವುದು, ಚತುರ್ದಾನಗಳನ್ನು ಮಾಡುವುದು ಪ್ರಾಚೀನ ಕಾಲದಿಂದ ಪರಂಪರೆಯಾಗಿ ಬೆಳೆದಿದೆ.

ಕನ್ನಡ ನಾಡಿನಲ್ಲಿ ಸಮಾಧಿ ಮರಣ ವಿಧಾನವನ್ನೇ ಪ್ರಮುಖವಾಗಿ ಅನುಸರಿಸುವುದು ಸಮಕಾಲೀನ ಶಾಸನಗಳಿಂದ ಸ್ಪಷ್ಟವಾಗುತ್ತವೆ.[೮೮] ರತ್ನ ಕರಂಡಕ ಶ್ರಾವಕಾಚಾರ ಶಾಸ್ತ್ರ ಸಾರ ಸಮುಚ್ಛಯ, ಭಗವತೀ ಆರಾಧನಾ, ಉತ್ತರಾಧ್ಯಯನ ಸೂತ್ರ ಮೊದಲಾದವುಗಳ ಪ್ರಸ್ತಾಪಗಳಿವೆ. ಸಲ್ಲೇಖನವು ಆತ್ಮ ಹತ್ಯೆಯಲ್ಲ, ಆತ್ಮ ವ್ರತಸ್ಥನಾಗಿ ರೇಸ್‌ನಲ್ಲಿ ಐಕ್ಯವಾಗುವ ಸಂಧಾನವಾಗಿದೆ. ಶ್ರಾವಕಾಚಾರದಲ್ಲಿ ಸತ್ ಮತ್ತು ಲೇಖನ ಎಂಬೆರಡು ಶಬ್ದಗಳಿಂದ ಸಲ್ಲೆಖನ ಎಂದು ತಿಳಿಸುತ್ತ ಪ್ರಶಂಸನೀಯ ಅದು ಕೃಷ್‌ಯಗಳನ್ನು ಕ್ಷೀಣಗೊಳಿಸುವ ಕ್ರಿಯೆಯಾಗಿದೆ ಎಂದು ಹೇಳಬಹುದು.[೮೯]

ಸಲ್ಲೇಖನ ಮತ್ತು ಕಷ್‌ಯ ಸಲ್ಲೇಖನ ಎಂಬೆರಡು ವಿಧವಿದೆ. ಕ್ರಮವಾಗಿ ಆಹಾರವನ್ನು ಕಡಿತಗೊಳಿಸುತ್ತಾ ಸ್ನಿಗ್ಧ ಪದಾರ್ಥಗಳನ್ನು (ಹಾಲು, ಮೊಸರು, ಮಜ್ಜಿಗೆ ಇತ್ಯಾದಿ) ಹೆಚ್ಚಾಗಿ ತೆಗೆದುಕೊಳ್ಳುತ್ತಾ ಮುಂದೆ ಆ ಪದಾರ್ಥಗಳನ್ನು ಕಡಿಮೆಮಾಡಿ ಬಿಸಿನೀರು ಮೊದಲಾದವುಗಳನ್ನು ಹೆಚ್ಚು ಸೇವಿಸುತ್ತ ಮುಂದೆ ಅದನ್ನು ಬಿಟ್ಟು ತಮ್ಮ ಶಕ್ತಿಗೆ ಅನುಸರಿಸಿ ಉಪವಾಸ ಮಾಡಿ ಪಂಚನಮಸ್ಕಾರ ಮಂತ್ರದ ಧ್ಯಾನದಲ್ಲಿದ್ದು ಪ್ರಯತ್ನ ಪೂರ್ವಕ ಶರೀರವನ್ನು ತ್ಯಾಗ ಮಾಡುವುದೇ ಕಾಯ ಸಲ್ಲೇಖನ, ರಾಗದ್ವೇಷ, ಮೋಹಾದಿಕ ಕಷಾಯಗಳನ್ನು ಶರೀರದ ಜೊತೆಯಲ್ಲಿಯೇ ಕೃಷಗೊಳಿಸುವುದೇ 'ಕಷ್‌ಯ ಸಲ್ಲೇಖನ'. ಕಷ್‌ಯ ಸಲ್ಲೇಖನವನ್ನು ಮಾಡದ ಹೊರತಾಗಿ ಕಾಯ ಸಲ್ಲೇಖನವು ವ್ಯರ್ಥವಾಗಿದೆ. ಸಂಸಾರಿ ಜೀವಿಗಳಲ್ಲಿ ವಿಷಯ ಮತ್ತು ಕಷಾಯಗಳನ್ನು ಗೆಲ್ಲುವವರಿಗೇನೇ ಸಮಾಧಿ ಮರಣದ ಯೋಗ್ಯತೆ ದೊರಕುತ್ತದೆ. ಈ ವ್ರತಾಚರಣೆಯನ್ನು ಸಾಮಾನ್ಯವಾಗಿ ಎಲ್ಲರೂ ಗುರುವಿನ ಸನ್ನಿಧಿಯಲ್ಲಿಯೇ ಕೈಗೊಳ್ಳುತ್ತಿದ್ದರು. ಈವ್ರತದ ಉದ್ದೇಶ ಕರ್ಮಗಳಿಂದ ಬಿಡುಗಡೆ ಹೊಂದುವುದು. ಶ್ರಾವಕರಂತೆ ಶ್ರಾವಿಕೆಯರೂ ಮುನಿಗಳಂತೆ ಕುಂತಿಯರೂ ಅನುಸರಿಸುತ್ತಾರೆ. ವ್ರತಾಚರಣೆಯ ಈ ವಿಧಾನವನ್ನು

ಕಂಬದಿಂದ ಹೊರಟ ಕೈಯನ್ನು ಚಿತ್ರಿಸಲಾಗಿದೆ. ರಾಜದಂಪತಿಗಳು ಮುಡಿಕಟ್ಟಿ ಪದ್ಮಾಸನದಲ್ಲಿ ಕುಳಿತು ಅಂಜಲಿ ಮುದ್ರೆಯಲ್ಲಿದ್ದಾರೆ. ದೇವ ಕೋಷ್ಟಕದಲ್ಲಿ ಶಿವಲಿಂಗವಿದೆ. ಅದರ ಅಕ್ಕ-ಪಕ್ಕ ಸೂರ್ಯ ಚಂದ್ರರ ಉಬ್ಬುಶಿಲ್ಪಗಳಿವೆ. ಇಂತಹ ಶಿಲ್ಪಗಳನ್ನು ತೋಳುಗೈ, ವ್ಯಾಸನ ತೋಳು, ಒಕ್ಕೈಮಾಸ್ತಿ ಮುಂತಾದ ಹೆಸರಿನಿಂದ ಕರೆಯುತ್ತಾರೆ. ಮಹಾಸತಿ ಬೆಂಕಿಯ ಕೊಂಡಕ್ಕೆ ಬೀಳುವಾಗ ಎಲ್ಲರಿಗೂ ತನ್ನ ಬಲಗೈಯನ್ನು ಎತ್ತಿದಂತಿದೆ. ಹರಸುತ್ತಿದ್ದಳು ಅವಳ ಸಾವಿನ ನಂತರ ಅವಳು ಹರಿಸಿದ ಕೈಯ ರೂಪವನ್ನು ಶಿಲೆಗಳ ಮೇಲೆ ಕೆತ್ತಿ ಸ್ಮಾರಕವಾಗಿ ನಿಲ್ಲಿಸುತ್ತಿದ್ದರು. ಇಲ್ಲಿ ಕೇವಲ ಒಂದು ತೋಳನ್ನು ಮಾತ್ರ ಬಿಡಿಸಿದ್ದು ಇದರ ತಳಭಾಗ ಕಂಬದಂತೆ ಇದ್ದು ಇದರ ಮೇಲ್ಭಾಗ ಫಲಕದಂತೆ ಆಕಾರದಂತಿದೆ. ಈ ಫಲಕದಲ್ಲಿ ಸಾಂಕೇತಿಕವಾಗಿ ತೋಳನ್ನು ಮಾತ್ರ ಬಿಡಿಸಲಾಗಿದೆ.

**ನಿಷಿಧಿಗಲ್ಲುಗಳು:** ಜೈನ ಪರಂಪರೆಯಲ್ಲಿ ತಮ್ಮ ಆತ್ಮೀಯರು, ಬಂಧುಗಳು, ಗುರುಗಳು, ಪೂಜ್ಯ ವ್ಯಕ್ತಿಗಳು ತಮ್ಮ ಬದುಕಿನ ಪರಮ ಗುರಿಯಾದ ಸದ್ಗತಿ (ಮೋಕ್ಷ) ಸಂಪಾದನೆಗಾಗಿ ಸಲ್ಲೇಖನದಿಂದ ಮರಣವನ್ನು ಅಪ್ಪಿದಾಗ ಅವರ ಪರೋಕ್ಷ ವಿನಯಾರ್ಥವಾಗಿ ಜಿನಾಲಯಗಳನ್ನು ನಿರ್ಮಿಸುವುದು, ನಿಷಿಧಿಗಲ್ಲುಗಳನ್ನು ನಿಲ್ಲಿಸುವುದು. ನಿಷಧಿ ಮಂಟಪಗಳನ್ನು ಕಟ್ಟಿಸುವುದು, ಶಾಸನಗಳನ್ನು ಹಾಕಿಸುವುದು, ಚತುರ್ದಾನಗಳನ್ನು ಮಾಡುವುದು ಪ್ರಾಚೀನ ಕಾಲದಿಂದ ಪರಂಪರೆಯಾಗಿ ಬೆಳೆದಿದೆ.

ಕನ್ನಡ ನಾಡಿನಲ್ಲಿ ಸಮಾಧಿ ಮರಣ ವಿಧಾನವನ್ನೇ ಪ್ರಮುಖವಾಗಿ ಅನುಸರಿಸುವುದು ಸಮಕಾಲೀನ ಶಾಸನಗಳಿಂದ ಸ್ಪಷ್ಟವಾಗುತ್ತವೆ.[೮೮] ರತ್ನ ಕರಂಡಕ ಶ್ರಾವಕಾಚಾರ ಶಾಸ್ತ್ರ ಸಾರ ಸಮಚ್ಛಯ, ಭಗವತೀ ಆರಾಧನಾ, ಉತ್ತರಾಧ್ಯಯನ ಸೂತ್ರ ಮೊದಲಾದವುಗಳ ಪ್ರಸ್ತಾಪಗಳಿವೆ. ಸಲ್ಲೇಖನವು ಆತ್ಮ ಹತ್ಯೆಯಲ್ಲ, ಆತ್ಮ ವ್ರತಸ್ಥನಾಗಿ ರೇಸ್‌ನಲ್ಲಿ ಐಕ್ಯವಾಗುವ ಸಂಧಾನವಾಗಿದೆ. ಶ್ರಾವಕಾಚಾರದಲ್ಲಿ ಸತ್ ಮತ್ತು ಲೇಖನ ಎಂಬೆರಡು ಶಬ್ಧಗಳಿಂದ ಸಲ್ಲೆಖನ ಎಂದು ತಿಳಿಸುತ್ತ ಪ್ರಶಂಸನೀಯ ಅದು ಕೃಷ್‌ಯಗಳನ್ನು ಕ್ಷೀಣಗೊಳಿಸುವ ಕ್ರಿಯೆಯಾಗಿದೆ ಎಂದು ಹೇಳಬಹುದು.[೮೯]

ಸಲ್ಲೇಖನ ಮತ್ತು ಕಷ್‌ಯ ಸಲ್ಲೇಖನ ಎಂಬೆರಡು ವಿಧವಿದೆ. ಕ್ರಮವಾಗಿ ಆಹಾರವನ್ನು ಕಡಿತಗೊಳಿಸುತ್ತಾ ಸ್ನಿಗ್ಧ ಪದಾರ್ಥಗಳನ್ನು (ಹಾಲು, ಮೊಸರು, ಮಜ್ಜಿಗೆ ಇತ್ಯಾದಿ) ಹೆಚ್ಚಾಗಿ ತೆಗೆದುಕೊಳ್ಳುತ್ತಾ ಮುಂದೆ ಆ ಪದಾರ್ಥಗಳನ್ನು ಕಡಿಮೆಮಾಡಿ ಬಿಸಿನೀರು ಮೊದಲಾದವುಗಳನ್ನು ಹೆಚ್ಚು ಸೇವಿಸುತ್ತ ಮುಂದೆ ಅದನ್ನು ಬಿಟ್ಟು ತಮ್ಮ ಶಕ್ತಿಗೆ ಅನುಸರಿಸಿ ಉಪವಾಸ ಮಾಡಿ ಪಂಚನಮಸ್ಕಾರ ಮಂತ್ರದ ಧ್ಯಾನದಲ್ಲಿದ್ದು ಪ್ರಯತ್ನ ಪೂರ್ವಕ ಶರೀರವನ್ನು ತ್ಯಾಗ ಮಾಡುವುದೇ ಕಾಯ ಸಲ್ಲೇಖನ, ರಾಗದ್ವೇಷ, ಮೋಹಾದಿಕ ಕಷಾಯಗಳನ್ನು ಶರೀರದ ಜೊತೆಯಲ್ಲಿಯೇ ಕೃಷಗೊಳಿಸುವುದೇ 'ಕಷ್‌ಯ ಸಲ್ಲೇಖನ'. ಕಷ್‌ಯ ಸಲ್ಲೇಖನವನ್ನು ಮಾಡದ ಹೊರತಾಗಿ ಕಾಯ ಸಲ್ಲೇಖನವು ವ್ಯರ್ಥವಾಗಿದೆ. ಸಂಸಾರಿ ಜೀವಿಗಳಲ್ಲಿ ವಿಷಯ ಮತ್ತು ಕಷಾಯಗಳನ್ನು ಗೆಲ್ಲುವವರಿಗೇನೇ ಸಮಾಧಿ ಮರಣದ ಯೋಗ್ಯತೆ ದೊರಕುತ್ತದೆ. ಈ ವ್ರತಾಚರಣೆಯನ್ನು ಸಾಮಾನ್ಯವಾಗಿ ಎಲ್ಲರೂ ಗುರುವಿನ ಸನ್ನಿಧಿಯಲ್ಲಿಯೇ ಕೈಗೊಳ್ಳುತ್ತಿದ್ದರು. ಈವ್ರತದ ಉದ್ದೇಶ ಕರ್ಮಗಳಿಂದ ಬಿಡುಗಡೆ ಹೊಂದುವುದು. ಶ್ರಾವಕರಂತೆ ಶ್ರಾವಿಕೆಯರೂ ಮುನಿಗಳಂತೆ ಕುಂತಿಯರೂ ಅನುಸರಿಸುತ್ತಾರೆ. ವ್ರತಾಚರಣೆಯ ಈ ವಿಧಾನವನ್ನು

ಸಮಾಧಿ ಸಲ್ಲೇಖನಾ, ಸನ್ಯಸನ, ಪಂಡಿತ ಪೌಗ್ಗಮಣ ಪಂಚಪದ, ಆರಾಧನಾ ಮೊದಲಾದ ಪದಗಳಿಂದ ಕರೆಯುತ್ತಾರೆ.[೯೦] ಮರಣವನ್ನಪ್ಪಿದವರ ಪರೋಕ್ಷ ವಿನಯಾರ್ಥವಾಗಿ ನಿಲ್ಲಿಸಿದ ಶಿಲಾ ಫಲಕಗಳೇ ನಿಷಿಧಿ ಗಲ್ಲುಗಳಾಗಿವೆ. ಶಾಸನಗಳಲ್ಲಿ ನಿಶೀಧಿಕಾ, ನಿಶಿಧಿ, ನಿಶಿದಿಗೆ, ನಿಶೀಧಿಗೆ, ನಿಷದ್ಯಿಕಾ, ನಿಷಧಿ, ನಿಷೇದಿ, ನಿಶಿಧ್ಯಾಲಯ, ನಿಷಿದ್ಧಿ, ನಿಷಿದಿಗೆ, ನಿಷಿದ್ಯಾಂ, ನಿಷಿದಿ, ನಿಸ್ತಿಗೆ ಎಂದು ಕರೆಯಲಾಗಿದೆ.[೯೧]

ನಿಷಿಧಿ ಫಲಕಗಳಲ್ಲಿ ಸಾಮಾನ್ಯವಾಗಿ ಮುಖಿ ಅಥವಾ ಶ್ರಾವಕರ ಸಲ್ಲೇಖನ ವೃತ್ತದ ವಿಚಾರಗಳನ್ನು ಕೆಳಗಿನಿಂದ ಮೇಲಕ್ಕೆ ಅವರ ಪ್ರತಿರೂಪವನ್ನು ಉಬ್ಬುಶಿಲ್ಪಗಳ ಮುಂಖಾಂತರ ನಿರೂಪಿಸಿಲಾಗುತ್ತದೆ. ಕೆಳಹಂತದಲ್ಲಿ ಶ್ರುತಪೀಠದ ಮೇಲಿರಿಸಿದ ಜಿನ ಶಾಸನದ ಪ್ರತಿನಿಧಿ. ಅದರ ಇಕ್ಕೆಲುಗಳಲ್ಲಿ ಉಪದೇಶ ಮಾಡುವ ಮುನಿ ಮತ್ತು ಉಪದೇಶ ಪಡೆಯುತ್ತಿರುವ ಮುನಿಯರ ನಿರೂಪಣೆಗಳಿರುತ್ತವೆ. ಮೇಲಣ ಹಂತದಲ್ಲಿ ತೀರ್ಥಂಕರ ಅವನ ಪಾರ್ಶ್ವಗಳಲ್ಲಿ ಸಮಾಧಿ ಮರಣ ನಂತರ ತೀರ್ಥಂಕರನ ಸನ್ನಿದಿಯಲ್ಲಿ ಶಾಶ್ವತ ಉಪದೇಶ ಪಡೆಯುತ್ತಿರುವ ವ್ರತಸ್ಥರ ಚಿತ್ರಣಗಳಿರುತ್ತವೆ ಈ ನಿಷಧಿಗಲ್ಲುಗಳು ಆಕಾರ ೧ ರಿಂದ ೪ ಹಂತದ ಶಿಲ್ಪ ಪಟ್ಟಿಕೆಗಳನ್ನೊಳಗೊಂಡ ಫಲಕದ ಆಕಾರದಲ್ಲಿರುತ್ತವೆ.[೯೨] ಇವೆಲ್ಲವೂ ನಿಷಿಧಿಗಲ್ಲುಗಳ ಸಾಮಾನ್ಯ ಲಕ್ಷಣಗಳಾಗಿವೆ. ಪ್ರಸ್ತುತ ಕಾಮಲಾಪುರದಲ್ಲಿ ದೊರೆತ ನಿಷಧಿಕಲ್ಲುಗಳ ದಾಖಲೆಯನ್ನು ಇಲ್ಲಿ ಮಾಡಲಾಗಿದೆ.

ಹೆಸರು :– ನಿಷೆಧಿಗಲ್ಲು

ಸಿಕ್ಕಸ್ಥಳ :– ಕನ್ನಡ ವಿಶ್ವವಿದ್ಯಾಲಯದ ಹೊರ ಆವರಣ, ಕಾಮಲಾಪುರ

ಕಾಲ :– ಕ್ರಿ.ಶ.೧೫–೧೬ನೇ ಶತಮಾನ

ವಸ್ತು :– ಬೆಣಚುಕಲ್ಲು

ಶಿಲೆಯ ಮೇಲಿನ ಪಾದಗಳು ನಿಷೆಧಿಗಲ್ಲಿನ ಮತ್ತೊಂದು ರೂಪ. ಇವು ಮುಡಿಪಿದ ಜೈನ ಪ್ರಾವಿತ್ರ್ಯತೆಯನ್ನು ತೋರುಸುತ್ತದೆ. ಪಾದಗಳ ಜೈನ ಮುನಿಗಳ ದರ್ಶನದ ಸಂಕೇತ ಮಾರ್ಗ. ಪಡೆದ ಮೋಕ್ಷ ಇವುಗಳ ಸಂಕೇತವಾಗಿಯೂ ಈ ಪಾದಗಳು ಕಂಡುಬರುತ್ತದೆ.

ಹೆಸರು :– ನಿಷೆಧಿಗಲ್ಲು

ಸಿಕ್ಕಸ್ಥಳ :– ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ೪ನೇ ಅಂಕಣ, ಕಾಮಲಾಪುರ

ಕಾಲ :– ಕ್ರಿ.ಶ.೧೫ನೇ ಶತಮಾನ

ವಸ್ತು :– ಬೆಣಚುಕಲ್ಲು

ಮೂರು ಹಂತದ ನಿಷೆಧಿಗಲ್ಲು. ಕೆಳಹಂತದಲ್ಲಿ ತಪಸ್ಸಿಗೆ ನಿಂತ ಮುನಿ ಮಧ್ಯ ಹಂತದಲ್ಲಿ ತಪಸ್ಸಿಗೆ ಕುಳಿತಿರುವುದು. ಕೊನೆಯ ಹಂತದಲ್ಲಿ ದೇವರ ಸಾನಿಧ್ಯ ಸೇರಿರುವುದು.

**ಬಲಿದಾನ ಶಿಲ್ಪ** : ಧರ್ಮಕ್ಕಾಗಿ, ಆತ್ಮತೃಪ್ತಿಗಾಗಿ, ನಿಷ್ಠೆಗಾಗಿ ಅಥವಾ ತಾನು ನಂಬಿದ ಪ್ರೀತಿಯ ವಸ್ತುವಿನ ಅಗಲಿಕೆ ತಡೆಯಲಾರದೆ ಬೆಂಕಿಗೆ ಹಾರಿ ಅಥವಾ ತಮ್ಮನ್ನು ತಾವೇ ಇರಿದುಕೊಂಡು

ಪ್ರಾಣ ಕಳೆದುಕೊಂಡವರ ನೆನಪಿಗಾಗಿ ನಿಲ್ಲಿಸಿದ ಶಿಲ್ಪಗಳೇ ಬಲಿದಾನ ಶಿಲ್ಪಗಳು.[೯೩] ಕಾಮಲಾಪುರದಲ್ಲಿ ದೊರೆತ ಕೆಲವು ಬಲಿದಾನ ಶಿಲ್ಪಗಳ ದಾಖಲಾತಿಯನ್ನು ಇಲ್ಲಿ ಮಾಡಲಾಗಿದೆ.

ಹೆಸರು :- ಬಲಿದಾನ ಶಿಲ್ಪ[೯೪]

ಸಿಕ್ಕಸ್ಥಳ :- ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣ

ಕಾಲ :- ಕ್ರಿ.ಶ. ೧೪ನೇ ಶತಮಾನ

ವಸ್ತು :- ಬೆಣಚುಕಲ್ಲು

ಮಹಿಳೆಯೊಬ್ಬಳು ತನ್ನ ತಲೆಯನ್ನು ಕತ್ತರಿಸಿಕೊಂಡು ಆತ್ಮಬಲಿಗೈದ ಸುಂದರವಾದ ಉಬ್ಬುಶಿಲ್ಪವಿದೆ. ಅಂಜಲಿ ಮುದ್ರೆಯಲ್ಲಿ ಕುಳಿತ ಭಂಗಿಯ ಮಹಿಳೇಯದೇಹ ಮತ್ತು ಕತ್ತರಿಸಿದ ಅವಳ ಶಿರವನ್ನು ಬೇರೆ ಬೇರೆಯಾಗಿ ಅಂದರೆ ಮುಂಡದಿಂದ ಶಿರವನ್ನು ಪ್ರತ್ಯೇಕವಾಗಿ ಮುಂಡದ ಮೇಲ್ಭಾಗ ಬಲಭಾಗದಲ್ಲಿ ಕತ್ತರಿಸಲಾಗಿದೆ. ಕಿವಿಯಲ್ಲಿ ವರ್ತುಲಾಕಾರದ ಓಲೆ, ತಲೆಯ ಮೇಲೆ ಕೇಶದ ದೊಡ್ಡ ಮಂಡಿಯಂತಹ ಜುಟ್ಟು ಕಟ್ಟಿದಂತೆ ಕೆತ್ತಲಾಗಿದೆ. ಈ ಶಿಲೆಯ ಮೇಲ್ಭಾಗದಲ್ಲಿ ಬಲಬದಿಯಲ್ಲಿ ಸೂರ್ಯ ಹಾಗೂ ಎಡ ಬದಿಯಲ್ಲಿ ಚಂದ್ರರನ್ನು ಕೆತ್ತಲಾಗಿದೆ. ಸೀರೆಯ ಕೆತ್ತನೆ ತುಂಬಾ ಕಲಾತ್ಮಕವಾಗಿದೆ. ಕಾಲಲ್ಲಿ ಕಡಗ ಧರಿಸಿದ್ದಾಳೆ ಈ ಶಿಲ್ಪ ಶಿರಚ್ಛೇಧನ ಮಾಡಿಕೊಂಡು ಸರಳವಾದ ಬಲಿದಾನ ಶಿಲ್ಪವಾಗಿದೆ.

ಹೆಸರು :- ಆತ್ಮ ಬಲಿದಾನ ಗಲ್ಲು

ಸಿಕ್ಕಸ್ಥಳ :- ಕಾಮಲಾಪುರದ ಪ್ರಾಚ್ಯವಸ್ತು ಸಂಗ್ರಹಾಲಯದ ಹಿಂಬದಿ

ಕಾಲ :- ಕ್ರಿ.ಶ. ೧೫-೧೬ನೇ ಶತಮಾನ

ವಸ್ತು :- ಬೆಣಚುಕಲ್ಲು

ವೀರ ತನ್ನ ತಲೆಯನ್ನು ಕಡಿದು ತಾನೇ ಎಡಗೈಯಲ್ಲಿಹಿಡಿದಿದ್ದಾನೆ. ಬಲಗೈ ಕಟ್ಯಾವಲಂಬಿತವಾಗಿದೆ. ವೀರ ಸೊಂಟಪಟ್ಟಿ ಕಟ್ಟಿದ್ದಾನೆ.

ಹೆಸರು :- ಆತ್ಮ ಬಲಿದಾನ ಶಾಸನ (ಗರುಡ-ವೀರಸ್ಮಾರಕ)

ಸಿಕ್ಕಸ್ಥಳ :- ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದ ಹಿಂಬದಿ, ಕಾಮಲಾಪುರ

ರಾಜವಂಶ :- ವಿಜಯನಗರ

ಕಾಲ :- ಕ್ರಿ.ಶ. ೧೫-೧೬ನೇ ಶತಮಾನ

ವಸ್ತು :- ಬೆಣಚುಕಲ್ಲು

ವೀರ ತನ್ನ ರುಂಡವನ್ನು ತಾನೇ ಕತ್ತರಿಸಿಕೊಂಡು ಕತ್ತರಿಸಿದ ಶಿರವನ್ನು ತಾನೇ ತನ್ನ ಎಡಗೈಯಲ್ಲಿ ಹಿಡಿದು ಸ್ಥಾನಿಕ ಭಂಗಿಯಲ್ಲಿದ್ದಾನೆ. ಬಲಗೈಯನ್ನು ತಾನೇ ಇಳಿಬಿಟ್ಟಿದ್ದಾನೆ. ಇದು ವೀರನ ಆತ್ಮಸ್ಥೈರ್ಯ, ತ್ಯಾಗದ ಸಂಕೇತವಾಗಿದೆ.

ಹೆಸರು :- ಆತ್ಮ ಬಲಿದಾನ (ವೀರಸ್ಮಾರಕ) ಗರುಡ[೯೫] (ಆತ್ಮಾಹುತಿಕಲ್ಲು)

ಸಿಕ್ಕಸ್ಥಳ :- ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದ ಹಿಂಬದಿ, ಕಾಮಲಾಪುರ

ಕಾಲ :- ಕ್ರಿ.ಶ. ೧೬ನೇ ಶತಮಾನ

ವಸ್ತು :- ಬೆಣಚುಕಲ್ಲು

ವೀರನ ಶಿರವು ಛೇದಿಸಲಾಗಿದ್ದು, ಸ್ಥಾನಿಕ ಭಂಗಿಯಲ್ಲಿದ್ದಾನೆ. ವೀರ ತನ್ನ ರುಂಡವನ್ನು ತಾನೇ ಕತ್ತರಿಸಿ ಕೊಂಡಿದ್ದಾನೆ. ಕತ್ತರಿಸಿದ ಶಿರವನ್ನು ವೀರ ತಾನೇ ಬಲಗೈಯಲ್ಲಿ ಹಿಡಿದುಕೊಂಡಿರುವುದು ಇಲ್ಲಿ ವೀರನ ಆತ್ಮಸ್ಥೈರ್ಯ ಹಾಗೂ ತ್ಯಾಗದ ಸಂಕೇತವನ್ನು ಪ್ರತಿಬಿಂಬಿಸುತ್ತದೆ.

ಹೆಸರು :- ಆತ್ಮ ಬಲಿದಾನ ಶಾಸನ ಶಿಲ್ಪ (ಸ್ತಂಭಕಲ್ಲು)[೯೬]

ಸಿಕ್ಕಸ್ಥಳ :- ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದ ಹಿಂಬದಿ, ಕಾಮಲಾಪುರ

ಕಾಲ :- ಕ್ರಿ.ಶ. ೧೬-೧೭ನೇ ಶತಮಾನ

ವಸ್ತು :- ಬೆಣಚುಕಲ್ಲು

ಈ ಸ್ತಂಭದ ಕೆಳಭಾಗ ಚೌಕಾಕಾರವಾಗಿದ್ದು, ಅದರ ಮೇಲ್ಭಾಗ ದುಂಡಾಕಾರವಾಗುತ್ತಾ ಹೋಗುತ್ತದೆ. ಚೌಕಾಕಾರದ ನಾಲ್ಕು ದಿಕ್ಕುಗಳಲ್ಲಿ ವೀರ ಬಲಗೈಯಿಂದ ಕತ್ತಿಯನ್ನು ಎತ್ತಿ, ತನ್ನ ಕುತ್ತಿಗೆಗೆ ಕತ್ತಿ ಹಿಡಿದು ನಿಂತಿದ್ದಾನೆ. ಇದು ಆತ್ಮ ಬಲಿದಾನ ಶಿಲ್ಪ ಇದಾಗಿದೆ.

**ಮೇರೆಗಲ್ಲುಗಳು:** ವೈದಿಕ ಸಂಸ್ಕೃತಿಯ ಕಾಲದಿಂದಲೂ ಭೂಮಿಯನ್ನು ಅಳತೆ ಮಾಡುವ ಪದ್ಧತಿ ಆಚರಣೆಯಲ್ಲಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿವಿಧ ಪ್ರಕಾರದ ಭೂಮಿಗಳನ್ನು ಅಳತೆ ಮಾಡಿದ ತರುವಾಯ ಅವುಗಳ ಮೇರೆಗಳನ್ನು ಗುರುತಿಸಲಾಗುತ್ತಿತ್ತು.[೯೭] ಮನುಯಜ್ಞವಲ್ಕ್ಯ ಮೊದಲಾದವರೂ ತಮ್ಮ ಕೃತಿಗಳಲ್ಲಿ ಭೂಮಿಯ ಅಳತೆಗಳ ಬಗ್ಗೆ ಉಲ್ಲೇಖಿಸಿದ್ದಾರೆ.[೯೮,೯೯] ಭೂಮಿಯನ್ನು ನಿಶ್ಚಿತ ಅಳತೆಗಳ ಪ್ರಮಾಣದಲ್ಲಿ ವಿಭಾಗಿಸಿ ಅದರ ಮೇರೆಗಳನ್ನು ಗುರುತಿಸಲು ಅದರ ನಾಲ್ಕು ಬದಿಗಳಲ್ಲಿ ಕಲ್ಲುಗಳನ್ನು ನೆಡಲಾಗುತ್ತಿತ್ತು. ಕೆಲವೊಮ್ಮೆ ಭೂಮಿಯ ಮೇರೆಗಳನ್ನು ಅದರ ಸಮೀಪದಲ್ಲಿ ಹರಿಯುವ ನದಿ, ಹಳ್ಳ, ಬೆಟ್ಟ, ಕಾಡು, ಕಲ್ಲುಗುಡ್ಡೆ ಹೆಸರಿಸುವ ಮೂಲಕವು ಗುರ್ತಿಸಲಾಗುತ್ತಿತ್ತು.[೧೦೦] ಭೂಮಿಯ ಮೇರೆಗೆಗಳಲ್ಲಿ ದಿರ್ಘಕಾಲ ಬಾಳಿಕೆ ಬರುವಂತಹ ವಸ್ತುಗಳನ್ನು ಹೂಳಲಾಗುತ್ತಿತ್ತು. ಭೂಮಿಯನ್ನು ಯಾವ ಧರ್ಮದ ದೇವಾಲಯ, ಮಠ ಅಥವಾ ಆಚಾರ್ಯರಿಗೆ ದಾನಮಾಡಲಾಗುತ್ತಿತ್ತೋ ಆಧರ್ಮದ ಸಂಕೇತಗಳನ್ನು ಮೇರೆಗಲ್ಲುಗಳ ಮೇಲೆ ಚಿತ್ರಿಸುವ ಪರಂಪರೆ ಇತ್ತು. ಅಂತಹ ಮೇರೆಗಲ್ಲುಗಳನ್ನು ಎಲ್ಲೆಗಳು, ಗಡಿಯಕಲ್ಲು, ಚಿತ್ರಕಲ್ಲು, ಶಂಖ ಚಕ್ರದಕಲ್ಲು, ವಾಮನ ಮುದ್ರೆಕಲ್ಲು, ಲಿಂಗಮುದ್ರೆಕಲ್ಲು ನಂದಿಕಲ್ಲು, ತ್ರಿಶೂಲಕಲ್ಲು, ಮುಕ್ಕೊಡೆಕಲ್ಲು, ಶಾಕ್ಯ ಮುದ್ರೆಕಲ್ಲು ವಿವಿಧ ಹೆಸರುಗಳಿಂದ ಕರೆಯಲಾಗುತ್ತಿದೆ.[೧೦೧] ಇಂತಹ ಮೇರೆಗಲುಗಳಲ್ಲಿ ಇಲ್ಲಿನ ವಸ್ತುಸಂಗ್ರಹಾಲಯಗಳಲ್ಲಿ ಇಡಲ್ಪಟ್ಟಿವೆ.

**ಲಿಂಗಮುದ್ರೆಕಲ್ಲು:** ವಿವಿಧ ದೇವಾಲಯಗಗೆ ಆಚಾರ್ಯರಿಗೆ, ಭೂಮಿಯನ್ನು ದಾನಮಾಡಿದ ತರುವಾಯ, ಆಭೂಮಿಯ ಸೀಮಾ ಚಕ್ಕು ಬಂದಿಯನ್ನು ಸೂಚಿಸಲು ಅದರ ನಾಲ್ಕು ದಿಕ್ಕುಗಳಲ್ಲಿ ಮೇರೆಗಲ್ಲುಗಳಾಗಿ ಲಿಂಗ ಮುದ್ರೆಗಲ್ಲುಗಳನ್ನು ನಿಲ್ಲಿಸಿದ ಉಲ್ಲೇಖಗಳು ದೊರಕಿವೆ.[೧೦೨] ಇವು ಸಾಮಾನ್ಯವಾಗಿ

೨ ರಿಂದ ೪ ಅಡಿಗಳಷ್ಟು ಎತ್ತರವಾಗಿರುತ್ತವೆ. ಇವುಗಳ ಮೇಲೆ ಶಿವಲಿಂಗವಿರುತ್ತವೆ. ಲಿಂಗದ ಇಕ್ಕೆಲುಗಳಲ್ಲಿ ಸೂರ್ಯ–ಚಂದ್ರರ ಚಿತ್ರಣಗಳಿರುತ್ತವೆ. ಬಹುತೇಕ ಲಿಂಗ ಮುದ್ರೆಗಲ್ಲುಗಳ ಮೇಲೆ ಶಿವಲಿಂಗವನ್ನು ರೇಖೆಯಿಂದಲೇ ಚಿತ್ರಿಸಲಾಗಿರುತ್ತದೆ. ಕೆಲವೊಮ್ಮೆ ಕೆಳಭಾಗದಲ್ಲಿ ಶಾಸನಗಳಿರುತ್ತವೆ. ಕೆಲವೊಂದು ಲಿಂಗ ಮುದ್ರೆಗಲ್ಲುಗಳ ಮೇಲೆ ಶಾಸನಗಳು ಇರುವುದಿಲ್ಲ. ಕೆಲವೊಮ್ಮೆ ಶಿವಲಿಂಗದ ಒಂದು ಬದಿಯಲ್ಲಿ ಕರುವಿಗೆ ಹಾಲುಣಿಸುತ್ತಿರುವ ಹಸು ಮತ್ತೊಂದು ಬದಿಯಲ್ಲಿ ನಂದಿಯನ್ನು ಚಿತ್ರಿಸಲಾಗಿರುತ್ತದೆ. ಕೆಲವು ಲಿಂಗಮುದ್ರೆ ಗಲ್ಲುಗಳ ಮೇಲೆ ಈ ಮೇಲಿನ ಎಲ್ಲಾ ನಿರುಪಣೆಗಳೊಂದಿಗೆ ಶಿವಲಿಂಗಕ್ಕೆ ಪೂಜೆ ಮಾಡುತ್ತಿರುವ ಯತಿ ಮತ್ತು ಅಂಜಲಿ ಮುದ್ರೆಯಲ್ಲಿ ಆಸೀನನಾದ ಭಕ್ತನನ್ನು, ಭೂಮಿಯನ್ನು ದಾನಮಾಡಿದ ವ್ಯಕ್ತಿಯನ್ನು ತೋರಿಸಲಾಗುತ್ತದೆ.

ಕಾಮಲಾಪುರ ಪ್ರದೇಶದ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರಭಾಗದಲ್ಲಿ ೧೩ ಭಾರತೀಯ ಪುರಾತತ್ವ ಪ್ರಾಚ್ಯವಸ್ತು ಸಂಗ್ರಹಾಲಯದಲ್ಲಿ ೪.ರಾಜ್ಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ೨, ಕಾಶಿಮಠದ ಮುಂಭಾಗದಲ್ಲಿ, ಮಳೆಮಠದ ಮುಂಭಾಗದಲ್ಲಿ ನಗರೇಶ್ವರದೇವಾಲಯದ ಮುಂಭಾಗದಲ್ಲಿ, ವೀರಭದ್ರದೇವಾಲಯದ ಮುಂಭಾಗದಲ್ಲಿ ಜೀರುಹನುಮಂತಪ್ಪನ ಹೊಲದಲ್ಲಿ ಕಾಳಿಕಾದೇವಾಲಯದ ಮುಂದೆ ಸಿದ್ಧಲಿಂಗಯ್ಯಸ್ವಾಮಿ ಮಳೇಮಠ ಇವರ ಮನೆಯ ಮುಂಭಾಗದಲ್ಲಿ ಕಲ್ಮಠದ ಆವರಣದಲ್ಲಿ ೨ನೇ ವಾರ್ಡ್‌ನ ಈಶ್ವರ ದೇವಾಲಯದ ಹತ್ತಿರ, ತೊಪ್ಪಲ ಚೆನ್ನಪ್ಪ ಮನೆಯ ಹಿಂಬದಿಯಲ್ಲಿ ಒಟ್ಟು ಇಂತಹ ೩೧ ಲಿಂಗ ಮುದ್ರೆಗಲ್ಲುಗಳಿವೆ.

**ವಾಮನ ಮುದ್ರೆಗಲ್ಲುಗಳು:** ವೈಷ್ಣವ ಧರ್ಮದ ದೇವಾಲಯ ಮಠ ಮತ್ತು ಆಚಾರ್ಯರಿಗೆ ದಾನ ಮಾಡಿದ ಭೂಮಿಯ ಮೇರೆಗಳನ್ನು ಸೂಚಿಸಲು ನಿಲ್ಲಿಸಿದ ಗಲ್ಲುಗಳೇ, ವಾಮನ ಮುದ್ರೆಗಲ್ಲುಗಳು. ಇವುಗಳ ಮೇಲೆ ಸಾಮಾನ್ಯವಾಗಿ ವಾಮನ, ಲಕ್ಷ್ಮಿ ಹಾಗೂ ಆ ಧರ್ಮದ ಸಂಕೇತಗಳಾದ ಶಂಖ, ಚಕ್ರ, ನಾಗ, ಗರುಡ, ಹಸು, ಅಂಜಲಿ ಮುದ್ರೆಯಲ್ಲಿ ಆಸೀನರಾದ ದಾನ ಮಾಡಿದ ವ್ಯಕ್ತಿಯ ನಿರಪಣೆಗಳಿರುತ್ತವೆ. ಬಹುತೇಕ ಶಿಲ್ಪಗಳಲ್ಲಿ ಕುಬ್ಜವಾಮನ ನಿರೂಪಣೆಯೇ ಪ್ರಧಾನವಾಗಿರುತ್ತದೆ. ಶುಕ್ರಾಚಾರ್ಯರನ್ನು ಆಶ್ರಯಿಸಿ ಅವರ ಮಂತ್ರ ಶಕ್ತಿಯಿಂದ ಬಲಿಶಾಲಿಯಾಗಿ ಅಟ್ಟಹಾಸದಿಂದ ಮೆರೆಯುತ್ತಿದ್ದ ಬಲಿ ಚಕ್ರವರ್ತಿಯನ್ನು ಸಂಹಾರ ಮಾಡಲು ವಿಷ್ಣುವಾಮನನ ರೂಪಧರಿಸಿದನು. ಆತನಲ್ಲಿ ಹೋಗಿ ಪಾದದಳತೆ ಭೂಮಿಯನ್ನು ದಾನಮಾಡುವಂತೆ ಕೇಳಿ ಅದನ್ನು ಪಡೆದ ತರುವಾಯ, ೧ನೇ ಪಾದವನ್ನು ಸಮಗ್ರ ಭೂಮಿಯ ಮೇಲಿಟ್ಟು ೨ನೇ ಪಾದವನ್ನು ಆಕಾಶದ ತುಂಬೆಲ್ಲಾ ಆವರಿಸಿ, ೩ನೇ ಪಾದವನ್ನು ಬಲಿಚಕ್ರವರ್ತಿಯ ಶಿರದ ಮೇಲಿಟ್ಟು ಆತನನ್ನು ಸಂಹರಿಸುತ್ತಾನೆ.[೧೦೩] ಬಹುತೇಕ ವಾಮನ ಮುದ್ರೆಗಲ್ಲುಗಳಲ್ಲಿ ಒಂದು ಕೈಯಲ್ಲಿ ಕಮಂಡಲ, ಮತ್ತೊಂದು ಕೈಯಲ್ಲಿ ಛತ್ರಿಯನ್ನು ಹಿಡಿದುಕೊಂಡ ಕುಬ್ಜ ವಾಮನನ ನಿರೂಪಣೆಯೇ ಕಂಡು ಬರುತ್ತದೆ. ಇಂತಹ ಶಿಲೆಗಳನ್ನು ನಿಲ್ಲಿಸಲಾಗುತ್ತಿದ್ದ ನಿದರ್ಶನಗಳು ಅನೇಕ ಶಾಸನಗಳಲ್ಲಿ ಕಂಡು ಬರುತ್ತವೆ. ಇಕ್ಕಲಗಳಲ್ಲಿ ಸೂರ್ಯ–ಚಂದ್ರನ ನಿರೂಪಣೆಗಳಿರುತ್ತವೆ. ಇವೆಲ್ಲವುಗಳನ್ನು ಹೆಚ್ಚಾಗಿ ರೇಖೆಗಳಲ್ಲಿಯೇ ಬಿಡಿಸಲಾಗಿರುತ್ತದೆ. ಈ ಶಿಲೆಗಳು ಸಾಮಾನ್ಯವಾಗಿ ೨ ರಿಂದ ೪ ಅಡಿಗಳವರೆಗೆ ಎತ್ತರವಾಗಿದ್ದು ೧ ರಿಂದ ೨ ಅಡಿಗಳವರೆಗೆ ಅಗಲವಾಗಿರುತ್ತವೆ.

ಕಾಮಲಾಪುರದ ಪ್ರದೇಶದ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಮುಂಭಾಗದಲ್ಲಿ ಮತ್ತು ಹಿಂಬದಿಯಲ್ಲಿ ೨, ಭಾರತೀಯ ಪುರಾತತ್ವವಸ್ತು ಸಂಗ್ರಹಾಲಯದಲ್ಲಿ ೩, ವೇಣುಗೋಪಾಲ ದೇವಾಲಯದ ಮುಂಭಾಗದಲ್ಲಿ ೧, ರಾಯರ ದೇವಾಲಯದ ಹತ್ತಿರ ಕೃಷ್ಣದೇವಾಲಯದ ಮುಂಭಾಗದಲ್ಲಿ ೧, ಪಾಂಡುರಂಗ ದೇವಾಲಯದ ಹತ್ತಿರ ೧, ವಾಮನಚಾರ್ ಮನೆಯ ಹತ್ತಿರ ಆಂಜನೇಯ ದೇವಾಲಯದ ಆವರಣದ ಮುಂಭಾಗದಲ್ಲಿ ೧, ಒಟ್ಟು ೯ ಇಂತಹ ವಾಮನ ಮುದ್ರೆಗಲ್ಲುಗಳಿವೆ.

**ಮುಕ್ಕೊಡೆಗಲ್ಲುಗಳು**: ಜೈನ ಪರಂಪರೆಯಲ್ಲಿ ಅಭಯ ಆಹಾರ, ಔಷದ ಮತ್ತು ಶಾಸ್ತ್ರ ಎಂಬ ನಾಲ್ಕು ಪ್ರಕಾರದ ದಾನಗಳಿಗೆ ವಿಶೇಷ ಮಹತ್ವವಿದೆ. ಈ ಧರ್ಮದ 'ತತ್ವಾರ್ಥ ಸೂತ್ರ' ಕೃತಿಯು ಅನುಗ್ರಹಾರ್ಥಂಸ್ವಸ್ಯಾತಿಸರ್ಗೋದಾನಮ್' ಎಂದು ಸೂಚಿಸುತ್ತದೆ.[೧೦೪] ಇದರ ಅರ್ಥ ತನ್ನ ಬಳಿಯ ಆಹಾರ, ನೀರು, ವಸ್ತ್ರಾದಿಗಳನ್ನು ಉಚಿತವಾಗಿ ನೀಡುವುದೇ ದಾನ. ಮತ್ತೊಬ್ಬರಿಗೆ ಕೊಡುವ ವಸ್ತು ಯಾವಾಗಲೂ ತನ್ನ ಸ್ವಂತದ್ದಾಗಿರಬೇಕು. ಬೇರೆಯವರ ವಸ್ತುಗಳನ್ನು ಕೊಟ್ಟರೆ ಅದನ್ನು ದಾನವೆನ್ನಲಾಗದು. ಜೈನಾಗಮಗಳಲ್ಲಿ ಲೌಕಿಕ ದಾನ ಮತ್ತು ಪಾರಮಾರ್ಥಿಕದಾನ ಎಂಬೆರಡರ ಪರಿಕಲ್ಪನೆಯಿದೆ. ಸಾಮಾನ್ಯವಾಗಿ ಜೈನಧರ್ಮದ ಜಿನಾಲಯ, ಮಠ ಮತ್ತು ಆಚಾರ್ಯರಿಗೆ ದಾನಮಾಡಿದ ಭೂಮಿಯ ಮೇರೆಯನ್ನು ಸೂಚಿಸಲು ಮುಕ್ಕೊಡೆ, ಜಿನ ಪದ್ಮಾವತಿ ಮೊದಲಾದ ಶಿಲ್ಪ ಅಥವಾ ರೇಖಾಚಿತ್ರಗಳನ್ನು ಒಳಗೊಂಡ ಶಿಲೆಗಳನ್ನು ನಿಲ್ಲಿಸಲಾಗುತ್ತಿತ್ತು. ಕೆಲವೊಮ್ಮೆ ಬಸದಿಗಳ ಸೀಮಾಕ್ರಮವನ್ನು ಗುರುತಿಸುವಾಗ ಹೆಸರಿಸಲಾಗುತ್ತಿತ್ತು.[೧೦೫] ಕಾಮಲಾಪುರ ಗ್ರಾಮದಲ್ಲಿ ಭಾರತೀಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿ ಇರುವ ಮುಕ್ಕೊಡೆಗಲ್ಲುಗಳು ಕೇವಲ ಉದಾಹರಣೆಗಳಿವೆ.

ಹೀಗೆ ಈ ವರೆಗೆ ವಿವರಿಸಿದ ಸ್ಮಾರಕ ಶಿಲೆಗಳಲ್ಲಿನ ವಿವಿಧ ಬಗೆಯ ಮರಣಗಳಲ್ಲಿ, ಸಮಾಧಿ ಮರಣ ಮಾತ್ರ ಜೈನಪರ. ಮಿಕ್ಕವೆಲ್ಲಾ ಹಿಂದೂ ಧರ್ಮದ ಪರ. ಈ ರೀತಿಯ ಮರಣ ಪ್ರಾಚೀನ ಕಾಲದಲ್ಲಿ ದೇವರಿಗಾಗಿ ಭಕ್ತ ಪತಿಗಾಗಿ ಸತಿ, ಅರಸನಿಗಾಗಿ ಆಳು, ಮಾಡಿಕೊಂಡು ಆತ್ಮಾರ್ಪಣೆ ಇವು ಅವರ ಸಂಸ್ಕೃತಿಯ ಬಗ್ಗೆ ನಮ್ಮಲ್ಲಿ ಭಕ್ತಿರಸವನ್ನು ಉಕ್ಕಿಸುತ್ತವೆ. ಸಮಾಧಿ ಮರಣಕ್ಕಿಂತ ವೀರ ಮರಣ ಬಲಿದಾನ ಮರಣಗಳು ಹೆಚ್ಚು ಅನುಕಂಪವನ್ನು ಗಳಿಸಿಕೊಳ್ಳುವಂತವು. ಸಮಾದಿ ಮರಣ ಒಂದು ವಿಧವಾದ ನೈಸರ್ಗಿಕ ಮರಣ. ಉಳಿದವು ಅನೈಸರ್ಗಿಕ ಮರಣ. ನೈಸರ್ಗಿಕ ಮರಣಕ್ಕಿಂತ ಅನೈಸಗಿಕ ಮರಣ ನಮ್ಮಲ್ಲಿ ಅಧಿಕ ಕರುಣೆಯನ್ನು ಹುಟ್ಟಿಸುವುದು ಸ್ವಾಭಾವಿಕ. ವೀರ ಮರಣ, ವೈರಿಯಿಂದ ಆಕಸ್ಮಿಕ ಪ್ರಾಪ್ತವಾದರೆ ಬಲಿದಾನ ಮರಣ ಪ್ರಜ್ಞಾ ಪೂರಕವಾಗಿ ಪ್ರಾಪ್ತವಾಗುತ್ತದೆ.

ಒಟ್ಟಿನಲ್ಲಿ ಈ ಸ್ಮಾರಕ ಗಲ್ಲುಗಳು ಮೂಲತಃ ಸಮಾಜದಲ್ಲಿನ ವೀರರ ಮೌಲ್ಯಗಳನ್ನು ಜೀವಂತವಾಗಿ ಚಿತ್ರಿಸುವ ಆಧಾರಸ್ತಂಭಗಳಾಗಿವೆ. ಇವು ಸಮಕಾಲೀನ ಸಂಸ್ಕೃತಿ, ಸಮಾಜದ ಧರ್ಮ, ಕಲೆ, ವಾಸ್ತುಶಿಲ್ಪ, ವಾಸ್ತ್ರಾಭರಣ, ಆಚಾರ-ವಿಚಾರ, ಜಾನಪದ ಸಂಪ್ರದಾಯ, ನಂಬಿಕೆಗಳು, ಆಯುಧಗಳು, ವಾದ್ಯ ಪ್ರಾಣಿ ಮೊದಲಾದ ಸಂಗತಿಗಳ ಅಧ್ಯಯನಕ್ಕೆ ಮೂಲ ಆಕರಗಳಾಗಿವೆ.

**ಅಡಿ ಟಿಪ್ಪಣಿ**

೧. ಚಿದಾನಂದಮೂರ್ತಿ.ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೯, ಪು.೧
೨. ಪಾಟೀಲ.ಎಸ್.ಸಿ, ಕರ್ನಾಟಕದ ಜಾನಪದ ಚಿತ್ರಕಲೆ, ೧೯೯೩, ಪು.೧೭
೩. ಅನಂತರಂಗಚಾರ್.ಎನ್, ಭಾರತೀಯಶಿಲ್ಪ ಶಾಸ್ತ್ರದ ಸಂಕ್ಷಿಪ್ತಪರಿಚಯ ಬಾಗಿನ, ೧೯೫೪, ಪು.೩೦೮ (ಎಸ್.ವಿ.ರಂಗಣ್ಣನವರ ಸ್ಮರಣ ಸಂಚಿಕೆ)
೪. ರಾಮಚಂದ್ರರಾವ್.ಎಸ್.ಕೆ, ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ೧೯೭೫, ಪು.೧೧
೫. ಜ್ಞಾನಾನಂದ.ಜಿ, ಶಿಲ್ಪಾದರ್ಶ, ಸಂಪುಟ-೧, ೨೦೦೧, ಪು.೭೦
೬. ರಾಮಚಂದ್ರರಾವ್.ಎಸ್.ಕೆ, ಪೂರ್ವೋಕ್ತ, ಪು.೮೮
೭. ಗೋಪಾಲ್.ಬಾ.ರಾ, ಕರ್ನಾಟಕ ಮೂರ್ತಿಶಿಲ್ಪ ಅವಲೋಕನ, ಕರ್ನಾಟಕ ಪರಂಪರೆ ಸಮೀಕ್ಷೆ ೧೯೮೫, ಪು.೧೩೨
೮. ರಾಮಚಂದ್ರರಾವ್.ಎಸ್.ಕೆ, ಪೂರ್ವೋಕ್ತ, ಪು.೬೪
೯. ವೆಂಕೋಬರಾವ್.ಬಿ, ವಿಗ್ರಹರಾಧನೆಯೂ-ವಿಗ್ರಹಗಳು ಶಿಲ್ಪಕಲಾ ಪ್ರಪಂಚ, ೧೯೫೯ ಪು.೪೬
೧೦. ಅದೇ ಪು.೪೬
೧೧. ರಾಮಚಂದ್ರರಾವ್.ಎಸ್.ಕೆ, ಪೂರ್ವೋಕ್ತ ಪು.೬೮
೧೨. ಅದೇ ಪು.೬೮
೧೩. ಅದೇ ಪು.೭೦
೧೪. ವೆಂಕೋಬರಾವ್.ಬಿ, ಪೂರ್ವೋಕ್ತ ಪು.೪೭
೧೫. ಸುಂದರ.ಅ (ಸಂ) ಕರ್ನಾಟಕ ಚರಿತ್ರೆ ಸಂಪುಟ-೧, ೧೯೯೭, ಪು.೩೧೩
೧೬. ಅದೇ ಪು.೩೧೪
೧೭. ಸ್ವಾಮಿ ಹರ್ಷಾನಂದ, ಕರ್ನಾಟಕ ಚರಿತ್ರೆ ಸಂಪುಟ-೧, ೧೯೫೨, ಪು.೫೯
೧೮. ರಾಮಚಂದ್ರರಾವ್.ಎಸ್.ಕೆ, ಪೂರ್ವೋಕ್ತ ಪು.೧೦೬
೧೯. ಅದೇ ಪು.೧೧೪-೧೧೫
೨೦. ವಾಸುದೇವನ್.ಸಿ.ಎಸ್. ವಿಜಯನಗರ ಅಧ್ಯಯನ ಸಂ.೧೨, ಹಂಪಿ ಪರಿಸರದ ಪಂಚ ಲಿಂಗಗಳು, ೨೦೦೭. ಪು.೨೪೦-೨೪೨
೨೧. ಅದೇ ಪು.೧೯೧
೨೨. ಅದೇ ಪು.೧೧೪-೧೧೫
೨೩. ಅದೇ ಪು.೧೨೪-೧೨೫

೨೪. ಅದೇ ಪು.೧೨೪

೨೫. ಅದೇ ಪು.೧೯೦

೨೬. ಅದೇ ಪು.೧೯೧

೨೭. ಅದೇ ಪು.೧೯೦

೨೮. ಅದೇ ಪು.೧೯೬–೧೯೭

೨೯. ಶ್ರೀಧರಮೂರ್ತಿ.ಮ, ದೇವತೆಗಳು ಮತ್ತು ಹಬ್ಬಗಳು ೧೯೮೧, ಪು.೧೦

೩೦. ಅದೇ ಪು.೧೦–೧೧

೩೧. ರಾಮಚಂದ್ರ.ಎಸ್.ಕೆ, ಪೂರ್ವೋಕ್ತ ಪು.೭೬

೩೨. ಟಿ.ವಿ.ಗೋಪಿನಾಥರಾವ್ ಎಲಿಮೆಂಟ್ಸ್ ಆಫ್ ಹಿಂದೂ, ಸಂಪುಟ–೨, ೧೯೬೮, ಐಕನೋಗ್ರಾಫಿ, ಭಾಗ–೧, ಪು.೩೬

೩೩. ರಾಮಚಂದ್ರ.ಎಸ್.ಕೆ, ಪೂರ್ವೋಕ್ತ ಪು.೮೯–೯೭

೩೪. ಅನಂತರಾಮು.ಕೆ, ಕವಿ ಬ್ರಹ್ಮಶಿವ–ಒಂದು ಅಧ್ಯಯನ, ೧೯೯೧, ಪು.೨೪೭

೩೫. ನೇಗಿನಹಾಳ.ಎಂ.ಬಿ, ಶಾಸನಗಳಲ್ಲಿ ವೀರಭದ್ರ ದೇವರು, ಪು.೩೮೦–೩೮೫

೩೬. ಪಾಡಿಗಾರ ಶ್ರೀನಿವಾಸ 'ಬಾದಾಮಿ ಮತ್ತು ವೈಷ್ಣವ ಧರ್ಮ' ಕರ್ನಾಟಕ ಭಾರತಿ ಸಂ–೨೧, ಜನೇವರಿ–ಮೇ, ೧೯೮೯, ಪು.೧೦೭

೩೭. ಅದೇ ಪು.೧೦೮

೩೮. ಸುಂದರ.ಅ (ಸಂ) ಪೂರ್ವೋಕ್ತ, ಪು.೩೯೮

೩೯. ರಾಮಚಂದ್ರರಾವ್.ಎಸ್.ಕೆ, ಪೂರ್ವೋಕ್ತ, ಪು.೧೪೨

೪೦. ಅದೇ ಪು.೧೪೫

೪೧. ಅದೇ ಪು.೧೪೬

೪೨. ಅದೇ ಪು.೧೩೩

೪೩. ಅದೇ ಪು.೧೨೩–೩೨೪

೪೪. ಎಲಿಗಾರ್ ಚೆನ್ನಕ್ಕ ಪು.೧೭೪–೧೭೫

೪೫. ರಾಮಚಂದ್ರರಾವ್.ಎಚ್.ಕೆ. ಪೂರ್ವೋಕ್ತ, ಪು.೩೨೬–೩೨೭

೪೬. ಶ್ರೀಧರಮೂರ್ತಿ, ಮ ಪೂರ್ವೋಕ್ತ, ಪು.೭೪–೭೫

೪೭. ರಾಮಚಂದ್ರರಾವ್.ಎಸ್.ಕೆ. ಪೂರ್ವೋಕ್ತ, ಪು.೧೭೫–೧೭೬

೪೮. ಅನಂತರಾಮು.ಕೆ ಪೂರ್ವೋಕ್ತ, ಪು.೧೭೫–೧೭೬

೪೯. ರಾಮಚಂದ್ರರಾವ್.ಎಚ್.ಕೆ. ಪೂರ್ವೋಕ್ತ, ಪು.೧೭೪-೧೭೫

೫೦. ನರಸಿಂಹಮೂರ್ತಿ.ಪಿ.ಎನ್. ಪೂರ್ವೋಕ್ತ, ಪು-೪೦

೫೧. ಅದೇ ಪು-೫೨

೫೨. ರಾಮಚಂದ್ರರಾವ್, ತರಂಗ ವಾರಪತ್ರಿಕೆ, ೨೦೦೧, ನವ್ಹಂಬರ್ ೧, ಪು-೩೪೩

೫೩. ಅದೇ ಪು-೩೪೩

೫೪. ಶ್ರೀಧರ ಮೂರ್ತಿ, ಪೂರ್ವೋಕ್ತ, ಪು-೨೧-೨೨

೫೫. ಅದೇ ಪು-೨೭-೨೮

೫೬. ಷಡಕ್ಷರಯ್ಯ.ಆರ್.ಎಂ, ಶಿಗ್ಗಾವಿಯಲ್ಲಿ ದೊರೆತ ಅಪರೂಪದ ಗಜಲಕ್ಷ್ಮಿಶಿಲ್ಪ ಕರ್ನಾಟಕ ಭಾರತಿ ಸಂ ೨೪/೮ ೧೯೯೨, ಪು.೧೦೪

೫೭. ದೇವರಕೊಂಡಾರೆಡ್ಡಿ ಸಪ್ತಮಾತೃಕೆಯರು ಹರಿತಸಿರಿ (ಹೆಚ್.ವಿ.ವೀರನಾಯಕ ಹರತಿ ನೆನಪಿನ ಸಂಪುಟ) ೧೯೮೭, ಪು.೮೪

೫೮. ಅದೇ ಪು.೯೦-೯೨

೫೯. ಪಾಟೀಲ ಭೋಜರಾಜ, ನಾಗರಖಂಡ-೭೦ ಒಂದು ಅಧ್ಯಯನ, ೧೯೯೫, ಪು.೨೨೩

೬೦. ಅದೇ ಪು.೧೮

೬೧. ಶಾಂತಿರಾಜಶಾಸ್ತ್ರಿ.ಎ.(ಸಂ) ಜಿನಸೇನಾಚಾರ್ಯ-ಗುಣಭದ್ರಾಚಾರ್ಯ ವಿರಚಿತ ಮಹಾಪುರಾಣ ಸಂ-೧, ೧೯೮೧, ಪರ್ವ ಸಂ-೨೧, ಪ.ಸಂ.೬೮-೭೫ ಪು.೮೨೮-೮೨೯

೬೨. ಶಿಟ್ಟಿ ಎಸ್.ಡಿ, ಜೈನ ಬಸದಿಗಳು, ೧೯೯೯, ಪು.೩೬

೬೩. ಮಿರ್ಜಾ ಅಣ್ಣರಾಯ, ಜೈನಧರ್ಮ, ೧೯೯೭, ಪು.೪೭೧-೪೭೮

೬೪. ಶ್ರೀಧರಮೂರ್ತಿ.ಮ, ಪೂರ್ವೋಕ್ತ, ಪು.೫೦

೬೫. ಶ್ರೀಧರಮೂರ್ತಿ.ಮ, ಪೂರ್ವೋಕ್ತ, ಪು.೫೦

೬೬. ಶ್ರೀಧರಮೂರ್ತಿ.ಮ, ಪೂರ್ವೋಕ್ತ, ಪು.೫೬

೬೭. ಸುರೇಶ ಕೃಷ್ಣಪ್ಪ.ಎಂ.ವಿ. ಮತ್ತು ಚೆನ್ನಬಸಪ್ಪ.ಎಸ್.ಪಾಟೀಲ, ೧೯೯೮, ವಿಜಯನಗರ ಅಧ್ಯಯನ, ಸಂಪುಟ-೪ ಪು.೭

೬೮. ಕಲಬುರ್ಗಿ.ಎಂ.ಎಂ, ೧೯೮೦, ಸಮಾಧಿ-ಬಲಿಧಾನ-ವೀರಮರಣ-ಸ್ಮಾರಕಗಳು, ಪು.೩-೪

೬೯. ಅದೇ ಪು.೬

೭೦. ಅದೇ ಪು.೯೯-೧೦೦

೭೧. ಪರಮಶಿವ ಮೂರ್ತಿ.ಡಿ.ವಿ, ಕನ್ನಡ ಶಾಸನ ಶಿಲ್ಪ, ೧೯೯೯, ಪು.೨೨

೭೨. ಶೇಷಶಾಸ್ತ್ರಿ.ಆರ್., ಕರ್ನಾಟಕದ ವೀರಗಲ್ಲು, ೧೯೮೨, ಪು.೧೧

೭೩. ಚಿತ್ರದುರ್ಗ ಜಿಲ್ಲೆಯ ತಮಟಕಲ್ಲು ಗ್ರಾಮದಲ್ಲಿ ದೊರೆತಿರುವ ಕ್ರಿ.ಶ.೫೦೦ರ ವೀರಗಲ್ಲವೇ ಈ ನಾಡಿನ ಅತೀ ಪ್ರಾಚೀನ ವೀರಗಲ್ಲಾಗಿದೆ.

೭೪. ಪಂಚಮುಖಿ.ಆರ್.ಎಸ್, ಕರ್ನಾಟಕ ಇತಿಹಾಸ, ೧೯೬೭, ಪು.೭೦-೭೧

೭೫. ಶೇಷಶಾಸ್ತ್ರಿ.ಆರ್., ಪೂರ್ವೋಕ್ತ, ಪು.೧೧

೭೬. ಅದೇ ಪು.೧೯-೨೦

೭೭. ಚಿದಾನಂದಮೂರ್ತಿ.ಎಂ, ಪೂರ್ವೋಕ್ತ, ಪು.೪-೫

೭೮. ಕಲಬುರ್ಗಿ.ಎಂ.ಎಂ., ಪೂರ್ವೋಕ್ತ, ಪು.೭೪

೭೯. ಅದೇ ಪು.೭೪-೭೫

೮೦. ಅದೇ ಪು.೭೫-೭೬

೮೧. ಶೇಷಶಾಸ್ತ್ರಿ.ಆರ್. ಪೂರ್ವೋಕ್ತ, ಪು.೩೬೯

೮೨. ಅದೇ ಪು.೩೬೮

೮೩. ಅದೇ ಪು.೩೬೮

೮೪. ಗೋಪಾಲ.ಬಾ.ರಾ, ಬನವಾಸಿ ಕದಂಬರು, ೧೯೮೩, ಶಾ.ಸ.೨೫, ಪು.೫೦-೫೧

೮೫. ಶೇಠೆ.ಬಿ.ಎಸ್, ಕರ್ನಾಟಕದ ಸತಿಪದ್ಧತಿ, ೧೯೯೧, ಪು.೧೪೧-೧೫೫

೮೬. ಕಲಬುರ್ಗಿ.ಎಂ.ಎಂ., ಪೂರ್ವೋಕ್ತ, ಪು.೩೭

೮೭. ಪರಮಶಿವಮೂರ್ತಿ.ಡಿ.ವಿ. ಪೂರ್ವೋಕ್ತ, ಪು.೨೫೮

೮೮. ಕಲಬುರ್ಗಿ.ಎಂ.ಎಂ., ಪೂರ್ವೋಕ್ತ, ಪು.೬

೮೯. ಮಿರ್ಜಿ ಅಣ್ಣರಾಯ, ಪೂರ್ವೋಕ್ತ, ಪು.೫೧೭

೯೦. ಕನವಳ್ಳಿ ಸದಾನಂದ ಮತ್ತು ಶೆಟ್ಟರ್.ಎಸ್. (ಅನು) ಸಾವಿಗೆ ಆಹ್ವಾನ, ೨೦೦೪, ಪು.೯೮

೯೧. ಕಲಬುರ್ಗಿ.ಎಂ.ಎಂ., ಪೂರ್ವೋಕ್ತ, ಪು.೧೦

೯೨. ಪರಮಶಿವಮೂರ್ತಿ.ಡಿ.ವಿ, ಪೂರ್ವೋಕ್ತ, ಪು.೧೧೮

೯೩. ಅದೇ ಪು.೧೧೮

೯೪. ಅದೇ ಪು.೧೩೩

೯೫. ಕೃಷ್ಣಪ.ಪಿ.ಎಂ.ವಿ. ಮತ್ತು ಚೆನ್ನಬಸಪ್ಪ.ಎಸ್.ಪಾಟೀಲ, ವಿ.ಅ.ಸಂ. ೧೯೯೮, ೪, ಪು.೧೧

೯೬. ಅದೇ ಪು.೧೧-೧೨

೯೭. ಅರ್ಥಶಾಸ್ತ್ರ, ಅಧ್ಯಾಯ-೨, ಪು.೩೫

೯೮. ಮನುಸ್ಮೃತಿ, ಅಧ್ಯಾಯ-೮, ಪು.೨೪೬-೨೪೮

೯೯. ಯಾಜ್ಞವಲ್ಕ್ಯಸ್ಮೃತಿ, ಅಧ್ಯಾಯ-೨, ಪು.೧೫೧
೧೦೦. ಮನುಸ್ಮೃತಿ, ಪೂರ್ವೋಕ್ತ, ಪು.೨೫೦-೨೫೧
೧೦೧. ಪೋತದಾರ ವಿಠಲ್.ಡಿ, ಮೇರೆಗಲ್ಲುಗಳು, ಇತಿಹಾಸದರ್ಶನ ಸಂ.೯, ೧೯೭೬, ಪು.೧೨೬-೧೨೯
೧೦೨. ಕೊಟ್ರಯ್ಯ.ಸಿ.ಟಿ.ಎಂ, ಕ್ಷೇತ್ರ ಸೀಮಾ ನಿರ್ಣಯ, ಹೇಮಕೂಟ ಸಂ.೨/೮, ೧೯೭೬, ಪು.೩-೧೦
೧೦೩. ನಂಜುಂಡಪ್ಪ.ವೈ.ಡಿ, ಶಿವಯೋಗಿ ಶ್ರೀ ಜೇನುಕಲ್ಲು ಸಿದ್ದೇಶ್ವರ, ೧೯೯೯, ಪು.೨೦
೧೦೪. ಬಡಿಗೇರ.ಪಿ.ಬಿ, ಆಚಾರ್ಯ ಉಮಾಸ್ವಾಮಿ ವಿರಚಿತ ಅಧ್ಯಾಯ-೭, ತತ್ವಾರ್ಥಾಧಿಗಮ ಸೂತ್ರ ಸಂ-೩೩, ೧೯೭೯, ಪು.೧೩೬
೧೦೫. ಹಂಪನಾಗರಾಜಯ್ಯ, ಶಾಸನಗಳಲ್ಲಿ ಬಸದಿಗಳು, ೧೯೯೮, ಪು.೨೯



## ಅಧ್ಯಾಯ-೫

# ಜಾನಪದ ವೈಶಿಷ್ಟ್ಯತೆ

ಜಾನಪದ ಎಂಬುದು ಮಾನವನ ಅವ್ಯಾಹತ ಬದುಕನ್ನು ದಾಖಲಿಸುವ ಮುಂದುವರೆಯುವ ಜೀವಂತ ಪ್ರಕ್ರಿಯೆ.[೧] ಒಂದು ಸಮಾಜದ ಅಥವಾ ಸಮುದಾಯದ ಸಂಸ್ಕೃತಿಯನ್ನು ಸಾಂಪ್ರದಾಯಿಕವಾಗಿ ಪ್ರತಿಬಿಂಬಿಸುವ ಜಾನಪದ ಸಾಂಪ್ರದಾಯಿಕ ಮನೆಗಳು, ಕಣಜಗಳು, ಕೋಟೆ-ಕೊತ್ತಲಗಳು, ಮನೆ ಬಳಕೆ ವಸ್ತುಗಳು, ಮಡಿಕೆ-ಕುಡಿಕೆ ಇವೆಲ್ಲವೂ ಜಾನಪದ ಎಂದೆನಿಸಿಕೊಳ್ಳುತ್ತವೆ.[೨] ಜಾನಪದ ಗತಕಾಲದ ವಿಷಯವನ್ನಷ್ಟೇ ಪ್ರತಿಬಿಂಬಿಸುವದಲ್ಲದೇ, ಇದೊಂದು ಜೀವಂತ ಒರತೆಯಾಗಿದೆ. ಸ್ಮಿತ್ ಥಾಂಸನ್‌ರವರ ಪ್ರಕಾರ 'ಜಾನಪದ' ಎಂಬುದು ಮೌಖಿಕವಾಗಿ ಹರಿದು ಬಂದಿರುವ ನೆನಪುಗಳು ಅಥವಾ ಆಚರಣೆಗಳು.[೩] ವಿಲಿಯಂ ಆರ್.ಭಾಸ್ಕರ್ ರವರು ಪುರಾಣಗಳು, ಐತಿಹ್ಯಗಳು, ಕಥೆ, ಒಗಟುಗಳು ಹಾಗೂ ಗೀತೆಗಳನ್ನು ಜಾನಪದ ಎಂದಿದ್ದಾರೆ.[೪] ಜೋಗಸ್ ಬೇಲಿಸ್ ರವರು-ಇದು ಸಾಂಪ್ರದಾಯಿಕ ವಿಜ್ಞಾನ ಹಾಗೂ ಜಾನಪದ ಕಾವ್ಯ ಎಂದಿದ್ದಾರೆ.[೫] ಆರ್ಚರ್ ಟೈಲರ್ ರವರ ಪ್ರಕಾರ 'ಜಾನಪದ' ಎಂಬುದು ಪರಂಪರಾನುಗತವಾದ ತಲೆಮಾರಿನಿಂದ ತಲೆಮಾರಿಗೆ ಸಾಗಿ ಬರುವ ಆಚರಣೆ.[೬] ಡಾ॥ ಹಾ.ಮಾ.ನಾಯಕ್ ರವರು ಜಾನಪದವನ್ನು ಗ್ರಂಥಸ್ಥವಲ್ಲದ ಸಂಪ್ರದಾಯದ ಮೊತ್ತ ಎಂದಿದ್ದಾರೆ. ಅಂದರೆ ಜಾನಪದ ಎಂಬುದು ಸಂಪ್ರದಾಯ ಕುರಿತು ತಿಳಿಸುವ ವಿಜ್ಞಾನ. ಹೀಗೆ ಜಾನಪದದ ಅರ್ಥ ಬಹಳೇ ವಿಶಾಲವಾದದ್ದು. ಆಂಗ್ಲ ಭಾಷೆಯಲ್ಲಿ ಇದನ್ನು Flok lore ಎಂಬುದಾಗಿ ಕರೆದಿದ್ದಾರೆ. ವಿಲಿಯಂ ಎಂಬುವನು ಈ ಶಬ್ದವನ್ನು ೧೮೪೬ರಲ್ಲಿ ಮೊಟ್ಟಮೊದಲು ಬಳಕೆಗೆ ತಂದನು. Flok lore ಎಂಬ ಶಬ್ದ ಇದೊಂದು ಇಡಿಯಾದ ಘಟಕ. ಈ ಶಬ್ದವನ್ನು ಬಿಡಿಸಿ ನೋಡಿದಲ್ಲಿ Flok ಎನ್ನುವ ಶಬ್ದ ಬಳಸುವ ಜನಪದಕ್ಕೆ ಸಂವಾದಿಯಾಗಿದೆ. ಜನಪದ ಎಂಬ ಸಂಸ್ಕೃತ ಶಬ್ದದ ಅರ್ಥ ಸಮುದಾಯ ಎಂದರ್ಥ ಕೊಡುತ್ತದೆ. Lore ಎಂದರೆ ಕಲಿಕೆ, ಜ್ಞಾನ, ಎಂದರ್ಥ.[೭] Flok lore ಎಂಬ ಶಬ್ದದಲ್ಲಿನ Flok ಎಂಬ ಶಬ್ದ ಭಾಷಿಕ ವರ್ಗವನ್ನು ಸೂಚಿಸಬಹುದು. ದೇಶವಾಚಕವಾಗಿಯೂ ಆಗಬಹುದು. ಜಾತಿ ಪಂಗಡಗಳ ಹಿನ್ನಲೆಯಲ್ಲಾದರೂ ಇರಬಹುದು. ಅಥವಾ ಒಂದು ಸಣ್ಣ ಕುಟುಂಬವೂ ಆಗಬಹುದು. ಆಂಗ್ಲ ಬಾಷೆಯ Flok ಮತ್ತು lore ಇವೆರಡೂ ಶಬ್ದಗಳು

ಒಂದಕ್ಕೊಂದು ಬೆಸೆದು ಕೊಂಡಿವೆ. ಇವೆರಡೂ ಬೆಸದು ಕೊಂಡು ಹೊಸ ವಿಜ್ಞಾನ ಒಂದನ್ನು ನಿರ್ದೇಶಿಸುವ ಶಬ್ದವಾಗಿ ಬಳಕೆಯಾಗಿದೆ.[೮]

ಜಾನಪದ ಎಂಬುದು ಒಂದು ಹಳೆಯ ವಿಷಯ. ಆದರೆ ಇದೊಂದು ಅವಶೇಷವಾಗಿರದೆ ಜೀವಂತ ಪಳೆಯುಳಿಕೆಯಾಗಿರುತ್ತದೆ. ಜಾನಪದ ಎಂಬುದು ಜನಪದವನ್ನು ಮಾತ್ರ ಕುರಿತ ಅಧ್ಯಯನವಲ್ಲ. ಇದು ಜನಪದದ ಸಂಪ್ರದಾಯವನ್ನು ಕುರಿತ ಅಧ್ಯಯನ.[೯] ಹೀಗೆ ಜಾನಪದ ಸಾಂಪ್ರದಾಯಿಕ ರೀತಿಯ ಜನಜೀವನ–ಇದು ಎಲ್ಲಾ ಸ್ಥಳಗಳಿಗೂ ವ್ಯಾಪಿಸಿದೆ. ಶಾಸನಗಳು, ವೀರಗಲ್ಲುಗಳು, ಮಹಾಸತಿಗಲ್ಲುಗಳು ಅಥವಾ ಸ್ಮಾರಕಗಳ ಜೊತೆ ಜನಪದ ಅಧ್ಯಯನವೂ ಚರಿತ್ರೆಯನ್ನು ಕಟ್ಟುವಲ್ಲಿ ಸಹಕಾರಿಯಾಗಿವೆ. ಈ ಹಿನ್ನಲೆಯನ್ನು ಆಧರಿಸಿ ಕಾಮಲಾಪುರ ಗ್ರಾಮವನ್ನು ಸೀಮಿತವಾಗಿರಿಸಿಕೊಂಡು ಐತಿಹಾಸಿಕ ಪಳೆಯುಳಿಕೆಯ ಜೊತೆಗೆ ಕಂಠಸ್ಥ ಸಾಮಗ್ರಿಗಳು ಹೇಗೆ ಪೂರಕವಾಗಿವೆ ಎಂಬುದನ್ನು ತಿಳಿಸುವುದೇ ಈ ಅಧ್ಯಯನದ ಉದ್ದೇಶವಾಗಿದೆ. ಸಾಂಪ್ರದಾಯಿಕ ಐತಿಹಾಸಿಕ ಕಾಲವನ್ನು, ಇತಿಹಾಸವನ್ನು ಹೇಗೆ ನಿರ್ಮಿಸಿಕೊಳ್ಳುತ್ತಾರೋ ಹಾಗೆ ಜನಪದರು ತಮ್ಮದೇ ರೀತಿಯಲ್ಲಿ ಇತಿಹಾಸವನ್ನು ನಿರ್ಮಿಸಿಕೊಂಡಿರುತ್ತಾರೆ. ಅಧಾರವಿಲ್ಲದೆ ಎರಡೂ ಬಗೆಯ ನಿರೂಪಣೆಗಳು ಸೃಷ್ಠಿಯಾಗಲಾರವು. ಮೌಖಿಕ ಪಠ್ಯಕ್ಕೂ ಅಕ್ಷರದ ಮೂಲಕ ದಾಖಲಾದ ಪಠ್ಯಕ್ಕೂ ಅಂತರವೆನಿಸಿದರೂ ಇತಿಹಾಸವನ್ನು ರಚಿಸಲು ಇವೆರಡೂ ಸಹಕಾರಿಯಾಗುತ್ತವೆ. ಒಟ್ಟಾರೆ ಕಾಮಲಾಪುರದ ಗ್ರಾಮದಲ್ಲಿ ದೊರೆತ ಆಕರಗಳನ್ನು ಗಮನಿಸಿ ಅಧ್ಯಯನದ ಅನುಕೂಲಕ್ಕಾಗಿ ಮೌಖಿಕ ಸಾಹಿತ್ಯ, ಬೌದ್ಧಿಕ ಪರಂಪರೆ, ಸಾಮಾಜಿಕ ಆಚರಣೆಗಳು ಮತ್ತು ಪ್ರದರ್ಶನ ಕಲೆಗಳೆಂದು ವರ್ಗೀಕರಣ ಮಾಡಿ, ಇಲ್ಲಿನ ಜಾನಪದ ಅಧ್ಯಯನದ ಪ್ರಸ್ಥಾವನೆಯನ್ನು ಮಾಡಲಾಗಿದೆ.

ಜಾನಪದ ಕಲೆ ಎನ್ನುವುದು ನಿಸರ್ಗ ಸಹಜವಾದ ಬದುಕನ್ನು ನಡೆಸಿಕೊಂಡು ಬಂದ ಗ್ರಾಮೀಣ ಜನತೆಯ ಕಲೆ. ಸಂಸ್ಕೃತಿಯ ನೈಜ ಬೇರುಗಳು ಜನಪದ ನೆಲೆಯಲ್ಲಿ ಹುದುಗಿರುವುದರಿಂದ ಇತಿಹಾಸ ರಚನೆಯಲ್ಲಿ ಜಾನಪದವು ಪ್ರಮುಖ ಸ್ಥಾನವನ್ನು ಗಳಿಸಿದೆ. ಜನಪದರು ತಮ್ಮದೇ ಆದ ಕಲಾ ಬದುಕಿನಲ್ಲಿ ಬದಕುತ್ತಿರುವಾಗ ಅವರಿಟ್ಟ ಹೆಜ್ಜೆಗಳು ಶಿಷ್ಠರಲ್ಲಿ ಆಕರ್ಷಕವಾಗಿ ಮೌಖಿಕ ಆಚರಣೆಯ ರೂಪದಲ್ಲಿ ಬೆಳೆದು ಬಂದಿತು. ಜಾನಪದವು ಜನತೆಯಿಂದ ಹುಟ್ಟಿದ ಮತ್ತು ಜನತೆಗಾಗಿ ಇರುವ ಸೊತ್ತು.[೧೦] ಜನತೆಯ ಬದುಕಿನ ರೀತಿ ಕಟ್ಟಿದ ಕಥೆಯೇ ಇತಿಹಾಸ. ಇತಿಹಾಸದ ಚೌಕಟ್ಟಿನಲ್ಲಿ ಬೆಳೆದು ಬಂದುದೇ ಕಲೆ.[೧೧] ಕಾಮಲಾಪುರ ಗ್ರಾಮದಲ್ಲಿನ ಈ ಪ್ರಚಲಿತವಿದ್ದ ಜಾನಪದ ಕಲೆಯ ವೈವಿಧ್ಯತೆಯ ಚಿತ್ರಣವನ್ನು ಈ ಕೆಳಗಿನಂತೆ ವಿಭಜಿಸಲಾಗಿದೆ.

**೧. ಚೌಡಿಕೆ:** ಚೌಡಿಕೆ ಎಂಬುದು ಪ್ರಸ್ತುತ ಕಾಮಲಾಪುರ ಗ್ರಾಮದಲ್ಲಿ ಜೋಗಯ್ಯ–ಜೋಗತಿಯರು ಸೇರಿ ನೀಡುವ ಕಲಾ ಪ್ರದರ್ಶನ. ಜಮದಗ್ನಿಯ ಬಗ್ಗೆ, ಗ್ರಾಮ ದೇವತೆಗಳ ಬಗ್ಗೆ ಚೌಡಿಕೆ ವಾದ್ಯ ನುಡಿಸುತ್ತಾ ಹೇಳುವ ಕಲೆ. ಇದು ಗ್ರಾಮ ದೇವತೆಗಳ ಉತ್ಸವಗಳಲ್ಲಿ ಅಥವಾ ಮಂಗಳವಾರ, ಶುಕ್ರವಾರ ಅಥವಾ ದೇವಿ ಜಾತ್ರೆಗಳ ಸಂದರ್ಭದಲ್ಲಿ ಚೌಡಿಕೆ ವಾದ್ಯದ ಮೂಲಕ ಐತಿಹ್ಯವನ್ನು ವಿವರಿಸುವ ಪದ್ಧತಿ ಇಂದಿಗೂ ಪ್ರಚಲಿತದಲ್ಲಿದೆ. ಇವರನ್ನು ಆನಾದಿಗಳು ಎಂದೂ ಕರೆಯುತ್ತಾರೆ. ಗ್ರಾಮ ದೇವತೆಗಳನ್ನು ಹೊಗಳಿ, ರೇಗಿಸಿ, ಅಶ್ಲೀಲವಾಗಿ ಬೈಯುವ ಪ್ರಸಂಗಗಳು ಈ ಐತಿಹ್ಯದಲ್ಲಿ

ಒಳಗೊಂಡಿರುತ್ತದೆ. ನಪುಂಸಕರಾದವರು ಜೋಗಪ್ಪ, ಜೋಗತಿ ದೀಕ್ಷೆ ಪಡೆಯುವ ಕೆಲಸವೂ ಕಾಮಲಾಪುರ ಮತ್ತು ಇಲ್ಲಿನ ಪರಿಸರದಲ್ಲಿ ನಡೆಯುತ್ತದೆ.

**೨. ತಂಬೂರಿ:** ತಂಬೂರಿ ವಾದ್ಯವನ್ನು ಹೆಚ್ಚಿನ ಮಟ್ಟಿಗೆ ಹಾಡುಗಾರಿಕೆ ಮತ್ತು ಶಿವಭಜನೆಗಾಗಿ ಬಳಸಲಾಗುತ್ತದೆ. ಉದ್ದವಾದ ಬಿದಿರು ಬೊಂಬೆಯನ್ನು ಕೊರೆದು ಸೂರೆ ಬುರುಡೆಯನ್ನು ಕಟ್ಟಿ ಬಿದಿರಿನ ಮೇಲಿನಿಂದ ಕೆಳಕ್ಕೆ ಸಣ್ಣ ತಂತಿಯನ್ನು ಸೊರೆ ಬರುಡೆಯ ಮೂಲಕ ಹಾದು ಬರುವಂತೆ ಮಾಡಿ ಈ ವಾದ್ಯವನ್ನು ನುಡಿಸುತ್ತಾರೆ. ಈ ವಾದ್ಯ ವಿಜಯನಗರ ಕಾಲದಿಂದಲೂ ಪ್ರಸ್ತುತವಿದೆ. ಜನಜೀವನದ ಹಲವಾರು ವಿಚಾರಗಳನ್ನು ಇಲ್ಲಿನ ವಿಜಯ ವಿಠಲನನ್ನು ಸ್ಮರಿಸಿದ ದಾಸ ಶ್ರೇಷ್ಠರಾದ ಪುರಂದರ ದಾಸರು ತಮ್ಮ ಕೀರ್ತನೆ ವಾದ್ಯಕ್ಕೆ ಬಳಸುತ್ತಿದ್ದ ತಂಬೂರಿ ವಾದ್ಯ ಮತ್ತು ಹಲವಾರು ತಂತಿವಾದ್ಯಗಳು ಅವಿಷ್ಕಾರಗೊಂಡಿದ್ದವು. ಮಹಾನವಮಿ ದಿಬ್ಬದಲ್ಲಿ ಕಂಡುಬರುವ ದೊಂಬರಾಟ ಪ್ರದರ್ಶನ, ಉಬ್ಬುಶಿಲ್ಪದ ಮೂಲಕ ಮೂಡಿ ಬಂದಿದೆ. ಪ್ರದರ್ಶನ ನಡೆಯುತ್ತಿರುವ ಈ ಸಂದರ್ಭದಲ್ಲಿ ಕಲಾವಿದೆಯೊಬ್ಬಳು ನುಡಿಸುತ್ತಿರುವ ತಂತಿ ವಾದ್ಯ ವೈಶಿಷ್ಟ ಪೂರ್ಣವಾಗಿದೆ. ಇದಲ್ಲದೇ ಇಂತಹ ವಾದ್ಯಗಳು ಹಜಾರರಾಮ ದೇವಾಲಯ, ಮಾಲ್ಯವಂತ ದೇವಾಲಯಗಳಲ್ಲೂ ಕಂಡು ಬರುತ್ತವೆ. ಇವು ವಿಜಯನಗರ ಕಾಲದಿಂದಲೂ ಜಾನಪದ ಸಂಗೀತಕ್ಕೆ ಬಳಸಲ್ಪಡುವ ತಂತಿ ವಾದ್ಯಗಳ ನಮೂನೆಗೆ ಮಾದರಿಯಾಗಿದೆ. ಉದಾ: ಕಾಮಲಾಪುರದ ನಿವಾಸಿ ಲಕ್ಷ್ಮಣದಾಸ್-ತತ್ವಪದ ಗಾಯಕ-ತಂಬೂರಿ ಹಿಡಿದು ಅನೇಕ ತತ್ವ ಪದಗಳು ಹಾಡಿರುವುದು ಇಂದಿಗೂ ಪ್ರಚಲಿತದಲ್ಲಿದೆ.

**೩. ನಂದಿಧ್ವಜ ಕುಣಿತ:** ಜಾತ್ರೆಯ ವೇಳೆ, ಫಲಪೂಜೆಯ ವೇಳೆ, ಕಲಾವಿದರು ನಂದೀ ಧ್ವಜ ಕುಣಿತ ಮಾಡುತ್ತಾರೆ. ನಂದಿ ಧ್ವಜವನ್ನು ನಂದಿಕಂಬ, ನಂದಿಕೋಲು, ಬರಡೇ ಕಂಬ, ವ್ಯಾಸಗೋಲು, ನಂದಿಪಟ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಸದ್ಯ ಕರ್ನಾಟಕದಲ್ಲಿ ವೀರಶೈವ ಮತ್ತು ನಾಯಕ ಸಮುದಾಯದವರು ಧಾರ್ಮಿಕ ಉತ್ಸವ, ಮದುವೆ, ಜಾತ್ರೆಗಳ ಸಂದರ್ಭದಲ್ಲಿ ಈ ಧ್ವಜವನ್ನು ಪ್ರದರ್ಶಿಸುತ್ತಾರೆ. ಈ ಕುಣಿತ ಮೂಲತಃ ಶಿವನಿಗೆ ಸಂಬಂಧಿಸಿದೆ. ನಂದಿ ಧ್ವಜ ಕೋಲಿನಲ್ಲಿ ಕಾಣುವ ಬುರುಡೆಯಾಕಾರದ ರಚನೆಗಳು ವೀರಭದ್ರನಿಂದ ಕೊಲ್ಲಲ್ಪಟ್ಟ ದಕ್ಷಬ್ರಹ್ಮ ಹಾಗೂ ಅನುಯಾಯಿಗಳ ಮೇರೆಗೆ ಸಾಧಿಸಿದ ವಿಜಯದ ಸಂಕೇತ.[೧೩] ಧ್ವಜ ಕೋಲಿನಲ್ಲಿ ಕಾಣುವ ಧ್ವಜವು ಸಿಂಹದ ಚರ್ಮದ್ದಾಗಿದೆ.[೧೪] ಎತ್ತರವಾದ ಒಂದು ಕಂಬಕ್ಕೆ ಬಣ್ಣದ ಬಟ್ಟೆಯನ್ನು ಸುತ್ತಿ ಅಡಿಯಲ್ಲಿ, ನಂದಿ ಬಸವನ ವಿಗ್ರಹವನ್ನು ಕಟ್ಟಿಕೊಂಡು, ಭುಜದಿಂದ ಕೆಳಕ್ಕೆ ಒಂದು ಚೀಲವನ್ನು ಕಟ್ಟಿಕೊಂಡು ಕುಣಿಯುವಂತಹ ಪ್ರದರ್ಶನಾತ್ಮಕ ಕಲೆಯೇ ನಂದಿ ಧ್ವಜ ಕುಣಿತವಾಗಿದೆ. ಡೋಲು ವಾದನ, ತಾಳ, ಮೃದಂಗ ಇವುಗಳ ಜೊತೆಗೆ ತಾಳಕ್ಕೆ ತಕ್ಕ ಹಾಗೆ ನಯವಾಗಿ ಕುಣಿಯುವುದು ಈ ಕಲೆಯ ವೈಶಿಷ್ಟ್ಯತೆಯಾಗಿದೆ. ವೀರಭದ್ರ ಕುಣಿತದಲ್ಲಿ ನಂದೀ ಕೋಲು ಕುಣಿತವನ್ನು ಪ್ರದರ್ಶಿಸುವ ಪದ್ಧತಿಯೂ ಇಂದಿಗೂ ಇದೆ. ಇದನ್ನು ಗಂಡು ಕಲೆ ಎಂತಲೂ ಕರೆಯುತ್ತಾರೆ.[೧೫]

**೪. ಮಾರೆಮ್ಮನ ಕುಣಿತ:** ಕಾಮಲಾಪುರದ ಪರಿಸರದಲ್ಲಿನ ಗ್ರಾಮದೇವತೆಗಳ ಮುಂದೆ ಮಾರೆಮ್ಮನ ಕುಣಿತ ಪದ್ಧತಿಯೂ ಬೆಳೆದು ಬಂದಿದೆ. ಮಾರೆಮ್ಮನನ್ನು ಹೊತ್ತು ತರುವಾಗ ಡೋಲನ್ನು ಬಾರಿಸುತ್ತಾರೆ.

ಚಾವಟಿಯಿಂದ ಮೈಯೆಲ್ಲಾ ಹೊಡೆದುಕೊಳ್ಳುತ್ತಾರೆ. ಇವರನ್ನು ಮಂಡ ಜನಾಂಗದವರು ಎಂದು ಕರೆಯುತ್ತಾರೆ. ಮಾರೆಮ್ಮ ಹೊತ್ತು ತರುವ ಗಂಡಸು ಕೆಂಪು ಧೋತ್ರ ಧರಿಸಿಕೊಂಡು, ಕೂದಲನ್ನು ಬಾಚದೇ ಹಾಗೇ ಇಳಿ ಬಿಟ್ಟಿರುತ್ತಾರೆ. ಹೆಂಗಸು ಉರಿಮೆ ಬಾರಿಸುತ್ತಾಳೆ. ಪಟ್ಟಣದ ಎಲ್ಲಮ್ಮ, ಊರಮ್ಮ, ಕಾಳಮ್ಮನ ದೇವಾಲಯಗಳ ಮುಂದೆ ಉತ್ಸವ ಕಾಲದಲ್ಲಿ ಈ ಕುಣಿತವನ್ನು ಮಾಡುವ ಪದ್ಧತಿ ಇದೆ.[೧೬]

**೫. ಬಸವನಾಟ:** ಕಾಮಲಾಪುರ ಪರಿಸರದಲ್ಲಿ ಬಸವನಾಟದ ಕಲಾವಿದರೂ ಇದ್ದಾರೆ. ಇವರನ್ನು ಗಂಗೆತ್ತಿನವರು ಎಂದು ಕರೆಯುತ್ತಾರೆ. ಎತ್ತು ಮತ್ತು ಆಕಳನ್ನು ತಂದು ಅಲಂಕರಿಸಿ ಶಿವ ಮತ್ತು ಪಾರ್ವತಿಯ ರೂಪದಲ್ಲಿ ತೋರಿಸಿ, ಮದುವೆ ಮಾಡುವ ಸಂಪ್ರದಾಯವಿದೆ. ಈ ಆಟವನ್ನು ತೋರಿಸಿ ಪಾರ್ವತಿ ತಪಸ್ಸಿಗೆ ಕುಳಿತಾಗ, ಶಿವ ಬಿಕ್ಷುಕನ ವೇಷಧರಿಸಿ ಬಂದಿರುವುದನ್ನು ಈ ವೇಳೆಯಲ್ಲಿ ಶಿವನನ್ನು ಗುರುತಿಸದೆ ಶಿವನನ್ನು ಬೈದು ಬಿಡುವ ಕಥಾನಕವನ್ನು ಹೇಳಿ, ಈ ಆಟಕ್ಕೆ ಮೆರಗನ್ನು ನೀಡುತ್ತಾರೆ. ಅಲೆಮಾರಿ ಜನಾಂಗದವರ ಸಂಕ್ರಾಂತಿ ಸಮಯದಲ್ಲಿ ಬಂದು ಈ ಪ್ರದರ್ಶನವನ್ನು ನೀಡುತ್ತಾರೆ.[೧೭]

**೬. ವೀರಭದ್ರ ಕುಣಿತ:** ವೀರಶೈವ ಪರಂಪರೆಯಲ್ಲಿ ಇದೊಂದು ಪ್ರದರ್ಶನಾತ್ಮಕ ಕಲೆಯಾಗಿ ಉಳಿದು ಇಂದಿಗೂ ಬೆಳೆದುಕೊಂಡು ಬಂದಿದೆ. ವೀರಶೈವ ಜನಾಂಗದ ಮನೆ ದೇವತೆಯಾದ ವೀರಭದ್ರನ ಪ್ರೀತ್ಯರ್ಥವಾಗಿ ಗುಗ್ಗಳ ಸೇವೆಯನ್ನು ನಡೆಸುವ ಭಕ್ತರು ವೀರಗಾಸೆ, ಪುರಾವಂತರ ಕುಣಿತ ಮುಂತಾದ ಕಲಾ ಸೇವೆಯನ್ನು ಅರ್ಪಿಸುತ್ತಾರೆ. ಇದು ಬಹಳ ಪ್ರಾಚೀನವಾದದ್ದು. ಪುರಾಣದಲ್ಲಿ ಬರುವ ಈ ವೀರಭದ್ರನ ಅವತಾರದ ಬಗ್ಗೆ ಹಾಗೂ ಅವನ ಹಾವ ಭಾವಗಳನ್ನು ಈ ಪುರಾವಂತರು ಮತ್ತು ಭಕ್ತರು ಕುಣಿತಾದ ರೂಪದಲ್ಲಿ ಪ್ರದರ್ಶಿಸುತ್ತಾರೆ. ಈ ಕುಣಿತದಲ್ಲಿ ಕನಿಷ್ಠ ೮ ಮಂದಿ ಇರುತ್ತಾರೆ. ಇವರು ತಲೆಗೆ ಪೇಟ, ಹಣೆಗೆ ವಿಭೂತಿ, ಕೊರಳಿಗೆ ರುದ್ರಾಕ್ಷಿ ಮಾಲೆ ಹಾಗೂ ನಾಗಾಭರಣ, ಎದೆಗೆ ವೀರಭದ್ರ ದೇವರ ಹಲಗೆ, ಸೊಂಟಕ್ಕೆ ದಕ್ಷ ಬ್ರಹ್ಮನ ಶಿರವನ್ನು ಕಟ್ಟಿಕೊಳ್ಳುತ್ತಾರೆ. ಬಲಗೈಯಲ್ಲಿ ಕತ್ತಿ, ಎಡಗೈ ಕರವಸ್ತ್ರ ಕೊರಳಲ್ಲಿ ಸಿಂಹ ಲಾಂಛನ ಉಳ್ಳ ಸರ, ಮೈಮೇಲೆ ಕಾವಿ ಜುಬ್ಬ ಮತ್ತು ಕಾವಿಯ ಕಾಸಿಗೆ ಹಾಕುತ್ತಾರೆ. ಕಾಸೆ ಕಟ್ಟಿದವರೇ ಈ ಕಲೆಯ ಪ್ರಮುಖ ಕಲಾವಿದರಾಗಿರುತ್ತಾರೆ. ಇದನ್ನೇ ವೀರಗಚ್ಚೆ–ವೀರಕಾಸೆ–ವೀರಗಾಸೆ ಎನ್ನುತ್ತಾರೆ. ಎರಡೂ ಪಾದಗಳಿಗೂ ಎರಡೆರಡು ಜಂಗು ಧರಿಸಿ ಸಮಾಳ, ಮುಖವೀಣೆ, ಕಂಚಿನ ತಾಳ, ಪಕ್ವ ವಾದ್ಯಗಳಿಂದ ವೀರಗಾಸೆಯ ಒಬ್ಬ ಕಲಾವಿದ ಒಬ್ಬ ಮುಂದೆ ಬಂದು ವಡಬು ಹೇಳಿದಾಗ ಉಳಿದವರು "ಹೂಂಗುಟ್ಟಿ" ಹುರಿದುಂಬಿಸುತ್ತಾರೆ. ಸಮಾಳದ ನಾದದ ಅಬ್ಬರಕ್ಕೆ ತಕ್ಕಂತೆ ಎಲ್ಲರೂ ರೌದ್ರತೆಯಿಂದ ಕುಣಿಯುತ್ತಾರೆ. ಇವರನ್ನು ಲಿಂಗದ ಬೀರರು ಎಂದೂ ಸಹ ಕರೆಯುತ್ತಾರೆ.[೧೮] ಇವರು ಭಕ್ತಾದಿಗಳಿಗೆ ಶಸ್ತ್ರ ಹಾಕಿ, ತಾವು ಹಾಕಿಕೊಂಡು ಕುಣಿಯುವುದು ಶಸ್ತ್ರದ ಪವಾಡ. ಕಾಮಲಾಪುರದ ಈಶ್ವರ ದೇವಾಲಯ ಹಾಗೂ ವೀರಭದ್ರ ದೇವಾಲಯದಲ್ಲಿ ನಾಗರ ಪಂಚಮಿ ದಿನದಂದು ಗಂಗೆಯನ್ನು ತರುವ ಸಂದರ್ಭದಲ್ಲಿ ಈ ಕುಣಿತ ಮಾಡುತ್ತಾರೆ. ವೀರಶೈವ ಹಾಗೂ ವಿಶ್ವಕರ್ಮ ಜನಾಂಗದವರು ತಮ್ಮ ಮದುವೆ ಗೃಹ ಪ್ರವೇಶಗಳ

ಸಮಯದಲ್ಲಿ ಆಚರಿಸುತ್ತಾರೆ. ಈ ಕುಣಿತ ಒಬ್ಬ ಕಲಾವಿದನ ಪ್ರತಿಭಾಶಕ್ತಿ ಮತ್ತು ಸಾಮರ್ಥ್ಯಗಳನ್ನು ಪ್ರತಿ ಬಿಂಬಿಸುತ್ತದೆ.[೧೯]

**ವಡಬು**

ಅಹಹಾರುದ್ರ ಅಹಹಾದೇವ
"ಹರಿಯುವ ಹಾವಿನ ಗಂಡಾ, ಉರಿವ ಕಿಚ್ಚಿನ ಗಂಡು
ದುರುಳ ದುಷ್ಟಾಗಳ ಗಂಡ ಕದನ ಪ್ರಚಂಡ
ಭದ್ರಕಾಳಿಯ ಗಂಡಾ ಮೂರು ಲೋಕದ ಗಂಡ
ಶ್ರೀ ವೀರಭದ್ರ ಬಹುಪರಾಕ್"

ಹೀಗೆ ಹೇಳುತ್ತಾ ವೀರಭದ್ರನ ಹುಟ್ಟಿನ ವರ್ಣನೆಯನ್ನು ವಡಬಿನ ಮೂಲಕ ಹೇಳುತ್ತಾರೆ. ಅಹಹಾರುದ್ರ, ಅಹಹಾದೇವ, ಶ್ರೀ ಮಾನ್ ಸಜ್ಜನ ಶುದ್ದ ಶಿವಚಾರ ಸಂಪನ್ನರಾದಂಥ ಸದ್ಭಕ್ತ ಶಿವಶರಣ ಜನಾಂಗಗಳೆಲ್ಲರೂ ಗುಲ್ಲು ಮಾಡದೆ ಸುಲ್ಲಲಿತದಿಂದ ನೀವು ಕೇಳಿರಯ್ಯಾ ಕೇಳಿ. ನಮ್ಮ ವೀರಭದ್ರ ದೇವರು ಪುಟ್ಟಿದಾ ರೂಪ ಎಂತೆಂದೊಡೆ ಹುಟ್ಟಿದಾಗಲೇ ಹೂವಿನ ಹಾಸಿಗೆ ಮಂಜುಳ ಗಾಸೆ, ರೌದ್ರ ಗಾಸೆ, ಮೆಟ್ಟಿದಾ ಹೊನ್ನಾವಿಗೆ ಸಾವಿರಶಿರ, ಎರಡು ಸಾವಿರ ಭುಜ, ಮೂರು ಸಾವಿರ ನಯನ, ಕೆಕ್ಕೇರಿಸಿದ ಕಣ್ಣು, ಜಂಬು ಮಂಡೆ, ಇಂತಪ್ಪಾ ನಮ್ಮ ಶ್ರೀವೀರಭದ್ರ ದೇವರು ಹೇಮ ಕುಂಡದ ಬಳಿಗೆ ಹೇಗೆ ಬರುತ್ತಾನೆಂದರೆ.

ಅಹಹಾರುದ್ರ, ಅಹಹಾದೇವ, ನಮ್ಮ ಶ್ರೀ ವೀರಭದ್ರ ದೇವರು ಕೊಲಲೋ ಎಂದು ಕೂಗಿ ಹೇಮ ಕುಂಡಕ್ಕೆ ಹೋಗಿ ದಕ್ಷ ಬ್ರಹ್ಮನ ಶಿರ ಹರಿದು ಅಗ್ನಿಗೆ ಅಹುತಿಕೊಟ್ಟು, ಸರಸ್ವತಿಯ ಮೂಗನ್ನೇ ಕೊಯ್ದು ಕೋಟಿ ರಾಕ್ಷಸರನ್ನು ಕೆಂಡಗಣ್ಣಿನಿಂದ ಸುಟ್ಟು ಕೆಂಡ ದೋಕಳಿಯನ್ನಾಡುತ್ತಾ ಬರಲು ದಕ್ಷನಾ ಸತಿಯು, ತನ್ನ ಮುತ್ತೈದೆ ತನವ ಪಾಲಿಸೋ ಎಂದು ಪಾದಕ್ಕೆರಗಲು ಹರಿದ ತಲೆಗೆ ಕುರಿ ತಲೆಯನ್ನಿಟ್ಟು ಕೈಲಾಸ ದ್ವಾರವಮ್ ಪೋಗುವಾಗ ಶಿವ ಕಂಡು ನಸುನಕ್ಕು ಬಲೆಲೇ ಬಾಪ್ಪುರೇ ಎಂದು ರತ್ನದ ಸಿಂಹಾಸನದ ಗದ್ದುಗೆಯ ಮೇಲೆ ಕುಳ್ಳರಿಸಿಕೊಂಡು ಪುಷ್ಪದ ಮಳೆ ಕರೆಸಿಕೊಂಡು ನಮ್ಮ ಅಭಿನಮಿಗರುದ್ರ ಕರುಣಾ ಸಮುಧ್ರ ಕರೆಕಾಳಿಂಗ ರುದ್ರ, ಛಲದಂಕಮಲ್ಲ, ಗೊಂಡೇರಿ ಗಂಡ ನವ ಬ್ರಹ್ಮದೊಳ್ ಮೇಲಾದ ದಕ್ಷ ಬ್ರಹ್ಮನ ಶಿರ ಹರಿದು ಅರಿದಲಿಗೆ ಕುರಿತಲೆಯನಿಟ್ಟು ದೊರೆಯೇ ನಿನಗಾರು ಸರಿಯೇ ಸರಿಸರಿ ಎಂದವರ ಹಲ್ಲು ಮುರಿಯೇ ಬಹು ಪರಾಕ್ ಎಂದು ವಡಬು ಹೇಳಿ ಮುಗಿಸುತ್ತಾರೆ.

**ಜಾತ್ರಾ ಸಮಯದಲ್ಲಿನ ಜನಪದ ಕಲೆಗಳು**

**೭. ಲೇಜಿಯ ಕುಣಿತ:** ಗಂಡಸರು ಕಾಲಿಗೆ ಗೆಜ್ಜೆ ಕಟ್ಟಿ ಕೈಯಲ್ಲಿ ಕೋಲುಗಳನ್ನು ಹಿಡಿದು ಚರ್ಮವಾದ್ಯದ ತಾಳಕ್ಕೆ ತಕ್ಕಂತೆ ಕುಣಿಯುವ ಕುಣಿತ ಇದು. ಗಂಡಸರು ಸಮವಸ್ತ್ರಧಾರಿಗಳಾಗಿ ತಲೆಗೆ ಕರವಸ್ತ್ರವನ್ನು ಕಟ್ಟಿಕೊಳ್ಳುತ್ತಾರೆ. ಇದೊಂದು ಜಾನಪದ ಕಲೆಯ ದೃಷ್ಟಿಯಿಂದ ಮಹತ್ವದ್ದು.

**೮. ಕೋಲಾಟ ಕುಣಿತ:** ಕೋಲಾಟ ಕಲೆಯು ಜನಪ್ರಿಯ ಕಲೆ.[೨೦] ಈ ಕಲೆ ಎಲ್ಲಾ ಜಾತಿಯ ಜನರಲ್ಲೂ ಕಾಣಬರುತ್ತದೆ. ನಗರೇಶ್ವರ ದೇವಾಲಯದ ಮುಂದೆ ಓಣಿಯ ಯುವಕರೂ ಕೂಡ

ಕೋಲಾಟವನ್ನು ಆಡುತ್ತಾರೆ. ಹಬ್ಬ, ಹುಣ್ಣಿಮೆ ಜಾತ್ರೆ–ಉತ್ಸವ ಸುಗ್ಗಿ ಆಚರಣೆಯ ಕಾಲದಲ್ಲಿ ಕಾಮಲಾಪುರ ಗ್ರಾಮವನ್ನು ಒಳಗೊಂಡು ಕರ್ನಾಟಕದ ಹೆಚ್ಚಿನ ಗ್ರಾಮಗಳೆಲ್ಲೆಲ್ಲಾ ಈ ಜಾನಪದ ಕಲೆ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿದೆ. ಕಾಮಲಾಪುರ ನಗರೇಶ್ವರ ದೇವಾಲಯದ ಭಿತ್ತಿಯಲ್ಲಿ ಉಬ್ಬು ಶಿಲ್ಪದ ಕೋಲಾಟದ ಚಿತ್ರಣವು ಇರುವುದು. ವಿಜಯನಗರೋತ್ತರ ಕಾಲದಿಂದಲೂ ಈ ಕೋಲಾಟ ನಡೆದು ಬಂದಿದೆ ಎಂಬುದಕ್ಕೆ ಉತ್ತಮ ಉದಾಹರಣೆಯಾಗಿದೆ. ಈ ಕೋಲಾಟವಾಡುವಾಗ ಸಂಪ್ರದಾಯ ಬದ್ಧವಾದ ಆಚರಣೆಗಳು ಇರುತ್ತವೆ. ಕೋಲಾಟ ಪ್ರಾರಂಭಿಸುವ ೧೫ ದಿನ ಮುಂಚಿತವಾಗಿ ಹುಣ್ಣಿಮೆ ದಿನದಂದು ಕೋಲು ಕಡಿಯಲು ಕಾಡಿಗೆ ಹೋಗುವ ಪದ್ಧತಿ ಇಂದಿಗೂ ಇದೆ. ಶ್ರೀಗಂಧ, ಹೊನ್ನೆ, ಬೈನೆ, ಕೊಡಿಸು ಮುಂತಾದ ಮರಗಳಿಂದ ಈ ಕೋಲನ್ನು ತಯಾರಿಸಲಾಗುತ್ತದೆ. ದೈನಂದಿನ ಉಡುಗೆಯಲ್ಲಿ ಕೆಲವೊಮ್ಮೆ ತಲೆಗೆ ಪಟ್ಟಿ, ಸೊಂಟಕ್ಕೆ ವಸ್ತ್ರ, ಕಾಲಿಗೆ ಗೆಜ್ಜೆ ಕಟ್ಟಿಕೊಂಡಿರುತ್ತಾರೆ. ಕೋಲಾಟದ ತಂಡಗಳಲ್ಲಿ ೫/೮/೧೦ ಅಥವಾ ೧೨ ಜನ ಕಲಾವಿದರು ಇರುತ್ತಾರೆ. 'ಶರಣು ಶರಣುವಯ್ಯ ಗಣನಾಯಕ ನಮ್ಮ ಕರುಣಾದಿಂದಲಿ ಕಾಯೋ ಗಣನಾಯಕ' ಶರಣು ಎಂಬುದಾಗಿ ಗಣೇಶನ ಸ್ತುತಿಯಿಂದ ಪ್ರಾರಂಭಿಸಿ, ಕೋಲಾಟ ಪ್ರಾರಂಭವಾಗುತ್ತದೆ. ರಾಮಾಯಣ, ಮಹಾಭಾರತ, ಪುರಾಣ ಪುಣ್ಯ ಕಥೆಗಳ ನಿರೂಪಣೆ ಇಲ್ಲಿರುತ್ತದೆ. ಊರಮ್ಮನ ಗುಡಿಯ ಮುಂದೆ ಗೌರಿ ಹುಣ್ಣಿಮೆಯ ಸಂದರ್ಭದಲ್ಲಿ ನಡೆಯುತ್ತದೆ. ಕೆಲವೊಮ್ಮೆ ಚಿಕ್ಕ ಚಿಕ್ಕ ಹೆಣ್ಣು ಮಕ್ಕಳು ಮನೆಮನೆಗೆ ಹೋಗಿ ಕೋಲು ಹಾಕುವ ಪದ್ಧತಿ ಕಾಮಲಾಪುರ ಮತ್ತು ಸುತ್ತ ಮುತ್ತಲಿನ ಪರಿಸರದಲ್ಲಿದೆ. ಈ ಕೋಲಾಟಕ್ಕೆ ಯಾವುದೇ ವಯಸ್ಸಿನ ಅಂತರವಿರುವುದಿಲ್ಲ.[೨೧]

**೯. ಲಂಬಾಣಿ ಕುಣಿತ:** ಈ ಜನಪದ ಕಲೆ ಲಂಬಾಣಿ ಮಹಿಳೆಯರಲ್ಲೂ ಕಾಣಬರುತ್ತದೆ. ಇವರು ಧರಿಸುವ ಉಡುಗೆ–ತೊಡುಗೆಗಳಲ್ಲೂ ಜಾನಪದ ಕಲೆಯನ್ನು ನೋಡಬಹುದು. ತಾಳಕ್ಕೆ ತಕ್ಕಂತೆ ಕುಣಿಯುತ್ತಾ ಕೈಕೈ ಹಿಡಿದುಕೊಂಡು ವರ್ತುಲಾಕಾರವಾಗಿ ಸುತ್ತುತ್ತಾ ಹಾಡಿನ ಲಯಕ್ಕೆ ಅನುಗುಣವಾಗಿ ಹೆಜ್ಜೆ ಹಾಕುತ್ತಾ ಕುಣಿಯುವ ಈ ಕಲೆ ನೋಡಲು ಆಕರ್ಷಕವಾಗಿದೆ.

**೧೦. ಅಲಾವಿ ಕುಣಿತ:** ವಿಜಯನಗರ ಕಾಲದಲ್ಲಿ ಈ ಕುಣಿತ ಜನಪ್ರಿಯವಾಗಿತ್ತು. ಈ ಕುಣಿತವನ್ನು ಮೊಹರಂ ತಿಂಗಳ ಹತ್ತನೆಯ ದಿನದಂದು ಹಿಂದೂ ಮತ್ತು ಮುಸ್ಲಿಂ ಜನಾಂಗದವರು ಕೂಡಿ ಆಚರಿಸುತ್ತಾರೆ. ಇದು ಭ್ರಾತೃತ್ವದ ಸಂಕೇತವಾಗಿ ಉಳಿದು ಬಂದಿದೆ. ಕೆಂಡದಿಂದ ಮಾಡಿದ ಕೊಂಡವೊಂದರ ಸುತ್ತ ಕುಣಿಯುವುದರಿಂದ ಆಲಯ ಕುಣಿತ ಅಥವಾ ಇದಕ್ಕೆ ಅಲಾವಿ ಕುಣಿತ ಎಂದು ಕರೆಯುತ್ತಾರೆ. ಪೈಗಂಬರ ಕುರಿತಾದ ಹಾಡುಗಳನ್ನು ಹಾಡುವುದರ ಜೊತೆಗೆ ವಚನ ಮತ್ತು ತತ್ವ ಪದಗಳನ್ನು ಹಾಡುವ ಪದ್ದತಿ ಇದೆ.[೨೨]

**೧೧. ಹುಲಿ ಕುಣಿತ:** ಮೊಹರಂ ಹಬ್ಬದ ಸಂದರ್ಭದಲ್ಲಿ ಹೆಚ್ಚಿನ ಮಟ್ಟಿಗೆ ಈ ಕುಣಿತವನ್ನು ಕುಣಿಯುತ್ತಾರೆ. ಹರಕೆಯನ್ನು ಹೊತ್ತ ಪುರಷ ಅಥವಾ ಬಾಲಕರು ಈ ಪ್ರದರ್ಶನವನ್ನು ನೀಡುತ್ತಾರೆ. ತಳವಾರರು, ಕಬ್ಬಲಿಗರು, ಲಂಬಾಣಿ ಜನರೂ ಈ ಪ್ರದರ್ಶನವನ್ನು ನೀಡುತ್ತಾರೆ. ದೇಹದ ಮೇಲೆ ಹಳದಿ ಮತ್ತು ಕಪ್ಪು ವರ್ಣದ ಗೆರೆಯ ಬಣ್ಣ ಬರೆದುಕೊಂಡು ಮುಖಕ್ಕೆ ಹುಲಿಯ ಮುಖವಾಡ

ಹಾಕಿಕೊಂಡು ಹಿಂಬದಿಗೆ ಬಾಲವನ್ನು ಹಾಕಿಕೊಂಡು ಕುಣಿಯುವ ಕುಣಿತ ಇದಾಗಿದೆ. ಈ ಸಂದರ್ಭದಲ್ಲಿ ಹಲಗೆಯ ತಾಳಕ್ಕೆ ತಕ್ಕಂತೆ ಕುಣಿಯುವುದಕ್ಕೆ ಹುಲಿ ಚ್ಯಾಳಿ ಎಂದು ಕರೆಯುತ್ತಾರೆ.

**೧೨. ಡೊಳ್ಳಿನ ಕುಣಿತ:** ಡೊಳ್ಳು ಧ್ವನಿ ಶಿವನಿಗೆ ಪ್ರಿಯವಾದದ್ದು ಎಂಬ ನಂಬಿಕೆಯ ಹಿನ್ನಲೆಯಲ್ಲಿ ಫಲ ಪೂಜೆ ಮತ್ತು ಜಾತ್ರೆ ಉತ್ಸವಗಳ ಸಮಯದಲ್ಲಿ ಡೊಳ್ಳಿನ ಮೇಳಗಳು ಬರುತ್ತವೆ.[೨೩] ಕಾಮಲಾಪುರದಲ್ಲಿ ಊರಮ್ಮ ದೇವಾಲಯದ ಮುಂದೆ ತಮ್ಮ ಆರಾಧ್ಯ ದೇವತೆಯಾದ ಹಿರೋಡ್ಯ ಅಥವಾ ಬೀರಪ್ಪಯ್ಯನ ಮೆರವಣಿಗೆಯ ಸಂದರ್ಭದಲ್ಲಿ ಕುಣಿಯುವ ಪದ್ದತಿ ಈಗಲೂ ಇದೆ. ಕೆಲವೊಮ್ಮೆ ಡೊಳ್ಳು ಮೇಳದವರು ಡೊಳ್ಳು ಬಾರಿಸಿ ಹರಕೆ ಸಲ್ಲಿಸುತ್ತಾರೆ. ಹೆಚ್ಚಿನ ಮಟ್ಟಿಗೆ ಈ ಪರಿಸರದಲ್ಲಿ ಕುರುಬು ಜನಾಂಗದವರು ಡೊಳ್ಳಿನ ಹರಕೆಯಲ್ಲಿ ಭಾಗವಹಿಸುತ್ತಾರೆ. ಉದಾ: ಹಜಾರರಾಮ ದೇವಸ್ಥಾನದ ಉಬ್ಬು ಶಿಲ್ಪಗಳಲ್ಲಿ ಡೊಳ್ಳು ಬಾರಿಸುವವರ ಭಂಗಿಯನ್ನು ಕಾಣಬಹುದು.[೨೪] ಅಂದಿನಿಂದಲೂ ಈ ಪದ್ಧತಿ ಬೆಳೆದು ಬಂದಿರುವ ಈ ಶಿಲ್ಪಗಳು ಮೂಕ ಸಾಕ್ಷಿಯಾಗಿವೆ.

**೧೩. ಭಜನೆ ಮಾಡುವುದು:** ಭಜನೆ ಮಾಡುವುದಕ್ಕೆ ವಯಸ್ಸಿನ ನಿರ್ಭಂದವಿಲ್ಲ. ಭಜನೆ ಎಂದರೆ ಎಲ್ಲಾ ಜಾತಿ–ಮತಗಳನ್ನು ಮೀರಿದ ದೇಶೀಯ ಆರಾಧನಾ ಗೀತೆಗಳ ಸಂಪ್ರದಾಯ. ಇದು ಎಲ್ಲಾ ಜಾತಿಗಳಲ್ಲೂ ದೇವಾಲಯಗಳಲ್ಲಿ ನಡೆಯುತ್ತಿರುವುದನ್ನು ಈಗಲೂ ಕಾಣಬಹುದು. ಸೋಮವಾರ, ಶುಕ್ರವಾರ, ಶನಿವಾರ ದಿನಗಳು ಭಜನೆಗೆ ಪ್ರಶಕ್ತ ದಿನಗಳೆಂದು ಭಾವಿಸಿರುತ್ತಾರೆ. ದಿನನಿತ್ಯದ ಕೆಲಸ ಮುಗಿಸಿ ಹೆಚ್ಚಿನ ಮಟ್ಟಿಗೆ ಸಾಯಂಕಾಲದ ವೇಳೆಗೆ ಬಂದು ಭಜನೆ ಹಾಡುಗಳನ್ನು ಹಾಡುತ್ತಾರೆ. ಮುಖ್ಯಹಾಡುಗಾರನ ಜೊತೆ ಹಿಮ್ಮೇಳದವರೂ ಉಳಿದವರೂ ಸಹಕರಿಸುತ್ತಾರೆ. ಹಾರ್ಮೋನಿಯಂ ತಾಳ ಗೆಜ್ಜೆ, ತಬಲ, ಡೋಲಾಕ್, ಖಂಜರಿ ಮುಂತಾದ ವಾದ್ಯಗಳನ್ನು ಭಜನೆ ಮೇಳದಲ್ಲಿ ಬಳಸುತ್ತಾರೆ. ಕಾಮಲಾಪುರದ ಸುತ್ತ ಮುತ್ತಲೂ ಪ್ರತಿ ಹುಣ್ಣಿಮೆ, ಅಮವಾಸ್ಯೆ, ಹಬ್ಬ ಹರಿದಿನಗಳ ಕಾಲಕ್ಕೆ ಈ ಕಾರ್ಯಕ್ರಮ ನಡೆಯುತ್ತಿರುತ್ತದೆ. ಒಂದು ವೇಳೆ ಸ್ಥಳೀಯರು ಮಳೆ ಬಾರದಿದ್ದಲ್ಲಿ ಒಂದು ತಿಂಗಳುಗಳ ಕಾಲ ಭಜನೆ ಮಾಡುತ್ತಾರೆ. ಶಿಶುನಾಳ ಶರೀಫನ ಪದಗಳು, ಶರಣತತ್ವ ಪದಗಳು, ಬಸವನ ವಚನಗಳು ಮತ್ತು ದಾಸರ ಕೀರ್ತನೆಗಳನ್ನು ಹಾಡುತ್ತಾರೆ.[೨೫] ಒಂದು ಚರಣ ಹಾಡಿದರೆ ಆಚರಣವನ್ನು ಅಥವಾ ಪಲ್ಲವಿಯನ್ನು ಹಿಮ್ಮೇಳದವರು ಹಾಡುತ್ತಾರೆ. ಹಾಡು ಮುಗಿದ ನಂತರ ಹರಹರ ಮಹಾದೇವ, ಜಯಜಯ ನಮಃ ಪಾರ್ವತಿಯೇ ನಮಃ ಎಂದು ಹೇಳುತ್ತಾರೆ. ಕೊನೆಗೆ ಮಂಗಳಾರತಿ ಪದಹಾಡಿ ಮಂಗಳಾರತಿ ಬೆಳಗುವುದರ ಮೂಲಕ ಮುಕ್ತಾಯ ಮಾಡುತ್ತಾರೆ. ಈ ಪದ್ದತಿ ಊರಮ್ಮ, ನಗರೇಶ್ವರ ಮತ್ತು ಪಾಂಡುರಂಗ ದೇವಾಲಯದಲ್ಲಿ ಭಜನೆ ಹೇಳುವ ಪದ್ಧತಿ ಈಗಲೂ ಪ್ರಸ್ತುತವಿದೆ.

**೧೪. ಜಾನಪದ ಕ್ರೀಡೆಗಳು:** ಆಟ ಎಂಬ ಶಬ್ದಕ್ಕೆ ವಿನೋದ, ಹಾಸ್ಯ, ತಮಾಷೆ, ಚಟುವಟಿಕೆಯಿಂದ ಮನ ಬಂದಂತೆ ಓಡಾಡು, ಕುಣಿದಾಡು, ಹಾರಾಡು, ನಲಿದಾಡು ಮುಂತಾದ ಅರ್ಥಗಳೂ ಇವೆ.[೨೬] ೧.ಆಂಗ್ಲ ಭಾಷೆಯ ಪ್ಲೆ (Play) ಗೇಮ್ಸ್ ಎಂಬ ಶಬ್ದ ಆಟ ಕ್ರೀಡೆಗೆ ಸಂವಾದಿಯಾಗಿ ಬಳಸಲ್ಪಡುತ್ತದೆ. ಈ ಜಾನಪದ ಆಟ ನಿರ್ಧಿಷ್ಠ ಸಂಸ್ಕೃತಿ ಮತ್ತು ಪ್ರದೇಶಕ್ಕೆ ಸೀಮಿತವಾಗಿಲ್ಲ. ಆಟ ಒಂದು ಪ್ರದೇಶದ ಸಂಸ್ಕೃತಿಯೊಂದಿಗೆ ನಿಕಟವಾದ ಸಂಬಂಧವನ್ನು ಪಡೆಯುತ್ತದೆ. ಸಾವಿರಾರು ವರ್ಷಗಳ ಹಿಂದೆಯೂ ಜಾನಪದ ಆಟಗಳು ಪ್ರಚಲಿತದಲ್ಲಿದ್ದವು.[೨೭] ಈ ಹಿನ್ನಲೆಯ ಜೊತೆಗೆ ಭೌಗೋಳಿಕ ಹಿನ್ನಲೆ,

ಪ್ರಾದೇಶಿಕ ವೈಶಿಷ್ಟ್ಯತೆ ಮತ್ತು ಪರಂಪರೆಯನ್ನು ಅನುಲಕ್ಷಿಸಿ ಕಾಮಲಾಪುರ ಗ್ರಾಮದಲ್ಲಿನ ಜನಪ್ರಿಯ ಆಟಗಳ ಪ್ರಸ್ತಾವನೆ ನೀಡಲಾಗಿದೆ. ಈ ಜಾನಪದ ಆಟಗಳು ಮೇಲ್ನೋಟಕ್ಕೆ ಮನರಂಜನೆಗಾಗಿ ಎಂದು ಕಂಡು ಬಂದರೂ ಈ ಗ್ರಾಮದ ಜಾನಪದ ಆಟಗಳು ಇಲ್ಲಿಯ ಸಂಸ್ಕೃತಿ, ಸ್ವರೂಪ ಮತ್ತು ವ್ಯವಸ್ಥೆಯನ್ನು ಪರಿಚಯಿಸುವ ಮಾಧ್ಯಮಗಳಾಗಿವೆ.

**ಕಾಮಲಾಪುರ ಗ್ರಾಮದ ಪರಿಸರದಲ್ಲಿ ಕಂಡು ಬರುವ ಜಾನಪದ ಆಟಗಳು**

**ಹೊರಾಂಗಣ ಆಟಗಳು:** ಕುಂಟೆಬಿಲ್ಲೆ, ಉಪ್ಪಾಟ, ಹುಲಿದನದ ಆಟ, ಅಟ್ಟಾ ಮುಚ್ಚಾ, ಬುಗರಿ ಆಟ, ಗೋಲಿ, ಅಮಿತುಕೊಳ್ಳುವ ಆಟ, ಈಜಾಟ, ಓಕಳಿ ಆಟ, ಕಬಡ್ಡಿ ಆಟ, ಕಣ್ಣು ಮುಚ್ಚಾಲೆ ಆಟ, ಕೆರೆ-ದಡ ಆಟ, ಜಾರುಬಂಡಿ, ಕಪ್ಪೆಯಾಟ, ಜೋಕಾಲಿ, ದೋಸೆಯಾಟ, ಮರಕೋತಿಯಾಟ, ರತ್ತೋರತ್ತೋರಾಯನ ಮಗಳೆ, ಬಾಳೆ ಕಂಬದ ಆಟ, ಹಗ್ಗದ ಆಟ, ಕುರಿ ಮರಿಯಾಟ, ಗಾಲಿಯಾಟ, ಸರಿಪಣಿಯಾಟ, ಚಿನ್ನಿದಾಂಡು, ಗುಂಡು ಎಸೆತ ಆಟ, ಕಡ್ಡಿಯಾಟ, ನೆನಪಿನ ಆಟ, ಸ್ಪರ್ಶ ಆಟ, ಶಬ್ದ ಬಂಡಿ ಆಟ, ವಿಮಾನ ಆಟ.

**ಒಳಾಂಗಣ ಆಟ:** ಆಣೆ ಕಲ್ಲಾಟ, ಚೆನ್ನಮಣೆ ಆಟ, ಚೌಕಾಬಾರ, ಆಡಿಗೆ ಆಟ, ಚುಕ್ಕೆಯಾಟ, ಕಳ್ಳ ಪೋಲಿಸ್, ಹಾವಿನ ಪಟ ಆಟ, ಸರಿ-ಬೆಸ ಆಟ, ಚದುರಂಗ, ಕೈಆಟ. ಹೀಗೆ ಮೇಲ್ಕಂಡ ಆಟಗಳಲ್ಲಿ ಪ್ರಮುಖವಾದವುಗಳನ್ನು ಮಾತ್ರ ಜಾನಪದ ಹಿನ್ನಲೆಯ ಮಹತ್ವದ ದೃಷ್ಟಿಯಿಂದ ಸೆರೆಹಿಡಿಯಲಾಗಿದೆ.

**ಕುಂಟೆಬಿಲ್ಲೆ:** ಕುಂಟೆಬಿಲ್ಲೆ ಕರ್ನಾಟಕದಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತದೆ. ಉದಾಃ ಉತ್ತರ ಕರ್ನಾಟಕದ ಕಡೆಗೆ ಕುಂಟೆ ಬಿಲ್ಲೆ, ಕುಂಟೆ ಪಿಲ್ಲೆ ಎಂದು ಕರೆದರೆ ದಕ್ಷಿಣ ಭಾರತದಲ್ಲಿ ಜುಂಬಲಿ, ಜುಲುಬುಲಿ ಎಂಬ ಹೆಸರುಗಳಿಂದ ಕರೆಯುತ್ತಾರೆ.[೨೮] ಪ್ರಸ್ತುತ ಕಾಮಲಾಪುರ ಗ್ರಾಮದ ಹೆಚ್ಚಿನ ಮನೆಗಳ ಹೊರಾಂಗಣದಲ್ಲಿ ಈ ಆಟ ಆಡುವ ಪದ್ದತಿ ಇದೆ. ೬ ವರ್ಷಗಳಿಂದ ೧೮ ವರ್ಷದ ಒಳಗಿನ ಹೆಣ್ಣು ಮಕ್ಕಳು ಆಡುವ ಆಟವಿದು. ಚಪ್ಪಟೆಯಾದ ಕಲ್ಲಿನ ತುಂಡು ಅಥವಾ ಮಡಕೆ ತುಂಡು ಅಥವಾ ಮರದ ತುಂಡನ್ನು ಬಿಲ್ಲೆಯಾಗಿ ಬಳಸುತ್ತಾರೆ. ನಾಲ್ಕು ಕೋಣೆ, ಆರು ಕೋಣೆ, ಎಂಟು ಕೋಣೆ, ಹತ್ತು ಕೋಣೆ, ಹನ್ನೆರಡು ಕೋಣೆ, ಹದಿನೆಂಟು ಕೋಣೆಗಳ ವರೆಗೂ ಗೆರೆ ಎಳೆದು ಈ ಆಟವನ್ನು ಆಡುತ್ತಾರೆ. ಕೆಲವೊಮ್ಮೆ ದೇವರ ಕೋಣೆ, ಅಜ್ಜನ ಕೋಣೆ ನದಿ, ಸಮುದ್ರ ಹೀಗೆ ಬೇರೆ ಬೇರೆ ಹೆಸರುಗಳನ್ನು ಕೊಡುತ್ತಾರೆ. ಕೋಣೆಯಿಂದ ಕೋಣೆಗೆ ಬಿಲ್ಲೆಯನ್ನು ದಾಟಿಸುತ್ತಾ ಒಂದು ಕಾಲಿನಿಂದ ಹಾರುತ್ತಾ ಗೆರೆಯನ್ನು ಮುಟ್ಟದೇ ಕಾಲಿನಿಂದ ಬಿಲ್ಲೆಯನ್ನು ಎಲ್ಲಾ ಕೋಣೆಗಳಿಗೂ ಸಾಗಿಸುತ್ತಾ ೨-೩-೪ ಕೋಣೆಗಳಲ್ಲಿ ನಿಂತು ಇದೇ ಆಟವನ್ನು ಪುನರಾವರ್ತನೆ ಮಾಡಿದರೆ ಒಂದು ಸುತ್ತಿನ ಆಟ ಮುಗಿಯುತ್ತದೆ. ಬಿಲ್ಲೆ ಎಸೆಯುವ ಮೊದಲು ಅಂಗೈ ಮೇಲೆ ಬಿಲ್ಲೆ ಇಟ್ಟು ಕೆಳಗೆ ಬೀಳದಂತೆ ಜಾಗರೂಕತೆಯಿಂದ ಎಲ್ಲಾ ಕೋಣೆಗಳನ್ನು ಹಾದು ಹೋಗುವ ಹಂತವಿರುತ್ತದೆ. ಮೊಣಕೈ ಮೇಲೆ ಬಿಲ್ಲೆ ಇಟ್ಟು ಎಲ್ಲಾ ಕೋಣೆಗಳ ಮೂಲಕ ಹಾದು ಹೋಗುವುದು. ಕೈಯ, ಭುಜದ ಮೇಲೆ ಇಟ್ಟು ಎಲ್ಲಾ ಕೋಣೆಗಳನ್ನು ಹಾದುಹೋಗುವುದು. ತಲೆಯ ಮೇಲೆ ಬಿಲ್ಲೆ ಇಟ್ಟು ಎಲ್ಲಾ

ಕೋಣೆಗಳ ಮೂಲಕ ಹಾದುಹೋಗುವುದು. ಕಣ್ಣುಗಳ ರಪ್ಪೆಯ ಮೇಲೆ ಬಿಲ್ಲೆ ಇಟ್ಟುಕೊಂಡು ಹಾದು ಹೋಗುವುದು ಹೀಗೆ ಈ ಆಟದಲ್ಲಿ ವಿವಿಧ ಹಂತಗಳಿರುತ್ತವೆ. ನಂತರ ಕಷ್ಟವೇ ಅಥವಾ ಸುಖವೇ ಎಂದು ಕೇಳಿ ಎದುರಾಳಿ ಉತ್ತರ ಹೇಳಿದ ನಂತರ ಆತನು ಹೇಳಿದಷ್ಟು ಸುತ್ತನ್ನು ಹಾಕಬೇಕು. ಕಷ್ಟವಾದರೆ ಟೊಂಕ (ಕುಂಟುತ್ತಾ) ಹಾಕುತ್ತಾ ಸುಖವಾದರೆ ನಡೆಯುತ್ತಾ ಎಲ್ಲಾ ಕೋಣೆಗಳನ್ನು ದಾಟಬೇಕಾಗುತ್ತದೆ. ಈ ಹಂತಕ್ಕೆ ಪಾಯಸ ಎಂದು ಹೆಸರು. ಕೊನೆಯ ಹಂತದಲ್ಲಿ ಕೋಣೆಗಳ ಎದುರು ಭಾಗದಲ್ಲಿ ಬೆನ್ನುಹಾಕಿ ನಿಂತು ಯಾವ ಕೋಣೆಗೆ ಬಿಲ್ಲೆ ಹಾಕಬೇಕೆಂದು ಎದುರಾಳಿಗೆ ಕೇಳಬೇಕು. ಅವರ ಮಾತಿನಂತೆ ಸರಿಯಾಗಿ ಬಿದ್ದರೆ ಆ ಕೋಣೆ ಅವರದಾಗುತ್ತದೆ. ಈ ಕೋಣೆ ಪಡೆದ ನಂತರ ಈ ಕೋಣೆಯಲ್ಲಿ ಬೇರೆಯವರು ಆಡುವಂತಿಲ್ಲ. ಹೀಗೆ ಹೆಚ್ಚು ಕೋಣೆಗಳನ್ನು ವಶಪಡಿಸಿಕೊಳ್ಳುತ್ತಾ ಯಾರು ಹೆಚ್ಚು ಮದುವೆ ಯಾಗುತ್ತಾರೋ ಅವರು ಆಟ ಗೆಲ್ಲುತ್ತಾರೆ.[೨೯]

ವೈಜ್ಞಾನಿಕ ದೃಷ್ಟಿಯಿಂದ ನೋಡಿದರೆ ಈ ಆಟ ದೇಹದ ಅಂಗಾಂಗಗಳ ಮೇಲೆ ಚಲನೆ ನೀಡುವುದರಿಂದ ಶಾರೀರಿಕ ದೃಷ್ಟಿಯಿಂದಲೂ ಕೂಡ ಹೆಚ್ಚು ಪರಿಣಾಮಕಾರಿ. ಈ ಆಟದಲ್ಲಿ ಕಾಮಲಾಪುರ ಗ್ರಾಮದಲ್ಲಿ ಹೆಚ್ಚಿನ ಮಟ್ಟಿಗೆ ಹೆಣ್ಣು ಮಕ್ಕಳೇ ಹೆಚ್ಚಿನ ಒಲವನ್ನು ತೋರಿಸುತ್ತಾರೆ.

**ಲಗೋರಿ ಆಟ:** ಕಾಮಲಾಪುರದ ಜನಪ್ರಿಯ ಆಟಗಳಲ್ಲಿ ಲಗೋರಿ ಆಟವೂ ಒಂದಾಗಿದೆ. ಚಪ್ಪಟೆಯಾದ ೭ ಕಲ್ಲುಗಳ ತುಂಡುಗಳನ್ನು ಒಂದರ ಮೇಲೊಂದರಂತೆ ಇಟ್ಟಾಗ ಇರುವ ಈ ರಚನೆಗೆ ಗೋರಿ ಅಥವಾ ಲಗೋರಿ ಎಂದು ಕರೆಯುತ್ತಾರೆ. ಈ ಆಟಕ್ಕೆ ದೊಡ್ಡದಾದ ಮೈದಾನ ಅಥವಾ ಗದ್ದೆ ಅತ್ಯವಶ್ಯಕವಾಗಿರುತ್ತದೆ. ೨ ಸಮಾನ ತಂಡಗಳಾಗಿ ವಿಂಗಡಿಸಿಕೊಂಡು ಬಂದು ತಂಡದ ಆಟಗಾರರು ದೂರದಿಂದ ಈ ಗೋರಿಯನ್ನು ಹೊಡೆಯುವುದಾದರೆ ಇನ್ನೊಂದು ತಂಡದವರು ಈ ಗೋರಿಯನ್ನು ಕಟ್ಟುತ್ತಾರೆ. ನಿರ್ದಿಷ್ಠ ದೂರದಲ್ಲಿ ಗೆರೆಯ ಮೇಲೆ ನಿಂತು ಚೆಂಡಿನಿಂದ ಗೋರಿಯನ್ನು ಹೊಡೆಯುತ್ತಾರೆ. ಗೋರಿಗೆ ತಾಗದೆ ಚೆಂಡು ನೇರವಾಗಿ ಎದುರು ಆಟಗಾರರ ಕೈಸೇರಿದರೆ ಆಟಗಾರನು ಪುನಃ ಆಡುವುದಿಲ್ಲ. ಬಳಿಕ ಆ ತಂಡದ ೨ನೇ ಆಟಗಾರನು ಗೋರಿಯನ್ನು ಹೊಡೆಯ ಬೇಕಾಗುತ್ತದೆ. ಗೋರಿ ಹೊಡೆದಾಗ ಕಲ್ಲು ಚದುರಿದ್ದಲ್ಲಿ ಗೋರಿ ಮುರಿದ ಆಟಗಾರನು ಅದನ್ನು ಮರಳಿ ಕಟ್ಟಬೇಕು. ಮರಳಿ ಕಟ್ಟುವಾಗ ಹೊರಬಿದ್ದ ಚೆಂಡನ್ನು ಎದುರಾಳಿಯ ಗೋರಿ ಕಟ್ಟುವವನಿಗೆ ತಾಗಿದರೆ ಗೋರಿ ಕಟ್ಟುವನ ಆಟವನ್ನು ಬಿಟ್ಟು ಕೊಡಬೇಕು. ಗೋರಿ ಕಟ್ಟುವ ತಂಡವು ವಿರುದ್ಧ ಆಟಗಾರನ ತಂಡದ ಚೆಂಡಿನ ಪೆಟ್ಟಿನಿಂದ ತಪ್ಪಿಸಿಕೊಂಡು ಬಿದ್ದ ಗೋರಿಯನ್ನು ಪುನಃ ರಚಿಸಿದರೆ ಈ ಆಟಗಾರನು ಲಗೋರಿ ಎಂದು ಕೂಗುತ್ತಾನೆ. ಆಗ ಅವರಿಗೆ ಒಂದು ಅಂಕ ಬರುತ್ತದೆ. ಯಾರು ಹೆಚ್ಚು ಅಂಕಗಳನ್ನು ಗಳಿಸುತ್ತಾರೋ ಅವರು ಆಟ ಗೆಲ್ಲುತ್ತಾರೆ. ವೈಜ್ಞಾನಿಕ ದೃಷ್ಟಿಯಿಂದ ನೋಡಿದರೆ ಮಕ್ಕಳ ಗ್ರಹಣ ಶಕ್ತಿ ಹೆಚ್ಚಿಸುವುದಲ್ಲದೆ ಮಾನಸಿಕವಾಗಿ ಕ್ರಿಯಾಶೀಲಗೊಳಿಸುತ್ತದೆ.[೩೦]

**ಚೆನ್ನಮಣೆಯಾಟ:** ಕಾಮಲಾಪುರ ಗ್ರಾಮದ ಒಳಾಂಗಣದ ಆಟಗಳಲ್ಲಿ ಚೆನ್ನಮಣೆಯಾಟವೂ ಒಂದಾಗಿದೆ. ಹೆಚ್ಚಾಗಿ ಮಹಿಳೆಯರು ಮತ್ತು ಹೆಣ್ಣು ಮಕ್ಕಳು ಈ ಆಟ ಆಡುತ್ತಾರೆ. ಚೆನ್ನಮಣಿ ಆಟದಲ್ಲಿ ಸುಮರು ೨೭ ಪ್ರಭೇದಗಳಿದ್ದು, ಪ್ರಸ್ತುತ ಕಾಮಲಾಪುರ ಗ್ರಾಮದಲ್ಲಿದ್ದ ಪದ್ಧತಿಯನ್ನು

ಮಾತ್ರ ಇಲ್ಲಿ ಸೀಮಿತವಾಗಿಸಿಕೊಳ್ಳಲಾಗಿದೆ. ೨ ೧/೨ ಅಡಿ ಉದ್ದ ಸುಮಾರು ೧/೨ ಅಡಿ ಅಂಗುಲದ ಮರದ ಹಲಗೆಯ ಮೇಲೆ ಏಳೇಳು ಗುಣಿಗಳ ೨ ಸಾಲುಗಳಿರುತ್ತವೆ.[೩೧] ಒಂದೊಂದು ಸಾಲಿಗೆ ಇಬ್ಬರು ಎದರು ಬದರು ಕುಳಿತು ಈ ಆಟ ಆಡುತ್ತಾರೆ. ಇಂದಿಗೂ ಗುಣಿಗೆ ಹೆಚ್ಚಿನ ಮಟ್ಟಿಗೆ ಹುಣಸೇ ಬೀಜ, ಗುಲಗಂಜಿ ಬೀಜಗಳನ್ನು ಬಳಸುವ ಪದ್ಧತಿ ಇದೆ. ಪ್ರತಿ ಗುಣಿಗೂ ೪-೪ ಇಲ್ಲವೇ ೫-೫ ಹರಳುಗಳನ್ನು ಹಾಕಿರುತ್ತಾರೆ. ಆಟ ಪ್ರಾರಂಭಿಸುವವರು ಒಂದು ಗುಣಿಯ ಎಲ್ಲಾ ಹರಳುಗಳನ್ನು ತೆಗೆದುಕೊಂಡು ಉಳಿದ ಎಲ್ಲಾ ಗುಳಿಗಳಿಗೂ ಒಂದೊಂದರಂತೆ ಹಾಕಬೇಕು. ಹರಳು ಹಾಕಿದ ನಂತರ ಮುಂದಿನ ಗುಣಿಯಿಂದ ಹರಳು ತೆಗೆದು ಹಾಕುತ್ತಾ ಹೋದಲ್ಲಿ ಎಲ್ಲಿ ಹರಳು ನಿಂತು ಮುಂದಿನ ಗುಣಿ ಕಾಲಿಯಾಗುತ್ತದೆಯೋ, ಅದರ ಮುಂದಿನ ಗುಣಿ ಹಾಗೂ ಎದರು ಸಾಲಿನ ಗುಣಿ ಹರಳುಗಳು ಆಡುತ್ತಿದ್ದವನ ಕೈಸೇರುತ್ತದೆ. ಇದಕ್ಕೆ 'ಹೆಗ್ಗ' ಎಂದು ಕರೆಯುತ್ತಾರೆ. ಆಟ ಆಡುವಾಗ ಬಿತ್ತುವ ಹರಳುಗಳು ಮುಗಿದು, ಮುಂದಿನ ಎರಡು ಗುಣಿಗಳು ಖಾಲಿ ಇದ್ದರೆ ಅವರಿಗೆ ಯಾವ ಹರಳುಗಳೂ ದೊರಕುವುದಿಲ್ಲ. ಪರಸ್ಪರ ಸಾಲುಗಳಲ್ಲಿನ ಗುಣಿಗಳಲ್ಲಿ ೪ ಹರಳುಗಳು ಸೇರಿದಾಗ 'ಎಮ್ಮೆ ಹೀದಿದೆ' (ಹಡೆದಿದೆ) ಎಂದು ಎತ್ತಿಟ್ಟು ಕೊಳ್ಳುತ್ತಾರೆ. ಹೀಗೆ ಆಟದ ಕೊನೆಗೆ ಒಂಟಿ ಮನೆ ಆಟದವರೆಗೆ ಸಾಗುತ್ತದೆ. ಈ ಆಟವನ್ನು ಹರಳು ಮನೆ ಆಟವೆಂತಲೂ ಕರೆಯುತ್ತಾರೆ. ಇಂತಹ ಈ ಚೆನ್ನಮಣಿ ಆಟ ಕಾಮಲಾಪುರದ ಪರಿಸರದಲ್ಲಿ ದೇವಾಲಯದ ಜಗುಲಿಯ ಮೇಲೆ ಅಥವಾ ಬಂಡೆಗಳ ಮೇಲೂ ಕೆತ್ತಿರುವುದನ್ನು ಕಾಣಸಿಗುತ್ತವೆ. ಉದಾ:- ಮಹಾನವಮಿ ದಿಬ್ಬದ ಎದುರಿಗಿನ ಹಾಸು ಬಂಡೆಯ ಮೇಲೆ ಇಂತಹ ಚೆನ್ನಮಣಿಯ ಕುಣಿಗಳನ್ನು ಈಗಲೂ ಕಾಣಬಹುದು.[೩೨] ಈ ಆಟವನ್ನು ಹೆಚ್ಚಿನ ಮಟ್ಟಿಗೆ ಸಮಯ ಕಳೆಯಲು ಮತ್ತು ಮನೋರಂಜನೆಗಾಗಿ ಈಗಲೂ ಆಡುತ್ತಾರೆ. ಜಾನಪದ ನಂಬಿಕೆಯಂತೆ ಈ ಚೆನ್ನಮಣಿಯಲ್ಲಿನ ಏಳು ಗುಣಿಗಳು ಸಪ್ತಪದಿಯ ನೆನಪನ್ನು ತರುತ್ತವೆ. ನವದಂಪತಿಗಳು ಅಗ್ನಿಕುಂಡಕ್ಕೆ ಹಾಕುವ ಏಳು ಬಾರಿ ಪ್ರದಕ್ಷಿಣೆಯ ನೆನಪನ್ನು ತರುತ್ತದೆ. ಏಳು ಗುಣಿಗಳೆಂದರೆ ಭೂಲೋಕ, ತಪೋಲೋಕ, ಮತ್ತು ಸತ್ಯಲೋಕಗಳಿಂದ ಸಪ್ತ ಲೋಕಗಳನ್ನು ಸುತ್ತುವುದು ಎಂಬ ಅರ್ಥದಲ್ಲಿಯೂ ಜನಪದರು ಇದನ್ನು ನಂಬುತ್ತಾರೆ.[೩೩] ಇಲ್ಲಿನ ಜನಪದ ನಂಬಿಕೆ ಏನೇ ಇರಲಿ ಕಾಮಲಾಪುರದ ಗ್ರಾಮದ ಕೆಲವೊಂದು ದೇವಾಲಯಗಳ ಜಗಲಿ ಮತ್ತು ಬಂಡೆಗಳ ಮೇಲೆ ಮನೋರಂಜನೆಗಾಗಿ ಈ ಆಟವಾಡುತ್ತಿದ್ದರೆಂಬುದಂತೂ ಸ್ಪಷ್ಟ. ಮಹಾನವಮಿ ದಿಬ್ಬದ ಎದುರಿಗಿದ್ದ ಬಂಡೆಯ ಮೇಲಿನ ಈ ಗುಣಿಗಳು ವಿಜಯನಗರ ಕಾಲದಲ್ಲಿದ್ದ ಆಟಕ್ಕೆ ಸಾಕ್ಷಿಯನ್ನು ಮುಂದಿಟ್ಟಂತಿದೆ.

**ಗೋಲಿಯಾಟ:** ಪ್ರತಿಯೊಂದು ಆಟಕ್ಕೂ ಅದರದ್ದೇ ಆದ ಪೌರಾಣಿಕ ಐತಿಹಾಸಿಕ ಹಿನ್ನಲೆ ಇರುತ್ತದೆ. ಈ ಆಟಗಳು ಬೌದ್ಧಿಕ ವಿಕಸನಕ್ಕೆ ಮತ್ತು ಮನಸ್ಸಿನ ಸ್ಥಿಮಿತತೆಗೆ ಪುಷ್ಠಿ ನೀಡುವುದಲ್ಲದೆ ದೈಹಿಕ ಸದೃಡತೆಯನ್ನು ರೂಪಿಸುತ್ತದೆ.[೩೪] ಈ ಜನಪದ ಆಟಗಳು ದೇಹ ಮತ್ತು ಮನಸ್ಸು ಒಂದುಗೂಡಿ ಮನರಂಜನೆ ಮತ್ತು ತಿಳುವಳಿಕೆ ಕೊಡುವ ಆಟಗಳಾಗಿರುತ್ತವೆ. ಇಂತಹ ಆಟದಲ್ಲಿ ಗೋಲಿಯಾಟವೂ ಒಂದು. ಗೋಲಿಯಾಟದ ಹೆಸರಿನಲ್ಲಿಯೂ ವೈವಿಧ್ಯತೆ ಇದೆ. ಅಂಜಿ-ಗುಂಜಿ, ಮಾರ್‌ಗುಂಡು, ಪೇಂದ ಅಥವಾ ಬಿಸ್ಕೆಟ್ ಆಟ, ಏಟು ಗೇಣು ಇತ್ಯಾದಿ ಹೆಸರುಗಳಿಂದ ಇದನ್ನು ಗೋಲಿಯಾಟವೆಂದು

ಕರೆಯುತ್ತಾರೆ.[೩೫] ಪ್ರಸ್ತುತ ಕಾಮಲಾಪುರ ಗ್ರಾಮದಲ್ಲಿ ಐದು ಬಗೆಯ ಗೋಲಿಯಾಟ ಮಾತ್ರ ಪ್ರಚಲಿತವಿದೆ. ಈ ಗೋಲಿ ಆಟಗಳ ಕಿರು ಚಿತ್ರಣ ಮಾತ್ರ ಇಲ್ಲಿದೆ.

**ಅಂಜಿ-ಗುಂಜಿ:** ಕಾಮಲಾಪುರದಲ್ಲಿ ಈ ಆಟವನ್ನು ಗಂಡು-ಹೆಣ್ಣು ಆಟ ಎಂದು ಕರೆಯುತ್ತಾರೆ. ಈ ಆಟದಲ್ಲಿ ಇಬ್ಬರಿಗಿಂತ ಹೆಚ್ಚು ಜನರು ಭಾಗವಹಿಸುತ್ತಾರೆ. ಒಂದು ಅಂಗುಲ ಆಳ ಒಂದುವರೆ ಅಂಗುಲ ವ್ಯಾಸದ ಗುಣಿ ತೆಗೆದು ೩-೬ ಮೀಟರ್‌ದಲ್ಲಿ ಉದ್ದನೆಯ ಗೆರೆ ಎಳೆಯುತ್ತಾರೆ. ಗೆರೆಯ ಮೇಲೆ ನಿಂತು ಗೋಲಿಯನ್ನು ಗುಣಿಯ ಕಡೆಗೆ ಒಬ್ಬೊಬ್ಬರಾಗಿ ಎಸೆಯುತ್ತಾರೆ. ಗುಣಿಗೆ ತೀರಾ ಹತ್ತಿರ ಬಂದವನು ಗೋಲಿಯನ್ನು ಎತ್ತಿಕೊಂಡು ಬಲಗೈನ ೩ ಬೆರಳುಗಳಿಂದ ಹಿಡಿದು ಎಡಗೈಯನ್ನು ನೆಲಕ್ಕೆ ಊರಿ ತೋರು ಬೆರಳಿನಿಂದ ನಿಧಾನವಾಗಿ ಚಿಮ್ಮುತ್ತಾನೆ. ತೋರು ಬೆರಳಿನಿಂದ ಹೊಡೆಯುವಾಗ ಅಂಜಿ-ಗುಂಜಿ ಅರಕು ಮೇಣಿ, ಏಳುಕು ತಕಡಿ, ಎಂಟು ಗಾಯ ಸುಂಚಿ, ಒಂಬತ್ತುಕು ಓಟ, ದಶ ಕಟ್ ರಾಜ ಎಂದು ಆರು ಬಾರಿ ಗುಣಿಯ ಒಳಕ್ಕೆ ತನ್ನ ಗೋಲಿ ಬೀಳಸಿದರೆ ಆತ ಗಂಡಾಗಿ ಆಟ ಗೆದ್ದಂತಾಗುತ್ತದೆ. ಸೋತವನು ಹೆಣ್ಣು ದಶಕಟ್‌ರಾಜ ಎಂದರೆ ಗೆದ್ದು ರಾಜನಾದಂತೆ. ರಾಜನಾದವನಿಗೆ ಉಳಿದವರು ಕಪ್ಪು ಕಾಣಿಕೆ ಒಪ್ಪಿಸಬೇಕೆಂದು ಇದರ ಅರ್ಥ. ಅಂಜಿಗುಂಜಿ ಆಟ ಪ್ರಸ್ತುತ ಕಾಮಲಾಪುರ ಗ್ರಾಮದಲ್ಲಿ ಪ್ರಚಲಿತ ವಿರುವುದರಿಂದ ಇದು ಇಲ್ಲಿಯ ಮನೋರಂಜನೆಯ ಹಾಗೂ ಮನೋವಿಕಾಸದ ಆಟವೆಂಬುವುದರಲ್ಲಿ ಸಂಶಯವಿಲ್ಲ.[೩೬]

**ಡೇರ್ ಆಟ:** ಮಾರ್ ಗುಂಡು ಜಾಜಿ ಆಟಕ್ಕೆ (ಅಂಜಿ-ಗುಂಜಿ) ಇನ್ನೊಂದು ಉದಾಹರಣೆ ಡೇರ್ ಆಟ. ಸಣ್ಣ ಕಲ್ಲೊಂದರ ಮೇಲೆ ನಾಣ್ಯವೊಂದನ್ನು ಇಟ್ಟು, ಆಟದಲ್ಲಿ ಪಾಲ್ಗೊಳ್ಳುವವರೆಲ್ಲರೂ ಗೋಲಿಗಳನ್ನು ಒಬ್ಬನು ಪಡೆದುಕೊಂಡು ನಾಣ್ಯ ಇಟ್ಟಿರುವ ಜಾಗದಿಂದ ಒಂದೆರಡು ಮೀಟರ್ ದೂರದಲ್ಲಿ ಒಬ್ಬರ ಹೊಟ್ಟೆಗೆ ತಟ್ಟುವಂತೆ ಗೋಲಿಯನ್ನು ಎಸೆಯುತ್ತಾನೆ. ಚೆಲ್ಲಾ ಪಿಲ್ಲೆಯಾಗಿ ಬಿದ್ದ ಗೋಲಿಗಳಲ್ಲಿ ದೂರ ಬಿದ್ದಿರುವ ಗೋಲಿಯವನು ಮೊದಲು ಗುರಿಯಿಟ್ಟು ತನ್ನ ಬೆರಳು ಮತ್ತು ತೋರು ಬೆರಳಿನ ನೆರವಿನಿಂದ ಚಿಮ್ಮಿ ಕಲ್ಲಿನ ಮೇಲಿನ ನಾಣ್ಯವನ್ನು ಚದುರಿಸುತ್ತಾನೆ. ನಾಣ್ಯ ಚದುರಿದಾಗ ಅವನ ಗೋಲಿಗೆ ಉಳಿದವರು ತಮ್ಮ ಹೆಬ್ಬರಳಿನಿಂದ ಚಿಮ್ಮಿಸಿ ಹೊಡೆಯುತ್ತಾರೆ. ಒಂದು ವೇಳೆ ಮೊದಲು ಗೋಲಿ ಹೊಡೆದಾಗ ನಾಣ್ಯ ಕದಲದೆ ಇದ್ದರೆ, ಉಳಿದವರು ನಾಣ್ಯ ಕದಲುವವರೆಗೂ ಆಟವಾಡುತ್ತಾರೆ. ನಾಣ್ಯ ಚದುರಿಸಿದವರ ಗೋಲಿಗೆ ಒಬ್ಬನು ಮುಟ್ಟಿಸಿದರೆ ಅವನ ಗೋಲಿಗೆ ಉಳಿದವರು ಮುಟ್ಟಿಸಲು ಪ್ರಯತ್ನಿಸಿ ಕೊನೆಯವರೆಗೂ ಉಳಿದವನಿಗೆ ಜಾಜಿ ಕಟ್ಟಿರುವಂತೆ ಗೋಲಿ ಕಾಸು ಕೊಡಬೇಕಾಗುತ್ತದೆ. ಇಂದಿಗೂ ಈ ಆಟ ಕಾಮಲಾಪುರ ಗ್ರಾಮದಲ್ಲಿ ನಡೆಯುತ್ತಿರುತ್ತದೆ.[೩೭]

**ನಾಲ್ಕು ಬೆಟ್ಟು ಬಂಗಾ:** ಇದಕ್ಕೆ ಇನ್ನೊಂದು ಹೆಸರು ಪೇಂದ್ ಎಂದು ಕರೆಯುತ್ತಾರೆ.[೩೮] ಇದು ಬಹುಜನರ ಮನರಂಜನೆಯ ಆಟ. ಚೌಕಾಕಾರದ ಗೆರೆಗಳ ಮಧ್ಯೆ ಲಂಬಾಕಾರ ವಿಸ್ತೃತಾಕಾರದ ಗೆರೆಗಳನ್ನು ಎಳೆದು ನಾಲ್ಕು ಗೆರೆಗಳನ್ನು ಮಾಡುತ್ತಾರೆ. ಮಧ್ಯೆ ಗೆರೆಗಳ ಮೇಲೆ ಗೋಲಿಗಳನ್ನು ಸಾಲಾಗಿ ಇಟ್ಟಿರುತ್ತಾರೆ. ೧೦-೧೫ ಅಡಿ ದೂರದಿಂದ ಪ್ರತಿಯೊಬ್ಬರು ಒಬ್ಬೊಬ್ಬರಾಗಿ ಗೋಲಿಗಳನ್ನು ಬಿಡುತ್ತಾರೆ. ಬಿಂಗ್ ಅಥವಾ ಪೇಂದದ ಹತ್ತಿರಕ್ಕೆ ಬಿಟ್ಟವನು ಮೊದಲು ಮಧ್ಯದಲ್ಲಿರುವ ಗೋಲಿಗಳನ್ನು

ಹೊಡೆದು ಹೊರ ಹಾಕುತ್ತಾನೆ. ಗೋಲಿ ಎಲ್ಲವನ್ನು (ಉಡೀಸ್) ಮೊದಲು ತೆಗೆದು ಕೊಳ್ಳುವವನು ಗೆದ್ದನೆಂದು ತಿಳಿದುಕೊಳ್ಳುತ್ತಾನೆ. ಇಲ್ಲಿಯೂ ಕೂಡ ಪೇಂದದ ಮನೆಯನ್ನು ಕಾಲಿ ಮಾಡಿದವನ ಗೋಲಿಗೆ ಉಳಿದವರು ತಾಕಿಸುವಂತೆ ಮಾಡುತ್ತಾರೆ. ಇದು ಕಾಮಲಾಪುರ ಗ್ರಾಮದಲ್ಲಿ ಆಡುವ ಗೋಲಿ ಆಟದ ಮತ್ತೊಂದು ವಿಧ. ಒಂದು ವೇಳೆ ಗೋಲಿಗೆ ತಾಕಿಸಲು ಸಾಧ್ಯವಾಗದಿದ್ದರೆ ತಮ್ಮ ತಮ್ಮ ಕೈ ಮೊಣಗಂಟಿನಿಂದ ದೂರಬೇಕು.

**ಚೌಕಾಬಾರ ಆಟ:** ಈ ಆಟಕ್ಕೆ ಬಿಸ್ಕೆಟ್ ಆಟ ಅಥವಾ ವಟ್ಟ ಆಟ ಎಂತಲೂ ಕರೆಯುತ್ತಾರೆ. ವೃತ್ತಾಕಾರದ ಗೆರೆಯ ಮೇಲೆ ಮತ್ತು ಒಳಭಾಗದಲ್ಲಿ ಗೋಲಿಯನ್ನು ಇಟ್ಟು ದೂರದಿಂದ ಒಬ್ಬೊಬ್ಬರಾಗಿ ಗೋಲಿಯನ್ನು ಎಸೆಯುತ್ತಾರೆ. ಎಸೆಯುವಾಗ ಗೋಲಿಯ ಕಟ್ಟಿಗೆ ತಾಗಿ ಹೊರಬಂದರೆ ಎಲ್ಲಾ ಗೋಲಿಗಳನ್ನು ತನ್ನ ತೋರು ಬೆರಳುಗಳಿಂದ ಹೊಡೆದು ಹೊರ ಹಾಕುತ್ತಾರೆ. ನಂತರ ಉಳಿದವರು ತಮ್ಮ ಗೋಲಿಗಳಿಂದ ಹೊಡೆದು ಉಡೀಸ್ ಮಾಡಿದವ ಗೋಲಿಗೆ ತಾಕಿಸಿದರೆ ಅವನು ಸೋತನು ಎಂದರ್ಥ. ಇಲ್ಲದಿದ್ದರೆ ಎಲ್ಲ ಗೋಲಿಗಳು ಮೊದಲು ಹೊಡೆದವನ ಪಾಲೇ ಆಗಿರುತ್ತದೆ. ಕೆಲವೊಮ್ಮೆ ವೃತ್ತಗೆರೆಯ ಬದಲು ಚೌಕಾಕಾರವಾಗಿ ಬರೆದ ಉದ್ದ ಮತ್ತು ಅಡ್ಡ ಗೆರೆಗಳನ್ನು ಕೊರೆದು ಆಡುವವರಷ್ಟು ಜನರು ಗೋಲಿಗಳನ್ನು ಅದರೊಳಗೆ ಇಟ್ಟು ವಟ್ಟಆಟದಂತೆಯೇ ಆಡುವ ಪದ್ಧತಿಯೂ ಇಲ್ಲಿದೆ.[೩೯]

**ಏಟು-ಗೇಣು ಅಥವಾ ಶೂಟ್ ಆಟ:** ಇದು ಕೂಡ ಜಾಜಿ ಆಟದ ಒಂದು ವಿಧ. ಒಬ್ಬ ಸ್ವಲ್ಪದೂರದಲ್ಲಿ ತನ್ನ ಗೋಲಿಯನ್ನು ಇಟ್ಟು ಟಚ್ ಮಾಡುವಂತೆ ಹೇಳುತ್ತಾನೆ. ಎದುರಾಳಿ ಬಲಗಾಲನ್ನು ಮುಂದಿಟ್ಟು ಟಚ್ ಮಾಡುವಂತೆ ಹೇಳುತ್ತಾ ಗುರಿಯಿಟ್ಟು ಗೋಲಿ ಹೊಡೆಯುತ್ತಾನೆ. ಈ ಹೊಡೆತ ಗೋಲಿಗೆ ತಾಕಿದರೆ ಮತ್ತೆ ಎಸೆದು ಗೇಣು ದೂರದೊಳಗೆ ಬೀಳದಂತೆ ಎಸೆಯಬೇಕು. ಏಟಿಗೆ ಎರಡು ಗೋಲಿ, ಗೇಣುವಿಗೆ ಒಂದು ಗೋಲಿಯಂತೆ ಕೊಡುತ್ತಾರೆ. ಏಟು ಬಿದ್ದ ಗೋಲಿಗೆ ಗೇಣು ಹಾಕದಿದ್ದರೆ ಆತನು ಸೋತನೆಂದು ಅರ್ಥ. ಸೋತವನು ಜಾಜಿಯ ಗೋಲಿ ಅಥವಾ ಒಪ್ಪಂದ ಮಾಡಿಕೊಂಡಂತೆ ಹಣವನ್ನು ಕೊಡಬೇಕಾಗುತ್ತದೆ.[೪೦]

**ಪಾರ್:** ಇದನ್ನು ಮೀರಿ ಎಂತಲೂ ಕರೆಯುತ್ತಾರೆ. ಮರ ಅಥವಾ ಕಲ್ಲು ಗುಂಡಿಗೆ ಆಸರೆಯಾಗಿರುವಂತೆ ಎರಡು ಸಮಾನಾಂತರ ಎರಡು ಅಡ್ಡಗೆರೆಗಳನ್ನು ಎಳೆದು ಚೌಕಾಕಾರವಾಗುವಂತೆ ಮಾಡುತ್ತಾರೆ. ಆಸರೆಯ ಕಡೆ ಎರಡು ಗುಣಿಗಳಿಗೆ ತ್ರಿಕೋನಾಕಾರವಾಗುವಂತೆ ಮತ್ತೊಂದು ಗುಣಿಯನ್ನು ಮಾಡುತ್ತಾರೆ. ಹತ್ತು-ಹದಿನೈದು ಅಡಿ ದೂರದಿಂದ ಗೋಲಿಗಳನ್ನು ಎಸೆಯುತ್ತಾರೆ. ಗೋಲಿ ಗುಣಿಗೆ ಬಿದ್ದರೆ ಅವನು ಗೆದ್ದಂತೆ ಬೀಳದಿದ್ದರೆ ಯಾವುದಾದರೂ ಒಂದು ಗೋಲಿ ಹೊಡೆಯುವಂತೆ ಪ್ರತಿಸ್ಪರ್ಧಿ ಹೇಳುತ್ತಾನೆ. ಅಪ್ಪಿ-ತಪ್ಪಿ ಬೇರೆ ಗೋಲಿಗೆ ಬಿದ್ದರೆ ಹೊಡೆದ ಗೋಲಿ ಗೆರೆಯ ಮೇಲೆ ಬಿದ್ದರೆ ಅಥವಾ ಗೆರೆಯ ಹೊರಗಡೆ ಬಿದ್ದರೆ ಆತನು ಸೊತಂತೆ. ಗೋಲಿ ಚೌಕಾಕಾರದ ಒಳ ಭಾಗದಲ್ಲಿ ಬಿದ್ದರೆ, ತೋರಿಸಿದ ಗೋಲಿಗೆ ಬಿದ್ದರೆ ಎದುರಾಳಿ ಆಟವನ್ನು ಮುಂದುವರೆಸುತ್ತಾನೆ. ಸರದಿಯ ಪ್ರಕಾರ

ಹತ್ತು-ಹನ್ನೆರಡು ಜನ ಈ ಆಟವನ್ನು ಆಡಬಹುದು. ವೈಜ್ಞಾನಿಕ ದೃಷ್ಟಿಯಿಂದ ಮಕ್ಕಳ ಏಕಾಗ್ರತೆ ಮತ್ತು ಬೌದ್ಧಿಕ ಬೆಳವಣಿಗೆಗೆ ಇದು ಅನುಕೂಲ.[೪೧]

**ಬಗರಿಯಾಟ:** ಜಾನಪದದಲ್ಲಿ ಬಗರಿಯಾಟ ಎಂದಾಗ ಜನಪ್ರಿಯ ಹಾಡೊಂದು ಬಗರಿಯಾಟವನ್ನು ಬಣ್ಣಿಸುವ ರೀತಿ ಪ್ರಚಲಿತವಿದೆ. ಇದು ಮಹಾಂತ ಪ್ರಿಯ ಕವಿಯ ರಚನೆಯೂ ಹೌದು.[೪೨]

"ನನ್ನಯ ಬಗರಿ ಬಣ್ಣದ ಬಗರಿ
ಗುರು ಗುರು ಸದ್ದನು ಮಾಡುವ ಬಗರಿ।
ಕಾಮನ ಬಿಲ್ಲನು ಭೂಮಿಗೆ ಇಳಿಸಿ
ಗರಗರ ಸುತ್ತುವ ಬಣ್ಣದ ಬಗರಿ।

ಈ ಕಾವ್ಯ ಬಗರಿಯಾಟದ ಲಕ್ಷಣವನ್ನು ಸೂಚಿಸುತ್ತದೆ. ಈ ಆಟವನ್ನು ಚಳಿಗಾಲದಲ್ಲಿ ಆಡುತ್ತಾರೆ. ಸುಮಾರು ಹತ್ತರಿಂದ ಇಪ್ಪತ್ತೈದು ವಯಸ್ಸಿನವರು ಹೆಚ್ಚಿನ ಮಟ್ಟಿಗೆ ಈ ಆಟವನ್ನು ಆಡುತ್ತಾರೆ. ಚಳಿಗಾಲದ ಆಟವಾದ ಈ ಬಗರಿಯಾಟ ಹಲವು ಹೆಸರುಗಳಿಂದ ಜನಪ್ರಿಯವಾಗಿದೆ. ಕಾರೆ, ಉಲುಚಿ, ಬೆಪ್ಪಾಲೆ, ಜಾಲಿ, ಮುಂತಾದ ಕಾಡು-ಮರಗಳ ರೆಂಬೆಗಳಿಂದ ನಾಜೂಕಾಗಿ ಕೆತ್ತಿ ತಯಾರಿಸಿ ವರ್ತುಲಾಕಾರದ ಈ ಬಗುರಿಯ ಪಾತ್ರಕ್ಕನುಗುಣವಾಗಿ ಚೂಪಾದ ಮಳೆ ಹೊಡೆದು ನಾರು ಅಥವಾ ಹಳೆಯ ಬಟ್ಟೆಯ ತಂತುಗಳಿಂದ ಹೆಣೆದು ದಾರ (ಉರಿ) ಸುತ್ತಿ ಬಗುರಿಯನ್ನು ಬಿಟ್ಟರೆ ಬಗುರಿಯ ಮೇಲೆ ಹೊಡೆದ ಮೊಳೆಯ ಮೇಲಿನ ಆಧಾರದಲ್ಲಿ ಗರಗರ ತಿರುಗುತ್ತದೆ.

ಬಗುರಿಯಾಟದಲ್ಲಿ ಆಫೀಟ್, ಅಂತರ್‌ಬುಗುರಿ, ಕುಪ್ಪ-ತೆನ್ನಾರಿ, ಪೆನ್ನಾರಿ ಹೀಗೆ ಹಲವಾರು ಆಟಗಳ ವೈವಿದ್ಯತೆಯನ್ನು ಕಾಣಬಹುದು. ಮಹಾಭಾರತದ ಕಥೆಗಳಲ್ಲೂ ಚಂದ್ರಹಾಸ, ಕುಮಾರ ರಾಮನ ಕಥೆ, ಮಂಗಡಿ ಕೆಂಪೇಗೌಡನ ವೃತ್ತಾಂತದಲ್ಲಿ ದಾಸರ ಕಾವ್ಯದಲ್ಲಿ ಬಗುರಿಯಾಟ ಕುರಿತು ಅನೇಕ ಉಲ್ಲೇಖಗಳು ದೊರೆಯುತ್ತವೆ.[೪೩]

**ಚುಕ್ಕೆಯಾಟ:** ಕಮಲಾಪುರದಲ್ಲಿ ಪ್ರಸ್ತುತವಿರುವ ಇನ್ನೊಂದು ಒಳಾಂಗಣದ ಆಟ. ಚುಕ್ಕೆಗಳನ್ನು ಹಾಕಿ ಆಟವನ್ನು ಆಡುವುದರಿಂದ ಇದನ್ನು ಚುಕ್ಕೆಯಾಟ ಎಂದು ಕರೆಯುತ್ತಾರೆ. ಕಾಗದ ಅಥವಾ ಪಾಟಿಯ ಮೇಲೆ ಚುಕ್ಕೆಗಳನ್ನು ಹಾಕಿ ಚುಕ್ಕೆಗಳ ಮೂಲಕ ಒಂದು ಚೌಕವನ್ನು ರಚಿಸಿ ಕ್ರಮವಾಗಿ ಗೆರೆ ಹಾಕುತ್ತಾ ಆಟ ಆಡುವ ಪದ್ದತಿ ಇದೆ. ಚುಕ್ಕೆಗಳ ಒಳಗೆ ಎಂದು ಆಟಗಾರರು ಚೌಕವನ್ನು ಪಡೆಯಬೇಕು. ಪಡೆದ ಚೌಕ ಸಂಖ್ಯೆ ಅಥವಾ ಕೋಣೆಯನ್ನು ಯಾವ ಆಟ ಗಾರನೂ ಹೆಚ್ಚು ಪಡೆಯುತ್ತಾನೋ ಆತನು ಗೆದ್ದನೆಂದು ತಿಳಿಯಬೇಕಾಗುತ್ತದೆ.

**ಬಳೆಯಾಟ:** ಈ ಆಟದಲ್ಲಿ ನಾಲ್ಕು-ಐದು ಜನ ಭಾಗವಹಿಸಬಹುದಾಗಿದೆ. ಬಳೆಯನ್ನು ಬಳಿಸಿ ಆಟವಾಡುವುದರಿಂದ ಈ ಆಟವನ್ನು ಬಳೆಯಾಟವೆಂದು ಕರೆಯುತ್ತಾರೆ. ಬಳೆಯ ತಂಡುಗಳನ್ನು ಮೇಲಕ್ಕೆ ಹಾರಿಸಿ ಹಿಂಗೈಯಿಂದ ಹಿಡಿಯಬೇಕು. ಹಿಂಗೈಯಲ್ಲಿ ಹಿಡಿದ ಬಳೆಯ ತುಂಡುಗಳಲ್ಲಿ ಒಂದು ಬಣ್ಣದ ಬಳೆಯನ್ನು ವಿರುದ್ಧ ಪ್ರತಿ ಸ್ಪರ್ಧಿ ಸೂಚಿಸಬೇಕು. ಎಲ್ಲಾ ಬಳೆಗಳ ತುಂಡುಗಳನ್ನು ಮೇಲಕ್ಕೆ ಹಾರಿಸಿ ವಿರುದ್ಧ ಸ್ಪರ್ಧಿ ಸೂಚಿಸಿದ ಬಳೆಯ ತುಂಡನ್ನು ಅಂಗೈಯಲ್ಲಿ ಹಿಡಿಯಬೇಕು.

ಯಾವುದೇ ಕಾರಣಕ್ಕೂ ವಿರುದ್ಧ ಸ್ಪರ್ಧಿ ಸೂಚಿಸಿದ ಬಣ್ಣದ ಬಳೆ ತುಂಡು ಕೆಳಗೆ ಬೀಳಬಾರದು. ಬಳಿಕ ಆಣೆಕಲ್ಲಾಟವನ್ನು ಆಡುವ ರೀತಿಯಲ್ಲಿಯೇ ಆ ತುಂಡನ್ನು ಕೈಯಲ್ಲಿ ಇಟ್ಟುಕೊಂಡೆ ಕೆಳಗೆ ಬಿದ್ದ ಚೂರುಗಳನ್ನು ಹೆಕ್ಕಬೇಕು. ನಿರಾತಂಕವಾಗಿ ಈ ಆಟ ನಿರ್ವಹಿಸಿದರೆ ಈ ಆಟವನ್ನು ಗೆದ್ದನೆಂದು ತಿಳಿಯಬೇಕಾಗುತ್ತದೆ.[೪೪]

**ಓಕುಳಿ ಆಟ:** ವಿಜಯನಗರ ಕಾಲಕ್ಕೆ ನಡೆಯುತ್ತಿದ್ದ ಮಹಾನವಮಿ ಹಬ್ಬದಂತಹ ದೊಡ್ಡ ದೊಡ್ಡ ಉತ್ಸವಗಳಲ್ಲಿ ಬಣ್ಣದ ನೀರಿನಿಂದ ಓಕಳಿ ಆಡುತ್ತಿದ್ದರು. ವಿಜಯನಗರ ಕಾಲದಿಂದಲೂ ಬಳಕೆಯಲ್ಲಿದ್ದ ಇಂತಹ ಆಟದ ಮಾದರಿಯನ್ನು ಮಹಾನವಮಿ ದಿಬ್ಬ, ವಿಠಲ ದೇವಾಲಯಗಳ ಭಿತ್ತಿಯ ಮೇಲಿನ ಉಬ್ಬು ಶಿಲ್ಪಗಳಲ್ಲೂ ಕಾಣಬಹುದು. ಈಗಲೂ ಆಡುತ್ತಿದ್ದ ಓಕುಳಿ ಆಟ ವಿಜಯನಗರ ಕಾಲದಲ್ಲಿಯೂ ನಡೆಯುತ್ತಿರುವ ಓಕುಳಿ ಆಟ ಬೆಳೆದು ಬಂದಿರುವ ಪರಂಪರೆಗೆ ಇದು ಸಾಕ್ಷಿಯಾಗಿದೆ.

**ಮೂರು ಮನೆಯಾಟ:** ಒಂದು ಚೌಕದ ಒಳಗೆ ಮೂರು ಚೌಕನ್ನು ಮಾಡಿ ಮೂರು ಚೌಕಗಳಿಗೂ ನಾಲ್ಕು ದಿಕ್ಕುಗಳಿಂದ ಮೂರು ಚೌಕಗಳನ್ನು ಸ್ಪರ್ಶಿಸುವಂತೆ ಗೆರೆಗಳನ್ನು ಎಳೆಯಲಾಗುತ್ತದೆ. ಮೊದಲು ಒಬ್ಬ ವ್ಯಕ್ತಿ ಎರಡು ಗೆರೆಗಳು ಕೂಡಿದ ಸ್ಥಳದಲ್ಲಿ ಒಂದು ಕಲ್ಲು ಅಥವಾ ಹರಳು ಇಡುತ್ತಾನೆ. ಪ್ರತಿ ಸ್ಪರ್ಧಿ ವ್ಯಕ್ತಿ ಮತ್ತೆ ಎರಡು ಗೆರೆಗಳು ಕೂಡಿದ ಸ್ಥಳದಲ್ಲಿ ಗುರುತಿಸಿದ ಕಲ್ಲು ಅಥವಾ ಹರಳನ್ನು ಹಿಡಿಯುತ್ತಾನೆ. ಮೊದಲು ಹರಳು ಇಟ್ಟವನು ಎರಡು ಗೆರೆಗಳು ಕೂಡಿದ ಸ್ಥಳದಲ್ಲಿ ಹರಳನ್ನು ಇಡಬೇಕು. ಹೀಗೆ ಪರಸ್ಪರ ಆಟವಾಡುವಾಗ ಒಬ್ಬನೇ ವ್ಯಕ್ತಿಯ ಮೂರು ಹರಳುಗಳೂ ಒಂದೇ ಸಾಲಿನಲ್ಲಿ ಬಂದರೆ ಆ ವ್ಯಕ್ತಿ ಗೆದ್ದನೆಂದು ತಿಳಿಯುತ್ತಾರೆ. ಒಬ್ಬ ವ್ಯಕ್ತಿಯ ಎರಡು ಹರಳುಗಳು ಒಂದೇ ರೇಖೆಯಲ್ಲಿ ಬಂದಾಗ ಪ್ರತಿ ಸ್ಪರ್ಧಿ ಮೂರನೇ ಮನೆಯಲ್ಲಿ ತನ್ನ ಹರಳನ್ನು ಕೂಡಿಸಿ ಇದನ್ನು ತಡೆಯುತ್ತಾನೆ. ಹೀಗೆ ಯಾರು ಹೆಚ್ಚು ಹರಳನ್ನು ಗೆಲ್ಲುತ್ತಾರೋ ಅಲ್ಲಿಗೆ ಆಟ ಮುಕ್ತಾಯವಾಗುತ್ತದೆ.[೪೫]

**ಚೌಕದ ಮನಿಯಾಟ:** ಹೆಚ್ಚಾಗಿ ಸ್ತ್ರೀಯರು ಈ ಆಟವನ್ನು ಆಡುತ್ತಾರೆ. ಕಮಲಾಪುರದ ಸ್ಮಾರಕಗಳ ಭಿತ್ತಿಯ ಮೇಲೂ ಇದನ್ನು ಪ್ರತಿಬಿಂಬಿಸಲಾಗಿದೆ. ಉದಾ: ಪಟ್ಟಾಭಿರಾಮ ದೇವಾಲಯದ ಮುಖ ಮಂಟಪದ ಜಗಲಿಯ ಮೇಲೆ, ರಂಗ ಮಂಟಪದ ಹಾಸುಗಲ್ಲುಗಳ ಮೇಲೂ, ಇಂತಹ ಆಟಗಳ ರೇಖಾ ಚಿತ್ರಗಳನ್ನು ಚಿತ್ರಿಸಿರುತ್ತಾರೆ. ಈ ಚೌಕಾಕಾರದ ಮನೆ ಯಾಟಕ್ಕೆ, ಅಲ್ಲಲ್ಲಿ ಕುಣಿಗಳು ಕಾಣುವುದರಿಂದ ಚೆನ್ನಮಣೆ ಆಟದ ಕಾಯಿಗಳಂತೆ, ಗುಲಗಂಜಿ, ಗಜ್ಜುಗೆ, ಹುಣಸೆ ಬೀಜಗಳನ್ನು ಬಳಸಿರುವ ಸಾಧ್ಯತೆ ಇದೆ.[೪೬]

**ಆಣೆ ಕಲ್ಲಾಟ:** ಈ ಆಟವನ್ನು ಅಚ್ಚನ ಕಲ್ಲಾಟ ಎಂತಲೂ ಕರೆಯುತ್ತಾರೆ. ಸಾಮಾನ್ಯವಾಗಿ ಹೆಣ್ಣು ಮಕ್ಕಳೇ ಈ ಆಟವನ್ನು ಆಡುವ ಈ ಆಟವನ್ನು ಎರಡು ಅಥವಾ ಹೆಚ್ಚು ಆಟಗಾರರು ಇದ್ದರೆ ಸರದಿಯ ಪ್ರಕಾರ ಈ ಆಟವನ್ನು ಆಡುತ್ತಾರೆ. 'ಗಜ್ಜುಗ' ಕಾಯಿ ಗಾತ್ರದ ಐದು ನುಣುಪಾದ ಬೆಣಚು ಕಲ್ಲುಗಳು ಈ ಆಟಕ್ಕೆ ಬಳಸಲ್ಪಡುತ್ತವೆ. ಐದು ಕಲ್ಲುಗಳನ್ನು ನೆಲದ ಮೇಲೆ ಚೆಲ್ಲಿ ಆಟುವ ಆಟ. ಈ ಆಟದಲ್ಲಿ ಎರಡು ವಿಧಗಳಿವೆ. ೧. ಸಾಮಾನ್ಯ ಕಲ್ಲಾಟ ೨. ಕೆರೆ ಕಲ್ಲಾಟ.

**ಸಾಮಾನ್ಯ ಕಲ್ಲಾಟ:** ಎರಡಕ್ಕೂ ಹೆಚ್ಚು ಜನ ಆಡಬಹುದಾದ ಆಟ. ಒಬ್ಬೊಬ್ಬರಿಗೆ ಐದು ಕಲ್ಲುಗಳಂತೆ ಎಷ್ಟು ಜನರು ಇರುತ್ತಾರೋ ಅಷ್ಟು ಕಲ್ಲುಗಳನ್ನು ಕೈಯ ಹಿಂಭಾಗದಿಂದ ಹಿಡಿಯಬೇಕು.

ಕೈಯ ಹಿಂಭಾಗದಲ್ಲಿ ಎಷ್ಟು ಕಲ್ಲು ಉಳಿಯುವುದು ಪುನಃ ಮೇಲಕ್ಕೆ ಹಾರಿಸಿ ಕೈಯಿಂದ ಹಿಡಿಯಬೇಕು. ಆಗ ಆ ಕಲ್ಲುಗಳೆಲ್ಲವೂ ಅವನಿಗೆ ಸೇರಿದವುಗಳಾಗುತ್ತವೆ. ನೆಲದ ಮೇಲೆ ಬಿದ್ದ ಕಲ್ಲುಗಳನ್ನು ಒಂದೊಂದಾಗಿ ಮೇಲಕ್ಕೆ ಹಾರಿಸುತ್ತಾ ಹಿಡಿಯಬೇಕು. ಹೀಗೆ ಹಿಡಿಯುವಾಗ ಕಲ್ಲು ಕೆಳಗೆ ಬಿದ್ದರೆ ಅವನು ಆಟದ ಹೊರಗೆ ಉಳಿಯಬೇಕಾಗುತ್ತದೆ. ಕೆಲವೊಮ್ಮೆ ಕಲ್ಲಿನ ಬದಲಿಗೆ ಮರದಿಂದ ಉದುರುವ ಕಾಯಿಗಳನ್ನು ಉಪಯೋಗಿಸುತ್ತಾರೆ. ಇದು ಪೊಕ್ಕ ಮರದ ಕಾಯಿಯಾಗಿದ್ದರಿಂದ ಪೊಕ್ಕು ಆಟ ಎಂತಲೂ ಕರೆಯುತ್ತಾರೆ. ಯಾರು ಹೆಚ್ಚು ಕಾಯಿಗಳನ್ನು ಪಡೆಯುತ್ತಾರೋ ಅವರು ಗೆದ್ದರೆಂದು ಅರ್ಥ.

**ಕೆರೆ ಆಟ:** ಐದು ಬೆಣಚು ಕಲ್ಲುಗಳನ್ನು ನೆಲದ ಮೇಲೆ ಚೆಲ್ಲಿ ಒಂದೊಂದು ಕಲ್ಲನ್ನು ನೆಲದಿಂದ ಎತ್ತುಕೊಳ್ಳುವಾಗ ಪಕ್ಕದ ಇತರೆ ಕಲ್ಲುಗಳಿಗೆ ಕೈಯನ್ನು ತಾಕಿಸಿದರೆ ಆ ಆಟವನ್ನು ಪ್ರತಿ ಸ್ಪರ್ಧಿ ಅಥವಾ ಹೆಚ್ಚು ಜನರಿದ್ದರೆ ಮುಂದಿನವರಿಗೆ ಬಿಟ್ಟು ಕೊಡಬೇಕಾಗುತ್ತದೆ. ಕೈಯಲ್ಲಿರುವ ಕಲ್ಲನ್ನು ಮೇಲಕ್ಕೆ ಹಾರಿಸಿ ಕೆಳಗಿನ ಕಲ್ಲನ್ನು ಎತ್ತಿಕೊಂಡು ಹಾರಿಸಿದ ಕಲ್ಲನ್ನು ಹಿಡಿದುಕೊಳ್ಳಲು ವಿಫಲವಾದರೆ ಆತನು ಆಟವನ್ನು ಬಿಡಬೇಕಾಗುತ್ತದೆ. ಒಂದು ವೇಳೆ ಒಂದನೇ ಆಟಕ್ಕೆ ಒಂದು, ಎರಡನೇ ಆಟಕ್ಕೆ ಎರಡು, ಮೂರನೇ ಆಟಕ್ಕೆ ಮೂರು, ನಾಲ್ಕನೇ ಆಟಕ್ಕೆ ನಾಲ್ಕು ಕಲ್ಲುಗಳನ್ನು ಎತ್ತಿಕೊಂಡರೆ ಆತನು ಗೆದ್ದನೆಂದು ತಿಳಿಯುತ್ತಾರೆ. ನಾಲ್ಕು ಕಲ್ಲನ್ನು ಮೇಲಕ್ಕೆ ಎಸೆದು ಅಂಗೈಯಿಂದ ಮೂರು ಸಾರಿ ಬಡಿದು ಮೇಲೆಸೆದ ಕಲ್ಲನ್ನು ಹಿಡಿದುಕೊಂಡರೆ ಮೊದಲ ಘಟ್ಟ ಮುಗಿದಂತೆ. ಈ ಘಟ್ಟ ಮುಗಿದ ನಂತರ ಹಾಸಂದ್ರ, ಹಾಸೆರಡು, ಹಾಸ್‌ಮೂರು, ಹಾಸ್‌ನಾಲ್ಕು ಆಟಗಳೆಂದು ಆಡುತ್ತಾರೆ. ಬೊಗಸೆಯಲ್ಲಿ ಐದು ಕಲ್ಲುಗಳನ್ನು ಹಿಡಿದು ಒಂದನ್ನು ಮೇಲೆಸೆದು ನಾಲ್ಕು ಕಲ್ಲುಗಳನ್ನು ನೆಲದಲ್ಲಿ ಇಟ್ಟು ಮೇಲಕ್ಕೆ ಎಸೆದು ಕಲ್ಲನ್ನು ಹಿಡಿದರೆ ಅದು ಹಾಸಂದ್ರ. ಹೀಗೆ ಈ ಆಟವನ್ನು ಇಬ್ಬರಿಗಿಂತ ಹೆಚ್ಚು ಜನ ಇದ್ದರೂ ಆಟವಾಡುತ್ತಾರೆ. ಹಿಂಗೈ ಆಟ, ಕಂಟಿಕೆ ಆಟ, ಕೈ ಬದಲಾಯಿಸುವ ಆಟ, ಕಲ್ಲು ಬದಲಾಯಿಸುವ ಆಟ, ಕಾಲುಬಾವಿ ಆಟ. ಹೀಗೆ ಈ ಆಟಗಳಲ್ಲಿ ವೈವಿಧ್ಯತೆ ಇದೆ.[೪೭]

**ಹುಲಿ-ದನದ ಆಟ:** ಕರ್ನಾಟಕದ್ಯಾಂತ ಈ ಆಟವು ಪ್ರಚಲಿತವಿದೆ. ನರಿ-ಕೋಳಿ, ಗಿಳಿ-ಬೆಕ್ಕು ಆಟ ಎಂಬ ಬೇರೆ ಬೇರೆ ಹೆಸರುಗಳಿಂದಲೂ ಈ ಆಟ ಪ್ರಚಲಿತವಿದೆ. ಮನೆಯ ಅಂಗಳ ಅಥವಾ ಶಾಲೆಯ ಮೈದಾನದಲ್ಲಿ ಈ ಆಟವನ್ನು ಆಡುತ್ತಾರೆ. ಹುಲಿ-ದನದ ಪಾತ್ರ ವಹಿಸುವ ಮಕ್ಕಳನ್ನು ಮೊದಲು ಆಯ್ಕೆ ಮಾಡುತ್ತಾರೆ. ಹೆಚ್ಚಿನ ಸಂದರ್ಭದಲ್ಲಿ ಹುಡುಗ ಹುಲಿಯಾಗಿ ಹುಡುಗಿ ದನವಾಗಿ ಆಯ್ಕೆ ಮಾಡುತ್ತಾರೆ. ಮಕ್ಕಳು ವೃತ್ತಾಕಾರದಲ್ಲಿ ನಿಂತು ಕೋಟೆಯನ್ನು ನಿರ್ಮಿಸಿ, ಆಟಗಾರರು ಕೈಹಿಡಿಯುವ ಸ್ಥಳಗಳನ್ನು ಬಾಗಿಲು ಎಂದು ಕರೆಯುತ್ತಾರೆ. ವರ್ತುಲದ ಎಲ್ಲಾ ಬಾಗಿಲುಗಳು ಗಟ್ಟಿ ಮುಟ್ಟಾಗಿರುವಂತೆ ಎಚ್ಚರಿಸುತ್ತಾರೆ. ಒಳಗಡೆ ದನವನ್ನು ಕೋಟೆಯ ಹೊರಗಡೆ ಹುಲಿಯನ್ನು ಬಿಟ್ಟು ಆಟ ಪ್ರಾರಂಭಿಸುತ್ತಾರೆ. ಹುಲಿ ಕೋಟೆಯ ಬಾಗಿಲನ್ನು ಮುರಿದು ಒಳಗೆ ಪ್ರವೇಶಿಸಲು ಪ್ರಯತ್ನಿಸುವುದರಿಂದ ಆ ಆಟವು ಕ್ರಿಯಾಶೀಲತೆಯನ್ನು ಪಡೆದುಕೊಳ್ಳುತ್ತದೆ. ಇಲ್ಲಿ ಹುಲಿಯನ್ನು ತಡೆಯುವುದು ಮತ್ತು ಕೋಟೆಯೊಳಗೆ ಇರುವ ದನವನ್ನು ರಕ್ಷಿಸುವುದು ಈ ಆಟದ ಮುಖ್ಯ ಲಕ್ಷಣವಾಗಿದೆ. ಹುಲಿ ಕೋಟೆಯನ್ನು

ನುಗ್ಗುವುದರಲ್ಲಿ ಯಶಸ್ವಿಯಾದರೆ ತಕ್ಷಣ ಕೋಟೆಯ ಬಾಗಿಲನ್ನು ತೆರೆದು ದನವನ್ನು ಹೊರಗಡೆ ಬಿಟ್ಟು ಸಂರಕ್ಷಿಸಲಾಗುತ್ತದೆ. ಇಲ್ಲಿ ಆಟ ಏನೇ ಇರಲಿ, ಇದು ಸಾಂಸ್ಕೃತಿಕ ದೃಷ್ಟಿಯಿಂದ ಮಹತ್ವದ್ದಾಗಿದೆ.[೪೮]

**ಮೋಡಿಯಾಟ:** ಕಾಮಲಾಪುರ ಮತ್ತು ಸುತ್ತಮುತ್ತ, ಮೋಡಿಯಾಟ ಹೆಚ್ಚು ಪ್ರಚಲಿತವಿದೆ. ಈ ಆಟ ಹಿಂದಿನಿಂದಲೂ ನಡೆದು ಬಂದಿದೆ. ವಿಜಯನಗರ ಅರಸರು ಮನರಂಜನೆಯಾಗಿ ಮೋಡಿಯಾಕಾರನ್ನು ಇರಿಸಿಕೊಂಡಿದ್ದರೆಂದು ಹೇಳಲಾಗುತ್ತಿದೆ. ಗೊಲ್ಲರಲ್ಲಿ ಮತ್ತು ಬೇಡ ಜನಾಂಗದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮೋಡಿಕಾರರಿದ್ದಾರೆ. ಈ ಮೋಡಿಕಾರರ ಬಗ್ಗೆ ಹಲವಾರು ದಂತ ಕಥೆಗಳಿವೆ. ಮೋಡಿಯಾಟದಲ್ಲಿ ಎರಡು ವಿಧವಿದೆ. ರಾಜಮೋಡಿ ಮತ್ತು ರಣಮೋಡಿ. ರಾಜಮೋಡಿ ಮನರಂಜನೆಗೆ ಸೀಮಿತವಾದರೆ ರಣಮೋಡಿ ಮನರಂಜನೆಯ ಜೊತೆಗೆ ಎದುರಾಳಿಯನ್ನು ಗೆಲ್ಲುವ ಸ್ಪರ್ಧೆಯಾಗಿದೆ. ಇದರಲ್ಲಿ ಪ್ರಾದೇಶಿಕ ಹಂಚಿಕೆ ಇರುವುದರಿಂದ ಇದೊಂದು ವಿಶೇಷತೆ ಆಗಿದೆ. ಅಪ್ಪಣೆ ಪಡೆಯದೆ ತಾವು ಪ್ರದರ್ಶನ ನೀಡಿದರೆ ಇಬ್ಬರ ನಡುವೆ ಸ್ಪರ್ಧೆ ನಡೆದು ಜೀವನದ ಕೊನೆಯ ತನಕ ಸ್ಪರ್ಧೆಗೆ ನಿಲ್ಲುವಂತೆ ಸೋತವರು ಗೆದ್ದವರಿಗೆ  ಶರಣಾಗುತ್ತಾರೆ. ಕೆಲವೊಮ್ಮೆ ಈ ಪ್ರದೇಶಕ್ಕೆ ಹೊರಗಿನ ಮೋಡಿಕಾರರು ಸುಗ್ಗಿಯ ಕಾಲಕ್ಕೆ ಬಂದು ಪ್ರದರ್ಶನ ನೀಡುತ್ತಾರೆ.

**ರಣಮೋಡಿಯಾಟ:** ಈ ಆಟ ಆಡುವವರು ಕೆಲವೊಮ್ಮೆ ತಮ್ಮ ಪ್ರಾಣವನ್ನು ಕೊಡುವ ಪ್ರಸಂಗ ಬರಬಹುದು. ಅದಕ್ಕೆಂದೇ ಆಟ ಆಡುವ ಮುನ್ನ ಯಾರಾದರೂ ಸತ್ತರೆ ಫಿರ್ಯಾದೆ ಮಾಡಬಾರದೆಂದು ಎರಡು ಕಡೆಯಿಂದಲೂ ಒಪ್ಪಂದ ಮಾಡಿಕೊಂಡಿರುತ್ತಾರೆ. ಇದೊಂದು ಮಂತ್ರ ಸಾಧನೆಯ ಆಟ. ಈ ರಣಮೋಡಿ ಆಟಕ್ಕೆ ದಂತ ಕತೆಗಳಿರುವುದರಿಂದ ಸತ್ಯಾಸತ್ಯತೆ ಏನೇ ಇರಲಿ ಸಾಂಸ್ಕೃತಿಕ ಹಿನ್ನಲೆಯ ದೃಷ್ಟಿಯಿಂದ ಅಂದು ಇದೊಂದು ಜನಪ್ರಿಯ ಆಟವಾಗಿತ್ತೆಂಬುದು ಸ್ಪಷ್ಟ. ಈಗಲೂ ಕಾಮಲಾಪುರ ಪ್ರದೇಶದ ಚೌಡಿಕೇರಿ ಜನರು ತಮಾಷೆಯ ದೃಷ್ಟಿಯಿಂದ ಯುಗಾದಿ ಹಬ್ಬದ ಸಂದರ್ಭದಲ್ಲಿ ಸಂಭಾಷಣೆಯ ಮೂಲಕ ಹೇಳುತ್ತಾರೆ.[೪೯]

**ಜಾನಪದ ಶಿಲ್ಪಕಲೆಗಳು:** ಕರ್ನಾಟಕ ಅದರಲ್ಲೂ ಹೆಚ್ಚಾಗಿ ಬಳ್ಳಾರಿ ಜಿಲ್ಲೆ ತೆರೆತೆರೆನಾದ ಕಲೆಗಳ ಬೀಡಾಗಿದೆ. ರೂವಾರಿ ತನ್ನ ಕಲೆಯ ನಿರ್ಮಾಣಕ್ಕೆ ಮರವನ್ನಾಗಲಿ. ಕಲ್ಲನ್ನಾಗಲಿ ಅಥವಾ ಮಣ್ಣನ್ನಾಗಲಿ ಬಳಸಿ ಒಂದು ಆಕೃತಿಯನ್ನು ಅಥವಾ ಮೂರ್ತಿಯನ್ನು ನಿರ್ಮಿಸುತ್ತಾನೆ. ಆದರೆ ಒಂದು ಸ್ಥಿರ ಮಾಧ್ಯಮದ ಮೂಲಕ ಆಕೃತಿಯನ್ನು ಅಥವಾ ಶಿಲ್ಪವನ್ನು ನಿರ್ಮಿಸುತ್ತಾನೆ. ಇದನ್ನು ನಿರ್ಮಿಸುವಾಗ ಸೌಂದರ್ಯ ಪ್ರಜ್ಞೆ ಮತ್ತು ಆಧ್ಯಾತ್ಮಿಕತೆಯ ಭಾವನೆಯನ್ನು ಕಲೆಯಲ್ಲಿ ರೂಪಿಸುವುದು ಒಂದು ವೈಶಿಷ್ಟ್ಯ. ಗ್ರಾಮೀಣರು ತಮಗೆ ಅಂದ-ಚೆಂದ ಕಂಡಂತೆ ರಚಿಸಿಕೊಂಡ ಶಿಲ್ಪಕಲೆಯೇ ಜನಪದ ಶಿಲ್ಪಕಲೆ. ಪ್ರಸ್ತುತ ಬಳ್ಳಾರಿ ಜಿಲ್ಲೆಯ ಹಂಪಿ ಕ್ಷೇತ್ರಕ್ಕೆ ಕಾಮಲಾಪುರ ಗ್ರಾಮ ಒಳಪಡುವುದರಲ್ಲಿ ಕಂಡು ಬರುವ ಅಶಾಶ್ವತ (ಮಣ್ಣು ಕಟ್ಟಿಗೆ)ಗಳಿಂದ ರಚಿತವಾದ ಜನಪದ ಶಿಲ್ಪಗಳ ಕಲಾ ಚಿತ್ರಣವನ್ನು ಇಲ್ಲಿ ಸೆರೆಹಿಡಿಯಲಾಗಿದೆ.

**ಮಣ್ಣಿನ ಶಿಲ್ಪಗಳು:** ಪ್ರಾಚೀನ ಕಾಲದಿಂದಲೂ ಹಬ್ಬ-ಹರಿದಿನಗಳು ಜನಪದರ ಬದುಕಿನಲ್ಲಿ ಹಾಸು ಹೊಕ್ಕಾಗಿವೆ. ಹಬ್ಬದ ದಿನದಂದು ತಮ್ಮ ತಮ್ಮ ದೇವತೆಗಳು ಮತ್ತು ಪ್ರಾಣಿಗಳ ಶಿಲ್ಪಗಳನ್ನು

ಮಣ್ಣಿನಲ್ಲಿ ರಚಿಸಿ, ಪೂಜಿಸಿ ನೈವೇದ್ಯ ಮಾಡುವ ಸಂಪ್ರದಾಯ ಬೆಳೆದು ಬಂದಿದೆ. ಇಂತಹ ಹಬ್ಬಗಳಲ್ಲಿ ಒಂದಾದ ಮಣ್ಣಿನ ಅಮವಾಸ್ಯೆಯಂದು ಮಣ್ಣಿನ ಎತ್ತುಗಳನ್ನು ಮಾಡಿ ಪೂಜಿಸುವ ಪದ್ಧತಿ ಬೆಳೆದು ಬಂದಿದೆ. ಈ ಸಂಪ್ರದಾಯ ಹೆಚ್ಚಾಗಿ ಉತ್ತರ ಕರ್ನಾಟಕ ಪ್ರದೇಶದಲ್ಲಿ ಅದರಲ್ಲೂ ಹೆಚ್ಚಾಗಿ ಪ್ರಸ್ತುತ ಕಾಮಲಾಪುರ ಗ್ರಾಮದಲ್ಲೂ ರೂಢಿಗತವಾಗಿದೆ.

**ಮಣ್ಣೆತ್ತಿನ ಶಿಲ್ಪಗಳ ರಚನೆ:** ಜೇಷ್ಠ ಬಹುಳ ಅಮವಾಸ್ಯೆ ದಿನದಂದು ಪ್ರತಿಯೊಬ್ಬ ರೈತನ ಮನೆಯಲ್ಲಿ ಮಣ್ಣೆತ್ತುಗಳನ್ನು ತಯಾರಿಸಿ ಪೂಜಿಸುವ ಸಂಪ್ರದಾಯವಿದೆ. ಅಂದು ಮುಂಜಾನೆ ಊರ ಮುಂದಿನ ಹೊಲಕ್ಕೆ ಇಲ್ಲವೆ ಕೆರೆ, ಹಳ್ಳ, ಹೊಳೆಯಿಂದ ಜಿಗುಟಾದ ಮಣ್ಣನ್ನು ತಂದು ಕೆಲವೆಡೆ ಊರ ಸಮೀಪದ ಹುತ್ತಿಗೆ ಹೋಗಿ ಪೂಜಿಸಿ ಮಣ್ಣನ್ನು ತರುತ್ತಾರೆ ಒಂದುವರೆ ಅಡಿ ಎತ್ತರದ ಜೋಡಿ (ಎರಡು) ಎತ್ತುಗಳನ್ನು ರಚಿಸುತ್ತಾರೆ. ಕಂಬಾರರು ಈ ಎತ್ತುಗಳನ್ನು ಮಾಡಿ ಊರವರೆಲ್ಲರಿಗೂ ಮಾರುತ್ತಾರೆ. ಎತ್ತುಗಳ ಕಣ್ಣುಗಳಿಗೆ ಗುಲಗಂಜಿ ಬೀಜಗಳನ್ನು ಜೋಳದ ಕಾಳುಗಳನ್ನು ಅಂಟಿಸುತ್ತಾರೆ. ಕೊಂಬುಗಳಿಗೆ ಬಣ್ಣದ ಕಾಗದವನ್ನು ಅಂಟಿಸುತ್ತಾರೆ. ಇವುಗಳಿಗೆ ಮೇವು(ಹುಲ್ಲು)ತಿನ್ನಲು ಗೋದಲಿಯನ್ನು ಮಾಡುತ್ತಾರೆ. ಹೀಗೆ ಎತ್ತುಗಳನ್ನು ರಚಿಸುತ್ತಾರೆ.

**ಮಣ್ಣೆತ್ತುಗಳ ಆಚರಣೆ:** ಈ ಹಬ್ಬವನ್ನು 'ಮೃತಿಕಾ ವೃಷಭ ಪೂಜಾ' ಎಂದು ಕರೆಯುತ್ತಾರೆ. ಬಸವಣ್ಣನವರು ಈ ವಚನದಿಂದ ಅವರ ಜೀವಿತ ಕಾಲದಲ್ಲಿ ಮಣ್ಣಿನಿಂದ ಎತ್ತುಗಳ ಶಿಲ್ಪವನ್ನು ಮಾಡುತ್ತಿದ್ದರೆಂದು ತಿಳಿದು ಬರುತ್ತದೆ.[೫೦]

ಅಲಂಕರಿಸಿದ ಎತ್ತುಗಳನ್ನು ನಡುಮನೆಯಲ್ಲಿ ಹಸಿಮಣೆಯ ಮೇಲಾಗಲಿ ಅಥವಾ ಮಂಟಪದಲ್ಲಾಗಲಿ ಇಲ್ಲವೇ ದೇವರ ಜಗಲಿಯ ಮೇಲೆ ಇರಿಸಿ ಅವುಗಳ ಮುಂದೆ ಮೇವು ತಿನ್ನುವ ಗೋದಲಿಯನ್ನು ಮಾಡಿ ಇಡುತ್ತಾರೆ. ನಂತರ ಅವುಗಳನ್ನು ವಿಧಿ-ವತ್ತಾಗಿ ಪೂಜೆ ಮಾಡುತ್ತಾರೆ. ಹುಡುಗಿಯರು ಆರತಿ ಮಾಡುತ್ತಾರೆ. ಸಿಹಿ ಅಡುಗೆಯನ್ನು ನೈವೇದ್ಯ ಮಾಡುತ್ತಾರೆ. ಹೀಗೆ ಮಕ್ಕಳಾದಿಯಾಗಿ ಮನೆಯವರೆಲ್ಲರೂ ಎತ್ತುಗಳನ್ನು ಪೂಜಿಸಿ ಸಂತೋಷ ಪಡುವರು.

**ಮಣ್ಣೆತ್ತು ಶಿಲ್ಪಗಳ ವಿಸರ್ಜನೆ:** ಮನೆಯ ಜಗಲಿಯ ಮೇಲೆ ಪೂಜೆಗೊಂಡ ಮಣ್ಣೆತ್ತುಗಳನ್ನು ಮರು ದಿವಸ ಕರಿಯ ದಿನವೆಂದು ಅಂದು ಸಾಯಂಕಾಲ ಓಣಿಯ ಎಲ್ಲಾ ಹುಡುಗರು ತಂತಮ್ಮ ಮಣ್ಣೆತ್ತುಗಳನ್ನು ಊರ ಗುಡಿ ಅಥವಾ ಚಾವಡಿಯಲ್ಲಿ ಒಂದೆಡೆ ಸೇರಿಸಿ ಮಣೆಗಳ ಮೇಲೆ ಸಾಲಾಗಿರಿಸಿ ಪೂಜೆ ಮಾಡಿ ತಲೆಯ ಮೇಲೆ ಹೊತ್ತು ಬೀದಿಗಳಲ್ಲಿ ಮೆರೆಸುತ್ತಾರೆ. ನಂತರ ಊರ ಸಮೀಪದ ಕೆರೆ-ಬಾವಿಗಳಿಗೆ ಹಾಕುತ್ತಾರೆ. ಹೀಗೆ ಈ ಗ್ರಾಮದ ಜನಪದರು ಈ ಕಾರ್ಯಕ್ರಮವನ್ನು ಮುಕ್ತಾಯಗೊಳಿಸುತ್ತಾರೆ.

**ಗುರ್ಜಿಯ ಶಿಲ್ಪಗಳು:** ನಮ್ಮ ಜನಪದರಿಗೆ ಸಕಾಲಕ್ಕೆ ಮಳೆಯಾದರೆ ಬೆಳೆ. ಬೆಳೆಯಾದರೆ ಬದುಕು. ಮಳೆಗಾಲದಲ್ಲಿ ಮಳೆ ಬೀಳದೆ ಇರಲು ಕಂಗಾಲಾಗುವ ರೈತರು ಮಳೆರಾಯನಲ್ಲಿ ಮೊರೆ ಹೋಗುತ್ತಾರೆ. ಕೃಷಿಯನ್ನು ನಂಬಿದ ರೈತರು ಮಳೆಯ ಆಗಮನಕ್ಕಾಗಿ ಅನೇಕ ರೀತಿಯ ಆಚರಣೆಗಳನ್ನು ಮಾಡುತ್ತಾರೆ. ಈ ರೀತಿಯ ಆಚರಣೆಗಳು ಕರ್ನಾಟಕಾದಾದ್ಯಂತ ಪ್ರಚಲಿತವಿದೆ. ಪ್ರದೇಶದಿಂದ ಪ್ರದೇಶಕ್ಕೆ ಕೆಲವು

ವ್ಯತ್ಯಾಸಗಳು ಕಂಡರೂ ನಂಬಿಕೆ ಮಾತ್ರ ಒಂದೇ. ಸಾಮಾನ್ಯವಾಗಿ ಮಳೆರಾಯನ ಶಿಲ್ಪವನ್ನು ಗುರ್ಜಿಶಿಲ್ಪ ಎಂದು ಕರೆಯಲ್ಪಟ್ಟು ಇದನ್ನು ಮಣ್ಣಿನಿಂದ ರಚಿಸಿ, ಅದರ ಮೆರವಣಿಗೆ ಮಾಡುವ ಸಂಪ್ರದಾಯ ಈ ಗ್ರಾಮಾಂತರ ಪ್ರದೇಶದಲ್ಲಿ ಇಂದಿಗೂ ಜೀವಂತವಾಗಿದೆ.[೫೧]

**ಶಿಲ್ಪದ ರಚನೆ:** ಸಾಮಾನ್ಯವಾಗಿ ಬಾದ್ರಪದ ಆಶ್ವೀಜ ಮಾಸಗಳಲ್ಲಿ ಮಳೆಯು ಬಾರದಿರಲು ನಮ್ಮ ಗ್ರಾಮೀಣ ಜನರು ಈ ಗುರ್ಜಿ ಶಿಲ್ಪವನ್ನು ರಚಿಸಿ ಪೂಜಿಸುವ ಸಂಪ್ರದಾಯ ಈ ಪ್ರದೇಶದಲ್ಲಿ ಪ್ರಮುಖವಾದುದಾಗಿದೆ. ಗುರ್ಜಿ ಎಂದರೆ ಮಣ್ಣನ್ನು ಹದಗೊಳಿಸಿ ಆ ಕೆಸರಿನಿಂದ ಮಾಡಲಾದ ಲಿಂಗಾಕೃತಿಯ ಶಿಲ್ಪ. ಈ ಶಿಲ್ಪದ ಮೇಲೆ ಕರಕಿಯ ಪತ್ರಿಯನ್ನು ಚುಚ್ಚಲಾಗಿರುತ್ತದೆ. ಈ ಶಿಲ್ಪವೇ ಗುರ್ಜಿಶಿಲ್ಪ.[೫೨] ಕೆಲವೊಮ್ಮೆ ಈ ಗುರ್ಜಿ ಶಿಲ್ಪವನ್ನು ಸೆಗಣಿಯಿಂದಲೂ ಮಾಡುತ್ತಾರೆ.[೫೩]

**ಆಚರಣೆ:** ಈ ಶಿಲ್ಪದ ಆಚರಣೆ ಸಂಪೂರ್ಣವಾಗಿ ಮಕ್ಕಳ ಕೇಂದ್ರಿತವಾದುದು. ಶಿಲ್ಪಕ್ಕೆ ಅರಿಶಿನ ಕುಂಕುಮವಿಟ್ಟು ಕಣಗಿಲ, ಮುತ್ತುಗ,ಸಸ ಮಲ್ಲಿಗೆ, ಕರಕಿ, ಪತ್ರಿ ಮುಂತಾದ ಹೂಗಳಿಂದ ಅಲಂಕರಿಸಿ ಪೂಜೆ ಮಡುತ್ತಾರೆ. ಹಲಗೆ ಅಥವಾ ಹೆಂಚಿನ ಮೇಲೆ ಪ್ರತಿಷ್ಠಾಪಿತವಾಗಿರುವ ಈ ಶಿಲ್ಪವನ್ನು ತಲೆಯ ಮೇಲೆ ಹೊತ್ತು ಊರಿನ ಓಣಿ ಮನೆ–ಮನೆಗಳಿಗೆ ತಿರುಗುತ್ತಾರೆ. ಸುಮಾರು ಎಂಟು–ಹತ್ತು ವರುಷದ ಒಳಗಿನ ಬಾಲಕರು ತಲೆಯ ಮೇಲೆ ಈ ಮೂರ್ತಿ ಹೊತ್ತಿರುತ್ತಾರೆ. ಲಂಗೋಟಿ ಮಾತ್ರ ಧರಿಸಿದ್ದು ಬರಿ ಮೈಯಲ್ಲಿ ಇರುತ್ತಾನೆ. ಮನೆಯ ಬಾಗಿಲಿಗೆ ಬಂದ ಗುರ್ಜಿ ಶಿಲ್ಪಕ್ಕೆ ಮನೆ ಹೆಂಗಸರು ಹೊರ ಬಂದು ಶಿಲ್ಪದ ಸುತ್ತ, ಹೆಂಚಿಗೆ ಮೇಲೆ ನೀರು ಚೆಲ್ಲುತ್ತಾರೆ. ಈ ಶಿಲ್ಪ ಹೊತ್ತ ಹುಡುಗ ನೀರು ಸುರುವಾಗ ತನ್ನ ಸುತ್ತಲೂ ನಾಲ್ಕಾರು ಸುತ್ತು ತಿರುಗುತ್ತಾನೆ. ಈ ದೃಶ್ಯ–ಮಕ್ಕಳಿಗೆ ರಂಜನೀಯ. ಮನೆಯವರು ತಮ್ಮ ಯೋಗ್ಯತೆಗೆ ಅನುಗುಣವಾಗಿ ಭತ್ತ–ರಾಗಿ–ಜೋಳ ಮುಂತಾದವುಗಳನ್ನು ಕಾಣಿಕೆಯಾಗಿ ನೀಡುತ್ತಾರೆ. ಈ ಶಿಲ್ಪಕ್ಕೆ ನೀರು ಸುರಿಯುವಾಗ ಮಕ್ಕಳು ಈ ಕೆಳಗಿನ ರೀತಿಯ ಹಾಡು ಹೇಳುತ್ತಾರೆ.

ಗುರ್ಜೀ–ಗುರ್ಜೀ ಎಲ್ಯಾಡಿ ಬಂದಿ
ಹಳ್ಳ–ಕೊಳ್ಳ ತಿರುಗಾಡಿ ಬಂದೆ
ಕಾರ ಮಳೆಯೇ ಕಪ್ಪತ ಮಳೆಯೇ[೫೪]

ಸುರಿ ಮಳೆಯೇ ಸುರಿ ಮಳೆಯೇ! ಹೀಗೆ ಹಾಡುತ್ತಾ ತಮ್ಮ ಮನೆಗೆ ಬಂದ ಹಬ್ಬದೂಟ ಮಾಡಿ ಗುರ್ಜಿಗೆ ನೈವೇದ್ಯ ಸಲ್ಲಿಸಿ ಈ ಶಿಲ್ಪವನ್ನು ಜಲಾಶಯಕ್ಕೆ ಒಯ್ದು ವಿಸರ್ಜಿಸಿ ಬರುತ್ತಾರೆ. ಗುರ್ಜಿ ಶಿಲ್ಪ ಹಾಗೂ ಆಚರಣೆಯನ್ನು ನೋಡಿದರೆ ಈ ಪುಣ್ಯ ಪುರುಷನ ಚಿತ್ರವನ್ನು ಸಹಜವಾಗಿ ಕಲ್ಪಿಸಿಕೊಳ್ಳಬಹುದು. ಗುರ್ಜಿಯ ನೆತ್ತಿಯ ಮೇಲೆ ಕರಿಕೆಯ ಪತ್ರಿಯನ್ನು ಚುಚ್ಚುತ್ತಾರೆ. ಇದು ಪುಣ್ಯ ಪುರುಷನ ಪೂಜ್ಯತೆಯ ಸಂಕೇತ.

ಲಿಂಗಾಕೃತಿಯ ಗುರ್ಜಿ ಶಿಲ್ಪವು ಆತನು ವೀರಶೈವ ಇರಬಹುದು ಎಂಬ ಅರಿವನ್ನುಂಟು ಮಾಡುತ್ತದೆ. ಬೋರಲು ಹಾಕಿದ ಹೆಂಚು ಪುಣ್ಯ ಪುರುಷನು ಶಿವನ ಪೂಜೆಯ ಕಾಲಕ್ಕೆ ಹಾಸಿಕೊಳ್ಳುವ ಕರೆಗಂಬಳಿಯ ಗದ್ದುಗೆಯನ್ನು ಸೂಚಿಸುವುದು. ಲಂಗೋಟಿ ಹಾಕಿ ಬೆತ್ತಲೆಯಾಗಿ ಗುರ್ಜಿ ಹೊತ್ತ

ಹುಡುಗ ಕೋಪಗೊಂಡಿರುವುದು ವಿರಕ್ತ ಮೂರ್ತಿಯನ್ನು ಚಿತ್ರಿಸಿರುವುದು ಇದನ್ನು ಮಕ್ಕಳು ಹೊತ್ತುದ್ದರಿಂದ ಆತನ ಮುಗ್ಧ ಭಕ್ತಿಯನ್ನು ಸೂಚಿಸುತ್ತದೆ. ಈ ಎಲ್ಲಾ ಲಕ್ಷಣಗಳಿಂದ ಗುರ್ಜಿ ಪುಣ್ಯ ಪುರುಷನ ಮೂರ್ತಿಯೆಂದು ಹೇಳಲಾಗಿದೆ. ಈ ಪರಿಸರದಲ್ಲಿ ಈಗಲೂ ಜನ ಗುರುಸಿದ್ಧನೆಂದು ಹೆಸರಿಸುತ್ತಾರೆ. ಪ್ರೀತಿಯಿಂದ ಗುರ್ಜಿ ಎಂದೂ ಕರೆಯುತ್ತಾರೆ. ಹೀಗೆ ಗುರುಸಿದ್ಧ ಜನರ ವಾಡಿಕೆಯಲ್ಲಿ ಗುರ್ಜಿಯಾಗಿ ಈತನ ಸ್ಮರಣಾರ್ಥಕವಾಗಿ ಇಲ್ಲಿಯ ಜನ ಈ ಸ್ಮಾರಕ ಶಿಲ್ಪವನ್ನು ರಚಿಸಿ ಆಚರಣೆ ಮಾಡುತ್ತಾ ಬಂದಿದ್ದಾರೆ. ಅನಾವೃಷ್ಟಿಯಿಂದ ಕಂಗಾಲಾಗಿ ಆಕಾಶವನ್ನೇ ನಿರೀಕ್ಷಿಸುತ್ತಿರುವ ರೈತರು ಗುರ್ಜಿ ಶಿಲ್ಪದ ಆಚರಣೆಯಲ್ಲಿ ಅದನ್ನು ಕಾಣುತ್ತಾರೆ. ಅಲ್ಲದೆ ಎಲ್ಲವೂ ನೀರು ಮಾಯವಾದಂತೆ ಆಹೊತ್ತು ಮಳೆ ಬಂದಂತೆ ಎಂಬಂತಹ ನಿರೀಕ್ಷೆಯಲ್ಲಿ ಪುನಃ ಜೀವನೋತ್ಸಾಹವನ್ನು ತಮ್ಮಲ್ಲಿ ತುಂಬಿಕೊಳ್ಳುತ್ತಾರೆ. ಮಳೆಯ ಆಶಯದ ಹಿನ್ನಲೆಯಲ್ಲಿ ಆಚರಿಸಲ್ಪಡುವ ಈ ಶಿಲ್ಪ ದೊಡ್ಡವರಿಂದ ನಿರ್ದೇಶಿಸಲ್ಪಟ್ಟರೂ ಮಕ್ಕಳ ಕೇಂದ್ರೀಕೃತವಾಗಿ ಆಚರಿಸಲ್ಪಡುತ್ತದೆ.[೫೫]

**ಜೋಕುಮಾರ ಶಿಲ್ಪ:** ಕರ್ನಾಟಕದಲ್ಲಿ ಅದರಲ್ಲೂ ಹೆಚ್ಚಾಗಿ ಉತ್ತರ ಕರ್ನಾಟಕದಲ್ಲಿ ಜೋಕುಮಾರನ ಆಚರಣೆ ಹೆಚ್ಚು ಪ್ರಚಲಿತದಲ್ಲಿದೆ. ಈ ಪ್ರದೇಶದಲ್ಲಿ ಕೆಲವೆಡೆ ಶಿಲ್ಪಕ್ಕೆ ಬಣ್ಣ ಬಳಿಯದೆ ಹಣೆಯ ಮೇಲೆ ಮಾತ್ರ ನಾಮ ಹಚ್ಚಿ, ತಲೆಗೆ ಪಟಕ (ರುಮಾಲು) ಸುತ್ತಿರುತ್ತಾರೆ. ಇನ್ನು ಕೆಲವೆಡೆ ಹಳದಿ ಬಣ್ಣವನ್ನು ಶಿಲ್ಪಕ್ಕೆ ಹಚ್ಚುತ್ತಾರೆ. ಸಗಣಿಯಿಂದ ಸಾರಿಸಿದ ಬಿದುರಿನ ಬುಟ್ಟಿಯೊಂದರಲ್ಲಿ ಈ ಶಿಲ್ಪವನ್ನು ಕೂರಿಸಿ ಇದರ ಸುತ್ತ ಬೇವಿನ ಸೊಪ್ಪನ್ನು ಇಡುತ್ತಾರೆ. ಬೇವಿನ ಸೊಪ್ಪು ಜೋಕುಮಾರನಿಗೆ ಶ್ರೇಷ್ಠ ಎಂಬ ನಂಬಿಕೆ ಇದೆ. ಬಾಯಿಗೆ ಮತ್ತು ಪುರುಷಾಂಗಕ್ಕೆ ಬೆಣ್ಣೆ ಸವರಲಾಗಿರುತ್ತದೆ. ಕುಂಬಾರನಿಂದ ರಚಿಸಲ್ಪಟ್ಟಿರುವ ಈ ಶಿಲ್ಪವನ್ನು ಕಬ್ಬಲಿಗರು, ತಳವಾರರು, ಅಂಬಿಗರು ಎಂದು ಪರ್ಯಾಯ ಹೆಸರುಗಳಿಂದ ಕರೆಯಲ್ಪಡುವ ಗಂಗಾಮತಸ್ಥರು ಜೋಕುಮಾರ ಶಿಲ್ಪವನ್ನು ಹೊತ್ತು ಊರಲ್ಲಿ ಏಳು ದಿನಗಳ ಕಾಲ ಓಣಿ ಓಣಿಗಳಲ್ಲಿ ಮನೆ ಮನೆಗೆ ತಿರುಗಾಡುತ್ತಾರೆ. ಹೆಂಗಸರು ಮಾತ್ರ ಈ ಶಿಲ್ಪವನ್ನು ಹೊರುತ್ತಾರೆ. ಪ್ರತಿ ಮನೆಗೂ ಹೋಗಿ ಜೋಕುಮಾರ ಕುಳಿತಿರುವ ಬುಟ್ಟಿಯನ್ನು ಇಟ್ಟು ಹಾಡು ಹೇಳುತ್ತಾರೆ. ಇವರಿಗೆ ಜೋಳ, ಕೊಬ್ಬರಿ, ಮೆಣಸಿನಕಾಯಿ, ಹುಣಸೆಯನ್ನು ಮನೆಯವರು ಕೊಟ್ಟು ನೈವೇದ್ಯವನ್ನು ಅರ್ಪಿಸುತ್ತಾರೆ. ಶ್ರೀಮಂತ ಮನೆಯವರು ಬೆಣ್ಣೆಯನ್ನು ಕೊಡುತ್ತಾರೆ. ಉತ್ತರ ಕರ್ನಾಟಕ ಭಾಗದಲ್ಲಿ ಹೆಚ್ಚಿನ ಪ್ರಾಮುಖ್ಯತೆ ಪಡೆದಿದ್ದರೂ ಪ್ರಾದೇಶಿಕ ದೃಷ್ಟಿಯಿಂದ ಈ ಆಚರಣೆಯಲ್ಲಿ ವೈವಿಧ್ಯತೆ ಇವೆ.[೫೬] ಈ ಶಿಲ್ಪವನ್ನು ನಿರ್ಮಿಸಿ ಆಚರಿಸುವ ಹಬ್ಬಕ್ಕೆ ಜೋಕುಮಾರನ ಹುಣ್ಣಿಮೆ ಅಥವಾ ಅನಂತ ಹುಣ್ಣಿಮೆ ಎಂತಲೂ ಕರೆಯುತ್ತಾರೆ. ಇದನ್ನು ಭಾಗವತಃ ಸಪ್ತಾಹ ಪುರಾಣ ಎಂತಲೂ ಕರೆಯುತ್ತಾರೆ. ಏಳು ದಿನಗಳ ಕಾಲ ತಿರುಗಾಡುವ ಈ ಸಂಪ್ರದಾಯ ಭಾದ್ರಪದ ಶುದ್ಧ ಹುಣ್ಣಿಮೆಯಿಂದ ಪೌರ್ಣಿಮೆಯ ವರೆಗೆ ಆಚರಿಸುತ್ತಾರೆ.

**ಶಿಲ್ಪದ ರಚನೆ:** ಈ ಕಾಮಲಾಪುರದ ಪರಿಸರದಲ್ಲಿ ಈ ಶಿಲ್ಪ ಕೆಸರಿನಿಂದ ಸಿದ್ಧಗೊಳ್ಳುತ್ತದೆ. ಹದ ಮಾಡಿದ ಮಣ್ಣನ್ನು ಈ ಶಿಲ್ಪದ ರಚನೆಗೆ ಬಳಸಲಾಗುತ್ತದೆ. ಸಾಮಾನ್ಯವಾಗಿ ಜಿನಗಾರರು, ಕುಂಬಾರರು ಈ ಶಿಲ್ಪವನ್ನು ತಯಾರಿಸುತ್ತಾರೆ. ತ್ರಿಕೋನಾಕಾರದಲ್ಲಿ ಗೋಪುರದಂತೆ ಮಾಡಿದ ಶಿಲ್ಪಕ್ಕೆ ಉದ್ದವಾದ ಮೂಗು, ತೆರೆದ ಬಾಯಿಯನ್ನು ರಚಿಸಿರುತ್ತಾರೆ. ಮೇಲ್ಗಡೆ ಮೂಗಿನ ಎರಡೂ ಬದಿಗೂ ಕವಡೆಗಳನ್ನು

ಅಂಟಿಸಿ ಕಣ್ಣುಗಳನ್ನಾಗಿ ಮಾಡಿದ್ದಾರೆ. ಕೋರೆ ಮೀಸೆ, ಗಡುತರವಾದ ಹುಬ್ಬು, ದಪ್ಪವಾದ ತುಟಿ, ಹಣೆಗೆ ವಿಭೂತಿ-ಕುಂಕುಮ ತಲೆಯ ಮೇಲೆ ಚಪ್ಪಟೆಯಾದ ದುಂಡುಗಾಲಿಯಂತೆ ಮಾಡಿ ಛತ್ರಿಯ ಹಾಗೆ ಅಂಟಿಸಲಾಗಿರುತ್ತದೆ. ಈ ಶಿಲ್ಪಕ್ಕೆ ಕೈಕಾಲುಗಳಾಗಲಿ, ಪುರುಷಾಂಗವಾಗಲಿ ರಚನೆಯಾಗಿರುವುದಿಲ್ಲ. ಈ ಶಿಲ್ಪವನ್ನು ಸೆಗಣಿಯಿಂದ ಸಾರಿಸಿದ ಬುಟ್ಟಿಯಲ್ಲಿ ಇಟ್ಟು ಅದರ ಸುತ್ತಲೂ ಬೇವಿನ ಸೊಪ್ಪನ್ನು ಹಾಕುತ್ತಾರೆ. ಈ ರೀತಿ ರಚನೆಯಾದ ಶಿಲ್ಪವೇ ಜೋಕುಮಾರ ಶಿಲ್ಪ.

**ಆಚರಣೆ ಮತ್ತು ನಂಬಿಕೆ:** ಈ ಆಚರಣೆ ಈ ಪರಿಸರದಲ್ಲಿ ಏಳು ದಿನಗಳ ಕಾಲ ಬೇರೆ ಬೇರೆ ಓಣಿ ಮತ್ತು ಬೇರೆ ಬೇರೆ ಊರುಗಳಿಗೆ ಹೊತ್ತುಕೊಂಡು ಹಾಡನ್ನು ಹೇಳುತ್ತಾ ಪೂಜಿಸುತ್ತಾರೆ. ಏಳು ದಿನಗಳ ಕಾಲ ಮೆರೆದ ಜೋಕುಮಾರನ ಅಂತ್ಯ ಹುಣ್ಣಿಮೆಯ ದಿವಸ ನಡೆಯುವುದು. ಅಂದು ಅಂದರೆ ಏಳನೆಯ ದಿನದ ರಾತ್ರಿ ಹೊಲಗೇರಿಗೆ ಜೋಕುಮಾರನ ಶಿಲ್ಪವನ್ನು ಕೊಂಡೊಯ್ದು ಒಂದು ಪ್ರಶಸ್ತ್ಯ ಸ್ಥಳದಲ್ಲಿರಿಸಿ ಸುತ್ತಲೂ ಬಾರಿ ಕಾಯಿಗಿಡದ ಮುಳ್ಳನ್ನು ಇಡುವರು ಹೆಂಗಸರು ಹಾಡನ್ನು ಹೇಳುತ್ತಾ ಸುತ್ತು ಹಾಕುವರು. ಹೀಗೆ ಸುತ್ತುವಾಗ ಬರಿಯ ಮುಳ್ಳು ಅವರ ಸೆರಗಿಗೆ ತಾಗಲು ಜೋಕುಮಾರನೇ ತಮ್ಮ ಹೆಂಗಸರ ಸೆರಗು ಹಿಡಿದನೆಂದು ಗಂಡಸರು ಒನಕೆಯಿಂದ ಅವನ ತಲೆ ಹೊಡೆಯುವರು ನಂತರ ಅಗಸರು ಬಟ್ಟೆ ಒಗೆಯುವ ಬಂಡೆಯ ಮೇಲೆ ಅವನನ್ನು ಒಗೆದು ಬರುವರು. ಕೆಲವರು ಜೋಕುಮಾರನ ಶಿಲ್ಪವನ್ನು ಎತ್ತಿ ಮಳೆ-ಬೆಳೆಯ ಭವಿಷ್ಯ ಕೇಳುವರು ಹಾಗೂ ಒನಕೆಯಿಂದ ಕುತ್ತಿಗೆಗೆ ಹೊಡೆದಾಗ ರುಂಡವು ಅಂಗಾತ ಬಿದ್ದರೆ ದೇಶಕ್ಕೆ ಸುಖ, ಬೋರಲು ಬಿದ್ದರೆ ದುಃಖ ವೆಂಬುದು ಜನರ ಭಾವನೆಯಾಗಿದೆ. ಈತ ಸತ್ತು ಮೂರು ದಿನಗಳವರೆಗೆ ನರಳುವುದರಿಂದ ಅಗಸರು ಮೂರು ದಿವಸಗಳ ಕಾಲ ಅರಿವೆ(ವಸ್ತ್ರ) ಒಗೆಯಲು ಹೋಗುವುದಿಲ್ಲ.[೫೭] ಒಟ್ಟಿನಲ್ಲಿ ಈ ಶಿಲ್ಪ ಜನಪದ ಜನಪ್ರಿಯ ಶಿಲ್ಪವಾಗಿ ಪ್ರತಿ ವರ್ಷ ಮರುಹುಟ್ಟು ಪಡೆದು ಆಚರಿಸಲ್ಪಡುತ್ತದೆ. ನಮ್ಮ ಜನಪದರ ಮಡಿವಂತಿಕೆಯ ಬದುಕಿನಲ್ಲೂ ಬತ್ತಲೆಯಾಗಿ ಪುರುಷಾಂಗ ಪ್ರಧಾನವಾಗಿರುವ ಈ ಶಿಲ್ಪ ಲೈಂಗಿಕ ಶಿಕ್ಷಣ ನೀಡುವ ಮಾಧ್ಯಮವಾಗಿಯೂ ಜನಪದರಲ್ಲಿ ಬೇರೂರಿದೆ. ಈ ಶಿಲ್ಪ ಜನಪದರ ಇತರ ಶಿಲ್ಪಗಳಿಗಿಂತಲೂ ವಿಶೇಷವಾದ ಕುತೂಹಲ ಕೆರಳಿಸುವ ಶಿಲ್ಪವಾಗಿದೆ. ಈ ರೀತಿಯ ಮಣ್ಣಿನ ಮಾಧ್ಯಮದಲ್ಲಿ ಹತ್ತು-ಹಲವಾರು ಬಗೆಯ ಶಿಲ್ಪಗಳನ್ನು ಜನಪದರು ರಚಿಸಿ ಆಚರಿಸುವುದರ ಮೂಲಕ ವಿಶಿಷ್ಠ ಸಾಂಸ್ಕೃತಿಕ ಪರಂಪರೆಯನ್ನು ಮುಂದುವರೆಸಿಕೊಂಡು ಬಂದವರಗಿದ್ದಾರೆ. ವರುಷಕ್ಕೊಮ್ಮೆ ಹುಟ್ಟಿಕೊಳ್ಳುವ ಈ ಶಿಲ್ಪಗಳು ಜಾತಿ-ಮತ-ಪಂಥಗಳನ್ನು ಮರೆಸಿ ಎಲ್ಲರನ್ನು ಒಗ್ಗೂಡಿಸಿ ಸಹ ಬಾಳ್ವೆ ನಡೆಸುವಂತೆ ಮಾಡಿವೆ. ಜೋಕುಮಾರ, ಮಣ್ಣೆತ್ತು ಗುರ್ಜಿ ಇಂತಹ ಪುರುಷ ಮತ್ತು ಪ್ರಾಣಿ ದೇವತಾ ಶಿಲ್ಪಗಳು ನಮ್ಮ ಜನಪದರಲ್ಲಿನ ಈ ಸಂಸ್ಕೃತಿ ವಿಶಿಷ್ಠ ರೀತಿಯಲ್ಲಿ ಇಂದಿಗೂ ಉಳಿದು ಬೆಳದುಕೊಂಡು ಬಂದಿವೆ. ಎಲ್ಲಾ ಶಿಲ್ಪಗಳು ಶಾಶ್ವತವಾಗಿ ಒಂದು ಕಡೆ ಪ್ರತಿಷ್ಠಾಪಿತಗೊಳ್ಳದಿದ್ದರೂ ವರ್ಷ ವರ್ಷವೂ ಜನಪದರನ್ನು ನಿರೀಕ್ಷಿಸಿ, ಸ್ವಾಗತಿಸುವಂತೆ ಮಾಡುವ ಶಿಲ್ಪಗಳಾಗಿ ಅವರ ಬದುಕಿನೊಂದಿಗೆ ಬೆರೆತು ಹೋಗಿವೆ.

**ಜಾನಪದ ಕಾಷ್ಠ ಶಿಲ್ಪಗಳು**

ಚಂದಾಳದ ಗೊಂಬೆ ಶಿಲ್ಪಗಳು : ಶಬ್ದಕೋಶದ ಅರ್ಥದಲ್ಲಿ ಚಂದಾಳ ಎಂಬುದಕ್ಕೆ "ಚಂದನ" ಎಂಬ ಅರ್ಥವಿದೆ.[೫೮] ಈ ಶಿಲ್ಪಗಳು ಅತ್ಯಂತ ಆಕರ್ಷಕವಾದ, ಸೌಂದರ್ಯದಿಂದೊಡಗೂಡಿದ

ಶಿಲ್ಪಗಳಾಗಿವೆ. ಚಂದನದ ಶಿಲ್ಪಗಳೇ ಚಂದಾಳ ಶಿಲ್ಪಗಳು ಎಂದು ಕರೆಯಲ್ಪಟ್ಟಿರಬೇಕು. ಕಾಷ್ಠಶಿಲ್ಪಗಳು ಕಂದು ಮಿಶ್ರಿತ ಕಪ್ಪು ಬಣ್ಣದ ಕಟ್ಟಿಗೆಯಲ್ಲಿ ರಚಿತವಾಗಿರುತ್ತವೆ. ಎರಡು-ಮೂರು ಅಂಗುಲದಿಂದ ಹಿಡಿದು ಒಂದು ಅಡಿ ಎತ್ತರದ ವರೆಗೂ ರಚಿತವಾಗಿರುತ್ತವೆ.

ಹೆಚ್ಚಿನ ಮಟ್ಟಿಗೆ ಈ ಶಿಲ್ಪಗಳು ಆಧುನಿಕ ಶಿಲ್ಪಕಲೆಯ Qubisum ಘನಾಕೃತಿಯನ್ನು ಜ್ಞಾಪಿಸುತ್ತದೆ. ಅಪ್ಪಟ ಜಾನಪದೀಯ ಅಂಶವನ್ನು ಮುಖಭಾಗದಲ್ಲಿ ಕಾಣುತ್ತೇವೆ. ಸಾಮಾನ್ಯವಾಗಿ ತಲೆ ದೊಡ್ಡದಾಗಿಯೂ ಕುತ್ತಿಗೆಯಿಂದ ಸೊಂಟದವರೆಗಿನ ದೇಹದ ಭಾಗವು ಕಿರಿಯದಾಗಿಯೂ, ಸೊಂಟದ ಭಾಗದಿಂದ ಕಿಬ್ಬೊಟ್ಟೆಯನ್ನು ಒಳಗೊಂಡು ಪಾದದವರೆಗೂ ಕಾಲುಗಳು ಉದ್ದವಾಗಿಯೂ ರಚಿತವಾಗಿರುತ್ತವೆ. ಹೆಚ್ಚಿನ ಮಟ್ಟಿಗೆ ಅಖಂಡ ಕಟ್ಟಿಗೆಯ ತುಂಡು ಒಂದರಲ್ಲಿ ರಚಿತವಾಗಿರುತ್ತವೆ. ಈ ಚಂದಾಳ ಗೊಂಬೆಯ ಶಿಲ್ಪದಲ್ಲಿ ಎರಡು ರೀತಿಯ ವೈವಿಧ್ಯತೆ ಇದೆ. ಅಲಂಕೃತ ಕೆತ್ತನೆ, ಸರಳ ಕೆತ್ತನೆ, ಅಲಂಕೃತ ಕೆತ್ತನೆಯ ಗೊಂಬೆಗಳು ಆಭರಣ ಭೂಷಿತವಾಗಿರುತ್ತವೆ. ತಲೆಯ ಮೇಲೆ ಕೂದಲಿರುವಂತೆ ತೋರಿಸಲು ಗೆರೆ ಕೊರೆದು ತೋರಿಸಲಾಗುತ್ತದೆ. ಇವಳನ್ನು ನೋಡಿದರೆ ನೈಜ ಕೂದಲಿನ ಹೆಣಿಕೆಯಂತೆ ಕೆತ್ತಲಾಗಿರುತ್ತದೆ, ಮುಖಭಾವ ನಗುಮುಖವಿರುತ್ತದೆ. ಕೊರಳಲ್ಲಿ ಕಂಠಹಾರ, ಭುಜಕೀರ್ತಿಗಳನ್ನು ಕೆತ್ತಿ ಕುಪ್ಪಸ ತೊಟ್ಟಿರುವಂತೆ ರಚಿಸುತ್ತಾರೆ. ಕೈತೋಳುಗಳಿಗೆ ತೋಳುಬಂದಿ, ಕೆಳ ಉಡಿಗೆಗೆ ಸೊಂಟಪಟ್ಟಿ ತೊಡಿಸಲಾಗಿರುತ್ತದೆ. ಕೈಮತ್ತು ಕಾಲುಗಳಿಗೆ ಕಡಗ ತೊಡಿಸಿರುವುದನ್ನು ಕೆತ್ತನೆಯಲ್ಲಿ ತೋರಿಸಲಾಗುತ್ತದೆ. ಸರಳ ಕೆತ್ತನೆಯ ಶಿಲ್ಪಗಳಿಗೆ ಆಭರಣಗಳಾಗಲಿ ವೇಷ ಭೂಷಣಗಳಾಗಲಿ ಇರದೇ ಇಲ್ಲಿ ನೈಜಕತೆಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಟ್ಟಿರುತ್ತಾರೆ.

ಚಂದಾಳ ಗೊಂಬೆಯ ಆಚರಣೆ ಮತ್ತು ನಂಬಿಕೆ : ಗ್ರಾಮೀಣ ಹುಡುಗಿಯರು ಋತುಮತಿಯಾದ ಒಂಬತ್ತು ದಿನಗಳವರೆಗೆ ಕೈಯಲ್ಲಿ ಹಿಡಿದುಕೊಳ್ಳಲು ಅಥವಾ ಅವಳ ಹತ್ತಿರ ಇಟ್ಟುಕೊಳ್ಳಲು ಈ ಗೊಂಬೆಯನ್ನು ಕೊಡುತ್ತಾರೆ. ಇದು ಮಗುವಿಗೆ ಜನ್ಮ ಕೊಡುವುದಕ್ಕಾಗಿ ಸಮರ್ಥಳಾದ್ದನ್ನು ಸೂಚಿಸುವ ಸಂಕೇತವಾಗಿದೆ.[೫೯] ನಿತ್ಯ ಸಂಜೆ ಓಣಿಯ ಹೆಂಗಸರು ಮತ್ತು ಅವಳ ಮುಂದೆ ಕೂಡಿಕೊಂಡು ಆರತಿ ಮಾಡುವ ಆಚರಣೆ ಇದೆ. ಒಂಬತ್ತನೇ ದಿವಸ ಎಬ್ಬಿಸುವಾಗ ಹೆಣ್ಣು ಮಕ್ಕಳು ಸೀರೆ ಹೊಸ ಬಟ್ಟೆಯಿಂದ ತೊಟ್ಟಿಲು ಮಾಡಿ ಈ ತೊಟ್ಟಿಲಲ್ಲಿ ಚಂದಾಳ ಗೊಂಬೆ ಇಟ್ಟು ತೂಗುವ ಪದ್ಧತಿ ಇದೆ. ಕೆಲವೊಮ್ಮೆ ಸ್ತ್ರೀಯರಿಗೆ ಮಕ್ಕಳು ಹುಟ್ಟುವಾಗಲೇ ಸಾಯುತ್ತಿರುತ್ತವೆ. ಇವಕ್ಕೆ ವೈಜ್ಞಾನಿಕ ಕಾರಣಗಳಿದ್ದರೂ ಸಹ ಜನಪದರು ಮುಕ್ತಿ ಪಡೆಯುವ ಉದ್ದೇಶದಿಂದ ಮಕ್ಕಳಿಲ್ಲದವರಿಗೆ, ಈ ಚಂದಾಳ ಗೊಂಬೆಯನ್ನು ಉಡಿ ತುಂಬುವ ಕಾರ್ಯವನ್ನು ಮಾಡುವ ಪದ್ಧತಿ ಇದೆ. ಇದೊಂದು ಜಾನಪದ ನಂಬಿಕೆ. ಹುಟ್ಟಿದ ಮಕ್ಕಳು ಬದುಕುಳಿಯಲಿ ಎಂಬ ಭಾವನೆಯಿಂದಲೂ, ನಂಬಿಕೆ ಹಿನ್ನಲೆಯಲ್ಲಿ ಈ ರೀತಿ ಮಾಡುವ ಸಂಪ್ರದಾಯ ಬೆಳೆದು ಬಂದಿದೆ.

**ದುರುಗಮ್ಮ:** ಉತ್ತರ ಕರ್ನಾಟಕದಲ್ಲಿ ಹೊಟ್ಟೆ ಪಾಡಿಗಾಗಿ ಕೆಲವು ಸಮುದಾಯದ ಜನ ಶಿಲ್ಪಗಳನ್ನು ಕಾಷ್ಠ ದೇವತಾ ಶಿಲ್ಪಗಳನ್ನು ಹೊತ್ತು ನೃತ್ಯ ಹಾಡುಗಳನ್ನು ಪ್ರದರ್ಶಿಸಿ ಭಿಕ್ಷೆಯನ್ನು ಸ್ವೀಕರಿಸುತ್ತಾರೆ.

ಹೊತ್ತು ಪ್ರದರ್ಶಿಸುವ ಈ ಶಿಲ್ಪ ಪ್ರಮುಖ ಆಕರ್ಷಣೆಯ ಕೇಂದ್ರ ಬಿಂದು. ಇವುಗಳಲ್ಲಿ ದುರುಗಮ್ಮ, ಮುರುಗಮ್ಮ ಮುಖ್ಯವಾಗಿದೆ.

**ದುರುಗಮ್ಮ ಶಿಲ್ಪಗಳು:** ಕಟ್ಟಿಗೆಯಲ್ಲಿ ಮಾಡಿದ ದುರುಗಮ್ಮ ಶಿಲ್ಪಗಳು ಆಕರ್ಷಣೀಯವಾಗಿರುತ್ತವೆ. ದ್ಯಾಮವ್ವ, ಪಾಲಕಮ್ಮ, ಎಲ್ಲಮ್ಮ, ಮರಗಮ್ಮ, ಕಾಳಮ್ಮ, ಚೌಡಮ್ಮ ಹೀಗೆ ಏಳು ಸ್ತ್ರೀ ದೇವತೆಗಳು ಅಕ್ಕ–ತಂಗಿಯರಾಗಿದ್ದು ದುರುಗಮ್ಮ ಮೊದಲು ಕೋಟೆಯ ರಕ್ಷಕಳಾಗಿ ನಂತರ ಯುದ್ಧ ದೇವತೆಯಾದಳಂತೆ.[೬೦] ರಾಜ ಯುದ್ಧಕ್ಕೆ ಹೊರಡುವಾಗ ತಮಗೆ ಈ ಯುದ್ಧದಲ್ಲಿ ಜಯ ಸಿಗಲಿ ಎಂಬುದಕ್ಕೆ ದುರುಗಮ್ಮಳನ್ನು ಪೂಜಿಸುತ್ತಿದ್ದರಂತೆ. ಹೀಗಾಗಿ ಈಕೆ ಕೋಟೆಯ ದೇವತೆಯಾಗುವುದರ ಜೊತೆಗೆ ಯುದ್ಧ ದೇವತೆಯಾದಳೆಂಬ ಪ್ರತೀತಿ ಇದೆ. ತಲೆಯ ಮೇಲೆ ಹೊತ್ತು ತಿರುಗುವ ದೇವತೆಗಳಲ್ಲಿ ಮುಖ್ಯವಾಗಿ ದುರುಗ, ಮುರುಗಿಯ ದೇವತೆಗಳು ಮುಖ್ಯವಾಗಿವೆ. ದುರುಗಮ್ಮ ಊರಿನ ದೇವತೆಯಾಗಿದ್ದರಿಂದ ಊರಿನ ಸುತ್ತ ಹೊತ್ತು ತಿರುಗುತ್ತಾರೆ. ಬುಡಕಟ್ಟು ಜನಾಂಗದವರು ಈ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಕರ್ನಾಟಕ, ಗುಲ್ಬರ್ಗಾ, ಬೀದರ್, ರಾಯಚೂರು, ಬಳ್ಳಾರಿ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಹೆಚ್ಚಾಗಿ ವಾಸವಾಗಿರುವ ಇವರು ಇತರೆ ಜಿಲ್ಲೆಗಳಲ್ಲೂ ಕಂಡು ಬರುತ್ತಾರೆ. ಉತ್ತರ ಕರ್ನಾಟಕದಲ್ಲಿ ದುರುಗ ಮುರುಗಿಯರೆಂದು, ಮುರಗಮ್ಮ ಆಡಿಸುವರೆಂದೂ ಕರೆಯುವ ವಾಡಿಕೆ ಇದೆ. ದಕ್ಷಿಣ ಕರ್ನಾಟಕದಲ್ಲಿ ಕೊಲ್ಲಾಪುರದಮ್ಮ ಉಪಮಾರಿಯಮ್ಮ ಎಂದೂ ಕರೆಯುತ್ತಾರೆ.[೬೧] ಈ ದುರುಗಮ್ಮ ಶಿಲ್ಪವನ್ನು ಬೊಟ್ಟಿಯಲ್ಲಿ ಇಟ್ಟಿಕೊಂಡು ವಾದ್ಯ ಬಾರಿಸುತ್ತಾ ಬಡೆತಕ್ಕೆ ತಕ್ಕಂತೆ ಪುರುಷನೊಬ್ಬ ಪೋತರಾಜನ ಮುಖ ಶಿಲ್ಪವೊಂದನ್ನು ಹಾಕಿ ಬಿಕ್ಷೆ ಪಡೆಯುವ ಪದ್ಧತಿ ಇಂದಿಗೂ ಬೆಳೆದುಬಂದಿದೆ. ಕೆಲವೊಮ್ಮೆ ಮುರುಗಮ್ಮನನ್ನು ಬುಟ್ಟಿಯಲ್ಲಿ ಇಟ್ಟುಕೊಂಡು ಬಿಕ್ಷೆ ಬೇಡುವುದರಿಂದ ಬುಟ್ಟಿದುರುಗಮ್ಮ ಎಂದೂ ಕರೆಯುತ್ತಾರೆ. ಮುಖಕ್ಕೆ ಅರಿಶಿನ, ಹಣೆಗೆ ಕುಂಕುಮ, ಕಾಡಿಗೆಕಣ್ಣು, ದಪ್ಪ ಮತ್ತು ಹುರಿಗಟ್ಟಿದ ಮೀಸೆ, ಎದೆ, ಕೈರಟ್ಟೆಗಳಿಗೆ ಅರಿಶಿನ ಲೇಪನ, ರಟ್ಟೆಯಲ್ಲಿ ಬೆಳ್ಳಿ ಕಡಗ, ನಡುವಿಗೆ ಉರಿ ಹೊಡೆದ ಬಟ್ಟೆ, ಕಾಲಿಗೆ ಗೆಜ್ಜೆಯ ಪಡೆ, ಕೆಂಪು ಬಣ್ಣದ ಪಂಜೆ ಅಥವಾ ಲಂಗ ತೊಟ್ಟು ವೇಷ ಭೂಷಣಗಳಲ್ಲಿ ಕಾಣಿಸಿಕೊಳ್ಳುತ್ತಾರೆ.

ಕಾಮಲಾಪುರ ಗ್ರಾಮದ ಊರಮ್ಮ ಗುಡಿಯ ಮುಂದೆ ವಿಶಾಲವಾದ ಬೀದಿಯಲ್ಲಿ, ದುರುಗಮ್ಮಗಿಟ್ಟು ಗಂಟೆ ಬಾರಿಸುವ ಪದ್ದತಿ ಇದೆ. ಇದರೊಂದಿಗೆ, ಎಲ್ಲಡೆಯಂತೆ ದುರುಗಮ್ಮ ಸ್ತುತಿ ಮಾಡುತ್ತಾ ಚಾವಟಿಯಿಂದ ಮೈಗೆ ಹೊಡೆದು ಕೊಳ್ಳುತ್ತಾರೆ. ಈ ದೃಶ್ಯ ಭಯಾನಕವಾಗಿ ಕಂಡರೂ ಇದೊಂದು ಪರಂಪರೆಯಾಗಿ ಬಂದಿದೆ. ಉತ್ತರ ಕರ್ನಾಟಕದಲ್ಲಿ ಇದೇ ರೀತಿ ಚಾವಡಿ ಮುಖವಾಡ ದಕ್ಷಿಣ ಕರ್ನಾಟಕದಲ್ಲಿ ಸೋಮನ ಮುಖ ವಾಡವನ್ನು ಹಾಕಿಕೊಂಡು ಕುಣಿಯುವ ಪದ್ದತಿ ಇದೆ. ಓಣಿಯ ಆಯಾ ಮನೆಯ ಹೆಂಗಸರು ಮೊರದಲ್ಲಿ ದವಸ–ಧಾನ್ಯಗಳನ್ನು ತಂದು ದೇವತೆಗೆ ಅರ್ಪಿಸುವ ಪದ್ದತಿ ಇದೆ.[೬೨] ಒಂದರಿಂದ ಮೂರು ಅಡಿ ಎತ್ತರವಿರುವ ಈ ದೇವತಾ ಶಿಲ್ಪವನ್ನು ಬೇವು, ಕಳ್ಳಿ, ಹೆಬ್ಬೇವು, ಮಾವು, ಸಾಗುವಾಣಿ, ಹತ್ತಿ ಮರದಿಂದ ರಚನೆಯಾಗಿರುತ್ತದೆ. ಮರವನ್ನು ಕೆತ್ತಿದ ನಂತರ ಅದರ ಮೇಲೆ ಅರಗವನ್ನು ಲೇಪಿಸಿ ಕಿಟ್ಟ ವನ್ನು ಪದರು ಪದರಾಗಿ ಮೆತ್ತಿ, ತಿದ್ದಿ ತೀಡಿ ಶಿಲ್ಪವನ್ನು ಪೂರ್ಣಗೊಳಿಸುತ್ತಾರೆ. ಅನಂತರ ವುಡ್ ಫ್ರೇಮರ್ ಬಳೆದು, ಇದು ಒಣಗಿದ ನಂತರ ಬಣ್ಣದಿಂದ

ಶಿಲ್ಪವನ್ನು ಅಂದಗೊಳಿಸುತ್ತಾರೆ.[೬೩] ಹೆಚ್ಚಾಗಿ ದುರುಗಮ್ಮ ಶಿಲ್ಪಗಳಿಗೂ ಬಣ್ಣ ಬಳಿಯುವ ಪದ್ಧತಿ ಇದೆ. ಹೆಚ್ಚಿನ ಮಟ್ಟಿಗೆ ಕಂದು ಮಿಶ್ರಿತ ಕೆಂಪು ಬಣ್ಣವನ್ನು ಮುಖಕ್ಕೆ ಎಲ್ಲಾ ಕಾಷ್ಠ ಶಿಲ್ಪಗಳಿಗೂ ಬಳಸಲಾಗುತ್ತದೆ. ದುರುಗಮ್ಮ ಶಿಲ್ಪದ ರೂಪ ಹೆಚ್ಚಿನ ಮಟ್ಟಿಗೆ ಚೌಡಮ್ಮನ ಮುಖವಾಡವನ್ನು ಹೋಲುತ್ತದೆ. ಕೆಂಪು ಬಣ್ಣದ ಮುಖದಲ್ಲಿ ಅಗಲವಾದ ಕಣ್ಣುಗಳು, ಕಪ್ಪುಗುಡ್ಡೆಗಳು, ಹಣೆಗೆ ಅಡ್ಡನಾಮ, ಕಿವಿ, ಮೂಗಿನಲ್ಲಿ ಅಲಂಕೃತ ಆಭರಣಗಳಿದ್ದು, ಕೋರೆಹಲ್ಲುಗಳಿಂದ ರಚಿತವಾಗಿರುತ್ತವೆ. ಇದು ಮೂರ್ತಿಶಿಲ್ಪದ ದೃಷ್ಠಿಯಿಂದ ಸರಿಯಲ್ಲದಿದ್ದರೂ, ಜಾನಪದೀಯ ಅಂಶಗಳ ಮೂಲಕ ಈ ವೈಶಿಷ್ಠ್ಯಗಳನ್ನು ತೋರಿಸಲಾಗುತ್ತದೆ.

**ನಂದಿ ಧ್ವಜ ಶಿಲ್ಪಗಳು:** ನಂದಿ ಧ್ವಜವನ್ನು ಹಲವಾರು ಹೆಸರುಗಳಿಂದ ಕರೆಯುತ್ತಾರೆ. ನಂದಿಕೋಲು, ಬಂಡೆ ಕಂಬ, ವ್ಯಾಸಗೋಲು, ನಂದಿ ಪಟ್ಟ ಎಂಬುದಾಗಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಲಾಗುತ್ತಿದೆ. ಪ್ರಸ್ತುತ ಕರ್ನಾಟಕದ ವೀರಶೈವರು, ನಾಯಕರು, ವೀರ ಮನೆತನದವರು ಧಾರ್ಮಿಕ ಉತ್ಸವ, ಜಾತ್ರೆಗಳ ಸಂದರ್ಭಗಳಲ್ಲಿ ನಂದಿ ಧ್ವಜವನ್ನು ಪ್ರದರ್ಶಿಸುತ್ತಾರೆ. ವೀರಭದ್ರನು ತನ್ನ ವಿರೋಧಿಯಾದ ದಕ್ಷಬ್ರಹ್ಮನ ಮೇಲೆ ಸಾಧಿಸಿದ ವಿಜಯ ಸಂಕೇತವಾಗಿ ನಂದಿ ಧ್ವಜ ಶಿಲ್ಪವನ್ನು ಮಾಡಿ ಪ್ರದರ್ಶಿಸುತ್ತಾರೆ.[೬೪]

ನಂದಿ ಧ್ವಜ ಶಿಲ್ಪದ ರಚನೆ ವೈಶಿಷ್ಠ್ಯ ಪೂರ್ಣವಾಗಿದೆ. ಅಡವಿಗೆ ಹೋಗಿ ಹದಿನೆಂಟು ಇಪ್ಪತ್ತು ಅಡಿ ಎತ್ತರದ ಗಟ್ಟಿ ಮುಟ್ಟಾದ ಬಿದಿರು ಕಂಬವನ್ನು ಶುಭ-ಮುಹೂರ್ತದಲ್ಲಿ ತಂದು ದೇವಾಲಯದಲ್ಲಿ ಇಡಲಾಗುತ್ತದೆ. ಕೆಳಗಿನ ತಾಳಗಂಬಕ್ಕೆ ಪುಟ್ಟ ಮಂಟಪದಂತೆ ಪೀಠವನ್ನು ರಚಿಸಲಾಗುತ್ತದೆ. ಈ ಪೀಠಕ್ಕೆ ಹಿತ್ತಾಳೆ ಗಗ್ಗರವನ್ನು ಸೇರಿಸಲಾಗುತ್ತದೆ. ಇದನ್ನು ಹಿಡಿದು ಕುಣಿಯುವಾಗ, ಇದರ ಸದ್ದು ಕೇಳಲು ಮಧುರ. ಹಿತ್ತಾಳೆಯ ಎರಡು ಬಳೆಗಳು ಇದಕ್ಕಿದ್ದು ಇದನ್ನು ಕೊಳಗ ಎಂದು ಕರೆಯುತ್ತಾರೆ. ಕೊಳಗ ಮತ್ತು ಗಗ್ಗರಗಳ ನಡುವೆ ಛತ್ರಿ ಆಕಾರದ ತಗಡುಗಳ ಜಾಲರಿ ಇದೆ. ಜಾಲರಿಯ ಛತ್ರಿಯ ಸುತ್ತಲೂ ತಗಡಿನ ಲೋಲಕಗಳು ಇರುತ್ತವೆ. ಈ ರೀತಿಯ ಗಗ್ಗರ ಬಳೆ ಜಾಲರಿಗಳ ಸಾಲು ಸುಮಾರು ಹದಿನೈದು ಅಡಿ ಎತ್ತರ ವ್ಯಾಪಿಸಿರುತ್ತದೆ. ಬಿದಿರಿನ ಮೇಲಿನ ಭಾಗ ಬಣ್ಣದ ಬಟ್ಟೆಗಳಿಂದ ಸುತ್ತಲಾಗಿರುತ್ತದೆ. ತುದಿಯಲ್ಲಿ ಖಾದಿ ಬಣ್ಣ ಧ್ವಜದ ತುದಿಗೆ ಪುಟ್ಟ ಛತ್ರಿ ಮತ್ತು ಕಳಸದಂತಿರುತ್ತದೆ. ಈ ಕುಣಿತವನ್ನು 'ಗಂಡು ಕಲೆ' ಎಂತಲೂ ಕರೆಯುತ್ತಾರೆ.

**ಸೀಗಮ್ಮ ಶಿಲ್ಪ:** ಉತ್ತರ ಕರ್ನಾಟಕದಲ್ಲಿ ಸೀಗಿ ಹಾಗೂ ಗೌರಿ ಹುಣ್ಣಿಮೆಗಳಲ್ಲಿ, ಸೀಗಮ್ಮ ಮತ್ತು ಗೌರಮ್ಮ ಶಿಲ್ಪಗಳ ಆಚರಣೆ ಪ್ರಚಲಿತವಿದೆ. ಇದರಲ್ಲಿ ಸ್ತ್ರೀಯರೇ ಪ್ರಮುಖ ಪಾತ್ರ ವಹಿಸುತ್ತಾರೆ. ಆದ್ದರಿಂದ ಸೀಗಿ-ಗೌರಿಗಳ ಮೂರ್ತಿ ಶಿಲ್ಪಗಳ ಆಚರಣೆ ಸ್ತ್ರೀ-ಪ್ರಧಾನವಾದ ಆಚರಣೆಯಾಗಿದೆ. ಗೌರಿಯನ್ನು ಶಕ್ತಿಯೆಂದೂ, ಸೀಗೆಯನ್ನು ಭೂಮಿತಾಯಿ ಎಂದು ಪೂಜಿಸುವ ಸಂಪ್ರದಾಯ ನಡೆದುಬಂದಿದೆ. ಈ ಎರಡೂ ಹಬ್ಬಗಳ ಆಚರಣೆಯಲ್ಲಿ ಭಿನ್ನತೆ ಇದ್ದರೂ ಎರಡು ಸಂದರ್ಭಗಳ ಹೆಣ್ಣು ಮಕ್ಕಳು ಹಾಡುವ ಹಾಡುಗಳಲ್ಲಿ ವ್ಯತ್ಯಾಸ ಕಾಣುವುದಿಲ್ಲ. ಈ ಆಚರಣೆ ಕಮಲಾಪುರ ಗ್ರಾಮವನ್ನು ಹೊರತುಪಡಿಸಿಲ್ಲ. ಸೀಗಿ ಸಂಸ್ಕೃತದ ಶಿಖಾದ ತದ್ಬವ ರೂಪದಾಗಿದ್ದು ಅದು ಶಿಖರ>ಶಿಖಿ>ಶೀಗಿ>ಸೀಗಿ ಆಗಿದೆ. ಸೀಗಮ್ಮ ಶಿಲ್ಪದ ಆಕರವು ಶಿಖರಾಕೃತಿಯಲ್ಲಿಯೇ ರಚನೆಯಾಗಿದೆ.[೬೫]

**ಸೀಗಮ್ಮ ಶಿಲ್ಪದ ರಚನೆ:** ಅಶ್ವೀಜ ಶುದ್ಧ ಹುಣ್ಣಿಮೆ. ಈ ಸೀಗಮ್ಮ ಶಿಲ್ಪದ ವಿನ್ಯಾಸವು ಅಡಕಲಗಡಿಗೆಯಂತೆ. ಒಂದರ ಮೇಲೊಂದರಂತೆ ಶಿಖರದ ಆಕಾರವನ್ನು ಹೊಂದಿದೆ. ಕೆಳಭಾಗದಲ್ಲಿ

ಅಗಲವಾದ, ಎತ್ತರವಾದ ವೃತ್ತಾಕಾರದ ಸಿಲಿಂಡರದಂತಿದ್ದು ಮೇಲಕ್ಕೆ ಹೋದಂತೆ ಅಡಕಲದಂತಿರುವ ಗುಂಡುಗಳು ಚಿಕ್ಕದಾಗುತ್ತಾ ಹೋಗುತ್ತವೆ. ಇವು ಐದು-ಏಳು-ಒಂಬತ್ತು ಹೀಗೆ ಬೆಸ ಸಂಖ್ಯೆಗಳಸುತ್ತುಗಳಿಂದ ರಚಿಸಲ್ಪಟ್ಟವುಗಳಾಗಿರುತ್ತವೆ. ೧/೨ ಅಡಿ ಅಥವಾ ಒಂದು ಅಡಿ ಎತ್ತರದ ಶಿಲ್ಪಗಳನ್ನು ಕೆತ್ತಲಾಗುತ್ತದೆ. ಶಿಲ್ಪಗಳ ಮುಂದೆ ಇನ್ನು ಐದು ಸಣ್ಣ ಗಾತ್ರದ ಶಿಲ್ಪಗಳನ್ನು ಮಾಡಿ ಇಟ್ಟು ಪೂಜಿಸುವ ಪದ್ಧತಿ ಇದೆ. ಇವುಗಳಿಗೆ ಚೌಕಾಕಾರದ ತಳ ವಿನ್ಯಾಸವಿದ್ದುದರಿಂದ ಇವುಗಳನ್ನು ಪಾಂಡವರೆಂದೂ ಕೊಂತಿ (ಕುಂತಿ) ಮಕ್ಕಳೆಂದೂ ಕರೆಯುತ್ತಾರೆ. ಈ ಶಿಲ್ಪವನ್ನು ಜಾಲಿ ಹಾಗೂ ಚಳ್ಳಿ ಮರದ ಕಟ್ಟಿಗೆಯಿಂದ ತಯಾರಿಸುತ್ತಾರೆ. ಊರಿನ ಪಾಂಚಾಳರು ಈ ಶಿಲ್ಪಗಳನ್ನು ತಯಾರಿಸುತ್ತಾರೆ.

**ಆಚರಣೆ:** ಸೀಗಿ ಹುಣ್ಣಿಮೆಯಲ್ಲಿ ರೈತರು ಹೊಲದಲ್ಲಿ ಭೂಮಿ ತಾಯಿಗೆ ಪೂಜೆ ಮಾಡಿ. ಚರಗ ಚೆಲ್ಲುವ ಸಂಪ್ರದಾಯ ಬೆಳೆದು ಬಂದಿದೆ. ಆ ಚರಗದ ಬುಟ್ಟಿಯ ತುಂಬೆಲ್ಲಾ ಸುಂದರವಾದ ವರ್ಣಚಿತ್ರ ವಿನ್ಯಾಸಗಳನ್ನು ಮಾಡಿ ಕಾವಿ ಬಣ್ಣ ಬಳೆದು ಅದರ ಮೇಲೆ ನಿಚ್ಚಣಿಕೆ ಗಿಳಿ, ಹೂ-ಹಣ್ಣು, ಸೂರ್ಯ ಮುಂತಾದ ಚಿತ್ರಗಳನ್ನು ಬಿಳಿಯ ಬಣ್ಣದಿಂದ ಚಿತ್ರಿಸಿರುತ್ತಾರೆ. ಇಂತಹ ಬುಟ್ಟಿಗಳಲ್ಲಿ ಚರಗವನ್ನು ಹೊಲಕ್ಕೆ ಹೊಯ್ದು ಪೂಜೆ ಮಾಡಿ ನಂತರ ಚರಗ ಚೆಲ್ಲುತ್ತಾರೆ. ಮಣ್ಣಿನಿಂದಲೂ ಈ ಶಿಲ್ಪಗಳನ್ನು ರಚಿಸುತ್ತಾರೆ.

ಹುಣ್ಣಿಮೆಗೆ ಮೊದಲು ಐದು ದಿನಗಳಿರುವಾಗಲೇ ಸೀಗಮ್ಮ ಶಿಲ್ಪಗಳನ್ನು ಕುಳ್ಳಿರಿಸಿ ಸಂಜೆಯಿಂದ ರಾತ್ರಿಯವರೆಗೆ ಯುವತಿಯರು ಓಣಿಯಲ್ಲಿ ಸೀಗಮ್ಮನಿಗೆ ಆರತಿ ಮಾಡಿ ಹಾಡು ಹೇಳುತ್ತಾರೆ. ದಿನಕ್ಕೆ ಒಂದೊಂದು ತರಹ ಸಕ್ಕರೆಯ ಪ್ರಾಣಿ-ಪಕ್ಷಿಗಳ ವೈವಿಧ್ಯಮಯ ಆರತಿ ಮಾಡಿ ಹೂಗಳನ್ನು ಸೀಗೆ ಗೌರಿಗೆ ಏರಿಸುವರು. ಅಲ್ಲಿ ಗಂಗೆ-ಗೌರಿಯ ಸ್ಪರ್ಧಾತ್ಮಕ ಹಾಡುಗಳನ್ನು ಹೇಳುತ್ತಾರೆ. ಅಲ್ಲದೆ ಗಂಗೆ-ಗೌರಿಯ ಆಟವನ್ನು ಆಡುತ್ತಾರೆ. ಐದನೆಯ ದಿನ ರಾತ್ರಿ ಸೀಗೆ ಗೌರಮ್ಮಳನು ಕಳುಹಿಸುವ ಕಾರ್ಯಕ್ರಮವು ನಡೆಯುತ್ತದೆ. ಅಂದು ವಿವಿಧ ರೀತಿಯ ರುಚಿಕರವಾದ ಭೋಜನವನ್ನು ತೆಗೆದುಕೊಂಡು ಕೆರೆ, ಬಾವಿ ಮತ್ತು ಜಲಾಶಯಗಳ ಹತ್ತಿರ ಹೋಗಿ ಊಟ ಮಾಡುತ್ತಾರೆ. ಹೀಗೆ ಸೀಗಮ್ಮನ ಆಚರಣೆಯನ್ನು ಪ್ರಸ್ತುತ ಕಾಮಲಾಪುರ ಪರಿಸರದಲ್ಲಿ ವೈವಿಧ್ಯಮಯದಿಂದ ಕೂಡಿದೆ.[೬೬]

**ಚೌಡಮ್ಮ:** ಉತ್ತರ ಕರ್ನಾಟಕದ ಹಲವು ಕಡೆ ಚೌಡಮ್ಮನ ಆರಾಧನೆ ಬಹಳ ವಿಶೇಷವಾಗಿ ಕಂಡು ಬರುತ್ತದೆ. ಕುಂಬಾರರು, ಕುರುಬರು, ಪಾಂಚಾಳರು, ನೇಕಾರರು ಇಲ್ಲದೆ ಲಿಂಗಾಯತರು ಚೌಡಮ್ಮನ ಪ್ರಮುಖ ಆರಾಧಕರಾಗಿದ್ದಾರೆ. ಸಾಮಾನ್ಯವಾಗಿ ಶಿವರಾತ್ರಿ ಅಮವಾಸ್ಯೆಗೆ ಮುಂಚಿತವಾಗಿ ಬರುವ ಒಂದು ದಿನವನ್ನು ಚೌಡಮ್ಮನ ವಾರವೆಂದೂ ಹೇಳಲಾಗುವ ಶುಕ್ರವಾರದಂದು ಈಕೆಯ ಉತ್ಸವ ನಡೆಯುವುದು ರೂಢಿಯಲ್ಲಿದೆ. ಆದರೂ ಅನೇಕ ಊರುಗಳಲ್ಲಿ ಮಾರ್ಚ್‌ನಿಂದ ಮೇ ತಿಂಗಳವರೆಗೆ ಚೌಡಮ್ಮನ ಜಾತ್ರೆಗಳು ನಡೆಯುತ್ತವೆ.[೬೭] ಪ್ರಸ್ತುತ ಕಾಮಲಾಪುರ ಪರಿಸರದಲ್ಲಿ ಕಂಡು ಬರುವ ಚೌಡಮ್ಮ ಶಿಲ್ಪದ ವಿವರಣೆಯನ್ನು ಪ್ರಸ್ತಾಪಿಸಲಾಗಿದೆ.

**ಚೌಡಮ್ಮ ಪದ ಉತ್ಪತ್ತಿ:** 'ಚೌಡ' ಪದ ಎಂಬುದರ ಅರ್ಥ ಇಂಗ್ಲೀಷ್‌ನಲ್ಲಿ Crest ಎಂದಿದೆ. Crest ಎಂದರೆ ತಲೆ, ನೆತ್ತಿ, ಅಗ್ರ, ಶಿಖರ, ತುರಾಯಿ, ಜಟ್ಟು, ಕುತ್ತಿಗೆಯ ಕೂದಲು ಚೂಡಾಲಂಕಾರ

ಎಂಬ ಅರ್ಥಗಳಿವೆ. ಚವುಡ ಶಬ್ದಕ್ಕೆ ಸುರುಗಿ, ಕುಠಾರಿ ಎಂಬ ಅರ್ಥವಿದೆ. ಚೌಡಮ್ಮ ಹಣೆಯ ಮೇಲೆ ವಿಭೂತಿ ಹಣೆ ಪಟ್ಟ ಇದ್ದು ಸರ್ಪ ಕಿರೀಟ ಧಾರಿಣಿಯಾಗಿರುತ್ತಾಳೆ. ಕಿವಿಯಲ್ಲಿ ನಾಗ ಓಲೆ ಧರಿಸಿದ್ದು ಮುಖಭಾಗ ಕೆಂಪು ಬಣ್ಣ, ತೆರೆದ ಬಿರುಗಣ್ಣುಗಳು, ಕೊರೆ ಹಲ್ಲುಗಳು ಹಾಗೂ ಚದುರಿದ ಕೂದಲುಗಳಿಂದ ಈ ಮೂರ್ತಿ ಭಯಾನಕವೆನಿಸಿದೆ. ಕೆಲವು ಕಡೆ ಕೇವಲ ಅವಳ ಮುಖವಾಡವನ್ನು ಮಾತ್ರ ಗದ್ದುಗೆಯ ಮೇಲಿಟ್ಟು ಪೂಜಿಸುತ್ತಾರೆ. ಖಡ್ಗ ಕಾರಣವಾಗಿಯೋ ಅಥವಾ ಚದುರಿದ ಕೂದಲುಗಳು ಕಾರಣವಾಗಿಯೋ ಇವಳಿಗೆ ಚವುಡಿ ಎಂಬ ಹೆಸರು ಬಂದಿರಬೇಕು. ಮುಂದೆ ಇದೇ ಚೌಡಿ, ಚಾಮುಂಡಿ ಎಂದು ಕರೆದಿರಬೇಕು.[೧೮] ಚೇಳಿನ ಪೂಜೆಯಿಂದ ಚೋಳಮ್ಮ, ಚೌಳಮ್ಮ, ಚೌಡಮ್ಮ ಜನ್ಮತಾಳಿದಳು. ಇವಳನ್ನು ಹಟಗಾರರ ಹಠಮಾರಿ ದೇವತೆಯಾಗಿ ನಂತರ ಉದ್ಯೋಗ ದೇವತೆಯಾಗಿದ್ದಾಳೆ.[೧೯]

**ಆಚರಣೆ:** ಈ ದೇವತೆ ನಿತ್ಯವೂ ಪೂಜೆಗೊಳ್ಳುತ್ತಾಳೆ. ಪ್ರತಿ ಅಮವಾಸ್ಯೆ, ನವರಾತ್ರಿ ಹಾಗೂ ಕಾರ್ತೀಕಗಳಲ್ಲಿ ವಿಶೇಷ ಪೂಜೆ ನಡೆಯುವುದು. ಪ್ರತಿ ವರ್ಷ ಬಾದಾಮಿಯ ಅಮವಾಸ್ಯೆಯ ಚತುರ್ದಶಿಯ ದಿನದಂದು ಈ ದೇವತೆಯ ಉತ್ಸವ ನಡೆಯುತ್ತದೆ. ಅಂದು ದೇವಿಗೆ ಭಕ್ತರೆಲ್ಲರೂ ತಮ್ಮ ತಮ್ಮ ಹರಕೆಗಳನ್ನು ಅರ್ಪಿಸುತ್ತಾರೆ. ಭಕ್ತಾದಿಗಳು ದೇವರಿಗೆ ಕಣ್ಣು, ಬೊಟ್ಟು ಮಾಡಿಸುತ್ತಾರೆ. ಸೀರೆ ಉಡಿಸಿ ಉಡಿ ತುಂಬುವದು. ಮಕ್ಕಳ ಜವಳ ಹೀಗೆ ವಿವಿಧ ಹರಕೆಗಳು ಸಲ್ಲುತ್ತವೆ. ದೇವತೆಗೆ ದೈತ್ಯರ ಸಂಹಾರ ಮಾಡಿದ ಸ್ಮರಣಾರ್ಥಕವಾಗಿ ಕುಂಬಳಕಾಯಿ ಒಡೆದು ಅದರ ಮೇಲೆ ಕೆಂಪು ಓಕಳಿ ಚೆಲ್ಲುತ್ತಾರೆ.

**ಮಾರೆಮ್ಮ ಶಿಲ್ಪ:** ಮಾರೆಮ್ಮ ಗ್ರಾಮ ದೇವತೆಗಳಲ್ಲಿ ಒಂದು. ಮಾರೆಮ್ಮನನ್ನು ಮಾರಿ ಎಂದೂ ಕರೆಯಲಾಗುತ್ತದೆ. ಕಾಮಲಾಪುರ ಪ್ರದೇಶದಲ್ಲಿ ಈ ದೇವತೆ ನಾಯಕ ಹಾಗೂ ದಲಿತ ಸಮುದಾಯದ ದೇವತೆಯಾಗಿದ್ದಾಳೆ. ಈ ದೇವತೆಗೆ ಮರೆಮ್ಮ, ಮಾರೆಮ್ಮ ಎಂದೂ ಕರೆಯುವರು. ಮರುಗಮ್ಮ ಸೃಷ್ಟಿಯಾದದ್ದು ಸಾವಿನ ಭಯದಿಂದ ಎಂದು ಜನಪದರ ವಾಡಿಕೆ ಇದೆ.[೨೦] ಈಕೆ ಸಾವು–ನೋವುಗಳ ರಕ್ಷಿಸುವ ದೇವತೆಯಾಗಿದ್ದಾಳೆ.

**ರಚನೆ:** ಈ ಶಿಲ್ಪವನ್ನು ಸಾಮಾನ್ಯವಾಗಿ ಬಡಿಗೇರರು ಕಟ್ಟುನಿಟ್ಟಿನ ಕ್ರಮಗಳಿಂದ ಮಡ್ಡಿ ಅಥವಾ ಮಳಗಿ ಕಟ್ಟಿಗೆಯನ್ನು ಬಳಸಿ ತಯಾರಿಸುತ್ತಾರೆ. ಈ ಶಿಲ್ಪ ಮೂರರಿಂದ ನಾಲ್ಕು ಅಡಿವರೆಗೆ ಎತ್ತರದಲ್ಲಿರುತ್ತವೆ. ಸಾಮಾನ್ಯವಾಗಿ ಮಾರಿಯ ಗುಡಿಯಲ್ಲಿ ಒಂದು ಜೊತೆ ಇಲ್ಲವೆ ಮೂರು ಜೊತೆ ಅಥವಾ ಐದು ಜೊತೆ ಶಿಲ್ಪಗಳಿರುತ್ತವೆ. ಸ್ಥಾನಿಕ ಮತ್ತು ಆಸೀನ ಭಂಗಿಯಲ್ಲಿರುತ್ತವೆ. ಅರಿಶಿನ–ಕುಂಕುಮ ಹಚ್ಚಿ ಸಾಧಾರಣ ವಸ್ತ್ರ ವಿನ್ಯಾಸಗಳಿಂದ ಪ್ರತಿಷ್ಠಾಪಿಸಲಾಗಿರುತ್ತದೆ. ಉತ್ಸವಗಳ ಸಂದರ್ಭದಲ್ಲಿ ವಿಶೇಷ ವಸ್ತ್ರಾಲಂಕಾರಗಳಿಂದ ಸಿಂಗರಿಸುತ್ತಾರೆ. ಕುಂಕುಮ, ಚಂದ್ರ, ಹೂದಂಡೆ ಮತ್ತು ಜಾಜಿ ಹೂವಿನಿಂದ ಅಲಂಕಾರಗೊಳಿಸುತ್ತಾರೆ. ಎಷ್ಟೇ ಅಲಂಕರಿಸಿದರೂ ಈ ದೇವತೆ ಸ್ಫುರದ್ರೂಪಿಯಾಗಿ ಮನಸ್ಸಿಗೆ ಆನಂದ ಸಂತೋಷ ನೀಡದೆ ಮುಖಛಾಯದಲ್ಲಿ ಭಯಾನಕ ದೃಶ್ಯಾನುಭವ ನೀಡುವ ದೇವತೆಯಾಗಿದ್ದಾಳೆ. ಈ ದೇವತೆಯ ಬಲಗೈಯಲ್ಲಿ ಖಡ್ಗ ಎಡಗೈಯಲ್ಲಿ ಬಟ್ಟಲು ಹಿಡಿದು ಸ್ಥಾನಿಕ ಭಂಗಿಯಲ್ಲಿರುತ್ತಾಳೆ. ಇದು ಈ ಶಿಲ್ಪದ ವೈಶಿಷ್ಟ್ಯತೆ.

**ಆಚರಣೆ:** ಈ ಮಾರಿ ದೇವತೆಯನ್ನು ಮಂಗಳವಾರ ಮತ್ತು ಶುಕ್ರವಾರ ಪೂಜಿಸುತ್ತಾರೆ. ಈ ಪ್ರದೇಶದಲ್ಲಿ ದಲಿತರೇ ಪೂಜಕರು. ವರುಷಕ್ಕೆ ಒಮ್ಮೆ ಉತ್ಸವ ಕಾರ್ಯಕ್ರಮ ಮಾಡುತ್ತಾರೆ. ಬೆಳಿಗ್ಗೆ

ಅಂದು ಗಂಗಾಸ್ಥಳಕ್ಕೆ ಹೋಗಿ ಗಂಗೆ ನೀರನ್ನು ತಂದು ದೇವಿಗೆ ಅರ್ಪಿಸಿ ವಿಶೇಷ ಪೂಜೆ ಮಾಡಿ ನಂತರ ಐದು ಕುರಿ ಬಲಿ ಕಾರ್ಯಕ್ರಮ ಹೀಗೆ ಇವಳು ಅಪ್ಪಟ ಜನಪದ ದೇವತೆ. ಈಕೆ ಜನಪದ ಕಣ್ಣಿಗೆ ಬಿಸಿಲುಮಾರಿ, ಗಡಿಮಾರಿ, ಊರುಮಾರಿ, ಮಕ್ಕಳಮಾರಿ, ದನಗಳಮಾರಿ ಹಾಗೂ ದಡಾರಮ್ಮಳಾಗಿ ಕಾಣಿಸಿಕೊಳ್ಳುವ ಮಾರೆಮ್ಮ ಭಯ ಭಕ್ತಿಯಿಂದ ಪೂಜಿಸಿ ಆಚರಿಸುತ್ತಾರೆ.[೭೧] ದನಕರುಗಳಿಗೆ ಕಾಲು ಜ್ವರ, ಬಾಯಿಜ್ವರ ಸಾವನ್ನು ಹೊಂದುತ್ತಿದ್ದರೆ ಮರದಲ್ಲಿ ಚಿಕ್ಕದಾಗಿ ಒಂದು ಜೊತೆ ಗಂಡು-ಹೆಣ್ಣು ಮೂರ್ತಿ ಮಾಡುತ್ತಾರೆ.[೨] ಚಿಕ್ಕ ಬಂಡಿಗಾಲಿಯ ಮೇಲೆ ಪ್ರತಿಷ್ಠಾಪಿಸಿ ಮಧ್ಯರಾತ್ರಿ ಹೊತ್ತಿನಲ್ಲಿ ಹಳೆಯ ಮೊರ ಪೊರಕೆ, ಗಡಿಗೆ, ಇತ್ಯಾದಿ ವಸ್ತುಗಳೊಡನೆ ಬಾಯಿ ಬಡೆದುಕೊಳ್ಳುತ್ತಾ ಕೇಕೆ ಹಾಕುತ್ತಾ ಈ ಶಿಲ್ಪಗಳನ್ನು ಹೊರಗಟ್ಟಿ ತಿರುಗಿ ನೋಡದಂತೆ ಬರುತ್ತಾರೆ. ಊರೊಳಗೆ ಜನರು ಸಾವು ನೋವು ಸಂಭವಿಸಿ ಸಂಕಷ್ಟದಲ್ಲಿ ತೊಳಲಾಡುತ್ತಿರುವಾಗ ಮಾರೆಮ್ಮನ ವಕ್ರದೃಷ್ಠಿ ಬಿದ್ದಿದೆ ಎಂದು ತಿಳಿದು ಹಬ್ಬ-ವ್ರತಾಚರಣೆ ಬಲಿ ಮತ್ತು ಹರಕೆ ಸಲ್ಲಿಸಿ ಅವಳನ್ನು ಜನರು ಶಾಂತಗೊಳಿಸುತ್ತಿದ್ದರು.

**ನರೇಗಲ್ಲಮ್ಮ:** ಈ ದೇವತೆ ಮನ್ಮಥಕೇರಿಯ ನಾಯಕ ಸಮುದಾಯದ ದೇವತೆ. ಈಕೆಯೂ ಉಗ್ರದೇವತೆ ಈಕೆಯನ್ನು ನರೇಗಲ್ಲಮ್ಮ, ನೆಲೆಗಲ್ಲಮ್ಮ ಎಂದೂ ಕರೆಯುತ್ತಾರೆ. ಕಾರಣ ಈ ಶಿಲ್ಪದ ಹಿಂದೆ ನೇರವಾದ ಒಂದು ಚಿಕ್ಕ ಶಿಲೆ ಇದೆ. ಇದೇ ದೇವಿ ಶಕ್ತಿವೆಂದು ತಿಳಿದು ಈ ಹೆಸರನ್ನು ಕರೆಯುವ ವಾಡಿಕೆ ಇದೆ.

**ರಚನೆ:** ಈ ದೇವಿಯ ಮೂರ್ತಿಯನ್ನು ಸಾಮಾನ್ಯವಾಗಿ ಬಡಿಗೇರರು ಮಾಡುತ್ತಾರೆ. ಇದಕ್ಕೆ ಜಿನುಗಾರರು ಬಣ್ಣ ಹಾಕುತ್ತಾರೆ. ಈ ಶಿಲ್ಪ ಸುಮಾರು ಎರಡುವರೆ ಅಡಿ ಉದ್ದ ಒಂದು ಅಡಿ ಅಗಲವಿರುತ್ತದೆ. ಹುಲಿಯ ಮೇಲೆ ಆಸೀನಳಾಗಿದ್ದಾಳೆ. ಇವಳು ಕಿರೀಟಧಾರಿಣಿಯಾಗಿದ್ದು. ಚತುರ್ಭುಜವುಳ್ಳವಳು. ಬಲಗೈಯಲ್ಲಿ ಡಮರು, ಕತ್ತಿ ಎಡಗೈಯಲ್ಲಿ ತ್ರಿಶೂಲ ಕುಂಕುಮ ಬಟ್ಟಲು ಹಿಡಿದಿದ್ದಾಳೆ. ಮುಖದಲ್ಲಿ ಉಗ್ರವಾದ ಕಣ್ಣು, ಕೆಂಪು ಬಣ್ಣದ ಮುಖ ಬಾಯಿ ತೆರೆದ ಕೋರೆಹಲ್ಲುಗಳು, ಕಿವಿಯಲ್ಲಿ ಓಲೆ. ಕೊರಳಲ್ಲಿ ಪದಕಹಾರ, ಮಣಿಸರ ಧರಿಸಿದ್ದಾಳೆ. ಕೈಗಳಿಗೆ ಬಳೆ, ತೋಳು ಬಂಧಿ ಧರಿಸಿದ್ದಾಳೆ.

**ಆಚರಣೆ:** ದಸರಾ ಹಬ್ಬದ ಒಂಬತ್ತನೇ ದಿನ (ನವರಾತ್ರಿಯಲ್ಲಿ ಆಯುಧಪೂಜಾದಿನ) ಈ ದೇವಿ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಊರ ಹೊರಗಿನ ಬನ್ನಿ ಮರಕ್ಕೆ ಹೋಗಿ ಬನ್ನಿ ಮುಡಿದು ಬರುತ್ತಾಳೆ. ನವರಾತ್ರಿಯ ಒಂಬತ್ತು ದಿನ ಈ ದೇವರಿಗೆ ವಿಶೇಷ ಪೂಜಾ ಕಾರ್ಯಕ್ರಮ ಇರುತ್ತದೆ. ಈ ದೇವಿಗೆ ಐದು ವರ್ಷಕ್ಕೆ ಒಮ್ಮೆ ನಾಯಕ ಸಮುದಾಯದವರು ಜಾತ್ರೆ ನಡೆಸುತ್ತಾರೆ. ಶಿವರಾತ್ರಿ ಅಮವಾಸ್ಯೆಯ ನಂತರ ಶಿಲ್ಪವನ್ನು ಹೊಸಪೇಟೆ ಜಿನುಗಾರರ ಮನೆಗೆ ಬಣ್ಣ ಹಾಕಲು ಕೊಡುತ್ತಾರೆ. ಹೋಳಿ ಹುಣ್ಣಿಮೆಯಾದ ಎಂಟನೇ ದಿನದಲ್ಲಿ ಈ ಜಾತ್ರೆ ನಡೆಯುತ್ತದೆ. ಜಾತ್ರೆ ಹಿಂದಿನ ದಿನ ಈ ಶಿಲ್ಪಕ್ಕೆ ಗಂಗೆ ಪೂಜೆ ಮಾಡಿ ಮರುದಿನ ಬೆಳಿಗ್ಗೆ ಸಮೇತ ಗಂಗೆಯನ್ನು ಡೊಳ್ಳು, ಭಜನಾ ವಾದ್ಯಗಳ ಮೆರವಣಿಗೆ ಮೂಲಕ ಈ ದೇವಿಯನ್ನು ಹೊತ್ತವರು ದೇವಾಲಯದ ಮುಂದಿನ ಅಗ್ನಿಕುಂಡ ತುಳಿದು ದೇವಾಲಯದಲ್ಲಿ ದೇವಿಯನ್ನು ಪೀಠದ ಮೇಲೆ ಆಸೀನಗೊಳಿಸುತ್ತಾರೆ. ತದನಂತರ (ಐದು ಕುರಿ)ಬಲಿ

ಕಾರ್ಯನೇರವೇರುತ್ತದೆ.[೨೩] ನಂತರ ದಾಸೋಹ ಕಾರ್ಯಕ್ರಮ ನಡೆಯುತ್ತದೆ. ಹೀಗೆ ಈ ಜಾತ್ರೆ ಕಾರ್ಯಕ್ರಮ ಮುಕ್ತಾಯಗೊಳ್ಳುತ್ತದೆ.

**ಹುಲಿ ವಾಹನ ಶಿಲ್ಪಗಳು:** ಹಲವಾರು ಗ್ರಾಮದೇವತೆ ಮತ್ತು ಸಮುದಾಯ ದೇವತೆಗಳಿಗೆ ಹುಲಿವಾಹನವಾಗಿರುತ್ತದೆ. ಸಾಮಾನ್ಯವಾಗಿ ಈ ಪ್ರದೇಶದಲ್ಲಿ ಮರದ ಮಾಧ್ಯಮದಲ್ಲಿರುವ ದ್ಯಾವಮ್ಮ, ನರೇಗಲ್ಲಮ್ಮ, ಊರಮ್ಮ ಶಿಲ್ಪಗಳು ಹುಲಿ ವಾಹನದ ಮೇಲೆಯೇ ಆಸೀನವಾಗಿವೆ. ಇದು ಅಪ್ಪಟ ಜಾನಪದೀಯ ಶೈಲಿಯ ರಚನೆ. ಹುಲಿ ವಾಹನ ಶಿಲ್ಪ ಸಾಮಾನ್ಯವಾಗಿ ತೆರೆದಬಾಯಿ, ಹಳದಿ ಮೈ ಬಣ್ಣ, ಹೊಂದಿ ಭಯಾನಕ ವಿನ್ಯಾಸಗಳಿಂದ ಕೂಡಿರುವುದು ಈ ಶಿಲ್ಪದ ವೈಶಿಷ್ಠತೆ.

**ಕಾಷ್ಠ ಬಾಗಿಲು ವಾಡಗಳಲ್ಲಿ ಶಿಲ್ಪಗಳು :** ಉತ್ತರ ಕರ್ನಾಟಕದಲ್ಲಿ ಮನೆ ಮತ್ತು ಮಠಗಳ ಪ್ರವೇಶದ್ವಾರ ಅಥವಾ ತಲ ಬಾಗಿಲುಗಳಂತೂ ಅದ್ಬುತ ಕಲಾತ್ಮಕ ಕೆತ್ತನೆಗಳಿಂದ ಕೂಡಿರುವುದು ವಿಶೇಷ. ಅನೇಕ ಹೂ-ಬಳ್ಳಿಗಳಲ್ಲದೆ ಲಕ್ಷ್ಮೀ, ಸರಸ್ವತಿ, ಗಣೇಶ, ಈಶ್ವರ, ಪಾರ್ವತಿ ಉಬ್ಬು ಶಿಲ್ಪಗಳ ಕೆತ್ತನೆಯಿಂದ ಅಲಂಕೃತಗೊಂಡಿರುತ್ತವೆ.[೨೪] ಅಲ್ಲದೆ ಬಾಗಿಲಿನ ಮೇಲೆ ಎಡ ಮತ್ತು ಬಲ ಬದಿಗಳಲ್ಲಿ ಕುದುರೆಯ ಮುಖದ ದುಂಡು ಶಿಲ್ಪಗಳನ್ನು ಮಾಡಿ ಅಳವಡಿಸಲಾಗಿದೆ. ಈ ಬಗೆಯ ತಲಬಾಗಿಲುಗಳ ಕಲಾತ್ಮಕ ರಚನೆ ಶತಮಾನಗಳಿಂದಲೂ ಬೆಳೆದು ಬಂದಿದೆ. ಕುದುರೆ ಶಿಲ್ಪಗಳು ಅಪ್ಪಟ ಜನಪದ ಶೈಲಿಯವುಗಳಾಗಿರುತ್ತವೆ. ಪ್ರಸ್ತುತ ಕಾಮಲಾಪುರ ಗ್ರಾಮದ ಕೆಲವು ಉದಾ : ಸಿದ್ದಮ್ಮನ ಮನೆ, ಬಸಮ್ಮನ ಮನೆ. ಹಳೆ ಮನೆಯ ತಲಬಾಗಿಲಿಗೆ (ಮುಂಬಾಗಿಲು) ಇಂತಹ ಕುದುರೆ ಶಿಲ್ಪಗಳನ್ನು ಕಾಣಬಹುದು. ಈ ಕುದುರೆ ಶಿಲ್ಪಗಳ ಬದಲಿಗೆ ಆನೆ ಅಥವಾ ಹುಲಿ, ಸಿಂಹ ಇನ್ನಾವುದೇ ಪ್ರಾಣಿಯ ಶಿಲ್ಪಗಳನ್ನು ಅಳವಡಿಸಬಾರದೆಂಬ ನಿಯಮವೂ ಇದೆ. ಕುದುರೆ ಶಿಲ್ಪಗಳನ್ನು ಅಳವಡಿಸುವುದರಿಂದ ಮನೆಯ ಶ್ರೀಮಂತಿಕೆ ಶಾಶ್ವತವಾಗಿ ಹೆಚ್ಚುತ್ತಾ ಹೋಗುತ್ತದೆಂಬ ನಂಬಿಕೆ ಇದೆ.

ಪ್ರಸ್ತುತ ಹೆಚ್ಚಿನ ಮಟ್ಟಿಗೆ ಕಾಮಲಾಪುರ ಗ್ರಾಮದಲ್ಲಿ ಹಳೆಯ ಮನೆಗಳ ಬಾಗಿಲುವಾಡಗಳ ಮೇಲೆ ಸಾಮಾನ್ಯವಾಗಿ ಕುಳಿತ ಭಂಗಿಯ ನಂದಿ ಪ್ರತಿಮೆಗಳು ಇಲ್ಲವೆ ಲಿಂಗದ ಉಬ್ಬುಶಿಲ್ಪಗಳಲ್ಲಿನ ಈ ಕಲಾತ್ಮಕತೆಯನ್ನು ಕಾಣಬಹುದು.[೨೫] ಬ್ರಾಹ್ಮಣರು, ಜಂಗಮರು, ಲಿಂಗಾಯತರು, ವಿಶ್ವಕರ್ಮರಲ್ಲೂ ತಮ್ಮ ಧಾರ್ಮಿಕ ನಂಬಿಕೆಗಳಿಗೆ ಸಂಬಂಧಿಸಿದಂತೆ ದೈವಗಳ ಪ್ರತಿಮೆಗಳನ್ನು ಬಾಗಿಲು ವಾಡದ (ಹಣೆ ಪಟ್ಟಿಯಲ್ಲಿ) ಲಲಾಟಬಿಂಬದಲ್ಲಿ ಉಬ್ಬು ಶಿಲ್ಪಗಳಾಗಿ ಕೆತ್ತಿಸಲಾಗಿದೆ. ಇದರ ಜೊತೆಗೆ ಸೂರ್ಯ ಮತ್ತು ಚಂದ್ರರ ಉಬ್ಬು ಶಿಲ್ಪವನ್ನು ಕೆತ್ತಲಾಗಿದೆ. ಪ್ರಸ್ತುತ ಈ ದಿನಗಳಲ್ಲೂ ಸೂರ್ಯ ಮತ್ತು ಚಂದ್ರರ ಉಬ್ಬು ಶಿಲ್ಪಗಳನ್ನು ಕೆತ್ತಿಸಲಾಗುತ್ತಿದೆ.

**ಜಾನಪದ ಚಿತ್ರಕಲೆ:** ಜನಾಂಗದ ಬದುಕು ಜೀವನ ಚರಿತ್ರೆಯಾದರೆ, ಕಲೆಗಳು ಅದರ ಆತ್ಮಚರಿತ್ರೆಗಳಾಗಿರುತ್ತವೆ.[೨೬] ಮನುಷ್ಯನ ಕ್ರಿಯಾಶೀಲ ಮನಸ್ಸು ಬದುಕನ್ನು ಸುಂದರವಾಗಿರಿಸಲು, ಜಡದಿಂದ ಚೈತನ್ಯಕ್ಕೆ ಸಾಗುವಂತೆ ಮಾಡಲ್ಪಟ್ಟ ಪರಿಶ್ರಮವೇ ಕಲೆಗಳಾಗಿ ರೂಪಗೊಳ್ಳುವುದಕ್ಕೆ ಕಾರಣ

ನಿಸರ್ಗಸಹಜವಾದ ಬದುಕನ್ನು ನಡೆಸಿಕೊಂಡು ಬಂದ ಗ್ರಾಮೀಣ ಜನತೆಯ ಕಲೆ ಜನಪದ ಕಲೆ.[೭೭] ಈ ಕಲೆಗಳು ಧಾರ್ಮಿಕ ಹಿನ್ನೆಲೆಯಲ್ಲಿ ಬೆಳೆದು ಬಂದಂಥವುಗಳು. ಅವುಗಳ ಕೊಡುಗೆ ಅಪಾರ.

ಜಾನಪದ ಸಂಪ್ರದಾಯಗಳು ಒಂದು ಸಮುದಾಯದ ಸೃಷ್ಠಿ. ರಾಷ್ಟ್ರೀಯ ಸಂಸ್ಕೃತಿಯ ತಾಯಿಬೇರು ಇದು ಜನ ಸಾಮಾನ್ಯರ ಶೃತಿಯೂ ಆಗಿದೆ, ಸ್ಮೃತಿಯೂ ಆಗಿದೆ[೭೮] ಎಂಬುದು (ಜವರೇಗೌಡರ ನುಡಿಗಳ) ಜನಪದದ ಮಹತ್ವವನ್ನು ತಿಳಿಪಡಿಸುತ್ತವೆ. ಇಂತಹ ಸಂಸ್ಕೃತಿಯ ಒಂದು ಅಂಶವೇ ಜಾನಪದ ಕಲೆ. ಜನಪದ ಚಿತ್ರಕಲೆಯೂ ಧರ್ಮ ಮೂಲವಾಗಿ ಬೆಳೆದಿದೆ ಎಂದರೆ ತಪ್ಪಾಗಲಾರದು. ಇದು ಚಿತ್ರಕಲೆಯಲ್ಲಿ ಎಲೆ ಮರೆಯ ಕಾಯಿಯಂತೆ ಬದುಕಿನ ಅಂತರಂಗ ಅವಿತುಕೊಂಡಿರುವುದನ್ನು ಗುರುತಿಸುತ್ತೇವೆ. ಜನಪದ ಚಿತ್ರಕಲೆ ಎಂದರೆ ಇದು ಕೇವಲ ಬಣ್ಣವಲ್ಲ ರೇಖೆಯಲ್ಲ. ಸುಣ್ಣಕಾವಿಗಳ ಬೊಟ್ಟುಗಳಲ್ಲ. ಇವು ಧಾರ್ಮಿಕ ಸಂಪ್ರದಾಯಗಳು ಮನುಷ್ಯನ ಸುಪ್ತ ಶಕ್ತಿಗಳು ಅಡಕಗೊಂಡಿರುವ ಸೌಂದರ್ಯ ತುಂಬಿರುವ ವೃತ್ತಿ ಮೂಲವಾಗಿರುವ ದೈನಂದಿನ ಬದುಕೇ ಈ ಚಿತ್ರಕಲೆ.[೭೯] ಒಟ್ಟಿನಲ್ಲಿ ಜನಪದ ಜೀವನದ ಅಧ್ಯಯನವೇ ಆಗಿದೆ. ಮನುಷ್ಯನ ಬದುಕು ವಿವಿಧ ಹಂತಗಳಲ್ಲಿ ಬಾಳುವ ಜನಪದರ ಬದುಕು ತಮಗೆ ಅರಿವಿಲ್ಲದೆ ಚಿತ್ರಕಲೆಯನ್ನು ಜೀವನದಲ್ಲಿ ಹೇಗೆ ರೂಢಿಸಿಕೊಂಡಿತ್ತೆಂಬುದನ್ನು ತಿಳಿದುಕೊಳ್ಳುಲು ಸಹಕಾರಿಯಾಗಿದೆ. ಪಾರಂಪರಿಕವಾಗಿ ಜನಪದ ಜೀವನದಲ್ಲಿ ಹಾಸುಹೊಕ್ಕಾಗಿರುವ ಚಿತ್ರಕಲೆಯ ಎಲಿಲ್ಲದ ಅಂಶಗಳ ಕಡೆಗೆ ಗಮನ ಸೆಳೆಯುವುದೇ ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಪ್ರಸ್ತುತ ಕಾಮಲಾಪುರ ಗ್ರಾಮದ ಪರಿಸರದಲ್ಲಿ ಲಭ್ಯವಾದ ಜಾನಪದ ಚಿತ್ರಕಲೆಗಳು ತೆರೆ ತೆರೆಯಾಗಿ ಕಾಣಬಹುದಾಗಿದೆ.

೧. ಬಯಲು ಬಂಡೆಯ ಮೇಲಿನ ಚಿತ್ರ ವಿನ್ಯಾಸಗಳು.

೨. ಚರ್ಮದ ಮೇಲಿನ ಚಿತ್ರ ವಿನ್ಯಾಸಗಳು.

೩. ನೆಲದ ಮೇಲಿನ ಚಿತ್ರ ವಿನ್ಯಾಸಗಳು.

**೧. ಬಯಲು ಬಂಡೆಯ ಮೇಲಿನ ಚಿತ್ರ ವಿನ್ಯಾಸಗಳು:** ಬಯಲು ಬಂಡೆಯ ಮೇಲೆ ಬೆಟ್ಟದ ಆಸರೆಯ ಕಲ್ಲಿನ ಬಂಡೆಗಳ ಮೇಲೆ ಕುಟ್ಟಿದ ಅಂದರೆ ಕಚ್ಚು ಮಾಡಿದ ಚಿತ್ರಗಳಿವೆ. ಕೆಲವು ಕಡೆ ಕೆತ್ತನೆ(ಊರಿದ) ಮಾಡಿ ನಿರ್ಮಿಸಿದ ರೇಖಾ ವಿನ್ಯಾಸದ ಚಿತ್ರಗಳೂ ಬಯಲು ಬಂಡೆಯಲ್ಲಿ ಕಂಡು ಬಂದಿವೆ. ಇವಕ್ಕೆ ಗೀರು ಚಿತ್ರಗಳೆಂದು, ಕೊರೆದ ಚಿತ್ರಗಳೆಂದು ಕರೆಯಲಾಗುತ್ತಿದೆ. ಈ ಬಯಲು ಬಂಡೆಯ ಮೇಲಿನ ಶಿಲಾಶ್ರಯದ ಚಿತ್ರಗಳಲ್ಲಿ ವರ್ಣಗಾರಿಕೆ ಹೆಚ್ಚಾಗಿರದೇ ರೇಖಾಚಿತ್ರಗಳೇ ಹೆಚ್ಚು ಕಂಡು ಬರುತ್ತದೆ.[೮೦] ಇಂತಹ ಚಿತ್ರಗಳು ಪ್ರಸ್ತುತ ಕಾಮಲಾಪುರ ಗ್ರಾಮದಲ್ಲಿ ಕಂಡು ಬಂದಿವೆ.

**ವರ್ಣಚಿತ್ರ : ನೆಲೆ–ಒಂದು**

೧. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟಿನ ವಿಭಾಗದ ಮುಂದೆ ಈ ನೆಲೆ ಇದೆ. ಇಲ್ಲಿ ವಿಶಾಲ ಬಂಡೆಯ ಇಳಿಜಾರಿನ ಮೇಲೆ ರೇಖಾ ಚಿತ್ರಗಳನ್ನು ಕೊರೆಯಲಾಗಿದೆ. ಒಟ್ಟು ೮ ಚಿತ್ರಗಳು ಕಂಡು ಬರುತ್ತವೆ. ಅವುಗಳಲ್ಲಿ ಆರು ಎತ್ತಿನ ಚಿತ್ರಗಳಿವೆ. ಎರಡು ಎತ್ತು ಮತ್ತು ಅವುಗಳ ಮೇಲೆ ಕುಳಿತ ಮನುಷ್ಯನ ಚಿತ್ರಗಳಾಗಿವೆ. ಕೆಳಗಿನ ಎತ್ತುಗಳ ರಚನೆ ವಿಶಿಷ್ಟವಾಗಿದೆ. ಒಂದೇ ದೊಡ್ಡ ಕೋಡು,

ದೊಡ್ಡದಾದ ಇಣಿ, ಉದ್ದವಾದ ಬಾಲ, ಕಣ್ಣಗಳಿದ್ದು ಚಿತ್ರದಲ್ಲಿ ಪೂರ್ಣತೆ ಇದೆ. ಕೇವಲ ಮೂರು ಸರಳ ರೇಖೆಯಲ್ಲಿ ಎತ್ತಿನ ಚಿತ್ರಗಳನ್ನು ಕೊರೆಯಲಾಗಿದೆ. ಒಂದೇ ರೇಖೆಯಲ್ಲಿ ಮುಂದಿನ ಮೊದಲ ಕಾಲು, ಕತ್ತು, ಬಾಯಿ, ಮುಖ, ಕೋಡು, ಇಣಿ ಬೆನ್ನುಗಳನ್ನು ಮೂಡಿಸಲಾಗಿದೆ. ಹಿಂದಿನ ಮೊದಲ ಕಾಲನ್ನು ಎರಡನೇ ರೇಖೆಯಲ್ಲಿ ಚಿತ್ರಿಸಲಾಗಿದೆ. ತೀರ ಕೆಳಗೆ ಇರುವ ೩(೨) ಎತ್ತುಗಳು ಉಳಿದವುಗಳಿಗಿಂತ ಅಳತೆಯಲ್ಲಿ ಸ್ವಲ್ಪ ದೊಡ್ಡವು (೦.೬೫ ಮೀ ಅಗಲ, ೦.೫೩ ಮೀ ಎತ್ತರ ಮತ್ತು ೦.೩೫, ೦.೫೮ ಮೀ) ಮೇಲಿನ ಚಿತ್ರಗಳು ಅಸ್ಪಷ್ಟ.[೮೧]

**ನೆಲೆ ಎರಡು**

ಕನ್ನಡ ವಿಶ್ವವಿದ್ಯಾಲಯ ಪೂರ್ವ ಬದಿಯ ಬಯಲಿನ ಒಂಟಿ ಕಲ್ಲು ಗುಂಡಿನಲ್ಲಿದೆ. ಇದರ ಕಲ್ಲಾಸರೆಯಲ್ಲಿ ಕಡವೆಯ ವರ್ಣ ಚಿತ್ರವಿದೆ. ಈ ಗುಂಡಿನ ಕೆಳಗಿನ ಬಂಡೆ ಕಲ್ಲಿನಲ್ಲಿ ಒಂದು ಆಕೃತಿ ಮತ್ತು ಎರಡು ಎತ್ತು ಒಟ್ಟು ಮೂರು ಚಿತ್ರಗಳಿವೆ. ಒಂದರ ಹಿಂದೆ ಒಂದು ಒತ್ತುಗಳು ಸಾಲಾಗಿ ನಿಂತಿವೆ. ಅದರ ಮುಂದೆ ಒಂದು ವೃತ್ತ ಅದರ ಮಧ್ಯ ಭಾಗದಲ್ಲಿ ಮೇಲಿನಿಂದ ಒಂದು ಸರಳ ರೇಖೆ ಎಳೆಯಲಾಗಿದೆ. ವೃತ್ತದ ಮೇಲಿನ ಬಲ ಮೂಲೆಯ ರೇಖೆಗೆ ತಾಗಿ ಅರೆ ವೃತ್ತಾಕಾರವಿದೆ.

ಎತ್ತುಗಳ ಚಿತ್ರಗಳು ಸರಳ ರೇಖೆಯಲ್ಲಿವೆ. ಮುಖ ತ್ರಿಕೋನಾಕಾರದಲ್ಲಿವೆ. ಅದರ ಮೇಲೆ ಕೋಡು, ಇಣಿ, ಬಾಲ, ಸಹಜವಾಗಿವೆ. ಕಾಲುಗಳ ರಚನೆಯಲ್ಲಿ ಮುಂದಿನ ಕಾಲು ಕತ್ತಿನಿಂದ ಒಂದು ನೇರ ರೇಖೆಯನ್ನು ಎಳೆದು ತೋರಿಸಿದ್ದು, ಹಿಂದಿನ ಕಾಲು ಬೆನ್ನಿನ ರೇಖೆಯ ಮುಂದುವರೆದ ಕಾಲಾಗಿದೆ. ಎರಡನೇ ಮತ್ತು ಹಿಂದಿನ ಮೊದಲನೆಯ ಕಾಲನ್ನು ಒಂದೇ ರೇಖೆಯಲ್ಲಿ ಮೂಡಿಸಲಾಗಿದೆ. ಅದೇ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಮುಂದೆ ಈ ನೆಲೆ ಇದೆ. ಇಲ್ಲಿ ವಿಶಾಲ ಬಂಡೆಯ ಪಶ್ಚಿಮ ಇಳಿಜಾರಿನ ಮೇಲೆ ರೇಖಾಚಿತ್ರಗಳನ್ನು ಕೊರೆಯಲಾಗಿದೆ. ಒಟ್ಟು ಎಂಟು. ಆರು ಎತ್ತಿನ ಚಿತ್ರಗಳಿವೆ. ಎರಡು ಎತ್ತು ಮತ್ತು ಅವುಗಳ ಮೇಲೆ ಕುಳಿತ ಮನುಷ್ಯನ ಚಿತ್ರಗಳಾಗಿವೆ.[೮೧]

**ಚರ್ಮದ ಮೇಲಿನ ಚಿತ್ರವಿನ್ಯಾಸ:** 'ಅಣ್ಣಯ್ಯನ ತೋಟಕ್ಕೆ ಎಪ್ಪತ್ತೈದು ಬಿಗ ಅತ್ತರೂ ಬರದು ಕಿತ್ತರೂ ಬರದು' = ಹಚ್ಚೆ ಇದು ಶುಭ ಸಂಕೇತದ ಕುರುಹು. ಜನಪದರ ಕಲಾಭಿರುಚಿಯ ವೈವಿಧ್ಯತೆಯನ್ನು ತೋರಿಸುವ ಸಾಧನ, ಕಾಡು ಮಾನವನಲ್ಲಿ ಹುಟ್ಟು ಪಡೆದ ಕಲೆ ಇಂದಿನ ನಾಡು ಮಾನವನವರೆಗೂ ಬೆಳೆದುಕೊಂಡು ಬಂದಿದೆ. ಸೌಂದರ್ಯ ಪ್ರಜ್ಞೆಯ ಹಿನ್ನಲೆಯಲ್ಲಿ ಚರ್ಮದ ಮೇಲೆ ಚಿತ್ರಕಲೆ ಬೆಳೆದು ಬಂದಂತಿದೆ.[೮೨] ಶಾಶ್ವತ ಚಿತ್ರಕಲೆ. ಮನುಷ್ಯ ತಾನು ಸುಖಿ ಇರಲಿ ದುಃಖಿ ಇರಲಿ, ಬದುಕಿನಲ್ಲಿ ಸಿರಿತನ ಇರಲಿ ಬಡತನ ಇರಲಿ ಮಣ್ಣಿನ ಕಾಯ ಮಣ್ಣಾಗುವ ತನಕ ಆತನೊಡನೆ ಚರ್ಮದ ಮೇಲೆ ಬಂದ ಚಿತ್ರಕಲೆಯೇ ಶಾಶ್ವತ ಚಿತ್ರಕಲೆ. ಈ ಕಲೆಯಲ್ಲಿ ಹಚ್ಚೆ ಚಿತ್ರಕಲೆ ಬರುತ್ತದೆ. ಹಚ್ಚೆ ಜನಪದರ ಸಂಪ್ರದಾಯದ ಕಲೆಯಾಗಿ ಸಂಸ್ಕೃತಿಯ ಕೊಡುಗೆಯಾಗಿ ಪರಿಣಮಿಸಿದ ಸಂಕ್ಷಿಪ್ತ ಚಿತ್ರ, ಕನ್ನಡದಲ್ಲಿ ಹಚ್ಚೆ ಪದವು 'ಪಚ್ಚೆ' ಮೂಲದಿಂದ ಬಂದಿದೆ. ಪಚ್ಚೆ ಎಂದರೆ ಹಸಿರು ಮಣಿ ಅಥವಾ ರತ್ನ, ಹಸಿರು ಬಣ್ಣ, ಹಣೆಯ ಮೇಲಿನ ಸ್ಥಿರವಾದ ತಿಲಕ ಎಂಬ ನಾನಾರ್ಥಗಳಿವೆ.[೮೩]

ಕಿಟೆಲ್ ಕೋಶದಲ್ಲಿ ಹಚ್ಚೆಯನ್ನು ಕುರಿತು ಅಚ್ಚೆ, ಪಚ್ಚೆ, ಹಚ್ಚೆ ಎಂಬರ್ಥಗಳಿವೆ.[೮೪] ಎಂ.ಎಂ.ಕಲಬುರ್ಗಿರವರು ದೇಹದ ಬೇರೆ ಬೇರೆ ಭಾಗಗಳ ಮೇಲೆ ಬಡಿಸಿಕೊಂಡ ಚಿತ್ರ–ಚಿತ್ತಾರ ಮತ್ತು ಬರೆಯಿಸಿಕೊಂಡ ಅಕ್ಷರಗಳಿಗೆ 'ಹಣಚಿ' ಎಂದಿದ್ದಾರೆ.[೮೫] ಭಾರತದಲ್ಲಿ ಹಚ್ಚೆಯ ಪ್ರಾಚೀನತೆಯನ್ನು 'ಶುಂಗ' ಅರಸರ ಕಾಲದಲ್ಲಿ ಕಾಣಬಹದು. ಇದಕ್ಕೆ ಕ್ರಿಪೂ.೨ನೇ ಶತಮಾನದಷ್ಟು ಹಿಂದಿನ ವಿವರವಿದೆ. ಕ್ರಿಶ.೧೪೪೪ರಲ್ಲಿ ವಿದೇಶಿ ಪ್ರವಾಸಿ ನಿಕೋಲೋಕೊಂಟಿ ಬರಹದಲ್ಲಿ (ಭಾರತದಲ್ಲಿ) ಹೆಂಗಸರು, ಗಂಡಸರು ಎಂಬ ಭೇಧವಿಲ್ಲದೆ ಹಚ್ಚೆ ಹಾಕಿಸಿಕೊಳ್ಳುತ್ತಾರೆ ಎಂದಿದೆ.[೮೬] ಕರ್ನಾಟಕದ ಜಾನಪದ ಸಾಹಿತ್ಯದಲ್ಲಿ ಹಚ್ಚೆಯ ಉಲ್ಲೇಖದ ಸಾರಾಂಶ ಒಂದೇ, ಹಚ್ಚೆ ಜಾನಪದ ಬದುಕಿಗಾಗಿ ಪಾವಿತ್ರತೆಯ ಸಂಕೇತವಾಗಿ ಹೆಮ್ಮೆಯ ಪ್ರತೀಕವಾಗಿ, ಮುತ್ತೈದೆತನದ ಗುರಿಯಾಗಿದೆ. ಅಣಬೆ ಎಂಬ ಪದದಲ್ಲಿ ಅಣಿ ಎಂದರೆ to decorate ಎಂದರ್ಥ. ಅಣ್ ಎಂದರೆ ಲೇಪಿಸು ಅಥವಾ ಅಂಟು ಎಂಬ ಅರ್ಥವಿದೆ. ಹಚ್ಚೆ ಆಂಗ್ಲ ಭಾಷೆಯಲ್ಲಿ tattoo[೮೭] ಎಂದೂ ಈ ಪದ ಪಾಲಿನೇಷಿಯನ್ ಭಾಷೆಯಿಂದ ಬಂದಿದೆ. ಎಂದರೆ ಹೊಡೆ–ತಟ್ಟು ಎಂದರ್ಥ. ಈ ರೂಪವೇ ಹಚ್ಚೆಯ ಕ್ರಿಯೆಯ ಮೂಲಾರ್ಥ.[೮೮]

**ರಚನೆ:** ಹಸಿರು ಗಿಡ–ಮೂಲಿಕೆಗಳಿಂದ ತಯಾರಿಸಿದ ರಸ–ದೇಹದ ಮೇಲೆ ಹಳದಿ ಮಿಶ್ರಿತ ಹಸಿರು ಕಲೆಯನ್ನು ಶಾಶ್ವತವಾಗಿ ಉಳಿಸಿರುವುದರಿಂದ ಈ ಚರ್ಮದ ಕಲೆ ವಿನ್ಯಾಸಕ್ಕೆ ಪಚ್ಚೆ–ಹಚ್ಚೆ ಎನ್ನುವ ಹೆಸರು ಬಂದಿದೆ. ಲಂಬಾಣಿ ಜನಪದರಲ್ಲಿ ಹೆಚ್ಚಾಗಿ ಸ್ತ್ರೀಯರಲ್ಲಿ ಇಂದಿಗೂ ಹೆಚ್ಚು ಬಳಕೆಯಲ್ಲಿದೆ.

**ಹಚ್ಚೆಯ ಚಿತ್ರಗಳು:** ತಾವು ನಂಬಿದ ದೈವದ ಮುದ್ರೆಗಳು, ಜೋಗಿ ಜಡೆ, ಸೀತೆಸೆರಗು, ರಾಮನ ತೊಟ್ಟಿಲು, ಶಿವನ ಬಾಸಿಂಗ, ಹಂಪಿ, ತೇರು, ಯಾಲಕ್ಕಿಸಾಲು, ಗೌರಿಕಣ್ಣು, ನಿಂಬೆಸಸಿ, ನಾಗಪ್ಪ, ಹನುಮಂತ ತೇರು, ಮಲ್ಲಿಗೆದಂಡೆ, ಚೇಳು, ಮುತ್ತಿನಾರತಿ, ಬಸವಣ್ಣ, ಸೂರ್ಯ ಚಂದ್ರ, ಗೌರಿಗದ್ದಿಗೆ, ಸಿಂಹ, ಹುಲಿ, ಕಳಸ, ಇಷ್ಟ ಮಿತ್ರರ ಹೆಸರು, ಪತಿ–ಪತ್ನಿಯರ ಹೆಸರು, ಇತ್ಯಾದಿ ಚಿತ್ರಗಳನ್ನು ಕೈಗಳ ಮೇಲೆ ಅಲ್ಲದೆ, ಹಣೆ, ಗಲ್ಲ, ಮೂಗಿನ ಮೇಲೆ, ಗದ್ದಗಳ ಮೇಲೆ ಈ ರೀತಿಯ ವಿವಿಧ ಚಿತ್ರಗಳನ್ನು ಹಾಕಿಸಿಕೊಳ್ಳುತ್ತಿದ್ದರು. ಜಾತಿ ಸೂಚಕವಾಗಿಯೂ ಹಚ್ಚೆಯು ಕೆಲವು ಜನಾಂಗಗಳಲ್ಲಿ ಬಳಕೆಯಾಗುತ್ತವೆ. ಈ ಹಚ್ಚೆಗಳು ಧಾರ್ಮಿಕ ಆಚರಣೆ ದೈವನಂಬಿಕೆಯ ಶುಭ ಲಕ್ಷಣವಾಗಿ, ಸಂಪ್ರದಾಯವಾಗಿ, ಹರಕೆಯಾಗಿ, ಪ್ರೀತಿಯ ಕುರುಹಾಗಿ, ವೈದ್ಯಕೀಯ ಚಿಕಿತ್ಸೆಯಾಗಿ, ಸೌಂದರ್ಯದ ಸಾಧನವಾಗಿ ಅನೇಕ ವಸ್ತುಗಳ ಸಂಕೇತವಾಗಿ ಹಚ್ಚೆಯ ಚಿತ್ರಗಳು ಚಿತ್ರಣಗೊಂಡಿವೆ.

**ಹಚ್ಚೆಯ ಸಾಮಗ್ರಿಗಳು:** ಸೂಜಿಯದಿಂಡು (ಚಕ್ರ), ಕಪ್ಪಿನ(ಒಣಮಸಿ)ಯ ಕುಡಿಕೆ ಚಿತ್ರ ಬರೆಯುವ ಕಡ್ಡಿ, ಹಚ್ಚೆಯ ನಕ್ಷೆ ಇರುವ ಪುಸ್ತಕ,[೮೯] ಮಸಿಯ ಚಿಕ್ಕ ಕುಡಿಕೆ ಸೂಚಿಗಳನ್ನು ಇಡುವ ಕುಡಿಕೆ, ಬಿದುರಿನ ಕೊಳವೆ, ಬಾಟಲ್(ಸೀಸ) ಇವೆಲ್ಲಾ ಸಾಮಗ್ರಿಗಳನ್ನು ಬಳಸುತ್ತಾರೆ.

**ಹಚ್ಚೆಯನ್ನು ಕುರಿತು ನಂಬಿಕೆಗಳು:** ೧. ಸತ್ತ ಮೇಲೆ ಹಚ್ಚೆ ಮಾತ್ರ ಜೊತೆಗೆ ಬರುತ್ತದೆ. ೨. ಹಚ್ಚೆ ಇದ್ದರೆ ಮಾಡಿದ ಅಡುಗೆ ಹುಲುಸು ಆಗುತ್ತದೆ. ೩. ಪೂರ್ವಜರು ಹಚ್ಚೆಯ ಚಿತ್ರಗಳ ಮೂಲಕ ಬಂದು ಕಾಪಾಡುತ್ತಾರೆ. ೪. ಮಾಟ, ಮಂತ್ರ ಮೈಗೆ ಹತ್ತುವುದಿಲ್ಲ. ೫. ವಿಷ ಏರುವುದಿಲ್ಲ. ೬.

ಮಕ್ಕಳಾಗುತ್ತವೆ. ೭. ಕೆಟ್ಟಕನಸುಗಳು ಬೀಳುವುದಿಲ್ಲ. ೮. ಮುತ್ತೈದೆಯ ಶಾಶ್ವತ ಸಂಕೇತ. ೯. ಹಚ್ಚೆ ಇದ್ದ ಹೆಣ್ಣು ಮಕ್ಕಳು ಮನೆಯ ಲಕ್ಷ್ಮಿ. ೧೦. ಹಚ್ಚೆ ಇದ್ದವರು ಮಾತ್ರ ಸ್ವರ್ಗಕ್ಕೆ ಹೋಗುತ್ತಾರೆ. ೧೧. ಎದೆಯ ಮೇಲೆ ಹಚ್ಚೆ ಇದ್ದರೆ ಪುಣ್ಯ ಬರುತ್ತದೆ.[೯೦]

**ಹಚ್ಚೆಯಿಂದ ಉಪಯೋಗಗಳು:** ೧. ಸ್ತ್ರೀಯರಿಗೆ ಗರ್ಭ ಪಾತವಾಗುತ್ತಿದ್ದರೆ (ಹೊಕ್ಕಳಿಗೆ ೩-೫ ಗುಂಡಿನ ಚುಕ್ಕೆಯ ಹಚ್ಚೆ). ೨. ಹೆಣ್ಣು ಮಕ್ಕಳಿಗೆ ಮಕ್ಕಳಾಗದಿದ್ದರೆ (ಹೊಟ್ಟೆಯ ಕೆಳಗಿನ ಎರಡೂ ಭಾಗದಲ್ಲಿ ಅಧಿಕ ಚಿಹ್ನೆಯ ಹಚ್ಚೆ. ೩. ಮೊಳಕಾಲಿನ ನರ ಸೆಳೆಯುತ್ತಿದ್ದರೆ. ೪. ಸರ್ಪಹುಣ್ಣಾಗಿದ್ದರೆ. ೫. ಅನ್ನ ಜೀರ್ಣವಾಗದಿದ್ದರೆ. ೬. ತೊನ್ನು ರೋಗನಿವಾರಣೆಗೆ. ೭. ಮುಖದಲ್ಲಿ ವಿಕೃತ ಮಚ್ಚೆಗಳಿದ್ದರೆ. ೮. ವಾತವಿದ್ದರೆ. ಹೀಗೆ ಹಲವಾರು ಕಾರಣಗಳಿಂದ ಹಚ್ಚೆ ಹಾಕಿಸಿಕೊಂಡು ರೋಗಗಳನ್ನು ನಿವಾರಣೆ ಮಾಡಿಕೊಳ್ಳಲು ಉಪಯೋಗಿಸಿಕೊಳ್ಳಲಾಗುತ್ತದೆ. ಇದು ಜನಪದ ವೈದ್ಯಕೀಯ ಚಿಕಿತ್ಸೆಯೆಂದು ಕರೆಯಲಾಗಿದೆ.

ಹಚ್ಚೆ ಹಿರಿಯರಿಂದ-ಕಿರಿಯರವರೆಗೆ ತಲತಲಾಂತರಗಳಿಂದ ಸೌಂದರ್ಯ ಹಾಗೂ ದೈವದ ಕಲ್ಪನೆಯ ನೆಲೆಯಲ್ಲಿ ಒಂದು ಮಾಧ್ಯಮವನ್ನಾಗಿ ಬಳಸಿಕೊಂಡು ಕೀರ್ತಿ ಭಾರತೀಯರಿಗೆ ಸಲ್ಲುತ್ತದೆ. ಅಪ್ಪಟ ಜಾನಪದ ಕಲೆಯಾದ ಹಚ್ಚೆ ನಶಿಸಿಹೋಗದಂತೆ ಲಂಬಾಣಿ ಜನಾಂಗ ಆಶ್ರಯ ನೀಡಿದೆ. ಈ ಕಲೆ ಭಾರತೀಯ ಸಂಸ್ಕೃತಿಗೆ ವಿಶಿಷ್ಠ ಅಂಗವೆನಿಸಿದೆ.

**೩. ನೆಲದ ಮೇಲಿನ ಚಿತ್ರವಿನ್ಯಾಸಗಳು:** 'ರಂಗ ಬರುತ್ತಾನೆಂದು ರಂಗೋಲಿ ನಾಹೊಯ್ದೆ ರಂಗ ಬರುತ್ತಾನೇ ಇಲ್ಲವೋ ಗೊತ್ತಿಲ್ಲ' ರಂಗೋಲಿಯನ್ನಂತೂ ಮನೆಯಬಾಗಿಲಲ್ಲಿ ಹಾಕುತ್ತಾರೆ. ಈ ರಂಗೋಲಿ ಭಾರತದ ಅತ್ಯಂತ ಪ್ರಾಚೀನವಾದ ವಿಶಿಷ್ಠ ಜಾನಪದ ಕಲೆ. ಇದು ಅಲಂಕರಣದ ಕಲೆ ಶೃಂಗಾರದ ಕಲೆ ಹಾಗೂ ಭಾರತೀಯ ಧರ್ಮ ಸಂಸ್ಕೃತಿಗಳ ತಾತ್ವಿಕ ನೆಲೆಯ ಕಲೆಯಾಗಿ ಬೆಳೆದುಕೊಂಡು ಬಂದಿದೆ.[೯೧] ಭಾರತೀಯ ಮಹಿಳೆಯರ ಪ್ರಮುಖ ಕಲೆಯೇ ರಂಗೋಲಿ ಇದು ಧಾರ್ಮಿಕ ಮಹತ್ವಮತ್ತು ಹಿನ್ನಲೆಗಳನ್ನು ಹೊಂದಿಕೊಂಡು ದೇಶದ ಉದ್ದಗಲಕ್ಕೂ ಹರಡಿಕೊಂಡಿದೆ. ಪ್ರದೇಶಕ್ಕೆ ಅನುಗುಣವಾಗಿ ಹಾಗೂ ಜಾತಿ-ಜನಾಂಗಕ್ಕೆ ಅನುಗುಣವಾಗಿ ಭಿನ್ನತೆ ಇದ್ದರೂ ಇದರ ಉದ್ದೇಶ ಒಂದೇ. ಇದು ವರ್ಣರಂಜಿತ ಕಲೆಗಳಲ್ಲಿ ಒಂದಾಗಿದೆ. ಬದುಕಿನ ಖುಷಿಯನ್ನು, ಸೌಭಾಗ್ಯ ಮಂಗಳಕರ ಪ್ರಸನ್ನತೆಯನ್ನು ಶುಭಸನ್ನಿವೇಶವನ್ನು ಹೇಳುವ ಲಾಲಿತ್ಯ ಪೂರ್ಣಕಲಾ ಕೌಶಲ್ಯವೇ ರಂಗವಲ್ಲಿ.[೯೨] ಈ ಕಲೆಯನ್ನು ತಮಿಳು ನಾಡಿನಲ್ಲಿ ಕೋಲಂ, ಆಂಧ್ರದಲ್ಲಿ ಮುಗ್ಗಲು, ಮರಾಠಿಯಲ್ಲಿ ರಂಗೋಲಿ ಗುಜರಾತದಲ್ಲಿ ಸಾಥ, ರಾಜಸ್ಥಾನದಲ್ಲಿ ಮಂಡನಾ ಎಂದು ಪ್ರಖ್ಯಾತಿ ಹೊಂದಿದೆ.[೯೩] ಹಲವು ಪ್ರದೇಶಗಳಲ್ಲಿ ರಂಗೋಲಿಗೆ ಹಲವು ನಾಮಗಳಿದ್ದರೂ ಈ ಕಲೆಯ ಮೂಲ ಆಶಯ ಮಾತ್ರ ಎಲ್ಲಾ ಪ್ರದೇಶಗಳಲ್ಲಿ ಒಂದೇ ಆಗಿದೆ.

ಕರ್ನಾಟಕದಲ್ಲಿ ರಂಗವಾಲಿ, ರಂಗವಲಿ, ರಂಗವಲ್ಲಿ, ರಂಗವಳಿ, ರಂಗವಾಲೆ, ರಂಗಾಲೆ, ರಂಗಾಹಾಕುವುದು, ಮುಂಡಲ ಬರೆಯುವುದು, ಶೇಡಿ ಬರೆಯುವುದು, ಜೋಕೋ ಬರೆಯುವುದು ಎಂದು ಹಲವು ಹೆಸರಿನಿಂದ ಕರೆಯುತ್ತಾರೆ.[೯೪] ಕಿಟೆಲ್ ಕೋಶದಲ್ಲಿ 'ಆರ್ನಮೆಂಟಲ್ ಲೈನ್ಸ್ ಅಂಡ್ ಫಿಗರ್ಸ್ ಡ್ರಾನ್ ಪಿತ್ ವೇರಿಯಸ್ ಆನ್‌ದ ಫ್ಲೋರ್, ದಿ ವಾಲ್ಸ್ ಇನ್‌ಫ್ರಂಟ್ ಆಫ್ ದಿ

ಹೌಸ್ ಆನ್‌ದ ಫ್ಲೋರ್ ಯಾನ್ ಐಡಲ್' ಎಂದು ಅರ್ಥೈಸಿದ್ದಾರೆ.[೯೫] ಶಿವರಾಮ ಕಾರಂತರು 'ಮನೆಯ ಮುಂದೆ ಬರೆಯುವ ಚಿತ್ರ ಕೆಲಸವೆಂದು ಹೇಳಿದ್ದಾರೆ.[೯೬]

**ಪ್ರಾಚೀನ:** ಮಾನವ ಬದುಕಿನಲ್ಲಿ ಚಿತ್ರಕಲೆಯ ಪ್ರವೇಶದೊಂದಿಗೆ ರಂಗೋಲಿ ಪ್ರವೇಶ ಪಡೆದಿದೆ. ಇದರ ಪ್ರಾಚೀನತೆ ಸುಮಾರು ೫೦೦೦ ವರ್ಷಗಳಷ್ಟು ಹಿಂದೆ ಎಳೆದು, ಪರಿಚಯಾತ್ಮಕ ಲೇಖನ ಬರೆದಿದ್ದಾರೆ.[೯೭] ಆದಿ ಮಾನವನು ಗವಿ, ಕಲ್ಲು ಬಂಡೆಗಳ ಮೇಲೆ ಚಿತ್ರಿಸಿದ್ದನ್ನು ನೋಡಿದರೆ ರಂಗೋಲಿಯ ಇತಿಹಾಸ ಪೂರ್ವದ ಕಾಲಕ್ಕೆ ಹೋಗುತ್ತದೆ.

**ರಚನೆ:** ರಂಗೋಲಿ ಹಿಟ್ಟನ್ನು ಪ್ರಾದೇಶಿಕವಾಗಿ ವಿವಿಧ ರೀತಿಯಲ್ಲಿ ತಯಾರಿಸುತ್ತಾರೆ. ರಂಗೋಲಿ ಹಿಟ್ಟನ್ನು ಉತ್ತರ ಕರ್ನಾಟಕದಲ್ಲಿ ಬೆಣಚು ಕಲ್ಲಿನಿಂದ ಕುಟ್ಟಿ ಸಿದ್ದ ಪಡಿಸುತ್ತಾರೆ. ಕೆಲವು ವಿಶೇಷ ಸಂದರ್ಭಗಳಲ್ಲಿ ರಂಗೋಲಿ ಅಕ್ಕಿಯ ಹಿಟ್ಟನ್ನು ಬಳಸುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ರಂಗೋಲಿ ಕಲ್ಲು ಸಿಗುತ್ತಿದ್ದು ಅದನ್ನು ಕುಟ್ಟಿ, ರಂಗೋಲಿ ಪುಡಿ ಸಂಗ್ರಹಿಸಿಕೊಳ್ಳುತ್ತಾರೆ.

**ರಂಗೋಲಿಯ ಸಾಮಗ್ರಿಗಳು:** ರಂಗೋಲಿ ಪುಡಿ, ಕುಂಕುಮ, ಅರಿಶಿಣ, ಸುಣ್ಣ, ಜೇಡಿಮಣ್ಣು, ಧಾನ್ಯಗಳು, ಹೂವುಗಳು, ಪತ್ರಿಗಳು, ವಿವಿಧ ವರ್ಣಗಳು, ಕುಂಚಗಳನ್ನು ರಂಗೋಲಿ ರಚಿಸಲು ಬಳಸುತ್ತಾರೆ.

ರಂಗೋಲಿಯ ಚಿತ್ರಗಳಲ್ಲಿನ ಪ್ರಕಾರಗಳು : ನಿತ್ಯದ ರಂಗೋಲಿ, ನಿರ್ದಿಷ್ಟವಾರದ ರಂಗೋಲಿ ತಿಂಗಳ ರಂಗೋಲಿ, ಚಾತುರ್ಮಾಸದ ರಂಗೋಲಿ, ದೀಕ್ಷಾ ಸಂದರ್ಭದಲ್ಲಿ ರಂಗೋಲಿ ದೇವರ ಮುಂದೆ ಹಾಕುವ ರಂಗೋಲಿ, ಹಬ್ಬದ ರಂಗೋಲಿ, ಮದುವೆಯ ರಂಗೋಲಿ ಹೀಗೆ ರಂಗೋಲಿಯಲ್ಲಿ ವೈವಿದ್ಯತೆಗಳನ್ನು ಕಾಣಬಹದು.

**ರಂಗೋಲಿಯನ್ನು ಕುರಿತು ನಂಬಿಕೆ ಹಾಗೂ ಉಪಯೋಗಗಳು**

೧. ರಂಗೋಲಿ ಹಾಕುವುದರಿಂದ ದೇವತೆಗಳು ಸದಾ ಮನೆಯಲ್ಲಿ ವಾಸಿಸುತ್ತಾರೆ. ೨. ರಂಗೋಲಿ ಹಾಕಿದರೆ ಮನೆಯಲ್ಲಿ ಶಾಂತಿ ಸೌಹಾರ್ದತೆಗಳು ನೆಲೆಸುತ್ತವೆ. ೩. ದೀಪಾವಳಿ ದಿನ ಮುಂಜಾನೆ ಬಲಿ ಚಕ್ರವರ್ತಿ ಬರುತ್ತಾನೆಂದು ಮನೆಯ ಮುಂದೆ ಕೊಪ್ಪೆಯ ಮೇಲೆ ಹೂವಿಟ್ಟು, ದೀಪ ಹತ್ತಿಸಿ ರಂಗೋಲಿ ಹಾಕಿ ಅಲಂಕರಿಸುತ್ತಾರೆ. ೪. ಹೊಸ್ತಿಲು ತುಂಬ ರಂಗೋಲಿ ಎಳೆಯಬಾರದು ಬರೆದರೆ ಹೆಣ್ಣು ಹುಟ್ಟುತ್ತವೆ.[೯೮] ೫. ನೀರಿನಿಂದ ರಂಗೋಲಿ ಹಾಕಿದರೆ ಕಷ್ಟ ಬರುತ್ತದೆ. ೬. ಹಬ್ಬದಲ್ಲಿ ಹಾಕಿದ್ದ ರಂಗೋಲಿಯನ್ನು ಅಳಸಿ ಪುನಃ ಹಾಕಬಾರದು. ಹೀಗೆ ರಂಗೋಲಿ ಕೇವಲ ಸೌಂದರ್ಯಕ್ಕಾಗಿ ಅಲ್ಲ. ಮನರಂಜನೆಗಾಗಿಯೂ ಅಲ್ಲ, ಇದು ಕಟ್ಟಪ್ಪಣೆ, ಸ್ತ್ರೀಯರ ಮನೋಭಾವದ ಚಿತ್ತ–ಚಿತ್ತಾರಗಳನ್ನು ವ್ಯಕ್ತ ಪಡಿಸುವ ಮಾಧ್ಯಮವಾಗಿದೆ.

**ಕಾಮಲಾಪುರ ಗ್ರಾಮದ ಗ್ರಾಮದೇವತೆ ಅದರ ವೈಶಿಷ್ಟ್ಯತೆ:** ಗ್ರಾಮದೇವತೆ ಅಥವಾ ಮಾತೃದೇವತೆಯ ಆರಾಧನೆ, ಇದರ ಮೂಲ ಗುರುತಿಸುವುದು ಕಷ್ಟ ಸಾಧ್ಯ. ಬಹುಶಃ ಆರ್ಯೇತರ ಮಾತೃಪ್ರಧಾನ ವರ್ಗದವರಿಂದ ಈ ಪದ್ದತಿ ಉಗಮ ಪಡೆದು ಇತರರಲ್ಲಿ ಪ್ರಸಾರ ಪಡೆದಿರಬೇಕು. ವೇದದಲ್ಲಿ ಬರುವ 'ಅಂಬ' ಎಂಬ ಪದವು 'ಅಮ್ಮ' ನಿಂದ ನಿಷ್ಪತ್ತಿಯಾಗಿದೆ ಎಂಬ ಅಭಿಪ್ರಾಯವಿದೆ.[೯೯]

ಪಂಚಭೂತಗಳಲ್ಲಿನ ಭೂಮಿಯನ್ನು ಭೂಮಿತಾಯಿ ಎಂದು ಬಳಸಲ್ಪಟ್ಟಿದೆ. ಇದೇ ಮುಂದುವರೆದು 'ಅಮ್ಮ' ಎಂಬ ಪದವು ಇತರ ಪಂಚಭೂತಗಳಿಗೂ ಸೇರ್ಪಡೆಯಾಗಿರಬೇಕು. ಬಿಸಿಲಮ್ಮ, ಗಾಳಿಯಮ್ಮ, ಮಾರಿಯಮ್ಮ, ಕಾಳಮ್ಮ ಮುಂತಾದವು. ಅಂತಯೇ ಸ್ತ್ರೀದೈವಗಳಲ್ಲಿ ಶಕ್ತಿಯ ಪ್ರತೀಕವಾಗಿ ಬೆಳವಣಿಗೆಯಾಗುತ್ತಾ ಬಂದಿವೆ. ಈ ರೀತಿಯ ಮಾತೆಯನ್ನು ಆರಾಧಿಸುವ ಧರ್ಮಗಳು ಬಹುಶಃ ಮಾನವ ಪೂರ್ವ ಚರಿತ್ರೆಯ ಪ್ರಾರಂಬದಲ್ಲಿಯೇ ಇದ್ದಿರಬೇಕು. ಈ ಮಾತೃಪೂಜೆಯು ಸಪ್ತ ಮಾತೃಕೆಯ ಹೆಸರಿನಲ್ಲಿ ಬೆಳೆದು ಬರತೊಡಗಿತು. ಅವುಗಳಲ್ಲಿ ದುರ್ಗಿ, ಚೌಡಿ, ಮಾರಿ, ಯಕ್ಷಿಣಿ ಎಂಬ ಹೆಸರು ಬಳಕೆಯಗಿ ಇವುಗಳಿಗೆ ಅಮ್ಮ ಎಂಬ ಪದ ಸೇರಿ ದುರ್ಗಮ್ಮ, ಚೌಡಮ್ಮ ಮಾರೆಮ್ಮ ಊರಮ್ಮ ಅಥವಾ ಉಡಚಲಮ್ಮ ಎಂಬುದಾಗಿ ಬಳಕೆಯಾಗಿದೆ. ಕಾಮಲಾಪುರ ಪರಿಸರದಲ್ಲಿ ಊರಮ್ಮ, ಪಟ್ಟಣದ ಎಲ್ಲಮ್ಮ, ಕಾಳಮ್ಮ ಹುಲಿಗೆಮ್ಮ, ಮಾರೆಮ್ಮ ಹೆಸರುಗಳು ಬೇರೆಯಾದರೂ ಒಂದೇ ದೈವವಾಗಿ ಗುರಿತಿಸತೊಡಗುತ್ತಾರೆ. ಹಿಂದೆ ತಿಳಿಸಿದಂತೆ ದ್ಯಾವಮ್ಮ ಮುರಗಮ್ಮ, –ಎಲ್ಲಮ್ಮ, ಕಾಳಮ್ಮ ಚೌಡಮ್ಮ, ಪಾರ್ವತಿ, ಪರಂಪರೆಗೆ ಸೇರಿದ ಗ್ರಾಮ ದೈವಿಗಳಾಗಿದ್ದಾರೆ. ಇಲ್ಲಿಯ ಜನರಿಗೆ ಸ್ತ್ರೀದೈವಗಳೆಂದರೆ ಉಡಚಮ್ಮ, ಊರಮ್ಮನನ್ನೇ ಪ್ರಮುಖ ಗ್ರಾಮದೈವಗಳೆಂದು ಪೂಜಿಸುತ್ತಾರೆ. ಇದಲ್ಲದೆ ಬನ್ನಿಮಹಾಂಕಾಳಿ, ಹುಲಿಗೆಮ್ಮ, ನರೆಗಲ್ಲಮ್ಮ, ಮುಂತಾದ ದೈವಗಳು ಸಮುದಾಯ ದೈವಗಳಾಗಿ ಕಾಣಸಿಗುತ್ತವೆ. ಜನಪದ ಬದುಕಿನಲ್ಲಿ ಅನಾದಿ ಕಾಲದಿಂದಲೂ ಹಾಸು ಹೊಕ್ಕಾಗಿ ಗ್ರಾಮೀಣ ಜೀವನದಲ್ಲಿ ಬೆರೆತು ಬಂದಿರುವ ಈ ಗ್ರಾಮ ದೇವತೆಗಳು ಒಂದು ಅವಿಭಾಜ್ಯ ಅಂಗವಾಗಿ ಕಾರ್ಯ ನಿರ್ವಹಿಸುತ್ತಲಿವೆ. ಇಡೀ ಗ್ರಾಮದ ಐಕ್ಯತೆಯ ಸಾಮರಸ್ಯದ ಜೀವಾಳವೇ ಈ ಗ್ರಾಮ ದೇವತೆ.[೧೦೦]

**ಊರಮ್ಮ:** ಕಾಮಲಾಪುರ ಗ್ರಾಮ ದೈವಗಳಲ್ಲಿ ಊರಮ್ಮ ದೈವವು ಒಂದು ಸ್ತ್ರೀದೈವವಾಗಿದೆ. ಎಲ್ಲಾ ಗ್ರಾಮಗಳ ಸಾಮಾನ್ಯವಾಗಿ ಗ್ರಾಮ ದೇವತೆಗಳು ಇರುತ್ತವೆ. 'ಊರು ಹುಟ್ಟಿದ ಕ್ಷಣವೇ ಊರಮ್ಮ ಹುಟ್ಟಿದವಳೆಂಬ' ಪ್ರತೀತಿಯೂ ಇದೆ.ಈಕೆ ಊರಿನ ಜನರನ್ನು ಸಲಹುವ ಗ್ರಾಮದ ಅಧಿದೇವತೆಯಾದರೂ ಜನ ಜಾನುವಾರುಗಳಿಗೆ ರೋಗ–ಹೋಗಿಸುವ ದೇವಿ ಎಂಬ ನಂಬಿಕೆ ಜಾನಪದರಲ್ಲಿ ಇದೆ. ಪ್ರತಿಯೊಂದು ಗ್ರಾಮದಲ್ಲಿ ಊರಮ್ಮ ಇರುತ್ತಾಳೆ. ಈ ದೈವವನ್ನು ಊರ ಮಾರೆಮ್ಮ. ಮಾರೆಮ್ಮ–ಗಾಳೆಮ್ಮ ಉಗ್ರದೇವತೆ ಎಂತಲೂ ಕರೆಯುವದು ವಾಡಿಕೆ. ಈ ದೇವಿಗೆ ವಿಶೇಷವಾಗಿ ಮಂಗಳವಾರ, ಶುಕ್ರವಾರ ಪೂಜೆ ಮಾಡಲಾಗುವುದು ಅಲ್ಲದೆ ದಸರಾದಲ್ಲಿ ಈ ದೇವಿಗೆ ವಿವಿಧ ತರತರಹದ ಪೂಜೆಯನ್ನು ಮಾಡುವರು ಒಂಬತ್ತನೇ ದಿನ ದೇವಿ ಪುರಾಣ ಓದಿ ಮುಗಿಸಿ ಮಂಗಳಾರತಿ, ಮಾಡಿ ದೇವಿಯ ಹತ್ತಿರ ಬನ್ನಿ ಮುಡಿದ ನಂತರ ಊರವರೆಲ್ಲರೂ ಬನ್ನಿ ಮುಡಿಯುತ್ತಾರೆ. ಇಷ್ಟೇ ಅಲ್ಲದೆ ಯುಗಾದಿ, ದೀಪಾವಳಿ,ಹುಣ್ಣಿಮೆ ಅಮವಾಸ್ಯೆಗಳಲ್ಲೂ ವಿಶೇಷ ಪೂಜೆ ಮಾಡುತ್ತಾರೆ. ಶ್ಯಾನಭೋಗ ಹಾಗೂ ಕುಲಕರ್ಣಿಮನೆತನದವರು ಹಬ್ಬ–ಹರಿದಿನಗಳಲ್ಲಿ ತಪ್ಪದೇಹೋಗಿ ಇಲ್ಲಿ ಪೂಜೆ ಮಾಡುತ್ತಾರೆ.

ಊರನ್ನು ನೋಡಿಕೊಂಡು ಹೋಗುವ ಈ ದೇವತೆಗೆ ಊರಮ್ಮ ಎಂದು ಕರೆಯುತ್ತಾರೆ. ಊರಮ್ಮ ಒಂದು ಕುಟುಂಬ ಸಮುದಾಯಕ್ಕೆ ಸಂಬಂಧ ಪಟ್ಟವಳಾಗಿರದೇ ಇಡೀ ಊರಿನ ಸಮುದಾಯಕ್ಕೆ ಸಂಬಂಧಿಸಿದವಳಾಗಿರುವಳು ಬಿತ್ತುವಾಗ, ಬೆಳೆಬಂದಾಗ, ಬೆಳೆ ಕೊಯ್ಯುವಾಗ ಈ

ದೇವಿಯ ಪೂಜೆಯನ್ನು ಊರಿನ ಜನರೆಲ್ಲಾ ಸೇರಿ ಮಾಡುವರು. ಮೇಲ್ವರ್ಗದವರು ಬಿತ್ತುವ ಕೂರಿಗೆಗೆ ರೇಷ್ಮೆಸೀರೆ ಉಡಿಸುವರು, ಕುಬಸದ ಕಣ ಹಾಕುವರು ದಂಡೆ ಕಟ್ಟುವರು. ಚಂದ್ರ, ಕುಂಕುಮ, ಭಂಡಾರ ಹಚ್ಚುವರು, ಬಂಗಾರ ಬೆಳ್ಳಿಯ ಆಭರಣಗಳನ್ನು ಹಾಕುವರು ಇವುಗಳ ಜೊತೆಗೆ ಸೀರೆಯಲ್ಲಿ ಏಳು ಹಿಡಿ ಅಕ್ಕಿ, ಗೋದಿ,ಏಳು ಉತ್ತತ್ತಿ, ಏಳು ಕೊಬ್ಬರಿಬಟ್ಟಲು ಹಾಕಿ ಕಟ್ಟುವರು. ಕೆಳವರ್ಗದವರಲ್ಲಿ ಈ ಸಂಪ್ರದಾಯವಿಲ್ಲ. ಊರಮ್ಮ ಉಗ್ರವಾದ ರೂಪ ತೋರಿಸುವಾಗ ಕೆಂಪು ಸೀರೆ ಉಡಿಸುವರು, ದಂಡೆ ಕಟ್ಟುವರು, ಅರಿಶಿನ-ಕುಂಕುಮ, ಭಂಡಾರ, ಬೆಳೆ, ಮುತ್ತುಗಳು ಇದರ ಜೊತೆಗೆ ಬಂಗಾರದ ಆಭರಣಗಳಿಂದ ಸಿಂಗರಿಸುವರು. ಉಡಿಯಲ್ಲಿ ಉಡಿಯಕ್ಕಿಯನ್ನು ಕಟ್ಟುವರು. ದೇವಿಯ ಪ್ರಮುಖ ವಾರವಾದ ಶುಕ್ರವಾರ ದಿವಸ ಇದನ್ನಾಚರಿಸುತ್ತ ಕುರಿಬಲಿ ಕೊಡುವರು. ಪ್ರಸ್ತುತ ಬಲಿಕಾರ್ಯ ಕ್ರಮ ನಿಂತಿದೆ. ರೈತರು ಬಿತ್ತುವ ಬೀಜದಲ್ಲಿ ದೇವಿಯ ಭಂಡಾರ ಕೂಡಿಸುವರು ಇದರಿಂದ ಒಳ್ಳೆಯ ಬೆಳೆ ಬರುವುದೆಂದು ಈ ಗ್ರಾಮೀಣ ಜನರ ನಂಬಿಕೆ.

ಚಿಕ್ಕ ಮಕ್ಕಳಿಗೆ ಸೀತಾಳ, ಸಿಡುಬು,ದಡಾರಗಳಾಗುವುದು ಸಹಜ. ಈ ಹಿಂದೆ ಊರಿಗೆ ಪ್ಲೇಗು, ಕಾಲರು ಬಂದು ಅನೇಕ ಜನ ಬಲಿಯಾಗುತ್ತಿದ್ದರು. ಈಗ ಈ ಊರಿನ ಜನ ಗುಡಿಗೆ ಹೋಗಿ ಸುಂಕ ನೀಡಿ ಮೊಸರನ್ನು,ಸಜ್ಜಕ, ಉಪ್ಪು, ಉಳ್ಳಾಗಡ್ಡಿ, ಬದನೆಕಾಯಿ, ಕಾಯಿ-ಹಣ್ಣುಗಳನ್ನು ದೇವಿಗೆ ನೈವೇದ್ಯ ಕೊಡುವ ಪದ್ಧತಿ ಇದೆ ಹೊರತು ಆಸ್ಪತ್ರೆಗೆ ಹೋಗುವುದಿಲ್ಲ. ಈಗಲೂ ಈ ಪದ್ಧತಿ ಪ್ರಚಲಿತವಿದೆ. ಇದರಿಂದ ಮತ್ತೊಮ್ಮೆ ಮಕ್ಕಳಿಗೆ ಅಮ್ಮ ಬರುವುದಿಲ್ಲ ಎಂಬ ನಂಬಿಕೆ ಕಾಮಲಾಪುರ ಗ್ರಾಮದಲ್ಲಿ ಈಗಲೂ ಇದೆ. ಇದರೊಂದಿಗೆ ಅಮ್ಮ ಬಂದ ದಿನದಂದು ಏಳು ರೀತಿಯ ಧಾನ್ಯವನ್ನು ಬೇಯಿಸಿ, ಇತರೆ ಮಕ್ಕಳಿಗೆ ನೀಡುವರು.

ಒಟ್ಟಾರೆ ಗ್ರಾಮ ದೇವತೆ ಊರಿನ ಎಲ್ಲಾ ಜನರಿಗೆ ಮನಸ್ಸಿಗೆ ಸಮಾಧಾನ, ಸುಖನೀಡುವ 'ದೇವತೆ' ಎಂಬ ನಂಬಿಕೆ. ಪ್ರೀತಿ-ದಯೆ ಕರುಣೆ ಕಲಿಸಿ ಬೆಳೆಸುವ ಗುಣ ಕೃರ್ತಳು ಗ್ರಾಮದೇವತೆ. ಇವಳು ಊರನ್ನು ನೋಡಿಕೊಳ್ಳತ್ತಾ ಅವರ ಜೊತೆಗೆ ಬದುಕಿನಲ್ಲಿ ಅಪಾರ ಸಂಭ್ರಮ ಸಂತೋಷ, ಭಕ್ತಿಯ ತಲ್ಲೀನತೆ ತರುವ ದೇವತೆಯಾಗಿದೆ. ಗ್ರಾಮದೇವತೆ ಅನುಭಾವದ ಕಡಲು. ಕಾರಣ ಎಲ್ಲಾ ಧರ್ಮದವರನ್ನು ಸ್ವೀಕರಿಸುವವಳು ಹಾಗೂ ಲೋಕದ ಹಿತವನ್ನು ಬಯಸುವವಳು. ಗ್ರಾಮದೇವತೆ ಕೇವಲ ಧಾರ್ಮಿಕ ಆಚರಣೆಯ ಕೇಂದ್ರ ಬಿಂದು ಮಾತ್ರವಲ್ಲ, ಇವಳು ಗ್ರಾಮೀಣ ಜೀವನದ ಹತ್ತು-ಹಲವು ಮುಖಗಳನ್ನು ತೆರೆದು ತೋರಿಸುವ ಮಾತೃದೇವತೆಯೂ, ಜಾನಪದ ಪರಂಪರೆಯಲ್ಲಂತೂ ಇವಳು ಆದಿ ಶಕ್ತಿ ಸ್ವರೂಪಿಣಿಯಾಗಿ, ಆತ್ಮೀಯ ದೈವವಾಗಿ ಮೆರೆದಿದ್ದಾಳೆ.

**ಜನಪದರ ಉಡುಗೆ-ತೊಡುಗೆಗಳು:** ಅಲಂಕಾರ ಕಲೆ ಮಾನವನ ಸಹಜ ಪ್ರಕಿಯೆಗಳಲ್ಲಿ ಒಂದು. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವೈವಿಧ್ಯಮಯ ಅಲಂಕರಣ ಬಗೆಯನ್ನು ಕಾಣಬಹುದು ಒಂದು ಪ್ರದೇಶದ ವಾಯುಗುಣ ಆ ಪ್ರದೇಶದ ಉಡುಗೆಗಳ ಮೇಲೂ ಮಹತ್ವದ ಪಾತ್ರವಹಿಸುತ್ತವೆ. ಉಡುಗೆ-ತೊಡುಗೆ ಎಂದೊಡನೆ ನಾವುಗಳು ಧರಿಸುವ ಮತ್ತು ಹಾಕಿಕೊಳ್ಳವ ವಸ್ತುಗಳೆಂದು ಗ್ರಹಿಸುವುದು ಸೂಕ್ತ. ತೊಡುಗೆ ದೇಹದ ಆಭರಣಗಳಿಗೆ ಸಂಬಂಧಸಿದ್ದಾಗಿದೆ. ಆದಿ ಮಾನವನ ಸೌಂದರ್ಯ ಕಲ್ಪನೆಯನ್ನು ಅರ್ಥ ಮಾಡಿಕೊಳ್ಳಲು ಆತ ತೊಡಲು ತಯಾರಿಸಿಕೊಂಡ ಶಂಖದ ಬಳೆಗಳು,

ಮೂಳೆಯ ಮಣಿಗಳು, ಮಣ್ಣಿನ ಮಣಿಸರ, ಕಿವಿಯ ಮಣ್ಣಿನ ಸುಟ್ಟು ಆಭರಣಗಳು ದೊರಕುತ್ತವೆ. ಅಂದಿನಿಂದ ಇಂದಿನವರೆಗೂ ಮಾನವನ ತೊಡುಗೆಗಳಲ್ಲಿ ಮಹತ್ತರವಾದ ಬದಲಾವಣೆಗಳು ಉಂಟಾಗಿವೆ.

**ಉಡುಗೆಗಳು:** ದೇಹವನ್ನು ಮಳೆ, ಗಾಳಿ ಬಿಸಿಲಿನಿಂದ ಸಂರಕ್ಷಿಸಲು ಮಾನವ ಬಳಸುವ ವಸ್ತುಗಳೇ ಉಡುಗೆಗಳು.[೧೦೧] ಮಾನವ ಮೊದಲು ಬಳಸಿದ ಪ್ರಾಣಿಗಳ ಚರ್ಮ, ಮರದ ತೊಗಟೆ, ಎಲೆಗಳಿಂದ ಮಾಡಿದ ಹೊದಿಗೆ ವಸ್ತುಗಳನ್ನು ತನ್ನ ದೇಹದ ರಕ್ಷಣೆಗೆಂದು ಬಳಸುತ್ತಿದ್ದ ಕಾಲಾನಂತರದಲ್ಲಿ ಆತನ ಬೌದ್ಧಿಕ ಬೆಳವಣಿಗೆ ವೃದ್ಧಿಸಿದಂತೆ ಬದಲಾವಣೆ ಉಂಟಾಗಿ ಇಂದಿನ ಆಧುನಿಕ ಜಗತ್ತಿಗೆ ಕಾಲಿಟ್ಟು ಉಡುಗೆ ಕ್ಷೇತ್ರದಲ್ಲಿ ಮಹತ್ವದ ಕ್ರಾಂತಿಯನ್ನೇ ಉಂಟು ಮಾಡಿದ್ದಾನೆ. ಉಡುಗೆಗಳು, ವಯಸ್ಸಿನ ಸೂಚಕ, ಜಾತಿ ಸೂಚಕ, ಧರ್ಮ ಸೂಚಕ, ಸಮಾಜದ ವ್ಯಕ್ತಿಗಳ ವೃತ್ತಿ ಸೂಚಕ, ಪದವಿ, ಸ್ಥಾನ–ಮಾನಗಳನ್ನು ಸೂಚಿಸುವ ಮಾಧ್ಯಮಗಳಾಗಿವೆ. ಉದಾ: ಕೃಷಿ–ಕಾರ್ಮಿಕ, ಪಶುಪಾಲಕ, ಸಮುದಾಯವೊಂದರ ಮುಖ್ಯಸ್ಥ, ರಾಜ, ಮಂತ್ರಿ, ಸೇನಾಪತಿ, ರಾಜಪರಿವಾರ, ದಳಪತಿ, ಪಂಡಿತ, ಪುರೋಹಿತ, ಆಚಾರ್ಯ, ಸನ್ಯಾಸಿ, ಸಂತ, ಋಷಿ ಮುನಿಗಳು, ಸೈನಿಕರು, ಸ್ತ್ರೀಯರು ಮಕ್ಕಳು, ವೃದ್ದರು ಇತ್ಯಾದಿಯಾಗಿ ಒಂದು ಪ್ರದೇಶದಲ್ಲೇ ವಾಸಿಸುವ ಜನ ಸಮುದಾಯಗಳಲ್ಲಿ ಉಡುಗೆಗಳಲ್ಲಿ ವೈವಿಧ್ಯತೆಯನ್ನು ಕಾಣಬಹುದು. ಉಡುಗೆಗಳು ವ್ಯಕ್ತಿಗಳ ಕೆಲಸ ಹಾಗೂ ಜೀವನ ವಿಧಾನಗಳನ್ನು ಗಮನದಲ್ಲಿಟ್ಟುಕೊಂಡು ತಯಾರಾಗುತ್ತವೆ. ಉದಾ: ಬುಡಕಟ್ಟು ಜನಾಂಗಗಳಲ್ಲಿ ಗುರುತಿಸಬಹುದು. ಜೇನು ಕೀಳುವ ಜೇನು ಕುರುಬರು ಅಥವಾ ಸೋಲಿಗರು, ತಾವು ಮಾಡಿದ ಕೆಲಸಕ್ಕೆ ಅನುಕೂಲಕವಾದ ಉಡುಗೆಯನ್ನು ಧರಿಸುತ್ತಾರೆ. ಸೈನಿಕ ತನ್ನ ರಕ್ಷಣೆಗೆ ಬೇಕಾದ ಭುಜಕೀರ್ತಿ, ಮೊಣಕೈಕವಚ, ಎದೆಗವಚ, ಕಾಲುಪಟ್ಟಿ, ಉಡುಗೆಗಳನ್ನು ಹೊಂದಲೇಬೇಕಾಗುತ್ತದೆ. ಹೀಗೆ ಉಡುಗೆಗಳು ವ್ಯಕ್ತಿಯ ವ್ಯಕ್ತಿತ್ವವನ್ನು ಗುರುತಿಸುವಲ್ಲಿ, ಮಹತ್ವದ ಪಾತ್ರವಹಿಸುತ್ತವೆ. ಅಲ್ಲದೆ ಉಡುಗೆಗಳು ಒಂದು ಕಾಲಗಟ್ಟದ ಹಲವಾರು ಸಾಂಸ್ಕೃತಿಕ ವಿಷಯಗಳನ್ನು ಪ್ರತಿಬಿಂಬಿಸುವಲ್ಲಿ ಸಹಾಯಕವಾಗುತ್ತವೆ. ವೇದಗಳ ಕಾಲದಲ್ಲಿ ಸ್ತ್ರೀಯರು ಸೀರೆಯನ್ನು ನಾಭಿಯ ಕೆಳಗೆ ಧರಿಸುತ್ತಿದ್ದರೆಂದು ಬಣ್ಣಿಸಲಾಗಿದೆ.[೧೦೨] ವಿಜಯನಗರದ ಅರಸರ ಆಳ್ವಿಕೆಯ ಕಾಲಕ್ಕೆ ಇವರು ಸುತ್ತಮುತ್ತಲಿನ ಪ್ರದೇಶದಲ್ಲಿ ಜನರ ಉಡುಗೆ ತೊಡುಗೆಗಳ ಬಗೆಗೆ ವಿದೇಶಿ ಪ್ರವಾಸಿಗರ ದಿನಚರಿಯಲ್ಲಿ ಮಾಹಿತಿಗಳಿಂದಲೂ ಸಹಾಯಕವಾಗುತ್ತವೆ. ನಂಜುಂಡಕವಿಯ 'ರಾಮನಾಥ ಚರಿತೆ' ಅಂದಿನ ಕಾಲದ ಜನರ ವೇಷ ಭೂಷಣದ ಬಗೆಗೆ ಹೆಚ್ಚಿನ ಮಾಹಿತಿ ಒದಗಿಸುತ್ತದೆ. ಗಂಗಾದೇವಿಯ 'ಮಧುರ ವಿಜಯ' ಕೃಷ್ಣದೇವರಾಯನ ಅಮುಕ್ತ ಮೌಲ್ಯ, ಕನಕದಾಸ ಮೋಹನತರಂಗಿಣಿ' ಈ ದಿಸೆಯಲ್ಲಿ ಮಹತ್ವದ ಕೃತಿಗಳೆನಿಸುತ್ತವೆ.[೧೦೩] ವಿಜಯನಗರ ಕಾಲದಲ್ಲಿ ಮಹಾಕೂರ್ಪಸ ಅಂದರೆ ನಿಲುವಂಗಿ, ಕುಲಾಮಿ, ರುಮಾಲು, ಪಾದಗಳವರೆಗೂ ಚಲ್ಲಣಗಳು ಹಾಗೂ ಉತ್ತರೀಯ ನಡುಕಟ್ಟುಗಳು, ರಾಜಸಭೋಚಿತ ವೇಷವಾಗಿದ್ದವು ಎಂಬುದಾಗಿ ತಿಳಿದು ಬರುತ್ತದೆ. ಪುರಂದರ ದಾಸರ ಕೀರ್ತನೆಯೊಂದರಲ್ಲಿ ಪುರುಷರ ಉಡುಗೆಯ ಚಿತ್ರಣವನ್ನು ಈ ರೀತಿಯಾಗಿ ವರ್ಣಿಸಲಾಗಿದೆ.

ಹರಿ ಕರುಣವೆ ಅಂಗಿ
ಗುರುಕರುಣವೆ ಮುಂಡಾಸು
ಹರಿದಾಸರದಯವೆಂಬೊವಲ್ಲಿ[೧೦೪]

ಅಂಗಿಯನ್ನು ಧರಿಸಿಕೊಂಡು, ಅದರ ಮೇಲೆ ವಲ್ಲಿಯನ್ನು ಹೊದ್ದುಕೊಂಡು, ತಲೆಗೆ(ಮಂಡಾಸು) ರುಮಾಲು ಧರಿಸಿರುವ ವ್ಯಕ್ತಿಯ ಚಿತ್ರಣ ಈ ಕೀರ್ತನೆಯಿಂದ ಅರಿಯಬಹುದು. ವೈವಿಧ್ಯಮಯವಾದ

ಉಡುಗೆ ತೊಡುಗೆ ಪಟ್ಟಾಭಿರಾಮ, ಹಜಾರರಾಮ, ಚಂದ್ರಶೇಖರ ದೇವಾಲಯಗಳ ಸ್ತಂಭದ ಮೇಲಿನ ಉಬ್ಬು ಶಿಲ್ಪಗಳಲ್ಲೂ ಹಾಗೂ ದೇವಾಲಯಗಳ ಹೊರ ಭಿತ್ತಿಯ ಮೇಲಿನ ಉಬ್ಬು ಶಿಲ್ಪಗಳಲ್ಲೂ ಸಹ ಕಂಡು ಬರುತ್ತವೆ. ಅಂದಿನ ವಿಜಯನಗರಕ್ಕೆ ವ್ಯಾಪಾರಕ್ಕಾಗಿ ಬಂದಿದ್ದ ಅರಬ್ ಪರ್ಷಿಯಾ ಹಾಗೂ ಯೂರೋಪ್ ದೇಶಗಳ ವರ್ತಕರ ಶಿಲ್ಪಗಳು ಸಹ ವಿದೇಶಿ ಪ್ರವಾಸಿಗರ ಉಡುಗೆ-ತೊಡುಗೆಗಳ ಬಗೆಗೆ ತಿಳಿಸುತ್ತವೆ. ಉದಾ: ಪ್ರಾಚ್ಯ ವಸ್ತು ಸಂಗ್ರಹಾಲಯದಲ್ಲಿರುವ ವಿದೇಶಿ ಪ್ರವಾಸಿಗರ ಶಿಲ್ಪಗಳು ಈ ಹೇಳಿಕೆ ಸಾಕ್ಷಾಧಾರಗಳಂತಿವೆ. ಕನಕದಾಸರು ಸಹ ತಮ್ಮ ಕೃತಿಯಲ್ಲಿ ವಿಜಯನಗರ ಜನ ಜೀವನದ ವಿಚಾರಗಳ ಬಗೆಗೆ ತಿಳಿಸುತ್ತಾ 'ಉಟ್ಟ ಧೋತ್ರದ ಬಳಲು ಗೆಚ್ಚೆಯ' ಎಂಬುದಾಗಿ ಹೇಳುತ್ತಾ, ಕಚ್ಚೆ ಹರೆಧೋತ್ರ ಉಡುವರು ಮೈಮೇಲೆ ಹೊದೆಯುವ ಬಟ್ಟೆ, ಸೊಂಟಕ್ಕೆ ಕಾಸೆಕಟ್ಟುವರು, ತಲೆಯ ಮೇಲೆ ಟೋಪಿ ಇಲ್ಲವೆ ಕುಲಾಯಿ ಹಾಕುವರು ಎಂಬುದಾಗಿ ತಿಳಿಸುತ್ತಾರೆ.

ವಿದೇಶಿಯರು ವಿಜಯನಗರ ಸಾಮ್ರಾಜ್ಯದ ಸಂಬಂಧ ಪಟ್ಟ ಜನ-ಜೀವನದ ಬಗ್ಗೆ ತಾವು ಕಂಡ ವಿವಿಧ ಜನರ ಉಡಿಗೆ ತೊಡುಗೆಗಳ ಕುರಿತು ತಿಳಿಸುತ್ತಾರೆ. ಅದರಲ್ಲೂ ಲಂಗೋಟಿಯ ಬಗ್ಗೆ ಹೆಚ್ಚಾಗಿ ಬಗೆಯ ಉಲ್ಲೇಖಿಸಲಾಗಿದೆ. ವಿಜಯನಗರ ಕಾಲಕ್ಕೆ ಬಂದಿದ್ದ ಅಬ್ದುಲ್ ರಜಾಕನು ಕಲ್ಲಿಕೋಟೆಯ ಜನರ ವಸ್ತ್ರದ ಬಗೆಗೆ ಹೇಳುತ್ತಾ 'ಆದೇಶದ ಬೆತ್ತಲೆ ಕರಿಯರನ್ನು ಕಂಡೆ ಇವರು ಲಂಗೋಟವೆಂಬ ಎರಡು ಚೂರು ಬಟ್ಟೆಯನ್ನು ಬಿಟ್ಟು ಮತ್ಯಾವ ಉಡುಪನ್ನು ಧರಿಸುವುದಿಲ್ಲ' ಎಂಬುದಾಗಿ ಉಲ್ಲೇಖಿಸುತ್ತಾನೆ.[೧೦೫] ಸಮುದ್ರ ತೀರ ಪ್ರದೇಶದ ಜನರ ಉಡುಗೆ ಇದಾಗಿರುವುದರಿಂದ ಸಮುದ್ರದ ಮೀನುಗಾರರ ನೌಕೆನಡೆಸುವವರ ಉಡುಗೆ ಕ್ರಮವೆಂಬುದು ಸತ್ಯ. ವಿಜಯನಗರದ ಸ್ಮಾರಕಗಳಲ್ಲಿ ಕಂಡು ಬರುವ ಹಲವಾರು ಉಬ್ಬು ಶಿಲ್ಪಗಳು ಆಕಾಲದ ಜನ-ಜೀವನದ ಉಡುಗೆ ತೊಡುಗೆಗಳನ್ನು ಬಿಂಬಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಇಲ್ಲಿಯ ಜನರ ಉಡುಗೆ ತೊಡುಗೆಗಳನ್ನು ಅಧ್ಯಯನದ ದೃಷ್ಠಿಯಿಂದ ಈ ರೀತಿಯಾಗಿ ವರ್ಗೀಕರಿಸಲಾಗಿದೆ.

೧. ಪೌರಾಣಿಕ ವ್ಯಕ್ತಿಗಳ ಉಡುಗೆಗಳು

೨. ರಾಜರು ಹಾಗೂ ಅವರ ಪರಿವಾರದವರ ಉಡುಗೆಗಳು

೩. ಜನಸಾಮಾನ್ಯರ ಉಡುಗೆಗಳು.

**೧. ಪೌರಾಣಿಕ ವ್ಯಕ್ತಿಗಳ ಉಡುಗೆಗಳು:** ಹಂಪಿಯ ಸ್ಮಾರಕಗಳಲ್ಲಿ ಹೆಚ್ಚಾಗಿ ಕಂಡು ಬರುವ ಪೌರಾಣಿಕ ವ್ಯಕ್ತಿಗಳ ಉಬ್ಬು ಶಿಲ್ಪಗಳಲ್ಲಿ ಅವರ ಉಡುಗೆ-ತೊಡುಗೆಗಳು ಕೆತ್ತಲ್ಪಟ್ಟಿದೆ. ಆದರೆ ಇಲ್ಲಿನ ಪೌರಾಣಿಕ ವ್ಯಕ್ತಿಗಳ ಉಡುಗೆ-ತೊಡುಗೆಗಳು ತುಂಬಾ ಸರಳವಾದವುಗಳಾಗಿ ಕಂಡುಬರುತ್ತವೆ. ಉದಾ: ವಿಜಯನಗರದ ದೇವಾಲಯ ಭಿತ್ತಿಯ ಮೇಲಿನ ಶಿಲ್ಪಗಳಲ್ಲಿ ಹಾಗೂ ಉಬ್ಬು ಶಿಲ್ಪಗಳಲ್ಲಿ ಇವುಗಳನ್ನು ಕಾಣಬಹುದು. ದೇವಾಲಯದ ದ್ವಾರಪಾಲಕರಾದ ಜಯ-ವಿಜಯ ಉಬ್ಬು ಶಿಲ್ಪಗಳಲ್ಲಿಯೂ ಕಾಣಬಹುದು.

**೨. ರಾಜ-ರಾಜ ಪರಿವಾರದವರ ಉಡುಗೆಗಳು:** ವಿಜಯನಗರದ ಅರಸರು ಹಾಗೂ ಅವರ ಪರಿವಾರದವರ ಉಬ್ಬು ಶಿಲ್ಪಗಳು ವಿಜಯನಗರ ಕಾಲದ ಹಲವಾರು ಸ್ಮಾರಕಗಳಲ್ಲಿ ಕಂಡುಬರುತ್ತವೆ.

ಈ ಶಿಲ್ಪಗಳಲ್ಲಿ ರಾಜರ ಕಿರೀಟ, ಭುಜಕೀರ್ತಿ, ಕೊರಳಹಾರ, ಕಡಗ, ನಡುಪಟ್ಟಿ ಉಡುಗೆಗಳನ್ನು ಸ್ಪಷ್ಟವಾಗಿ ಕೆತ್ತನೆಯ ಮೂಲಕ ತೋರಿಸಲಾಗಿದೆ. ಪ್ರಾಚ್ಯವಸ್ತು ಸಂಗ್ರಹಾಲಯದ ಪ್ರವೇಶದ್ವಾರದ ಮುಂಭಾಗದಲ್ಲಿ ಇರುವ ಕೃಷ್ಣದೇವರಾಯ ಹಾಗೂ ಆತನ ಪತ್ನಿಯರಾದ ಚಿನ್ನಾದೇವಿ ಹಾಗೂ ತಿರುಮಲಾದೇವಿಯರ ಅಲಂಕೃತ ವಸ್ತ್ರಾಭರಣಗಳೇ ಸೂಕ್ತ ಉದಾಹರಣೆಯಾಗಿದೆ. ತುಲಾಭಾರದ ನಿಲುಗಂಭದಲ್ಲಿನ ರಾಜ-ರಾಣಿಯರ ಶಿಲ್ಪಗಳು ಮತ್ತೊಂದು ಸಾಕ್ಷ್ಯಾಧಾರವಾಗಿದೆ. ಪುರಾತತ್ವ ವಸ್ತುಸಂಗ್ರಹಾಲಯದಲ್ಲಿ ಇಟ್ಟಿರುವ ರಾಜ ಪರಿವಾರದವರ ಶಿಲ್ಪವೂ ಸೂಕ್ತ ಉದಾಹರಣೆಯಾಗಿದೆ. ರಾಣಿಯರಿಬ್ಬರೂ ಕಿವಿಗೆ ಓಲೆ, ಹಣೆಗಂಟು, ಕುತ್ತಿಗೆಸರ, ಕೈಬಳೆ ಹಾಗೂ ತೋಳುಬಂಧಿಗಳನ್ನು ಧರಿಸಿದ್ದಾರೆ. ರಾಜ ತಲೆಗೆ ಉದ್ದನೆಯ ಕಿರೀಟ, ಕಿವಿಗೆ ಕಡಕು, ನಡುಪಟ್ಟಿ ಹಾಗೂ ನಡುವಿನ ಕೆಳಭಾಗಕ್ಕೆ ಧೋತ್ರಧರಿಸಿರುವುದು ಕಂಡುಬರುತ್ತದೆ.

ವಿದೇಶಿ ವ್ಯಾಪಾರಿಗಳು ಅದರಲ್ಲೂ ಕುದುರೆ ವ್ಯಾಪಾರಿಗಳು ರಾಜನ ಆಸ್ಥಾನದಲ್ಲಿ ರಾಜನನ್ನು ಭೇಟಿ ಮಾಡಿ, ಗೌರವ ಸಲ್ಲಿಸುತ್ತಿರುವ ದೃಶ್ಯಗಳನ್ನು ಮಹಾನವಮಿದಿಬ್ಬ, ಹಜಾರರಾಮ ದೇವಾಲಯದಲ್ಲಿ ಕಾಣಬಹುದು. ವಿಜಯನಗರ ಅರಸರ ಹಾಗೂ ಅವರ ಪರಿವಾರದವರ ಉಡುಗೆಗಳು ಅಷ್ಟೊಂದು ವೈವಿಧ್ಯತೆಯಿಂದ ಕೂಡಿರದೆ ಒಂದೇ ತೆರನಾಗಿ ಇರುವುದು ಶಿಲ್ಪಗಳಲ್ಲಿ ಕಂಡುಬಂದರೂ ಉಡುಗೆ ವಸ್ತ್ರಗಳು ಅಲಂಕೃತಗೊಂಡಿದ್ದವೆಂಬುದಾಗಿ ತಿಳಿದು ಬರುತ್ತದೆ.

**ಜನಸಾಮಾನ್ಯರ ಉಡುಗೆ:** ವಿಜಯನಗರದ ಉಬ್ಬು ಶಿಲ್ಪಗಳಲ್ಲಿ ಜನಸಾಮಾನ್ಯರ ಉಡುಗೆ-ತೊಡುಗೆಗಳ ಬಗೆಗೂ ಹೆಚ್ಚಿನ ಮಾಹಿತಿ ದೊರಕುತ್ತದೆ. ಅದರಲ್ಲಿ ವಿಶೇಷವಾಗಿ ಬೇಟೆಗಾರರು, ಪಶುಪಾಲಕರು, ಕೃಷಿಕರು, ಸೈನಿಕರು, ಬಿಲ್ಲುಗಾರರು, ತಳವಾರರು, ಸಾಧು-ಸನ್ಯಾಸಿಗಳು, ವಿದೇಶಿ ವ್ಯಾಪಾರಿಗಳು, ಜನಪದ ಕಲಾವಿದರು ಹೀಗೆ ಹಲವಾರು ಸಮುದಾಯಗಳ ಉಡುಗೆ-ತೊಡುಗೆಗಳ ಬಗೆಗೆ ವಿಜಯನಗರ ಕಾಲದ ಸ್ಮಾರಕಗಳ ಮೇಲಿನ ಉಬ್ಬು ಶಿಲ್ಪಗಳು ಸ್ಪಷ್ಟಪಡಿಸಿವೆ. ಪಶುಪಾಲಕರು (ಪಟ್ಟಾಭಿರಾಮ ದೇವಾಲಯ) ಇವರ ಉಡುಗೆಯಲ್ಲಿ ವಿಶೇಷವಾಗಿ ಕುರಿಕಾಯುವ ಕುರುಬರ ಉಡುಗೆಯಂತೆಯೇ ತಲೆಯಿಂದ ಹಿಮ್ಮಡಿಯವರೆಗಿನ ಗೊರಗು ಹಾಗೂ ನಡುವಿಗೆ ಸುತ್ತಿದ ಧೋತ್ರ, ಕಾಲಿಗೆ ಕಾಲ್ಗಡಗ, ತಲೆಗೆ ಕುಲಾಯಿ, ಧರಿಸಿರುತ್ತಾನೆ. ಬೇಟೆಗಾರರು (ಪ್ರಾಚ್ಯವಸ್ತು ಸಂಗ್ರಹಾಲಯದ ಹಿಂಬದಿ) ಬೇಟೆಗಾರ ತಲೆಗೆ ಹಣೆಗಂಟು, ಕೈಗಡಗ, ಕಾಲ್ಗಡಗ ಧರಿಸಿ, ಮುಂದೆ ನೆರಿಗೆ ಹಿಡಿದು ಚಲ್ಲರಿಯನ್ನು ಬಿಟ್ಟಿರುತ್ತಾರೆ. ಕೈಯಲ್ಲಿ ಬಿಲ್ಲು-ಬಾಣ ಹಿಡಿದು ತುಂಬಾ ಸರಳವಾಗಿರುತ್ತಾರೆ ಎಂಬುದು ಇಲ್ಲಿನ ಶಿಲ್ಪಗಳ ಮೂಲಕ ತೋರಿಸಲಾಗಿದೆ. ಕೃಷಿಕರು ಸಹ ಬೇಟೆಗಾರರ ಉಡುಗೆಯನ್ನೇ ಧರಿಸಿರುತ್ತಾರೆ.

ಸೈನಿಕರ ಉಡುಗೆ ಕುರಿತು ವಿದೇಶಿ ಪ್ರವಾಸಿಗರ ವರದಿಗಳಲ್ಲಿ ಸಾಕಷ್ಟು ಮಾಹಿತಿ ದೊರಕುತ್ತವೆ. ಪಾಯೇಸ್‌ನು ಮಹಾನವಮಿ ದಿಬ್ಬದ ಸಂದರ್ಭದಲ್ಲಿ ರಾಜ ಸೇನಾ ವೀಕ್ಷಣೆ ನಡೆಸುವ ಸಂದರ್ಭದಲ್ಲಿ ಸೈನಿಕರು ಬಣ್ಣ-ಬಣ್ಣದಿಂದ ಕೂಡಿದ ಸೊಗಸಾದ ಶ್ರೀಮಂತ ಉಡುಪನ್ನು ಧರಿಸಿದ್ದರೆಂದು ಹೇಳುತ್ತಾನೆ. ವಿಶೇಷ ಸಂದರ್ಭಗಳಲ್ಲಿ ಇಂತಹ ಉಡುಗೆಗಳನ್ನು ಧರಿಸುತ್ತಿದ್ದರು ಎಂಬುದಕ್ಕೆ ಮಹಾನವಮಿ ದಿಬ್ಬ

ಹಾಗೂ ಹಜಾರರಾಮ ದೇವಾಲಯಗಳಲ್ಲಿನ ಉಬ್ಬು ಶಿಲ್ಪಗಳಲ್ಲಿನ ಸೈನಿಕ ಪಡೆಗಳಾದ ಅಶ್ವದಳ, ಗಜದಳ, ಮಲ್ಲರ ಪಡೆಯ ಉಡುಗೆಗಳೇ ಸಾಕ್ಷಾಧಾರಗಳಾಗಿವೆ.[೧೦೬]

ತಳವಾರರು ನಡುವಿಗೆ ಧೋತ್ರ, ತಲೆಗೆ ರುಮಾಲು, ಕೈಯಲ್ಲಿ ಉದ್ದನೆಯ ಮರದ ತುಂಡಿನ ಕೋಲು ಹಿಡಿದಿರುತ್ತಾರೆ. ಉದಾಹರಣೆಯಾಗಿ ಮಹಾನವಮಿ ದಿಬ್ಬದ ಪೂರ್ವ ಪ್ರವೇಶದ್ವಾರದ ಸ್ಥಳದಲ್ಲಿ ತಳವಾರನ ಉಬ್ಬುಶಿಲ್ಪ ಕಂಡುಬರುತ್ತದೆ.

ಸಾಧು ಸನ್ಯಾಸಿಗಳು ಇವರು ತಲೆಗೆ ರುಮಾಲು, ಕೈಯಲ್ಲಿ ಕುಂಡಲ, ಜಪಮಣಿ, ಹಿಡಿದು ಮೈಮೇಲೆ ಒಂದು ವಸ್ತ್ರ ಹಾಕಿಕೊಂಡು, ಗಡ್ಡ ಬಿಟ್ಟಿರುತ್ತಾರೆ. ಇದಕ್ಕೆ ಉದಾಹರಣೆಗಾಗಿ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿನ ಸಾಧು, ಸನ್ಯಾಸಿ, ಶಿಲ್ಪವೂ ಕಂಡು ಬಂದಿದೆ. ವಿದೇಶಿ ವ್ಯಾಪಾರಿಗಳು ಇವರು ಪೇಟಸುತ್ತಿ ಉದ್ದನೆಯ ದಾಡಿ ಬಿಟ್ಟು ಕುದರೆ ಅಥವಾ ಓಂಟೆ ಹಿಡಿದು ನಿಂತುಕೊಂಡಿರುವ ಉಬ್ಬು ಶಿಲ್ಪಗಳು ಮಹಾನವಮಿ ದಿಬ್ಬ, ಹಜಾರರಾಮ ದೇವಸ್ಥಾನ ಭಿತ್ತಿಯಲ್ಲಿನ ಉಬ್ಬು ಶಿಲ್ಪಗಳಲ್ಲಿ ಕಾಣಬಹುದಾಗಿದೆ. ಇದರಿಂದ ಇವರೆಲ್ಲರೂ ಕುದರೆ ಮತ್ತು ಓಂಟೆ ಸವಾರರೆಂದು ಅವರ ಉಡುಗೆ-ತೊಡುಗೆಗಳಿಂದ ಗುರುತಿಸಲಾಗುತ್ತದೆ. ಇವರು ತಮ್ಮ ದೇಶಗಳಿಂದ ವಿಜಯನಗರಕ್ಕೆ ಉತ್ತಮ ಜಾತಿಯ ಕುದುರೆಗಳನ್ನು ರವಾನಿಸುತ್ತಿದ್ದರೆಂದು ತಿಳಿದು ಬರುತ್ತದೆ. ಹೀಗೆ ಜನರು ಧರಿಸುವ ಉಡುಗೆಗಳ ಮೂಲಕ ವ್ಯಕ್ತಿಯ ದೇಶ, ಧರ್ಮ, ಕಾಲವನ್ನು ಸುಲಭವಾಗಿ ಗುರುತಿಸಬಹುದಾಗಿದೆ.

**ತೊಡುಗೆಗಳು:** ದೇಹಕ್ಕೆ ತೊಡುವ ಅಥವಾ ಧರಿಸುವ ಆಭರಣಗಳೇ ತೊಡುಗೆಗಳು.[೧೦೭] ಮಾನವ ಮೂಲತಃ ಅಲಂಕಾರ ಪ್ರಿಯ. ವಸ್ತ್ರಗಳಿಗಿಂತಲೂ ಆಭರಣ ಆತನಿಗೆ ತುಂಬ ಪ್ರಿಯವಾದುದು ಶಿಲಾಯುಗ ಸಂಸ್ಕೃತಿಯ ಕಾಲದಿಂದಲೂ ಮಾನವ ಆಭರಣ ಧರಿಸುತ್ತಿದ್ದ ಬಗೆಗೆ ಹಲವಾರು ಆಧಾರ ಸಹಿತ ಮಾಹಿತಿಗಳು ದೊರಕುತ್ತವೆ. ಆತ ಎರೆಮಣ್ಣಿನಿಂದ ವಿವಿಧ ಬಗೆಯ ಮಣಿಗಳನ್ನು ತಯಾರಿಸಿ ಅವುಗಳನ್ನು ಸುಟ್ಟು, ಕುತ್ತಿಗೆ, ತೋಳು, ನಡುವಿನ ಭಾಗದಲ್ಲಿ ಧರಿಸಿಕೊಳ್ಳುತ್ತಿದ್ದ[೧೦೮] ನವಶಿಲಾಯುಗದ ಕಾಲದಲ್ಲಿ ಪ್ರಾಣಿಯ ಎಲುಬು, ಸಮುದ್ರದ ಚಿಪ್ಪು, ಶಂಖ ಮುಂತಾದವುಗಳಿಂದ ಆಭರಣಗಳನ್ನು ತಯಾರಿಸಿ ಧರಿಸುತ್ತಿದ್ದನೆಂದು ಪ್ರಾಚೀನ ಇತಿಹಾಸದಿಂದ ತಿಳಿದು ಬಂದಿದೆ.[೧೦೯] ಸಿಂಧೂ-ಕಣಿವೆ ನಾಗರೀಕತೆಯ ಪ್ರದೇಶದಲ್ಲಿ ಮಣಿಯುಕ್ತವಾದ ಆಭರಣಗಳು ದೊರೆತಿವೆ. ಅಲ್ಲದೆ ಸಾಂಚಿ, ಅಮರಾವತಿ ಶಿಲ್ಪಗಳಲ್ಲಿಯೂ, ಜನಸಾಮಾನ್ಯರಿಂದ ರಾಜಮಹಾರಾಜರವರೆಗೆ ಎಲ್ಲಾ ಸ್ತ್ರೀ-ಪುರುಷರು ಆಭರಣಗಳನ್ನು ಧರಿಸುತ್ತಿದ್ದರೆಂಬುದು ತಿಳಿದು ಬಂದಿದೆ. 'ಶಿಲಪ್ಪಧಿಕಾರಂ'ನಲ್ಲಿ ಬಂಗಾರ, ಮುತ್ತು, ರತ್ನಾಭರಣಗಳ ಬಗೆಗೆ ಉಲ್ಲೇಖಗಳು ದೊರೆಯುತ್ತವೆ. ಮಾನವ ಬುದ್ಧಿಶಕ್ತಿ ಬೆಳೆದಂತೆ ಆತನ ಅಲಂಕಾರ ಪ್ರಜ್ಞೆಯೂ ವೃದ್ಧಿಗೊಂಡಿತು. ಅಲಂಕಾರಿಕ ವಸ್ತುಗಳಲ್ಲಿ ವೈವಿಧ್ಯತೆ ಆಭರಣಗಳಲ್ಲಿ ಬದಲಾವಣೆ ಉಂಟಾಯಿತು. ವಿಜಯನಗರ ಕಾಲದ ಅಂದರೆ ಕಾಮಲಾಪುರ ಕ್ಷೇತ್ರ ಒಳಗೊಂಡಂತೆ ಸ್ತ್ರೀಯರ ಆಭರಣಗಳಲ್ಲಿ ವೈಶಿಷ್ಯ ಪೂರ್ಣ ಹಾಗೂ ವೈವಿಧ್ಯತೆಯನ್ನು ಇಲ್ಲಿನ ವಾಸ್ತು ಶಿಲ್ಪದಲ್ಲಿ ಕಾಣಬಹುದು.

ವಿದೇಶಿ ಪ್ರವಾಸಿಗರು ತಮ್ಮ ಬರಹಗಳಲ್ಲಿ ಜನಸಾಮಾನ್ಯರು ಹಾಗೂ ರಾಜವಂಶರು ತೊಡುತ್ತಿದ್ದ ಆಭರಣಗಳ ಬಗೆಗೆ ಉಲ್ಲೇಖಿಸಿದೆ. ಅಬ್ದುಲ್ ರಜಾಕ್‌ನು ವಿಜಯನಗರದ ಸಾಮ್ರಾಜ್ಯದ ಸಂಪತ್ತಿನ

ಬಗೆಗೆ ಹೇಳುತ್ತಾ ರಾಜನ ನೆಲಮಾಳಿಗೆಯಲ್ಲಿ ಚಿನ್ನದ ಗಟ್ಟಿಗಳ ಇದ್ದುದಾಗಿ ತಿಳಿಸುತ್ತಾನೆ. ಇಲ್ಲಿ ಶ್ರೀಮಂತರಿಂದ ಸಾಮಾನ್ಯ ಜನರವರೆಗೂ ಅಂಗಡಿಯಲ್ಲಿ ಕೆಲಸ ಮಾಡುವವರೂ ಸಹ ಕೊರಳಸರ, ಕೈತೋಳು ಬಂಧಿ, ಬೆರಳುಗಳಿಗೆ ಉಂಗುರ, ಕಿವಿಗೆ ಮತ್ತು ವಜ್ರದೋತಿಗಳನ್ನು ಧರಿಸುವರು ಹಾಗೂ ಹೆಂಗಸರು ವಜ್ರ ವೈಡೂರ್ಯ, ಹವಳಗಳಿಂದ ಮಾಡಿದ ಕೊರಳಸರ, ಪದಕ, ತೋಳುಬಂಧಿ, ಕೈಬಳೆಗಳು, ಬೆರಳುಗಳಿಗೆ ವಜ್ರದುಂಗುರ, ಸೊಂಟಕ್ಕೆ ಡಾಬು, ಕಾಲಿಗೆ ಚಿನ್ನದ ಬಳೆ, ಕಾಲುಂಗುರವನ್ನು ಹಾಕಿಕೊಳ್ಳುವರು ಎಂಬುದಾಗಿ ಹೇಳಿದ್ದಾನೆ.[೧೧೦]

ಹೀಗೆ ವಿಜಯನಗರದ ಸ್ಮಾರಕಗಳಲ್ಲಿ ಕಂಡು ಬರುವ ಜನಸಾಮಾನ್ಯರ ಆಭರಣಗಳು, ಅವುಗಳನ್ನು ಧರಿಸುವ ಕ್ರಮ ಹಾಗೂ ಅವುಗಳ ರೂಪ ರಚನೆಗಳನ್ನು ಇಲ್ಲಿ ಕಾಣಬಹುದಾಗಿದೆ. ದೇಹಕ್ಕೆ ತೊಡುವ ಅಂಗಗಳಿಗನುಸಾರವಾಗಿ ಕೈ ಆಭರಣಗಳು, ಕಾಲಿನ ಆಭರಣಗಳು, ಕಿವಿಯ ಆಭರಣಗಳು, ಶೀರಾಭರಣಗಳು, ಮೂಗಿನ ಆಭರಣಗಳು, ಕೊರಳಿನ ಆಭರಣಗಳು, (ಸೊಂಟದ) ನಡುವಿನ ಆಭರಣಗಳು, ತೋಳಿನ ಆಭರಣಗಳು ಹೀಗೆ ಇವುಗಳಲ್ಲೂ ವೈವಿಧ್ಯತೆಗಳನ್ನು ಕಾಣಬಹುದು.

**ಹಬ್ಬಗಳು:** ನಂಬಿಕೆ ಮತ್ತು ಸಂಪ್ರದಾಯಗಳ ಕ್ರಿಯಾ ರೂಪಗಳೇ ಹಬ್ಬಗಳು. ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಸತತ ಪ್ರಯತ್ನಗಳ ಫಲವಾಗಿ ಹಬ್ಬಗಳ ಹುಟ್ಟಾಯಿತೆಂಬ ಪ್ರತೀತಿ ಇದೆ. ಹಲವಾರು ಸಂಪ್ರದಾಯಗಳ ಮೊತ್ತವೇ ಹಬ್ಬ.[೧೧೧] ಹಬ್ಬಗಳು ಜಾನಪದ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಮೆರದಿವೆ. ಧಾರ್ಮಿಕ ಆಚರಣೆಗಳ ಜೊತೆಗೆ ಲೌಕಿಕ ಮತ್ತು ಕಲಾತ್ಮಕವಾದ ಆಚರಣೆಗಳಲ್ಲೂ ಬೆರೆತು ಹೋಗಿವೆ. ಹಬ್ಬಗಳು ಆಯಾ ನಾಡಿನ ಸಂಸ್ಕೃತಿಯ ಪ್ರತೀಕವೂ ಹೌದು. ಪ್ರತಿ ವರ್ಷ ಸಾಮಾಜಿಕ ಕ್ಷೇಮಕ್ಕಾಗಿ ವಿಶೇಷ ಸಂದರ್ಭಗಳಲ್ಲಿ ಆಚರಿಸುವ ಜಾನಪದ ಸಂಗತಿಗಳ ಮತ್ತು ಸಂಪ್ರದಾಯಗಳ ಸಮ್ಮಿಶ್ರ ಜಟಿಲ ಘಟಕವೇ ಹಬ್ಬ.[೧೧೨]

ಹಬ್ಬ ಎನ್ನುವುದು ಆಚರಿಸುವವರ ಮನೋಭಾವನೆಯನ್ನು ಅವಲಂಬಿಸಿರುತ್ತದೆ. ಕೆಲವೊಮ್ಮೆ ಬಂಧುಗಳ ನೆರವಿಯೇ ಹಬ್ಬ ವಾಗುತ್ತದೆ.[೧೧೩] ಹಬ್ಬಗಳು ಗ್ರಾಮೀಣ ಜೀವನದ ಸಾಂಸ್ಕೃತಿಕ ಪ್ರೇರಣೆಯೂ ಹೌದು. ಹಬ್ಬ ಎಂಬುದು ಬಾಳಿಗೆ ತಂದು ಕೊಡುವ ಅಮೃತ ಬಿಂದುಗಳು. ಮನುಷ್ಯನ ಚೇತನ ಊರ್ದಮುಖವಾಗಲು ಅವನ ಶೀಲ, ವರ್ತನೆಗಳು ಉತ್ತಮವಾಗಲು ಸಮಾಜದಲ್ಲಿ ಐಕ್ಯ ಭಾವನೆ ಬೀರಲು, ನಾಡಿನಲ್ಲಿ ಶಾಂತಿ–ನೆಲೆಗೊಳ್ಳಲು, ಈ ಹಬ್ಬಗಳು ಉತ್ತ್ರೇಕ್ಷೆಯಾಗಲಿಕ್ಕಿಲ್ಲ. ಹಬ್ಬಗಳು ಮಾನವನ ಮನಸ್ಸಿಗೆ ಆನಂದವನ್ನು ಉಂಟು ಮಾಡುವ ಸಾಧನಗಳಾಗಿವೆ.[೧೧೪] ಸಂಸ್ಕೃತದ ಪರ್ವನ್ ಶಬ್ದದ ತದ್ಬವವೇ ಹಬ್ಬ. ಸಂಸ್ಕೃತದಲ್ಲಿ ಪರ್ವನ್ ಎಂದರೆ ಉತ್ಸವ ಎಂದರ್ಥ.[೧೧೫]

ಯುಗಾದಿ ಹಬ್ಬ : ಹಿಂದೂ ಕಾಲಮಾನದ ಪ್ರಕಾರ ಯುಗಾದಿ ಹೊಸ ವರುಷ ಎಂದೆನಿಸಲ್ಪಡುತ್ತದೆ. ಪಾಲ್ಗುಣ ಬಹುಳ ಅಮವಾಸ್ಯೆಯ ದಿನ ಹಳೆಯ ವರಷಕ್ಕೆ ವಿದಾಯ ಹೇಳಿ ಮರುದಿನ ಚೈತ್ರ ಶುಕ್ಲ ಪಾಡ್ಯ ಈ ವಿಜಯೋತ್ಸವದ ಪ್ರತೀಕವಾಗಿ, ಯುಗಾದಿ ಪುರುಷ ಮತ್ತು ಪರಾಕ್ರಮಗಳ ಆರಾಧನೆಯ ಹಬ್ಬವೆಂತಲೂ ಕರೆಯುತ್ತಾರೆ. ಹಿಂದಿನ ವರುಷ ಎಂಬ ಕಾಲ ಪುರುಷನ ಮರಣ ಹೊಸ ವರುಷದ ರೂಪದ ಜನನ ಸೂಚಕ. ಈ ಸಂವತ್ಸರ ಆರಂಭದ ಕಾಲವೆಂದು ಪರಿಗಣಿಸಲ್ಪಡುತ್ತದೆ.[೧೧೬] ಯುಗ ಯುಗಾದಿ ಕಳೆದರೂ ಯುಗಾದಿ ಮರುಳಿ ಬರುತಿದೆ ಎಂಬ ಗೀತೆ ಹೊಸ ಯುಗಾದಿಯ ವಸಂತದ

ಆಗಮನವನ್ನು ಸೂಚಿಸುತ್ತದೆ. ಯುಗಾದಿ ಎಂಬ ಸಂಸ್ಕೃತ ಪದದ ತದ್ಬವ ರೂಪ 'ಉಗಾದಿ' ಸಂಸ್ಕೃತದಲ್ಲಿ ಯುಗ ಎಂದರೆ ವರುಷ (ವರ್ಷ) ಆದಿ ಅಂದರೆ ಆರಂಭ ಎಂದರ್ಥ. ಒಟ್ಟಿನಲ್ಲಿ ವರಷದ ಆರಂಭದ ದಿನ ಎಂದರ್ಥ.[೧೧೭]

ಯುಗಾದಿಯ ದಿನದಂದು ಮುಂಜಾವಿನಲ್ಲಿ ಮಧ್ಯಾಹ್ನದ ಭೋಜನದಲ್ಲಿ ಊಟದ ಮೊದಲು ಬೇವು ಬೆಲ್ಲ ತಿನ್ನುವುದು ಈಗಲೂ ವಾಡಿಕೆ ಇದೆ. ಕಹಿ ಮತ್ತು ಸಿಹಿ ಇವೆರಡೂ ಬದುಕಿನ ಪ್ರತೀಕ. ನೋವು-ನಲಿವುಗಳ ಸಂಕೇತ. ಇದನ್ನೇ ಚನ್ನವೀರ ಕಣವಿಯವರು ಜೀವನವೆಲ್ಲಾ ಬೇವು-ಬೆಲ್ಲ ಈ ಎರಡನ್ನು ಸವಿದವನೇ ಕವಿ ಮಲ್ಲ ಎಂದಿದ್ದಾರೆ.[೧೧೮]

ಯುಗಾದಿಯ ದಿನದಂದು ಅಭ್ಯಂಜನ ಸ್ನಾನ ಮಾಡಿ ದೇವರ ಪೂಜೆ ನಡೆಸಿ ಗುರು-ಹಿರಿಯರಿಗೆ ನಮಸ್ಕಾರ ಮಾಡುವ ಪದ್ಧತಿ ಈಗಲೂ ಈ ಗ್ರಾಮದಲ್ಲಿದೆ. ಸಂಜೆ ಅಥವಾ ಬೆಳಿಗ್ಗೆ ಕುಲದೇವರ ದರ್ಶನ ಪಡೆಯುವುದು ಇಂದಿನವರೆಗೂ ನಡೆದು ಬಂದಿದೆ.

**ಬನ್ನಿ ಹಬ್ಬ:** ಇಂದಿಗೂ ಕಾಮಲಾಪುರದ ಪರಿಸರದಲ್ಲಿ ನಡೆಯುವ ಬನ್ನಿಹಬ್ಬ ವಿಜಯನಗರ ಅರಸರ ಆಳ್ವಿಕೆಯ ಕಾಲದಿಂದ ನಡೆದು ಬಂದ ಹಬ್ಬವಾಗಿದೆ. ನವರಾತ್ರಿ, ರಾಮಲೀಲಾ ಹಬ್ಬ, ದಸರಾ ಹಬ್ಬ, ವಿಜಯದಶಮಿ, ನಾಡಹಬ್ಬ, ಮುಂತಾದ ಹೆಸರುಗಳಿಂದಲೂ ಕರೆಯುತ್ತಾರೆ. ನವರಾತ್ರಿ ಹಬ್ಬ ಕಣ್ಮನ ಸೂರೆಗೊಳ್ಳುವ ಹಬ್ಬವಾಗಿದೆ. ಗುಡಿಸಲಿನಿಂದ ಹಿಡಿದು ಅರಮನೆಯವರೆಗೆ ಎಲ್ಲರೂ ಆಚರಿಸುವ ಹಬ್ಬ ಇದಾಗಿದೆ. ಕಾಮಲಾಪುರ ಗ್ರಾಮದಲ್ಲಿ, ಬನ್ನಿಹಬ್ಬ ಅಥವಾ 'ಮಹಾನವಮಿ ಹಬ್ಬ' ವಿಜಯನಗರ ಕಾಲದಿಂದಲೂ ನಡೆಯುತ್ತಿತ್ತು ಎಂಬುದರ ಬಗ್ಗೆ ಕಾಮಲಾಪುರದಲ್ಲಿರುವ 'ಮಹಾನವಮಿ ದಿಬ್ಬ' ಹೆಸರೇ ಉತ್ತಮ ಉದಾಹರಣೆಯಾಗಿದೆ. ಈ ಪರಿಸರದ ಜನ ಬನ್ನಿ ಕೊಡುತ್ತಿದ್ದರೆಂಬ ಪ್ರತೀತಿ ಇದೆ. ಬನ್ನಿ ಮರಕ್ಕೆ ಹಸಿರು ಬಳೆ ತೊಡಿಸಿ ಹೊಸ ಸೀರೆ ಉಡಿಸುವ ಸಂಪ್ರದಾಯವೂ ಇದೆ. ಈ ದೇವತೆಯನ್ನು ಬನ್ನಿಯಮ್ಮ, ಬನ್ನಿಮಹಾಂಕಾಳಿ, ಬನ್ನಿಕಾಳಿ ಎಂಬ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಇಂದಿಗೂ ಎಂಟು ದಿವಸಗಳ ಪೂಜೆಗೊಂಡ ನಂತರ ಒಂಬತ್ತನೇ ದಿನದಂದು ಎಲ್ಲಾ ಗ್ರಾಮ ದೈವಗಳು ಮತ್ತು ಗ್ರಾಮದೇವತೆ ಇವರೆಲ್ಲರೂ ಸೇರಿ ನವಮಿ ದಿನ ಧರ್ಮಗುಡ್ಡಕ್ಕೆ ಹೋಗುತ್ತಾರೆ. ಅಲ್ಲಿ ಬನ್ನಿ ಮರಕ್ಕೆ ಪೂಜೆ ಮಾಡಿ ಪ್ರದಕ್ಷಿಣೆ ಹಾಕಿ ದೇವರಿಗೆ ಬನ್ನಿ ಮುಡಿದು ಬರುತ್ತಾರೆ. ಇದೇ ದಿನದಂದು ಆಯುಧ ಪೂಜೆ ಮಾಡುವ ಪದ್ಧತಿಯೂ ಇದೆ. ಕಾಮಲಾಪುರ ಗ್ರಾಮದಲ್ಲಿ ಈ ಹಬ್ಬಕ್ಕೆ ಸಂಬಂಧಿಸಿದಂತೆ ಜಾನಪದ ಐತಿಹ್ಯವಿದೆ.

ಪಾಂಡವರು ವನವಾಸದ ವೇಳೆಯಲ್ಲಿ ಈ ಗ್ರಾಮಕ್ಕೆ ಹತ್ತಿರವಾಗಿರುವ ಧರ್ಮಗುಡ್ಡದಲ್ಲಿ ಕೆಲವು ದಿನ ನೆಲೆಯಾಗಿದ್ದರೆಂಬ ಪ್ರತೀತಿ ಅಲ್ಲದೇ ಇಲ್ಲಿಯ ಬನ್ನಿ ಮರದಲ್ಲಿ ತಮ್ಮ ಆಯುಧಗಳನ್ನು ಇರಿಸಿದ್ದರಂತೆ. ಹೀಗೆ ಈ ಪರಿಸರದಲ್ಲಿನ ಈ ಹಬ್ಬ ಆಯುಧ ಪೂಜೆ ಹಬ್ಬ, ದಶಮಿ ಪೂಜೆ ಹಬ್ಬ ಎಂದೂ ಕರೆಯಲ್ಪಡುತ್ತದೆ. ಪಾಂಡವರು ಕೌರವರನ್ನು ಸೋಲಿಸಿ, ವಿಜಯಗೊಳಿಸಿದ ಸಂಕೇತವಾಗಿ ಇದನ್ನು ಆಚರಿಸಲಾಗುತ್ತದೆ ಎಂಬ ಪ್ರತೀತಿಯೂ ಇದೆ. ಈ ಹಬ್ಬದಂದು ಗ್ರಾಮ್ಯ ದೇವತೆಗಳನ್ನೆಲ್ಲಾ

ಪಲ್ಲಕ್ಕಿಯಲ್ಲಿಟ್ಟು ವೈಭವದಿಂದ ಹೊತ್ತು ತುರುವುದು.[೧೧೯] ಅಲ್ಲಿಯೇ ನಿಂತು ದೇವರಿಗೆ ಪೂಜೆ ಮಾಡಿ ಸಂಭ್ರಮದಿಂದ ಹಿಂತಿರುಗುತ್ತಾರೆ. ಇಂತಹ ಆಚರಣೆ ಸಾಂಸ್ಕೃತಿಕ ದೃಷ್ಟಿಯಿಂದ ಮಹತ್ವದ್ದಾಗಿದೆ.

**ನಾಗರ ಪಂಚಮಿ:** ನಾಗರ ಪಂಚಮಿಯನ್ನು 'ಗರುಡ ಪಂಚಮಿ', 'ನಾಗರ ಅಮಾವಾಸ್ಯೆ' ಎಂಬ ಹೆಸರುಗಳಿಂದಲೂ ಕರೆಯುತ್ತಾರೆ. ಇದು ವಿಶೇಷತ; ಉತ್ತರ ಕರ್ನಾಟಕದಲ್ಲಿ ಸಡಗರದ ಹಬ್ಬ.[೧೨೦] ಕಾಮಲಾಪುರದಲ್ಲಿ ಈ ಹಬ್ಬ ಸ್ತ್ರೀ ಪ್ರಧಾನವಾಗಿದೆ. ಫಲೋತ್ಪತ್ತಿಯ ಹಾಗೂ ಮಾಂಗಲ್ಯ ಭಾಗ್ಯದ ದೇವತೆ ಎಂಬ ನಂಬಿಕೆಯೂ ಇಲ್ಲಿದೆ. ಹೊಸದಾಗಿ ಮದುವೆಯಾಗಿ ಗಂಡನ ಮನೆಗೆ ಹೋಗುವ ಯುವತಿಯರು ಈ ಹಬ್ಬದಲ್ಲಿ ಪಾಲ್ಗೊಳ್ಳುತ್ತಾರೆ.[೧೨೧]

"ನಾಗರ ಪಂಚಮಿ ನಾಡ ಹೆಣ್ಣಿಗೆ ಹಬ್ಬ
ನಾಗಪ್ಪಗ್ಹಾಲ ಎರೆಯೋಣ ನನ್ ಗೆಳತಿ
ನಾಗರ ಹೆಡಿಹಾಂಗ ಆಡೋಣ
ಅಳ್ಳಿಟ್ಟು – ತಂಬಿಟ್ಟು ಮಾಡಿಟ್ಟು ಎಳ್ಳುಂಡೆ
ದಳ್ಳುರಿ ಕಣ್ಣ ಹಣೆಯಾನ ಕೊರಳಾನ
ನಾಗ ನಿನಗೆಡೆಯೋ ಕೈಮುಗಿಯೋ"

ಎಂಬ ಹಾಡುವ ಜಾನಪದ ಗೀತೆ ಇಂದಿಗೂ ಪ್ರಚಲಿತವಿದೆ. 'ಪಂಚಮಿ ಹಬ್ಬಕ್ಕೆ ಉಳಿದಾವ ದಿನ ನಾಕ (ನಾಲ್ಕು) ಅಣ್ಣ ಬರಲಿಲ್ಲ ಯಾಕ ಕರಿಲಾಕ' ಎಂಬ ಈ ಗೀತೆ ಹೆಣ್ಣಿಗೆ ತವರಿನ ಪ್ರೀತಿಯ ಸಂಕೇತ ಗೀತೆಯೂ ಹೌದು.[೧೨೨]

ಈ ಹಬ್ಬಕ್ಕೆ ಸಂಬಂಧಿಸಿದಂತೆ ಜಾನಪದ ದಂತ ಕಥೆಯೂ ಇದೆ. ರೈತನೊಬ್ಬ ಗದ್ದೆಯಲ್ಲಿ ನೇಗಿಲ ಹೊಡೆಯುತ್ತಿರುವಾಗ ನೇಗಿಲ ಪಾಳೆಗೆ ಸಿಕ್ಕಿ ಹಾವಿನ ಮರಿ ಸಾಯುತ್ತದೆ. ಈ ಹಾವಿನ ತಾಯಿ ಕ್ರೋಧಗೊಂಡು ರೈತನ ಹಾಗೂ ಮನೆಯವರೆಲ್ಲರನ್ನು ಕಚ್ಚಿ ಸಾಯಿಸಿದರೂ ಅದರ ಕ್ರೋಧ ತಣ್ಣಗಾಗಲಿಲ್ಲವಂತೆ. ರೈತನ ಹೆಣ್ಣು ಮಗಳು ಒಬ್ಬಳು ಸೊಸೆಯಾಗಿ ಪರಮನೆಗೆ ಹೋದಾಗ ಹಾವು ಕಚ್ಚಿ ಕೊಲ್ಲಲು ಹೋದಾಗ ಆ ಹೆಣ್ಣು ಮಗಳು ಮಣ್ಣಿನಿಂದ ನಾಗಪ್ಪನ ಮಾಡಿ ಹಾಲೆರದು ತನ್ನ ತವರು ಮನೆಯವರನ್ನು ಕಾಪಾಡು ಎಂದು ಬೇಡಿಕೊಂಡಳಂತೆ. ಇದನ್ನು ನೋಡಿದ ನಾಗರ ಹಾವು ಕರುಣೆಯಿಂದ ಅವರಲ್ಲಿನ ಕಚ್ಚಿದ ವಿಷ ಹೀರಿ ಬದುಕಿಸುವ ಜಾನಪದ ಕಥೆಯೊಂದು ಇಲ್ಲಿ ಪ್ರಚಲಿತವಿದೆ. ಶ್ರಾವಣ ಮಾಸದಲ್ಲಿ ಶ್ರಾವಣ ಶುದ್ಧ ಪಂಚಮಿ ದಿನದಂದು, ಈ ಹಬ್ಬ ಆಚರಿಸುತ್ತಾರೆ. ನಾಗರ ಚೌತಿ ನಾಗರ ಪಂಚಮಿ ಎರಡೂ ದಿನಗಳಲ್ಲೂ ನಾಗಪ್ಪನಿಗೆ ಪೂಜೆ ಮಾಡಿ ಹಾಲೆರದು ಎಳ್ಳು ಹುರಿದು ಎಳ್ಳಿಟ್ಟು ತಂಬಿಟ್ಟು ಕಟ್ಟಿ ನೈವೇದ್ಯ ಮಾಡುತ್ತಾರೆ. ನಾಗ ಪೂಜೆಯ ಮರುದಿನ ಜೋಕಾಲಿ ಹಬ್ಬದ ಸಂಭ್ರಮವಿದೆ.

**ಮಕರ ಸಂಕ್ರಾಂತಿ**

"ಬಂದಿತು ಬಂದಿತು ಸಂಕ್ರಾಂತಿ
ತಂದಿತು ತಂದಿತು ಸುಖ ಶಾಂತಿ"

ಎಂಬ ಕವಿ ವಾಣಿಯಂತೆ ಸಂಕ್ರಾಂತಿ ಬಂದಿತೆಂದರೆ ಎಲ್ಲರಲ್ಲೂ ಉತ್ಸಾಹ ಚಿಮ್ಮುತ್ತದೆ. ಈ ಹಬ್ಬವನ್ನು ಎಳ್ಳು-ಬೆಲ್ಲದ ಹಬ್ಬ, ಸುಗ್ಗಿಹಬ್ಬ-ಕಣದ ಹಬ್ಬ, ಸಂಕ್ರಮಣದ ಹಬ್ಬ, ಮಕರ ಸಂಕ್ರಮಣದ

ಹಬ್ಬ ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ.[೧೨೩] ಸಂಕ್ರಾಂತಿ ಎಂದರೆ ವಿಶಿಷ್ಟವಾದ ಬದಲಾವಣೆ ಹಾಗೂ ಉಜ್ವಲವಾದ ಬೆಳಕು ಎಂದರ್ಥ. ಬೆಳಕು ಎಂಬುದು ಬದಲಾವಣೆ ಎಂತಲೂ ಆಗುತ್ತದೆ. ಮೂಲತಃ ಪೌಷ್ಯ ಲಕ್ಷ್ಮಿಯ ಆಗಮನದ ತರುವಾಯ ಸೂರ್ಯನು ದ್ವಾದಶ ರಾಶಿಗಳಲ್ಲೊಂದಾದ ಮಕರರಾಶಿಗೆ ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ಆರು ತಿಂಗಳು ಕಾಲ ಪ್ರಯಾಣ ಬೆಳೆಸುವವನು. ಈ ಪಥ ಬದಲಿಕೆಯ ದಿನವನ್ನು ಮಕರ ಸಂಕ್ರಮಣ ಅಥವಾ ಮಕರ ಸಂಕ್ರಾಂತಿ ಎಂದು ಕರೆಯುವರು. ಈ ಕಾಲವನ್ನು ಭಾರತೀಯರು ಉತ್ತರಾಯಣ ಪುಣ್ಯ ಕಾಲವೆಂದು ಕರೆಯುತ್ತಾರೆ.[೧೨೪]

ಈ ಕಾಲ ಸುಗ್ಗಿಯ ಕಾಲವೂ ಹೌದು. ರೈತರ ಸುಖ–ಸಂತೋಷಗಳ ಆಮೋದ–ಪ್ರಮೋದಗಳ ಕಾಲವೇ ಈ ಸಂಕ್ರಾಂತಿ. ದುಡಿಮೆಯಿಂದ ಬಿಡುವಿನೆಡೆಗೆ ರೈತನ ಬದುಕು ಹೊರಳಿಸುವ ಕಾಲ ಇದಾಗಿದೆ.

ಕಾಮಲಾಪುರ ಗ್ರಾಮದಲ್ಲಿ ತಮಿಳು ಜನಾಂಗದವರು ನೆಲಸಿರುವುದರಿಂದ ಈ ಹಬ್ಬವನ್ನು ಪೊಂಗಲ್ ಹಬ್ಬವೆಂದು ಕರೆಯುತ್ತಾರೆ. ಹೊಸ ಬೆಳೆಯಿಂದ ಬಂದ ತಿಂಡಿ ತಿನಿಸು ಮಾಡಿ ಭೂ–ದೇವಿಗೆ ನೈವೇದ್ಯ ಮಾಡಿ ನಂತರ ಪ್ರಸಾದ ರೂಪದಲ್ಲಿ ನೀಡುವ ಪದ್ಧತಿ ಇದೆ. ಮಕರ ಸಂಕ್ರಮಣದ ಹಿಂದಿನ ದಿನ ಪ್ರಾಥಃ ಕಾಲದಲ್ಲಿ ಎದ್ದು ಮುತ್ತೈದೆಯರಿಗೆ ಮಂಗಳಕರವಾದ ವಸ್ತುಗಳನ್ನು ಇಟ್ಟು ಕೊಡುತ್ತಾರೆ. ಇದು ಮಕರ ಸಂಕ್ರಮಣದ ಹಿಂದಿನ ದಿನ. ಈ ದಿನವನ್ನು ಭೋಗಿ ದಿನವೆಂದು ಕರೆಯುತ್ತಾರೆ. ಈ ದಿನ ಧನುರ್ಮಾಸದ ಕೊನೆಯ ದಿನವಾದ್ದರಿಂದ ದೇವರಿಗೆ ಹುಗ್ಗಿ ಸಜ್ಜೆಯ ರೊಟ್ಟಿಯನ್ನು ನೈವೇದ್ಯ ಮಾಡುತ್ತಾರೆ. ಮರುದಿನ ಸಂಕ್ರಮಣ. ಈ ದಿನ ಹೆಣ್ಣು ಮಕ್ಕಳು ಹೊಸ ವಸ್ತ್ರ ಧರಿಸಿ ಎಳ್ಳು, ಸಕ್ಕರೆ ಕಬ್ಬು, ನೆಲಗಡಲೆ, ಬಾಳೆ ಹಣ್ಣುಗಳನ್ನು ಮನೆ–ಮನೆಗೂ ಬೀರುವ ಪದ್ಧತಿ ಇದೆ.

ಸಂಕ್ರಮಣದ ಮರುದಿನ ಕರಿ ಎರೆಯುವ ಸಂಪ್ರದಾಯವಿದೆ. ಅಂದು ಮಕ್ಕಳಿಗೆ ಹೊಸ ವಸ್ತ್ರ ತೊಡಿಸಿ ಅಲಂಕರಿಸಿ ತಲೆಯ ಮೇಲೆ ಎಳ್ಳನ್ನು ಸುರಿದು ಆರುತಿ ಮಾಡುತ್ತಾರೆ. ಈ ಮಕರ ಸಂಕ್ರಮಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ತುಂಬೆಲ್ಲಾ ಕಾಮಲಾಪುರ ಗ್ರಾಮವನ್ನೊಳಗೊಂಡ ಐತಿಹ್ಯ ಒಂದಿದೆ ಶರಶಯ್ಯದಲ್ಲಿ ಮಲಗಿದ್ದ· ಭೀಷ್ಮ ಪ್ರಾಣ ಬಿಡಲು ಉತ್ತರಾಯಣ ಪುಣ್ಯಕಾಲಕ್ಕಾಗಿ ಹರಿ ಸ್ಮರಣೆ ಮಾಡುತ್ತಾ ಕಾಯುತ್ತಿದ್ದನೆಂದು ಮಹಾಭಾರತದಲ್ಲಿ ಉಲ್ಲೇಖಿಸಲಾಗಿದೆ.[೧೨೫] ದಕ್ಷಿಣಾಯನದಲ್ಲಿ ಮುಚ್ಚಿದ ಸ್ವರ್ಗದ ಬಾಗಿಲನ್ನು ಈ ದಿನ ತೆರೆಯುತ್ತಾರಂತೆ ಅಲ್ಲದೇ ಈ ಉತ್ತರಾಯಣ ಕಾಲವನ್ನು ದೇವತೆಗಳ ಕಾಲವೆಂದು ಯಜ್ಞ–ಯುಗಾದಿಗಳಿಗೆ ಸಮಸ್ತ ದೇವತಾ ಕಾರ್ಯಗಳಿಗೆ ಶುಭಕಾಲ ಪುಣ್ಯಕಾಲ ಎಂದಾಗಿದೆ. ಈ ಶುಭ ಕಾಲವೇ ಸಂಕ್ರಮಣದ ಕಾಲ.

**ದೀಪಾವಳಿ:** 'ತಮಸೋಮ ಜ್ಯೋತಿರ್ಗಮಯ, ಮೃತ್ಯೋರ್ಮ ಅಮೃತಂಗಮಯ' ಎಂಬ ಉಪನಿಷತ್ ವಾಣಿಯಂತೆ ಕತ್ತಲೆಯಿಂದ ಬೆಳಕಿನೆಡೆಗೆ ಮೃತ್ಯುವಿನಿಂದ ಅಮೃತದೆಡೆಗೆ ಒಯ್ಯುವ ಬೆಳಕಿನ ಹಬ್ಬ ಇದಾಗಿದೆ.[೧೨೬] ಬೆಳಕೆಂಬುದು ಸಕಲ ಕ್ರಿಯೆಗಳಿಗೆ ಪ್ರೇರಕವಾಗಿದೆ.[೧೨೭] ಈ ಬೆಳಕಿನ ಹಬ್ಬಕ್ಕೆ ದೀಪಾವಳಿ, ಹಟ್ಟಿಹಬ್ಬ, ದೀವಳಿಗೆ, ದೀಪಾಲಿಕಾ ಎಂಬ ಬೇರೆ ಬೇರೆ ಹೆಸರುಗಳಿಂದ

ಕರೆಯುತ್ತಾರೆ. ಜನರು ಆಚರಿಸುವ ನಾಡಹಬ್ಬಗಳಲ್ಲಿ ಒಂದಾಗಿದೆ. "ಉಂಡದ್ದೇ ಯುಗಾದಿ, ಮಿಂದದ್ದೇ ದೀಪಾವಳಿ" ಎಂಬಂತೆ ಮೈಮನವನ್ನು ಬೆಳಗಿಸಿ ಶುಭ್ರಗೊಳಿಸುವ ಹಬ್ಬ ಇದಾಗಿದೆ.[೧೨೮] ಈ ಹಬ್ಬವನ್ನು ಮೂರು ದಿನಗಳ ಕಾಲ ಆಚರಿಸುತ್ತಾರೆ. ಮೊದಲನೆಯ ದಿನ ನರಕ ಚತುರ್ದಶಿ, ಎರಡನೆಯ ದಿನ ದೀಪಾವಳಿ ಅಮವಾಸ್ಯೆ, ಮೂರನೇಯ ದಿನ ಬಲಿಪಾಡ್ಯಮಿ.

**ನರಕ ಚರ್ತುದಶಿ:** 'ತೈಲೇ ಲಕ್ಷ್ಮೀ ಜಲೇ ಗಂಗಾ' ಎಂಬಂತೆ ತೈಲದಲ್ಲಿ ಗಂಗೆ ನೆಲೆಸಿರುತ್ತಾಳೆ.[೧೨೯] ಅಭ್ಯಂಜನದಲ್ಲಿ ತೈಲ ಲೇಪಿಸಿ ಬಿಸಿ ನೀರಿನಿಂದ ಸ್ನಾನ ಮಾಡಿದರೆ ಆರೋಗ್ಯಕ್ಕೂ ಒಳ್ಳೆಯದು. ಹೀಗಾಗಿ ಲಕ್ಷ್ಮಿ ಕಟಾಕ್ಷವೂ ಗಂಗೆಯ ಕರುಣೆಯೂ ಲಭಿಸುತ್ತದೆ ಎಂಬ ನಂಬಿಕೆಯೂ ಇದೆ. ಈ ಕಾರಣದಿಂದಲೇ ಹಂಡೆಯಲ್ಲಿ ನೀರು ತುಂಬಿ ಆ ಹಂಡೆಯನ್ನು ಸುಣ್ಣ ಬಣ್ಣಗಳಿಂದ ಸಿಂಗರಿಸಿ ಮಹಾಲಿಂಗ 'ಬಳ್ಳಿ'ಯನ್ನು ಸುತ್ತುವ ಪದ್ಧತಿಯೂ ಇದೆ. ಚತುರ್ದಶಿಯ ದಿನ ಸೂರ್ಯೋದಯಕ್ಕೆ ಮುಂಚೆಯೇ ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡಬೇಕು. ಅಭ್ಯಂಜನದ ನಂತರ ತರ್ಪಣಾದಿಗಳನ್ನು ಕೊಡುವ ಪದ್ಧತಿಯೂ ಇದೆ. ಇದಕ್ಕೆ ಸಂಬಂಧಿಸಿದಂತೆ ಪೌರಾಣಿಕ ಕಥೆಯೊಂದಿದೆ. ಬಲಿಷ್ಠನಾದ ನರಕಾಸುರ ತಪಸ್ಸಿನಿಂದ ಬ್ರಹ್ಮನನ್ನು ಒಲಿಸಿಕೊಂಡು ದೇವಾಸುರರೆಲ್ಲರನ್ನು ಜಯಿಸಿ, ಹದಿನಾರು ಸಾವಿರ ಸುಂದರ ಕನ್ಯೆಯರನ್ನು ಸೆರೆಯಲ್ಲಿಟ್ಟಿದ್ದ ತೃಷ್ಠವಿನ ಮಗಳಾದ ಚತುರ್ದಶಿಯನ್ನು ಅಪಹರಿಸಿದ ಇಂದ್ರನ ಛತ್ರ, ಚಾಮರಗಳನ್ನು ವಶಪಸಿಕೊಂಡಿದ್ದನು. ದೇವರುಗಳ ಪ್ರಾರ್ಥನೆಯಂತೆ ಲೋಕ ಕ್ಷೇಮಕ್ಕಾಗಿ ಅವತರಿಸಿದ ಶ್ರೀ ಲಕ್ಷ್ಮಿ ಕೃಷ್ಣ ನರಕಾಸುರನನ್ನು ಅಶ್ವಿನಿ ಕೃಷ್ಣ ಚತುರ್ದಶಿಯ ನಡುರಾತ್ರಿಯಲ್ಲಿ ಸಂಹರಿಸಿದನು. ಅವನ ಸೆರೆಯಲ್ಲಿದ್ದ ಚತುರ್ದಶಿ ಹಾಗೂ ಹದಿನಾರು ಸಾವಿರ ಕುಮಾರಿಯರನ್ನು ಬಿಡಿಸಿ ಆದಿತ್ಯ ಕರ್ಣ ಕುಂಡಲಗಳನ್ನು ಹಿಂತಿರುಗಿಸಿದನು. ನರಕಾಸುರರನ್ನು ಜಯಿಸಿದ ಶ್ರೀಕೃಷ್ಣನಿಗೆ ನಾರಿಯರೆಲ್ಲಾ ಆರತಿ ಬೆಳಗಿದರು. ಆದರೆ ನರಕಾಸುರನ ತಾಯಿ ಭೂದೇವಿಯ ಆಪೇಕ್ಷೆಯಂತೆ ವರ್ಷಕ್ಕೆ ಅವನನ್ನು ಸ್ಮರಿಸುವ ರೀತಿಯಲ್ಲಿ ಈ ಹಬ್ಬವನ್ನು ನೆಲೆಗೊಳಿಸಿದ ದಿನವೇ ನರಕ ಚತುರ್ದಶಿ.[೧೩೦]

**ದೀಪಾವಳಿ ಅಮವಾಸ್ಯೆ:** ಈ ದಿನ ಹೆಣ್ಣು ಮಕ್ಕಳು ತಮ್ಮ ಸಹೋದರರಿಗೆ ಆರತಿ ಮಾಡುವ ಪದ್ಧತಿ ಇದೆ. ಅಂದು ಲಕ್ಷ್ಮಿಗೆ ವಿಶೇಷ ಪೂಜಾ. ಕಿರಾಣಿ ಅಂಗಡಿ ಮತ್ತು ಉಳಿದ ಅಂಗಡಿಗಳಲ್ಲಿ ಸಾಯಂಕಾಲದ ಪೂಜಾ ವಿಜೃಂಭಣೆಯಿಂದ ನಡೆಯುತ್ತದೆ. ಹೆಣ್ಣು ಮಕ್ಕಳು ಬೆಳಿಗ್ಗೆ ಎದ್ದು ಸಗಣಿಯಿಂದ ಪಾಂಡವರನ್ನು ಮಾಡಿ ಅದಕ್ಕೆ ಉತ್ತರಾಣಿಕಡ್ಡಿ ಅವರೆಹೂ, ಚೆಂಡುಹೂ ಚುಚ್ಚಿ ಪೂಜಿಸಿ ಮನೆಯ ಹೊಸ್ತಲಿನ ಎಡ-ಬಲಕ್ಕೆ ಕುಂಬಿನ ಮೇಲೆ ಅಂಗಳದಲ್ಲಿ ಇಡುತ್ತಾರೆ. ಪಾಂಡವರು ವನವಾಸವನ್ನು ಮುಗಿಸಿ ಬಂದ ನೆನಪನ್ನು ತಂದು ಕೊಡುವ ಆಚರಣೆ ಇದಾಗಿದೆ. ಅಮವಾಸ್ಯೆಯ ಕಗ್ಗತ್ತಲಿನಲ್ಲಿ ದೀಪಗಳ ಸಾಲು ರಾರಾಜಿಸಿದಾಗ ಎಲ್ಲೆಲ್ಲೂ ಕಾಂತಿ ತುಂಬುವ ಹಬ್ಬವೇ ದೀಪಾವಳಿ ಅಮವಾಸ್ಯೆ, ಈ ದಿನದಂದು ಲಕ್ಷ್ಮಿ ಪೂಜೆಗೆ ಅತ್ಯಂತ ಪ್ರಶಸ್ತ್ಯವಾದ ಮುಹೂರ್ತ. ಈ ಪೂಜೆ ಸಾಮಾಜಿಕ ಮತ್ತು ಧಾರ್ಮಿಕ ಈ ಎರಡೂ ದೃಷ್ಠಿಯಿಂದ ಮಹತ್ವದ್ದಾಗಿದೆ. ಮುಂಜಾನೆ ಅರಳಿ, ಮಾವು, ಹತ್ತಿ, ಆಲ ಮತ್ತು ನೇರಳೆಗಳಿಂದ ಪಂಚ ಫಲಗಳಿಂದ ಕೂಡಿದ ನೀರಿನಲ್ಲಿ ಸ್ನಾನ ಮಾಡಿ ಸಂಜೆ ತಳಿರು,

ತೋರಣಗಳಿಂದ ಲಕ್ಷ್ಮಿಯನ್ನು ಅಲಂಕರಿಸಿ ಪೂಜಿಸುತ್ತಾರೆ. ಈ ದಿನ ವಿಷ್ಣು ಲಕ್ಷ್ಮಿಯ ವಾರ್ಷಿಕ ಪುನರ್ ಮಿಲನವಾದ್ದರಿಂದ ಈ ದಿನ ಹೆಚ್ಚು ಮಹತ್ವವನ್ನು ಪಡೆದು ಕೊಂಡಿದೆ.

**ಬಲಿ ಪಾಡ್ಯಮಿ:** ಕಾರ್ತಿಕ ಶುದ್ಧ ಬಲಿ ಪ್ರತಿಪದೆಯ ದಿನ ವಿಷ್ಣು ವಾಮನ ಅವತಾರ ತಾಳಿ ಬಲಿ ಚಕ್ರವರ್ತಿಯ ಹತ್ತಿರ ಮೂರು ಹೆಜ್ಜೆ ಭೂಮಿ ಬೇಡಿದ. ಬಲಿ ಚಕ್ರವರ್ತಿ ಆಗಲಿ ಎಂದು ವಿಶ್ವ ವ್ಯಾಪಕನಾದ ವಿಷ್ಣುವಿಗೆ ಆಕಾಶ ಒಂದು ಹೆಜ್ಜೆಯಾಯಿತು. ಭೂಮಿ ಇನ್ನೊಂದು ಹೆಜ್ಜೆಯಾಯಿತು. ಮೂರನೆಯ ಹೆಜ್ಜೆಯನ್ನು ಎಲ್ಲಿಡಲಿ ಎಂದಾಗ ಬಲಿ ಚಕ್ರವರ್ತಿ ತನ್ನ ತಲೆಯನ್ನೇ ಒಡ್ಡಿದ. ಈ ರೀತಿ ಅವನ ದಾನ ಶೂರತನವನ್ನು ಮೆಚ್ಚಿದ. ವಿಷ್ಣು ಆತನಿಗೆ ವರವನ್ನು ಕೇಳೆಂದಾಗ ಆಗ ಬಲಿ ಚಕ್ರವರ್ತಿ ಜನರು ಈ ನೆನಪಿನಲ್ಲಿ ಈ ದಿನದಂದು ನನ್ನನ್ನು ಪೂಜಿಸುವ ಅವಕಾಶ ಕೊಡು ಎಂದ. ಈ ಮೂರು ದಿನ ಯಾರು ದೀಪ ಬೆಳಗಿಸುತ್ತಾರೋ ಅವರ ಮನೆಯಲ್ಲಿ ಸಹ ಧರ್ಮಿಣೀ ಸ್ತ್ರೀ ಲಕ್ಷ್ಮಿ ನೆಲಸಲಿ ಎಂದು ಬೇಡಿಕೊಂಡ. ಹೀಗೆ ಸಾವಿನ ಕೊನೆಯಲ್ಲಿ ತನ್ನ ವ್ಯಕ್ತಿತ್ವದೊಂದಿಗೆ ಪ್ರಜಾಹಿತವನ್ನು ಬಯಸಿದ ಮಹಾನ್ ವ್ಯಕ್ತಿಯಾಗಿದ್ದಾನೆ. ಹೀಗೆ ಬಲಿ ಇಕ್ಕಿ ಮೆಟ್ಟಿ ಅಲ್ಪದಲ್ಲಿ ಕಲ್ಪವನ್ನು ತೋರಿದ ದಿನವೇ ಬಲಿ ಪಾಡ್ಯಮಿಯಾಗಿದೆ.[೧೩೧] ಈ ಬಲಿ ಪಾಡ್ಯಮಿ ದಿನದಂದು ಇಲ್ಲಿಯ ಜನರು ಬಲಿಯ ನೆನಪಿಗಾಗಿ ಗೋಮಯದ ಬಲಿ ಮೂರ್ತಿ ಮಾಡಿ ಪೂಜಿಸುತ್ತಾರೆ. ಹೊಲದಲ್ಲಿ ಕೈಗೆ ಬಂದ ರಾಗಿ, ಗೋಧಿ, ಕಬ್ಬು, ಭತ್ತದ ತೆನೆಗಳನ್ನು, ಹೂ ಮುಡಿಸಿ, ಪೂಜಿಸುವ ಪದ್ಧತಿ ಇಂದಿಗೂ ಪ್ರಚಲಿತವಿದೆ.

**ಗಣೇಶ ಚತುರ್ಥಿ:** ಭಾದ್ರಪದ ಶುದ್ಧ ಚತುರ್ಥಿಯ ದಿನವೇ ಗಣೇಶ ಚತುರ್ಥಿಹಬ್ಬ. ಗಣೇಶ ಪೂಜೆಗೆ ಜಾತಿ-ಭೇದವಿಲ್ಲ. ಎಲ್ಲಾ ಕೋಮಿನವರು ಗಣಪತಿಯನ್ನು ಪೂಜಿಸುತ್ತಾರೆ. ಈ ಹಬ್ಬವನ್ನು ವಿಶೇಷವಾಗಿ ವಾರ್ಷಿಕ ಪೂಜೆ ಸಲ್ಲಿಸುವ ಹಬ್ಬ. ಮಣ್ಣಿನಿಂದ ಗಣಪತಿಯನ್ನು ರಚಿಸಿ, ಬಣ್ಣ-ಬಣ್ಣಗಳಿಂದ ಅಲಂಕರಿಸಿ, ಸುಂದರವಾದ ಮಂಟಪ ಕಟ್ಟಿ ವಿಶೇಷವಾದ ಪೂಜೆ ಸಲ್ಲಿಸುವ ಪದ್ದತಿ ಉಳಿದೆಡೆಯಲ್ಲಿಯಂತೆ ಕಾಮಲಾಪುರ ಗ್ರಾಮದಲ್ಲೂ ಬಂದಿದೆ. ಗಣಪತಿಗೆ ಅಗ್ರಪೂಜೆ. ಗಣೇಶ ಎಂದರೆ ಗಣಗಳಿಗೆ ನಾಯಕ ಎಂದರ್ಥ.[೧೩೨] ಗಣೇಶ ಹಬ್ಬ ಜನಲೋಕದ ಹಬ್ಬ. ಗಣೇಶ ಹಬ್ಬದ ಮುನ್ನ ಗೌರಿ ಹಬ್ಬ ಮಾಡಿ ಗೌರಿ ಗಣೇಶವನ್ನು ಒಂದೇ ದಿನ ಅದರಲ್ಲೂ ವಿಶೇಷತ ಅನಂತ ಚತುದರ್ಶಿಯ ದಿನದಂದು ಕಳಿಸುವ ಸಂಪ್ರದಾಯವಿದೆ. ವಿಘ್ನಗಳನ್ನು ನಾಶ ಮಾಡುವ ಅಧಿದೇವ ಗಣೇಶನಾದುದರಿಂದ ಕಾಯ, ವಾಚ, ಮನಸಾ, ಭಕ್ತಿಯಿಂದ ಪೂಜಿಸುವ ಪದ್ದತಿ ಬೆಳೆದು ಬಂದಿದೆ.

**ಕಾಮದಹನ ಹಬ್ಬ:** ಹೋಳಿ ಹಬ್ಬದ ಆಚರಣೆ ಭಾಗವತ ಪುರಾಣದಷ್ಟು ಪ್ರಾಚೀನ.[೧೩೩] ಕ್ರಿ.ಶ ೭ನೇ ಶತಮಾನದ ಶ್ರೀ ಹರ್ಷನ ನಾಗಾನಂದ ನಾಟಕದಲ್ಲಿ ಹೋಳಿ ಹಬ್ಬದ ಪ್ರಸ್ತಾಪವಿದೆ. ಬಂಗಾಲದ ಚೈತನ್ಯ ದೇವನು ಈ ಹಬ್ಬಕ್ಕೊಂದು ಹೊಸ ರೂಪ ನೀಡಿ ಪ್ರೀತಿಯ ದ್ಯೋತಕವಾಗಿ ಕಾಮಹಬ್ಬ ಆಚರಿಸಲು ಸೂಚಿಸಿದನೆಂಬ ಪ್ರತೀತಿ ಇದೆ.[೧೩೪] ಈ ಹಬ್ಬವನ್ನು ವಸಂತೋತ್ಸವ, ಬಸಂತ ಹಬ್ಬ. ವಸಂತನ ಹಬ್ಬ ಹೀಗೆ ಬೇರೆ-ಬೇರೆ ಹೆಸರುಗಳಿಂದ ಕರೆಯುವ ವಾಡಿಕೆ ಇದೆ. ಪ್ರಸ್ತುತ ಕಾಮಲಾಪುರ ಗ್ರಾಮದಲ್ಲಿ ಈ ಉತ್ಸವ ವಿಜಯನಗರ ಕಾಲದಿಂದ ಇತ್ತೆಂಬುದರ ಬಗ್ಗೆ ಸಾಕಷ್ಟು ಪುರಾವೆಗಳಿವೆ. ಕೃಷ್ಣ ದೇವರಾಯನ ಕಾಲದಲ್ಲಿ ನಡೆದ ಸಾಂಪ್ರದಾಯಿಕ ವಸಂತೋತ್ಸವವನ್ನು ಕಂಡ ಪೋರ್ಚಗೀಸರ

ರಾಯಭಾರಿ ಡಾಮಿಂಗೋ ಫಯಾಸನು ಇದನ್ನು ದಾಖಲಿಸಿದ್ದಾನೆ.[೧೩೫] ಇದು ಬಣ್ಣದ ನೀರಿನಿಂದ ಓಕುಳಿ ಆಡುತ್ತಿದ್ದರೆಂದಿದೆ. ಈ ಪಾಲ್ಗುಣ ಚೈತ್ರ ಪೌರ್ಣಿಮೆಯನ್ನು ಹೋಳಿ ಹುಣ್ಣಿಮೆ ಎಂದೂ ಕರೆಯುತ್ತಾರೆ. ಹುಣ್ಣಿಮೆ ರಾತ್ರಿ ಈ ಕಾಮನ ಸುತ್ತಲೂ ಕುರುಳು(ಭರಣಿ) ಹಾಗೂ ಕಟ್ಟಿಗೆಗಳನ್ನು ಇಟ್ಟು ಸುಟ್ಟು ಬಿಡುತ್ತಾರೆ. ಸುಟ್ಟ ಬೂದಿಯನ್ನು ತಮ್ಮ ಹೊಲಗಳಲ್ಲಿ ರೈತರು ಚೆಲ್ಲುವ ಪದ್ದತಿಯೂ ಇದೆ. ಇದರಿಂದ ಬೆಳೆಗಳು ಸಂಮೃದ್ಧಿಯಾಗಿ ಬೆಳೆಯುತ್ತವೆ ಎಂಬ ನಂಬಿಕೆಯೂ ಇದೆ.[೧೩೬]

**ಮೊಹರಂ ಹಬ್ಬ:** ಮೊಹರಂ ಅಥವಾ ಪೀರ್ಲ ಹಬ್ಬ ಕಾಮಲಾಪುರ ಪರಿಸರದಲ್ಲಿ ಪ್ರಚಲಿತವಿದೆ. ಈ ಹಬ್ಬವನ್ನು ಅಲಾಮಿಹಬ್ಬವೆಂತಲೂ, ರಮಾಲಪ್ಪನ ಹಬ್ಬ, ಅಲ್ಲಾಸಾಬ ಹಬ್ಬ, ಬಾಬಯ್ಯ ಹಬ್ಬ ಎಂಬ ವೈವಿಧ್ಯಮಯ ಹೆಸರುಗಳಿವೆ. ಇದಕ್ಕೆ ಹಿನ್ನಲೆಯಾಗಿ ಐತಿಹ್ಯ ಒಂದಿದೆ. ಇಸ್ಲಾಂ ಧರ್ಮದ ಸಂಸ್ಥಾಪಕ ಮಹಮ್ಮದ್ ಪೈಗಂಬರ್ ತೀರಿಕೊಂಡ ಹಲವು ವರ್ಷಗಳ ನಂತರ ನಡೆದ ಘಟನೆಯೇ ಈ ಹಬ್ಬಕ್ಕೆ ಪ್ರೇರಣೆಯಾಗಿದೆ.[೧೩೭]

**ಐತಿಹ್ಯ:** ಪೈಗಂಬರನ ಅಳಿಯನಾದ ಹಜರತ್ ಅಲಿಯು ಜನರನ್ನು ಮಕ್ಕಳಂತೆ ನೋಡಿಕೊಳ್ಳುತ್ತಿದ್ದನು. ಈತನ ನಂತರ ಈತನ ಹಿರಿಯ ಮಗನಾದ ಹಜರತ್ ಇಮಾಮ್ ಹಸನ್ ಅಧಿಕಾರಕ್ಕೆ ಬಂದನು. ಆದರೆ ಇವನ ಕಾಲದಲ್ಲಿ ಸಿರಿಯಾದ ಅಧಿಕಾರಿಯಾಗಿದ್ದ ಅಮೀರ್ ಮುಮಾಯಿ ಹಜರತ್ ಇಮಾಮ್ ಹಸನ್‌ನನ್ನು ಸೋಲಿಸಿ ಪೀಠವನ್ನು ಏರಿದನು. ಅಷ್ಟಲ್ಲದೆ ತನ್ನ ಮಗ ಹಿಜರನೇ ಪಟ್ಟಕ್ಕೆ ಬರುವಂತೆ ನೋಡಿಕೊಂಡನು. ಜನಾಭಿಪ್ರಾಯವನ್ನು ಕಡೆಗಣಿಸಿದ್ದರಿಂದ ಮಹಮ್ಮದ್ ಪೈಗಂಬರನ ಮೊಮ್ಮಗನಾದ ಇಮಾಮ್ ಹಸನ್‌ಗೆ ಮೊರೆ ಹೋದರು ಆದರೆ ಹಿಜರನ ಮೋಸಕ್ಕೆ ಇಮಾಮ್ ಹಸನ್ ಬಲಿಯಾಗಿ ಹಿಜರಿನ ಸೈನ್ಯಕ್ಕೆ ಸೆರೆ ಸಿಕ್ಕು ಹಿಂಸೆಗೊಳಗಾಗುತ್ತಾರೆ. ಅಲ್ಲದೆ ಮಗು ಅಲಹಸನ್‌ಗರನನ್ನು ಹತ್ಯೆ ಮಾಡಲಾಗುತ್ತದೆ. ಹೋರಾಟದ ಹತ್ತನೇ ದಿನದಂದು ಶಿವಾಂ ಮತ್ತು ಶಮ ಎಂಬುವನು ಹುಸೇನನ್ನು ಕೊಂದು ಬಿಡುತ್ತಾನೆ. ನ್ಯಾಯಕ್ಕಾಗಿ ಸತ್ತರ ಈ ಕಣ್ಣೀರಿನ ಕಥೆ ಈಗಲೂ ಕಾಮಲಾಪುರ ಗ್ರಾಮದಲ್ಲಿ ಪ್ರಚಲಿತವಿದೆ.[೧೩೮] ಮೊಹರಂ ಹಬ್ಬ ಪ್ರಾರಂಭವಾಗುವ ಮೊದಲೇ ಸುಣ್ಣ ಬಳಿಯುವ ಮೂಲಕ ಮನೆಯನ್ನು ಶುದ್ಧಗೊಳಿಸುತ್ತಾರೆ. ಮಸೀದಿ ಕಟ್ಟೆಯೊಂದರಲ್ಲಿ ಪ್ರತಿಷ್ಠಾಪಿಸಿ ದೇವರನ್ನು ಪೂಜಿಸುತ್ತಾರೆ. ಈ ದೇವರಿಗೆ ಪೀರ್ಲ ಎಂದೂ ಹೆಸರು ಇದೆ. ಈ ಸಂದರ್ಭದಲ್ಲಿ ಆವೇಶಗೊಂಡು ಭವಿಷ್ಯ ಹೇಳುವ, ಭೂತವನ್ನು ಬಿಡಿಸುವ ಕಾರ್ಯಕ್ರಮವೂ ಇರುತ್ತದೆ. ಹತ್ತನೇ ದಿನದವರೆಗೂ ಮೊಹರಂ ಪದ್ಯ ಹಾಡುವ ಕಾರ್ಯಕ್ರಮ ನಡೆಯುತ್ತದೆ. ಹತ್ತನೇ ದಿನ ದೇವರನ್ನು ಎತ್ತಿಕೊಂಡು ಮೆರವಣಿಗೆ ನಡೆಸಿ ಊರ ಅಂಚಿನಲ್ಲಿರುವ ಹಳ್ಳದಲ್ಲಿ ದೇವರಿಗೆ ಸ್ನಾನ ಮಾಡಿಸಿ ತಿರುಗಿ ಬಂದಾಗ ಮೊಹರಂ ಹಬ್ಬದ ಆಚರಣೆ ಮುಕ್ತಾಯವಾಗುತ್ತದೆ.

ಪೀರ್ಲ ದೇವರ ಆಚರಣೆಯಲ್ಲಿ ದಲಿತರು, ಬೇಡರು, ಅಗಸರು, ಆಯಗಾರ ಜನಾಂಗದವರೂ ಭಾಗವಹಿಸುವುದು ವಿಶೇಷ. ಈ ವಿಶೇಷತೆ ಹಿಂದೂ-ಮುಸ್ಲಿಂಮರ ಭಾವೈಕ್ಯತೆಯನ್ನು ಸೂಚಿಸುತ್ತದೆ. ಹುಲಿ ವೇಷ ಧರಿಸಿ ಮನೆ-ಮನೆಗೆ ತಿರುಗಿ ಹಣ-ದವಸ ಧಾನ್ಯಗಳನ್ನು ಸಂಗ್ರಹಿಸುತ್ತಾರೆ. ಅಲ್ಲದೆ ಪೀರ್ಲ ದೇವರಿಗೆ ಹರಿಕೆ ಒಪ್ಪಿಸುತ್ತಾರೆ. ಹಲಗೆ, ವಾದ್ಯ ನುಡಿಸುತ್ತಾ ಹುಸೇನರ ಸ್ಮರಣೆ ಮಾಡುತ್ತಾರೆ. ವಿಶೇಷತಃ ಕೆರೆ ಅಥವಾ ನದಿ ಅಥವಾ ಹಳ್ಳದ ದಡದಲ್ಲಿ ಮಾಡುವ ಪೀರ್ಲ ವಿಸರ್ಜನೆ ಆಚರಣೆಯಲ್ಲಿ

ಸಕ್ರಿಯವಾಗಿ ಭಾಗವಹಿಸುತ್ತಾರೆ. ಉತ್ತರ ಕರ್ನಾಟಕದಲ್ಲಿ ಈ ಮೊಹರಂ ಹಬ್ಬದ ಆಚರಣೆ ಬಹಳ ವೈಶಿಷ್ಠ ಪೂರ್ಣವಾಗಿದೆ. ಅಮವಾಸ್ಯೆ ಕಳೆದು ಚಂದ್ರನ ದರ್ಶನವಾದ ಮರುದಿನ ಅಂದರೆ ಮೊಹರಂನ ಮೊದಲ ದಿನ 'ಗುದ್ಲಿ ಬಿತ್ತು' ಎಂಬ ಕಾರ್ಯಕ್ರಮ ನಡೆಯುತ್ತದೆ. ಮುಲ್ಲಾ ಮೊದಲುಗೊಂಡು ಮಸೀದಿಯ ಮುಂಭಾಗ ಹಿಂದಿನ ವರ್ಷ ಅಲ್ಲಾಯಿ ತೆಗೆದ ಸ್ಥಳಕ್ಕೆ ಬಂದು ಸೇರುತ್ತಾರೆ. ಅನಿರ್ದಿಷ್ಠ ಸ್ಥಳದಲ್ಲಿ ನಾಲ್ಕು ಕಲ್ಲು ಬಾರೆ ಮುಳ್ಳು ಇಡಲಾಗುತ್ತದೆ. ಊರ ಜನತೆಯ ಸಮ್ಮುಖದಲ್ಲಿ ಮುಲ್ಲಾನು ಆ ಕಲ್ಲಿನ ಮೇಲೆ ನೀರು ಚಿಮುಕಿಸಿ ಕುಂಕುಮ, ವಿಭೂತಿ ಹಚ್ಚಿ ಕಾಯಿ ಒಡೆದು ನಂತರ ಕಲ್ಲು ಮುಳ್ಳುಗಳನ್ನು ಇಡುತ್ತಾರೆ. ಹಿರಿಯರು ಮಾರ್ಗದರ್ಶನದಲ್ಲಿ ಸಣ್ಣ-ಪುಟ್ಟ ಮಕ್ಕಳು ಎಲ್ಲರೂ ಸೇರಿ ಐದು ದಿನಗಳವರೆಗೂ ನೆಲ ಅಗೆದು ಅಗಲವಾದ ಗುಂಡಿ ತೋಡುತ್ತಾರೆ. ಹಿಂದಿನ ವರ್ಷ ಇಟ್ಟಂತಹ ನಾಣ್ಯದ ಕುಡಿಕೆಯನ್ನು ತೆಗೆದು ಮುಲ್ಲಾನಿಗೆ ಒಪ್ಪಿಸಲಾಗುತ್ತದೆ.

ಮನೆ ಮನೆಗೂ ಹೋಗಿ ಹಣ ಸಂಗ್ರಹಿಸಿ ದೇವರ ಅಲಂಕಾರಕ್ಕೆ ತಗಲುವ ಖರ್ಚಿಗೆ ಉಪಯೋಗಿಸುತ್ತಾರೆ. ಈ ಹಬ್ಬದ ಸಂದರ್ಭದಲ್ಲಿ ಪಂಜು, ಚಂದ್ರ, ನಕ್ಷತ್ರವನ್ನು ದೇವರೆಂದು ಪೂಜಿಸುತ್ತಾರೆ. ಇದು ಕಾಮಲಾಪುರ ಗ್ರಾಮದಲ್ಲಿ ಬೆಳೆದು ಬಂದ ಮೊಹರಂ ಹಬ್ಬದ ಆಚರಣೆಯಾಗಿದೆ.

**ಆಚರಣೆಗಳು:** ಜಾನಪದ ಪ್ರಮುಖ ಪ್ರಕಾರಗಳಲ್ಲಿ ಒಂದಾದ ಈ ಆಚರಣೆಗಳು ಜಾನಪದರಲ್ಲಿ ಹಾಸುಹೊಕ್ಕಾಗಿವೆ. ಇವು ಬಹು ಪುರಾತನದಿಂದಲೂ ಚಾಚು ತಪ್ಪದೇ ಆಚರಿಸುತ್ತಾ ಬಂದಿದ್ದಾರೆ. ಇವು ವ್ಯಕ್ತಿಗೆ ಬೌದ್ಧಿಕ ಮತ್ತು ಭಾವನಾತ್ಮಕ ಭಕ್ತಿ, ಶ್ರದ್ಧೆ, ನಂಬಿಕೆ ಅತಿಯಾದಾಗ ಮಾರ್ಪಾಡುಗಳಾಗುವುದೇ ಆಚರಣೆ ಪ್ರಸ್ತುತ ಕಾಮಲಾಪುರದಲ್ಲಿನ ಆಚರಣೆಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಮಣ್ಣೆತ್ತಿನ ಅಮವಾಸ್ಯೆ:** ಅಮವಾಸ್ಯೆಯ ದಿವಸ ಎತ್ತುಗಳಿಗೆ ಅಲಂಕರಿಸಿ ಊರಲ್ಲಿ ಮೆರೆಸುತ್ತಾರೆ. ಅಗಸಿ ಬಡಗಲದಲ್ಲಿ ಎತ್ತುಗಳನ್ನು ಕಟ್ಟಿ ಕರಿ ಕಡಿದರೆ ಮುಂಜಾನೆಯ ಹೊತ್ತು ಕುಂಬಾರನಲ್ಲಿಗೆ ಹೋಗಿ ಒಂದೊಂದು ಸೇರು ಜೋಳ ಕೊಟ್ಟು ಮಾಡಿಟ್ಟಿದ್ದ ಮಣ್ಣಿನ ಎತ್ತುಗಳನ್ನು ಹೊತ್ತುಕೊಂಡು ಮನೆಗೆ ತಂದು ಎತ್ತುಗಳಿಗೆ ಪೂಜೆ ಸಲ್ಲಿಸುತ್ತಾರೆ. ಬಂಡಿಗಳಲ್ಲಿ ಎತ್ತುಗಳನ್ನು ಕೂಡಿಸಿ ಮೆರವಣಿಗೆ ಮಾಡಿ ಹಳ್ಳ-ಹೊಳೆಗಳಲ್ಲಿ ಸ್ನಾನ ಮಾಡಿಸಿ ಬಟ್ಟೆಗಳನ್ನು ತೊಡಿಸುತ್ತಾರೆ.[೧೪೯] ಮತ್ತೆ ಪುನಃ ಎತ್ತುಗಳನ್ನು ಬಂಡಿಯಲ್ಲಿ ತರುವಾಗ ಎತ್ತುಗಳ ಮೇಲೆ ಎಸೆಯುವ ಪದ್ಧತಿ ಇದೆ. ಮೆರವಣಿಗೆ ಬರುವಾಗ ಅಗಸಿಯಲ್ಲಿ ಬೇವಿನ ತಪ್ಪಲಿನ ಭುಜದ ಮೇಲೆ ಅಥವಾ ತಲೆಯ ಮೇಲೆ ಹೊತ್ತುಕೊಂಡು ಮೆರವಣಿಗೆ ಮಾಡುವ ಪದ್ದತಿಯೂ ಇದೆ. ಎತ್ತುಗಳಿಗೆ ಪೂಜೆ ಮಾಡಿ ತೆಂಗಿನ ಕಾಯಿ ಒಡೆಯುತ್ತಾರೆ. ಈ ಆಚರಣೆಯಲ್ಲಿ ಎಲ್ಲಾ ಜನರೂ ಭಾಗವಹಿಸುತ್ತಾರೆ. ಕೆಲವರು ಈ ಎತ್ತುಗಳನ್ನು ಬರುವ ವರುಷದವರೆಗೆ ಜಗಲಿಯ ಮೇಲೆ ಇಟ್ಟು ಪೂಜೆ ಮಾಡಿ ಹೊಳೆಗ್ಯೊದು ನೀರಿನಲ್ಲಿ ಬಿಡುತ್ತಾರೆ. ಹೆಚ್ಚಿನ ಮಟ್ಟಿಗೆ ಈ ಆಚರಣೆಯಲ್ಲಿ ಐದರಿಂದ ಹದಿನೈದು ವರುಷದ ಹುಡುಗರು ಭಾಗವಹಿಸುತ್ತಾರೆ.[೧೫೦]

**ಎಳ್ಳಾಮವಾಸ್ಯೆ :** "ಕಲ್ಲ ಕಡಬ ಮಾಡಿ ಮುಳ್ಳ ಸ್ಯಾವಿಗೆ ಮಾಡಿ ಬನ್ನಿಯ ಎಲೆಯ ಪತರೊಳಗೆ । ಪಾಂಡವರು ಉಂಡು ಹೋಗ್ಯಾರ ವನವಾಸ ಎಂಬ ಜಾನಪದ ಗೀತೆ ಇಂದಿಗೂ ಎಳ್ಳಮವಾಸ್ಯೆಯು ಆಚರಣೆಯ ದಿನ ಈ ಗೀತೆ ಇಂದಿಗೂ ಈ ಗ್ರಾಮದಲ್ಲಿ ಪ್ರಚಲಿತವಿದೆ.[೧೫೧] ರೈತರಿಗಂತೂ ಈ ಹಬ್ಬ

ಕೃಷಿ ಜೀವನದಲ್ಲಿ ಮಹತ್ವ ಪೂರ್ಣದ್ದಾಗಿದೆ. ರಾತ್ರಿ ಇರುವಾಗಲೇ ಒಕ್ಕಲಿಗರು ಉಂಡಿ ಹಿಂಡಿಪಲ್ಲೆ, ಕಡಬು, ಬಾಜಿ, ಭರ್ಜಿ ಹೋಳಿಗೆ ಮಾಡಿದ್ದನ್ನೆಲ್ಲಾ ಸೇರಿಸಿ ತಮ್ಮ ಹೊಲಗಳ ಸುತ್ತ ಹಾಕಿ ಬರುವ ಪದ್ಧತಿ ಇದೆ. ಯಾರಿಗೂ ಕಾಣದಂತೆ ಹೊಲದ ಸುತ್ತ ಹಾಕಿ ಬರುವುದರಿಂದ, ಈ ಸರಗಕ್ಕೆ ಕಳ್ಳ ಸರಗ ಎನ್ನುವ ಹೆಸರೂ ಇದೆ. ಮಧ್ಯಾಹ್ನ ಆಗುವ ಮೊದಲು ಮನೆ ತೊಳೆದು ಸಾರಿಸಿ ಜಳಕ ಮಾಡಿ, ಉಡುಗೆ ತೊಟ್ಟು, ರಾತ್ರಿಯಲ್ಲಿ ಮಾಡಿದ ಉಂಡಿ, ಹೋಳಿಗೆ, ಕಡಬನ್ನು ತುಂಬಿಕೊಂಡು ಬಂಡಿಕಟ್ಟಿ ತಮ್ಮ ಹೊಲಕ್ಕೆ ಹೋಗುತ್ತಾರೆ. ಬನ್ನಿಮರದ ಕೆಳಗೆ ಪಾಂಡವರ ನೆನಪನ್ನು ತರುವ ಐದು ಕಲ್ಲುಗಳನ್ನು ತೊಳೆದು ಕುಂಕುಮ ಹಚ್ಚಿ ಪೂಜಿಸಿ ನೈವೇದ್ಯ ಮಾಡುತ್ತಾರೆ. ಅಲ್ಲದೆ ಹೊಲದಲ್ಲಿ ಸರಗ ಹೊಡೆದು ಬರುತ್ತಾರೆ. ಇದರ ಉದ್ದೇಶ ಫಲೋತ್ಪತ್ತಿಯ ಪೀಡೆಯನ್ನು ತೊಲಗಿಸುವುದು. ಸರಗ ಹೊಡೆದ ನಂತರ ಎಲ್ಲಾ ಜನ ಸೇರಿ ಕುಳಿತು ಊಟವನ್ನು ಮಾಡುತ್ತಾರೆ. ಹೊಲದಲ್ಲಿ ಬೆಳೆದ ಜೋಳದ ತೆನೆಗಳನ್ನು ಮುರಿದು ಮನೆಯ ಮೇಲೆ ಜಗಲಿಯ ಮೇಲಿಟ್ಟು ಪೂಜಿಸುತ್ತಾರೆ.[೧೪೨]

ಕೆಲವೊಮ್ಮೆ ಈ ಹಬ್ಬವನ್ನು ಮೂರು-ನಾಲ್ಕು ದಿನಗಳ ಮೊದಲು ಲಕ್ಷ್ಮಿದೇವಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಇದನ್ನೇ ಆಡು ಭಾಷೆಯಲ್ಲಿ ಲಗುಸುಮಿ ಮಾಡುವುದು ಎನ್ನುತ್ತಾರೆ. ಮನೆಯಲ್ಲಿ ಕರಿ ಲಗಸಮಿ ಇದ್ದರೆ (ಕರಿ ಲಕ್ಷ್ಮಿ ಇದ್ದರೆ) ಕರೀ ಸೀರೆ, ಕುಪ್ಪಸ, ಕೆಂಪು ಲಗಸಮಿ ಇದ್ದರೆ (ಕೆಂಪು ಲಕ್ಷ್ಮಿ ಇದ್ದರೆ) ಕೆಂಪು ಸೀರೆಯನ್ನು ತಂದು ಮನೆಯಲ್ಲಿರುವ ಕಂಬದ ಬಳಿ ಇಟ್ಟು ಮುತ್ತೈದೆಯರೊಂದಿಗೆ ಪೂಜಿಸುತ್ತಾರೆ. ಅಲ್ಲದೆ ಬಂದ ಮುತ್ತೈದೆಯರಿಗೆ ಊಟವನ್ನು ಉಣ ಬಡಿಸುತ್ತಾರೆ. ಲಗಸಿಮಿ ಮಾಡುವ ಪದ್ಧತಿ ಹೊರಗಿನ ಜನರು ನೋಡಬಾರದೆಂದು ರಾತ್ರಿಯಿಂದ ಬೆಳಗಿನ ಜಾವದವರೆಗೂ ಆಚರಿಸುತ್ತಾರೆ.

ಒಂದು ವೇಳೆ ಬಾಗಿಲು ತೆರೆದರೆ ಮನೆಯ ಲಕ್ಷ್ಮಿ ಹೊರಗೆ ಹೋಗುವಳೆಂಬ ಪ್ರತೀತಿ ಇದೆ. ಊಟವಾದ ನಂತರ ಉಳಿದ ಭಕ್ಷ-ಭೋಜನಗಳನ್ನು ಹೊರಗೆ ಚೆಲ್ಲಿದರೆ ಲಕ್ಷ್ಮಿ ಹೋಗುವಳೆಂಬ ಪ್ರತೀತಿಯೂ ಇದೆ. ಹೀಗಾಗಿ ಮನೆಯ ಆವರಣದೊಳಗೆ ತಗ್ಗು-ತೋಡಿ ಮುಚ್ಚಿಡುವ ಪದ್ಧತಿ ಈಗಲೂ ಇದೆ. ಇದು ಈ ಗ್ರಾಮದ ಜನಪದದಲ್ಲಿರುವ ನಂಬಿಕೆ.

**ಕಾರ ಹುಣ್ಣಿಮೆ:** ಕೃಷಿಕರು ಮಾಡುವ ವೈಶಿಷ್ಟ್ಯ ಪೂರ್ಣವಾದ ಆಚರಣೆ ಇದು. ಈ ಸಂಪ್ರದಾಯ ಹೆಚ್ಚಿನ ಮಟ್ಟಿಗೆ ಜೂನ್ ತಿಂಗಳಲ್ಲಿ ಮಳೆಗಾಲದಲ್ಲಿ ಆಚರಿಸುವ ಆಚರಣೆ ಇದಾಗಿದೆ. ಮಳೆ ಇಲ್ಲದಿದ್ದರೆ ಬೆಳೆಇಲ್ಲ. ಮಳೆಯೇ ಬೆಳೆಗೆ ಮೂಲ. ಅದಕ್ಕಾಗಿ ರೈತರು ಕಾರು ಹುಣ್ಣಿಮೆಯನ್ನು ಅತ್ಯಂತ ಗೌರವದಿಂದ ಆಚರಿಸುತ್ತಾರೆ.[೧೪೩] ಕಾರು ಹುಣ್ಣಿಮೆಯ ಹಿಂದಿನ ದಿನ ಚತುರ್ದಶಿ ಜೋಳದ ಕಿಚಡಿ ಹೊನ್ನುಗ್ಗಿ ಮಾಡಿ, ಎತ್ತುಗಳಿಗೆ, ನೈವೇದ್ಯ ಮಾಡುವ ಪದ್ಧತಿ ಇದೆ. ಸಂಜೆ ಎತ್ತುಗಳ ಮೈ ತೊಳೆದು ಚಂದ್ರ, ಕುಂಕುಮ ಹಚ್ಚಿ, ಪೂಜೆ, ಸಲ್ಲಿಸುತ್ತಾರೆ. ಮೈಮೇಲೆ ಬಣ್ಣ-ಬಣ್ಣದ ವಸ್ತುಗಳನ್ನು ಹಾಕಿ, ಸಿಂಗಾರ ಮಾಡಿ, ಕೊಂಬಿನ ತುದಿಗೆ ಬೆಳ್ಳಿಯ ಕಚವ ಹಾಕಿ ಸಿಂಗರಿಸುತ್ತಾರೆ.[೧೪೪] ಈ ವೇಳೆಗೆ ಬೇಸಾಯದ ಸಲಕರಣೆಗಳಾದ ನೇಗಿಲು, ಕುಂಟೆ, ಕೂರಿಗೆ, ಎಡಿ, ದುಂಡೆ, ಸದೆ, ಕುಡಿಗಳು ಇಟ್ಟು ಇತ್ಯಾದಿಗಳನ್ನು ಪೂಜೆ ಮಡುವ ಆಚರಣೆ ಇಂದಿಗೂ ನಡೆದು ಬಂದಿದೆ. ಕಾರು ಹುಣ್ಣಿಮೆ ದಿನ ಸಾಯಂಕಾಲ ಎತ್ತುಗಳನ್ನು ದೇವಾಲಯದ ಮುಂದೆ ತಂದು ಮೆರವಣಿಗೆ ಮಾಡುತ್ತಾರೆ.

ಮೆರವಣಿಗೆ ಮುಗಿದ ನಂತರ ಮನೆಗೆ ಬರುವಗ ಮನೆಯ ಮುಂದೆ ದನಗಳನ್ನು ಸಾಲಾಗಿ ನಿಲ್ಲಿಸಿ ಮಧ್ಯೆ ಕರೋಳಗಿತ್ತಿ (ಋತುಮತಿಯಾಗದ ದನ) ಅವಳನ್ನು ನಿಲ್ಲಿಸುತ್ತಾರೆ. ನೈವೇದ್ಯವನ್ನು ತನ್ನ ತಲೆಯ ಮೇಲಿಟ್ಟು ಐದು ಸುತ್ತು ಪದಕ್ಷಿಣೆ ಹಾಕಿ ನೈವೇದ್ಯಗಳನ್ನು ಎತ್ತುಗಳ ಮುಂದೆ ಇಡುತ್ತಾರೆ. ಇದರ ಉದ್ದೇಶ ಇಂದಿನಿಂದ ಬೇಸಾಯದ ಕೆಲಸ ಪ್ರಾರಂಭವಾಯಿತೆಂದು ಎತ್ತುಗಳಿಗೆ ಮನವರಿಕೆ ಮಾಡಲು ಈ ಆಚರಣೆ ನಡೆದು ಬಂದಿದೆಯೆಂಬ ಪ್ರತೀತಿ ಇದೆ.

**ಹೋಳಿ ಹುಣ್ಣಿಮೆ:**– 'ಕಾಮನಾಟ, ಕಲ್ಲಿನಾಗ, ಭೀಮನಾಟ, ಬಿಲ್ಲಿನಾಗ

ಕಪ್ಪಿನಾಟ, ನೀರಾಗೋ । ಹುಡುಗ

ರಾಟ ಹೋಳ್ಯಾಗೊ ಎಂಬ ಜಾನಪದ ಕಾವ್ಯ ಹೋಳಿ ಹುಣ್ಣಿಮೆಯನ್ನು ನೆನಸುತ್ತದೆ.[೧೪೫] ಶಿವರಾತ್ರಿ ಹದಿನೈದು ದಿವಸಗಳು ಮುಗಿಯುತ್ತಲೇ ಚಂದ್ರ ಕಾಣಿಸಿಕೊಂಡಾಗ ಹೋಳಿ ಹುಣ್ಣಿಮೆ ಬಂದಿತೆಂದು ಕೊಳ್ಳುವರು. ಅಂದಿನಿಂದಲೇ ಹುಡುಗರು ಕಟ್ಟಿಗೆ, ಕುರುಳು ಕಳುವು ಮಾಡಿಕೊಳ್ಳುವುದು ಕೆಲವೊಬ್ಬರು ಎಮ್ಮೆ, ಎತ್ತುಗಳ ಮೇಲೆ ಕುಳಿತು ಕಳವು ಮಾಡಿ ಕುಳ್ಳು ಇಟ್ಟುಕೊಂಡು ಚಾವಡಿಗೆ ತಂದು ಒಪ್ಪಿಗೆ ಇಡುವ ಪದ್ದತಿ ಇದೆ.

ಊರ ಮಧ್ಯದಲ್ಲಿ ಕುಳ್ಳು ಕಟ್ಟಿಗೆ ತಂದು, ಊರ ಮಧ್ಯದಲ್ಲಿ ಇಟ್ಟು ವಾಲ್ಮೀಕಿ ಜನಾಂಗದ ಮನೆಯವರು ಬೆಂಕಿ ತಂದು ಪೂಜೆ ಮಾಡಿ ಕುಣಿದಾಡುವರು. ಇಡೀ ವರುಷ ತಮ್ಮ ಅಂಗಾಂಗಗಳಲ್ಲಿ ತುಂಬಿಕೊಂಡು ಕಾಮನ ವಿಷವನ್ನು ಹಾಡಿನ ಮೂಲಕ ಕಾರಿಕೊಂಡು, ಸಂತೃಪ್ತರಾಗುವರು. ಕಾಮನನ್ನು ಸುಟ್ಟು ಹೊಲೆಗೆ ಬೆಂಕಿ ಹಚ್ಚಿದರೆ ಆವರುಷ ನಮಗೆ ಸುಖ–ಶಾಂತಿ ಸಿಗುತ್ತದೆ ಎಂಬ ನಂಬಿಕೆ ಇವರದಾಗಿದೆ.

**ಇಳಗೂರಿಗೆ ಹಬ್ಬ:** ಬಿತ್ತನೆ ಕೆಲಸ ಮುಗಿದ ನಂತರ ಇಳಗೂರಿಗೆ ಹಬ್ಬವನ್ನು ಆಚರಿಸುತ್ತಾರೆ. ಹೊಲದಲ್ಲಿ ಕೂರಿಗೆಯನ್ನು ಪೂಜೆ ಮಾಡಿ, ಉದ್ದಿನಬೇಳೆ, ಹಸಿಮೆಣಸಿನ ಕಾಯಿ, ಹಾಕಿ ಮಾಡಿದ ಕಡಬು ಮಾಡಿ ಎತ್ತುಗಳಿಗೆ ನೈವೇದ್ಯ ಮಾಡಿ ಬಂದವರಿಗೂ ಹಂಚುತ್ತಾರೆ. ಈ ರೀತಿ ಹಂಚುವುದರಿಂದ ಬಸವಣ್ಣನ ಹೆಗಲ ಭಾರ ಕಡಿಮೆಯಾಯಿತು ಎಂಬ ಭಾವನೆ ಈ ಗ್ರಾಮದ ಜನರಲ್ಲಿದೆ.

**ಕಣದ ಪೂಜೆ:** ಕಾಮಲಾಪುರ ಗ್ರಾಮದ ದೃಷ್ಠಿಯಿಂದ ಇದು ಅತೀ ಮಹತ್ವದ್ದು. ಕಾಳನ್ನು ವಿಂಗಡಿಸಿ ಹಸನು ಮಾಡುವ ತಾಣ ಇದು. ಈ ಕಣವನ್ನು ಮಟ್ಟಿಗೆ ಹಿತ್ತಲಿನ ಸಮೀಪದ ಸ್ಥಳದಲ್ಲಿ ಮಾಡುತ್ತಾರೆ. ಒಂದೆಡೆ ಹೊಟ್ಟನ್ನು ತೆಗೆದು ನೀರನ್ನು ಹಾಕಿ ಅದರ ಮೇಲೆ ಹೊಟ್ಟನ್ನು ಇಟ್ಟು ಈ ಇವತ್ತು ನಮ್ಮ ಗೂಡು ಮುರಿಯಲು ಬನ್ನಿ ಎಂದು ಕರೆಯುತ್ತಾರೆ. ಬಂದವರಿಗೆ ಆ ದಿನ ಕೂಲಿ ಕೊಡುತ್ತಾರೆ. ಹಣದ ಬದಲು ಜೋಳದ ತೆನೆಯನ್ನು ಕೊಡುವರು. ಇದು ಅವರವರ ಸ್ಥಿತಿಗನುಸಾರವಾಗಿರುತ್ತದೆ. ಹೆಚ್ಚಿನ ಮಟ್ಟಿಗೆ ಎಂಟು ಎತ್ತಿನ ಕಣ (ಮೇಟಿ ನಿಂದ ಎಂಟು ಗಜಸುತ್ತಳತೆ) ನಾಲ್ಕು ಎತ್ತಿನ ಕಣಗಳನ್ನು ಮಾಡಿಸುತ್ತಾರೆ. ಜಾನಪದ ದೃಷ್ಠಿಯಿಂದ ಮೇಟಿ ಎನ್ನುವುದು ಲಕ್ಷ್ಮೀ ಎಂದರ್ಥ. ಮೇಟಿಯನ್ನು ಬನ್ನಿಮರದಿಂದಲೇ ಮಾಡಬೇಕೆಂಬ ನಿಯಮವಿದೆ. ಅಮವಾಸ್ಯೆಯ ದಿನ ಬನ್ನಿಮರಕ್ಕೆ ಪೂಜೆ ಮಾಡಿ ಒಂದು ತುಂಡನ್ನು ಕಡಿದು ತರುತ್ತಾರೆ. ಶುಭ ಮುಹೂರ್ತದಲ್ಲಿ

ಪೂಜೆ ಮಾಡಿ ಕಣದಲ್ಲಿ ನೆಡುತ್ತಾರೆ. ಕಣದ ಸುತ್ತಲೂ ಗುರುತನ್ನು ಹಾಕುತ್ತಾರೆ. ಜೋಳದ ರಾಶಿಯಲ್ಲಿ ಹಾಕುವುದರಿಂದ ಕಣಕ್ಕೆ ದೆವ್ವ ಬರುವುದಿಲ್ಲ ಅಲ್ಲದೆ ಜೋಳದ ರಾಶಿ ಹೆಚ್ಚುವುದು ಎಂಬ ನಂಬಿಕೆ ಉಳಿದುಕೊಂಡು ಬಂದಿದೆ. ಇನ್ನೂ ಕೆಲವೆಡೆ ಹಲಗೆಯ ಮೇಲೆ ನಿಂತು ಓಲ್ಯಾಗ ಓಲ್ಯಾಗ ಎಂಬ ಬೆಳೆಯ ರಾಶಿಯ ಕಾಳುಗಳನ್ನು ಬುಟ್ಟಿಯಿಂದ ತೂರುತ್ತಾರೆ. ಕಣದ ಪಕ್ಕದಲ್ಲಿ ಒಂದು ಗುಂಡಿ ತೋಡಿ ಜೋಳ ಹಾಕುತ್ತಾರೆ. ಕೊನೆಯ ದಿನ ರಾಶಿ ಪೂಜೆಮಾಡಿ ಮನೆಗೆ ಬಿಕ್ಷೆ ಬೇಡಲು ಬಂದವರೆಗೂ ಕಾಳನ್ನು ಬುಟ್ಟಿಯಲ್ಲಿ ಕೊಡುವ ಪದ್ದತಿ ಇದೆ.[೧೪೬]

ಮಳೆರಾಯನ ಪೂಜೆ :– 'ಬಾರೋ ಬಾರೋ ಮಳೆರಾಯ
ಬಾರೋ ಬಾರೋ ಮಳೆರಾಯ
ಕುಂಬಾರ ಮನ್ಯಾಗ ಕುಳಿ ತುಂಬ ನೀರಲ್ಲ
ಬಾರೋ ಬಾರೋ ಮಳೆರಾಯ
ಸಿಂಪಿಗರ ಮನ್ಯಾಗೆ ಸಿಂಪಿ ಎಂಬ ನೀರಲ್ಲ[೧೪೭]
ಬಾರೋ ಬಾರೋ ಮಳೆರಾಯ'

ಎಂದು ಹಾಡುವ ಜಾನಪದ ಗೀತೆ ಮಳೆರಾಯನನ್ನು ಸುತ್ತಿಸುವ ಜಾನಪದ ಗೀತೆಯಾಗಿದೆ. ಹುಡುಗರು ಈ ಪದ್ಯವನ್ನು ಹಾಡುತ್ತಾ ಮನೆಗಳ ಮುಂದೆ ಹೋಗಿ ನಿಲ್ಲುತ್ತಾರೆ. ಹುಡುಗರ ತಲೆಯ ಮೇಲೆ ನೀರು ಹಾಕಿ ಒನಕೆಗೆ ಪೂಜೆ ಮಾಡಿ ಬೇವಿನ ಮರದ ಪಳ್ಳಿ (ಪತ್ರ) ಹಂದರಕ್ಕೆ ಹಾಕಿ ಕಾಳುಕೊಡುವ ಪದ್ದತಿ ಇದೆ. ಸಂಗ್ರಹವಾದ ಕಾಳನ್ನು ಮಾರಿಕಡಲೆ ಹಿಟ್ಟಿನಿಂದ ಪುರಿ ತಯಾರಿಸಿ ಬೆಲ್ಲಹಾಕಿ ಹಂಚುವ ಪದ್ದತಿ ಇದೆ.

ಮಳೆಯನ್ನು ತರಿಸುವವ 'ಕಪ್ಪೆ' ಎಂಬ ನಂಬಿಕೆಯೂ ಇದೆ. ಅದು ಅರಚಿದರೆ ಮಳೆ ಬರುತ್ತದೆ ಎಂದು ಒತ್ತಾಯವಾಗಿ ಕಡ್ಡಿನಿಂದ ತಿವಿದು ಅರಚುವಂತೆ ಮಾಡುವ ಪದ್ದತಿಯೂ ಇದೆ. ಇಷ್ಟಲ್ಲದೆ ಕಪ್ಪೆಯನ್ನು ಹಿಡಿದು ದ್ವಾರಕ್ಕೆ ಕಟ್ಟಿ, ಹೆಗಲ ಮೇಲೆ ಹೊತ್ತುಕೊಂಡು ಮೆರವಣಿಗೆ ಮಾಡಿದರೆ ಮಳೆ ಇರುತ್ತದೆ ಎಂಬ ಪ್ರತೀತಿ ಇದೆ.

**ಕೊಂತಿ ಪೂಜೆ:** ಕೊಂತಿ ಎಂದರೆ ಇದೊಂದು ಆಚರಣೆ. ಕೊಂತಿ ಆರಂಭಿಸಿದ ದಿನವೆಂದು ಅರ್ಥೈಸಬಹುದು ಕೊಂತಿ, ಕಾಮಧೇನು, ಕಲ್ಪವೃಕ್ಷಗಳನ್ನು ದೊರಕಿಸಿಕೊಟ್ಟವಳೆಂಬ ಪ್ರತೀತಿ. ಈ ಕೃತಜ್ಞತಾ ಭಾವವೇ ಕೊಂತಿಯನ್ನು ಪೂಜಿಸಲು ಪ್ರೇರಣೆಯಾಗಿದೆ. ಅಂದರೆ ಗಾಂಧಾರಿಯ ಗರ್ವಭಂಗವಾದ ಸಂಧರ್ಭವೇ ಕೊಂತಿ ಪೂಜೆಯ ನಾಂದಿ ಎಂಬ ಪ್ರತೀತಿ ಇದೆ. ಕೊಂತಿ ಆದರ್ಶ ಮಕ್ಕಳನ್ನು ಹೆತ್ತಂತವಳು. ಆದರ್ಶನಾರಿ, ಸತ್ ಕೀರ್ತಿ ಲಭ್ಯವಾಗಲೆಂಬ ಅಭಿಲಾಷೆಯಿಂದ ಇಷ್ಟ ದೇವತೆ ಎಂದು ಭಾವಿಸಿ ಸಾಂಪ್ರದಾಯಿಕವಾಗಿ ಪೂಜಿಸುವ ಪದ್ದತಿ ಇಂದಿನವರೆಗೂ ನಡೆದುಕೊಂಡು ಬಂದಿದೆ. ದೀಪಾವಳಿಯ ನಂತರ ಒಂದು ತಿಂಗಳ ಕಾಲದ ವರೆಗೂ ಶುಭಪ್ರದವೆಂಬ ನಂಬಿಕೆ ಇದೆ.[೧೪೮] ಕೊಂತಿ ಪೂಜೆ ಇರುವಲ್ಲಿ ಶುಭ. ಶಾಂತಿ ಸಮಾಧಾನ ತರುವುದೆಂಬ ನಂಬಿಕೆ ಇದೆ. ಭಾನುವಾರ, ಮಂಗಳವಾರ, ಶುಕ್ರವಾರ ಮತ್ತು ಸೋಮವಾರಗಳೆಂದು ಈ ಆಚರಣೆ ನಡೆಯುವುದು

ಇದು. ಸ್ಥಳೀಯ ಬದುಕಿನ ರೀತಿ–ನೀತಿಗಳು ಅನುಕೂಲತೆಗಳನ್ನು ಅವಲಂಬಿಸಿರುತ್ತವೆ. ಕಾರ್ತೀಕ ಕಳೆದ ಮೇಲೆ ಅಮವಾಸ್ಯೆಯ ದಿನ ವಿಸರ್ಜನೆ ಮಾಡಿ ಈ ಪೂಜಾ ಆಚರಣೆಯ ಕಾರ್ಯಕ್ರಮ ಮುಗಿಯುತ್ತದೆ.

**ಕಾಮಲಾಪುರ ಗ್ರಾಮದಲ್ಲಿನ ಜಾತ್ರೆ ಉತ್ಸವಗಳು** : ಜಾತ್ರೆಗಳು ಜಾನಪದ ಸಂಸ್ಕೃತಿಯ ವಿಶಿಷ್ಠ ಪ್ರಕಾರಗಳಲ್ಲಿ ಒಂದು. ಜಾತ್ರೆಯನ್ನು ಪರಿಷೆ, ತೇರು, ರಥೋತ್ಸವ, ಉಚ್ಚಾಯ, ಪಲ್ಲಕ್ಕಿ ಬಂಡಿ ಇತ್ಯಾದಿ ಹೆಸರಿನಲ್ಲಿ ಕರೆಯುತ್ತಾರೆ.[೧೪೯] 'ಯಾನೀನ ತ್ರಾಯತ ಇತಿ ಯಾತ್ರಾ' ಅಂದರೆ ಪುಣ್ಯಕ್ಷೇತ್ರ ದರ್ಶನಕ್ಕೆ ಹೋಗುವವರ ರಕ್ಷೆಯೇ ಯಾತ್ರೆ, ಈ ಯಾತ್ರೆಯೂ ಸಂಸ್ಕೃತ ಪದ. ಇದರ ತದ್ಭವ ರೂಪವೇ ಜಾತ್ರೆ.[೧೫೦] ಜಾತ್ರೆ ಎಂಬುದು ವರ್ಷಕ್ಕೂ ನಿಗದಿಯಾದ ಇನ್ನಿತರ ಅವಧಿಗೋ ಗೊತ್ತಾದ ಸ್ಥಳದಲ್ಲಿ ಒಂದು ದಿನವೋ ಅಥವಾ ಇನ್ನೂ ಹೆಚ್ಚಿನ ದಿನಗಳವರೆಗೂ ಜನ ಸೇರಿ ನಡೆಯುವ ಉತ್ಸವ.[೧೫೧] ಅಲ್ಲದೆ ಜಾತಿ ವರ್ಗಗಳ, ಮೇಲು–ಕೀಳು, ಮಡಿ, ಮೈಲಿಗೆಯನ್ನು ಮೀರಿ ಜನ ಸಮುದಾಯ ಮತೀಯ ವಿಧಿಯಾಚರಣೆಯ ನೆಪದಲ್ಲಿ ದೈವವೊಂದರ ಸುತ್ತ ನಿರ್ದಿಷ್ಠ ದಿನಗಳಂದು ನೆರೆಯುವುದನ್ನು ಜಾತ್ರೆ ಎನ್ನುವರು.[೧೫೨] ಪ್ರಸ್ತುತ ಕಾಮಲಾಪುರ ಗ್ರಾಮ ಪರಿಸರದಲ್ಲಿ ನಡಯುವ ಜಾತ್ರೆಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ನಗರೇಶ್ವರ ದೇವಾಲಯದಲ್ಲಿನ ಜಾತ್ರೆ:** ನಗರೇಶ್ವರ ದೇವಾಲಯವು ೧೬ನೇ ಶತಮಾನದ್ದು ಇದನ್ನು ಪಾಳೆಗಾರರು ಜೀರ್ಣೋದ್ದಾರ ಮಾಡಿದ್ದಾರೆ. ಶಿವಲಿಂಗ ಈ ದೇವಾಲಯದ ಪ್ರಧಾನ ದೇವರು ಇಲ್ಲಿನ ಜಾತ್ರೆ ಒಂಬತ್ತು ದಿನಗಳ ಕಾಲ ವಿಶೇಷ ಪೂಜಾ ಕಾರ್ಯಕ್ರಮಗಳೊಂದಿಗೆ ನಡೆಯುತ್ತದೆ. ಪ್ರತಿವರ್ಷ ಮೇ ತಿಂಗಳಲ್ಲಿ ನಡೆಯುತ್ತದೆ. ಈ ಜಾತ್ರೆಯ ಕಾರ್ಯಕ್ರಮಗಳು ಚೈತ್ರ ಬಹುಳ ಚತುರ್ದಶಿಯ ದಿನದಂದು ಪ್ರಾರಂಭವಾಗುತ್ತದೆ. ಮೊದಲನೆಯ ದಿನ ಶಿವಲಿಂಗಕ್ಕೆ ಅಭಿಷೇಕ ಮಾಡಲಾಗುತ್ತದೆ. ಆ ಮೇಲೆ ಪುಷ್ಪಗಳಿಂದ ಚೆನ್ನಾಗಿ ಅಲಂಕಾರ ಮಾಡಲಾಗುತ್ತದೆ. ಪೂಜೆ ಮಾಡುವ ಪೂಜಾರಿಯನ್ನೇ ದೈವ ಸಮಾನನೆಂದು ಕಂಕಣ ಕಟ್ಟುತ್ತಾರೆ. ಇಪ್ಪತ್ತೇಳು ಗಣಗಳು ಮತ್ತು ಎಂಟು ಗಡಿಗೆಯಲ್ಲಿ ಸಸಿಗಳನ್ನು ಹಾಕಿ, ಮಧ್ಯೆ ಎಂಟು ಕುಂಭವನ್ನು ಇಟ್ಟು ಪೂಜಿಸುತ್ತಿರುವದು ಇಲ್ಲಿನ ವಿಶೇಷತೆ. ಯಾವ ದಿಕ್ಕಿನ ಸಸಿ ಅಭಿವೃದ್ಧಿಯಗುವುದೋ ಆ ದಿಕ್ಕಿನ ಪ್ರದೇಶ ಚೆನ್ನಾಗಿ ಅಭಿವೃದ್ಧಿಯಾಗುತ್ತದೆ ಎಂಬುದು ಜನಪದರ ವಾಡಿಕೆ. ಊರಿನ ಪ್ರಮುಖ ವ್ಯಕ್ತಿಗಳಿಂದ ಧ್ವಜಾರೋಹಣ ಮಾಡಲಾಗುತ್ತದೆ.

**ದಿಗ್ಭಂಧನ ಪೂಜೆ:** ದೇವರಿಗೆ ಅಭಿಷೇಕ ಮಾಡಿ ನಂತರ ಪೂಜಾರಿಗೆ ಕಂಕಣ ಕಟ್ಟುವ ಮುನ್ನ ದೇವಾಲಯದ ಮುಂದೆ ಮದುವೆ ಚಪ್ಪರವನ್ನು ಹಾಕಿ, ಆ ಚಪ್ಪರದ ಪೂಜೆಯನ್ನು ಮಾಡಿ ನಂತರ ಚಪ್ಪರದಿಂದ ಹಿಡಿದು ದೇವಾಲಯದ ಸುತ್ತ ಮೂರು, ಆರು ಅಥವಾ ಒಂಬತ್ತು ಎಳೆದಾರವನ್ನು ಸುತ್ತಿ ದಿಗ್ಭಂಧನ ಪೂಜೆ ಮಾಡಲಾಗುತ್ತದೆ.

ಬಲಿಪೂಜೆ ಅಂದರೆ ಈ ದೈವಕ್ಕೆ ಯಥಾ ಪ್ರಕಾರ ಪೂಜೆ ಮಾಡಿದ ನಂತರ ಪೂಜಾರಿಯು ವದ್ಯೆಬಟ್ಟೆಯನ್ನು ಧರಿಸಿಕೊಂಡು ಒಂದು ಪಾತ್ರೆಯಲ್ಲಿ ಅನ್ನವನ್ನು ಮಾಡಿ ಅದಕ್ಕೆ ಕುಂಕುಮ ಹಾಕಿ

ಕಲಿಸಿ (ಕೆಂಪು ಬಣ್ಣಬರುವುದಕ್ಕೆ) ಎಂಟೂ ದಿಕ್ಕುಗಳಿಗೂ ಹಾಕಿ ಬರುತ್ತಾರೆ. ಇದೇ ಬಲಿ ಪೂಜೆ ಅಥವಾ ದಿಗ್ಬಲಿ ಪೂಜೆ ಮಾಡುವುದು ಎನ್ನುತ್ತಾರೆ. ನಂತರ ದೇವರಿಗೆ ಆರತಿ ಮಾಡಿ ನೈವೇದ್ಯ ಮಾಡಲಾಗುತ್ತದೆ. ಎರಡನೇ ದಿನದಿಂದ ಆರನೇ ದಿನದವರೆಗೆ ದೇವರಿಗೆ ಅಭಿಷೇಕ ಮಾಡಿ ಹೂವಿನ ಅಲಂಕಾರ ಮಾಡಲಾಗುತ್ತದೆ. ಕುಂಭಗಳ ಪೂಜೆಯನ್ನು ಮಾಡಲಾಗುತ್ತದೆ. ಆರನೇ ದಿನ ದೇವರಿಗೆ ಅಭಿಷೇಕ ಮಾಡಿ, ನಂತರ ಬಲಿ ಪೂಜೆ ಮಾಡಿ ಬ್ರಾಹ್ಮಣರಿಗೆ ಊಟ ಹಾಕುತ್ತಾರೆ. ಅಂದಿನ ಸಾಯಂಕಾಲ ಕಲ್ಯಾಣ ಉತ್ಸವವನ್ನು ಮಾಡಲಾಗುತ್ತದೆ. ಏಳನೇ ದಿನ ಜಾತ್ರೆಯನ್ನು ಮಾಡಲಾಗುವುದು. ಪ್ರತಿದಿನದಂತೆ ಜಾತ್ರೆಯ ದಿನವೂ ಕೂಡ ದೇವರಿಗೆ ಅಭಿಷೇಕವನ್ನು ಜೊತೆಗೆ ಗಂಧದ ಅಭಿಷೇಕವನ್ನು ಮತ್ತು ಹೂವಿನಿಂದ ಅಲಂಕರಿಸಿದ ಉತ್ಸವ ಮೂರ್ತಿಗಳನ್ನು ಪೂಜಿಸಲಾಗುತ್ತದೆ. ರಥವನ್ನು ಚೆನ್ನಾಗಿ ಬಣ್ಣದ ವಸ್ತ್ರಗಳಿಂದ ಕಾಷ್ಠಶಿಲ್ಪಗಳಿಂದ ಅಲಂಕಾರವನ್ನು ಮಾಡಿರುತ್ತಾರೆ. ನಂತರ ಉತ್ಸವ ಮೂರ್ತಿಗಳನ್ನು ತೆಗೆದುಕೊಂಡು ರಥದ ಹತ್ತಿರ ಬಂದು ಹೋಮವನ್ನು ಮಾಡಲಾಗುತ್ತದೆ. ನಂತರ ಮೂರ್ತಿಗಳನ್ನು ಹೊತ್ತು ರಥದ ಸುತ್ತ ಐದು ಸುತ್ತು ತಿರುಗಿದ ನಂತರ ಆ ಮೂರ್ತಿಗಳನ್ನು ರಥದೊಳಗೆ ಕೂಡಿಸಿ ಊರಿನ ಜನರೊಂದಿಗೆ ೫೦ ಅಡಿ ದೂರ ರಥವನ್ನು ಮುಂದಕ್ಕೆ ಎಳೆಯುತ್ತಾರೆ. ನಂತರ ಸಾಯಂಕಾಲ ಗ್ರಾಮಸ್ಥರು ಮತ್ತು ಮುಖಂಡರು ಒಮ್ಮತದಿಂದ ರಥದ ಧ್ವಜಕ್ಕೆ ಸವಾಲು ಹಾಕಿ ನಂತರ ವಾದ್ಯ ಕೋಲಾಟ ಇನ್ನೂ ಕಲಾ ವಾದ್ಯಗಳೊಂದಿಗೆ ವಿಜೃಂಭಣೆಯಿಂದ ರಥವನ್ನು ಎಳೆಯಲಾಗುತ್ತದೆ. ರಥೋತ್ಸವದ ಕಾಲದಲ್ಲಿ ಭಕ್ತಾದಿಗಳು ಬೆಲ್ಲದ ಚೂರು, ಬಾಳೆಹಣ್ಣು, ಹೂ ರಥಕ್ಕೆ ಎಸೆಯುತ್ತಾರೆ. ನಂತರ ಉತ್ಸವ ಮೂರ್ತಿಗಳನ್ನು ಅಶ್ವವಾಹನ ರೂಢ ಸಮೇತ ಗ್ರಾಮ ಪ್ರದಕ್ಷಿಣೆ ಮಾಡಿ ದೇವಾಲಯದ ಮೂಲ ಸ್ಥಾನದಲ್ಲಿ ಪ್ರತಿಷ್ಠಾಪನೆ ಮಾಡಲಾಗುತ್ತದೆ.

**ಕಡುಬಿನ ಕಾಳಗ:** ವೈಶಾಖ ಶುದ್ಧ ಪಾಡ್ಯಮಿಯಂದು ದೇವರಿಗೆ ಅಭಿಷೇಕ ಮಾಡಿ ಕಡುಬಿನ ಕಾಳಗದ ಪೂಜೆ ಮಾಡುತ್ತಾರೆ. ಕಾರಣ ಅಂದು ಶಿವ–ಪಾರ್ವತಿಯ ಕಲ್ಯಾಣವಾಗುವ ದಿನ ರಥೋತ್ಸವದ ಮರುದಿನ ಸತಿ ಸಮೇತ ಈಶ್ವರ ಮೃಗಯಾ ವಿಹಾರಕ್ಕೆಂದು ಅರಣ್ಯಕ್ಕೆ ಹೋಗಿ ಅನೇಕ ಮೃಗಗಳನ್ನು ಬೇಟೆಯಾಡಿ ಅಲೆದು ಆಯಾಸಗೊಂಡು ದಂಪತಿಗಳು ಒಂದು ಆಶ್ರಮದಲ್ಲಿ ಆಯಾಸ ಪರಿಹಾರ ಮಾಡಲು ಅಲ್ಲಿ ವಿಶ್ರಮಿಸುತ್ತಾರೆ. ಆವೇಳೆಗೆ ದೇವ ಲೋಕದ ಕನ್ಯೆಯರು ಆಶ್ರಮಕ್ಕೆ ಬಂದು ಶಿವನ ಆಯಾಸ ಪರಿಹರಿಸಲು ನೃತ್ಯ, ಸಂಗೀತ, ವಿನೋದ ಮೊದಲಾದ ಕ್ರಿಯೆಗಳಿಂದ ಶಿವನನ್ನು ಸಂತೃಪ್ತಿಗೊಳಿಸುತ್ತಾರೆ. ಶಿವ ಇದೆಲ್ಲಾವನ್ನು ವೀಕ್ಷಿಸಿ ಆನಂದ ಭರಿತನಾಗಿ ಅದರಲ್ಲೇ ತನ್ಮಯನಾಗಿ ಪಾರ್ವತಿ ದೇವಿಯನ್ನು ಮರೆತಾಗ ಪಾರ್ವತಿ ದೇವಿ ಕೋಪಗೊಂಡು ಅಲ್ಲಿಂದ ಹೊರಟು ತನ್ನ ಯಥಾ ಸ್ಥಾನಕ್ಕೆ ಬಂದು ಮನೆ ಬಾಗಿಲು ಹಾಕಿಕೊಳ್ಳುತ್ತಾಳೆ ತನ್ನ ಸೇವಕರಾದ ನಂದಿ ಮತ್ತು ಬೃಂಗಿಯನ್ನು ಕರೆದು ತನ್ನ ಒಡವೆಗಳ ಕಳುವಾಗಿವೆ ಎಂದು ಹೇಳಿ ಕಳುಹಿಸುತ್ತಾಳೆ. ಸೇವಕರು ಹೋಗಿ ಶಿವನಿಗೆ ತಿಳಿಸಿದಾಗ ಶಿವನು ಎಚ್ಚೆತ್ತು ಬರುವಾಗ ಮೃಗ ವಿಹಾರ ಮಾಡುತ್ತಾ ಇರುವಾಗ ಪೊದೆಗಳು, ಗಿಡಗಳು, ಕೊಂಬೆಗಳು ಶಿವನ ದೇಹಕ್ಕೆ ತಗುಲಿ ಮೈಮೇಲೆ ಕುರುಹುಗಳಾಗುತ್ತವೆ. ಮನೆಗೆ ಬಂದು ಬಾಗಿಲು ತೆರೆ ಎನ್ನುತ್ತಾನೆ. ಆಗ ಪಾರ್ವತಿ ದೇವಿ ಲೆಕ್ಕಿಸದೆ ನೀನು ಯಾರು ಎಂದು ಕೇಳಿದಾಗ ನಾನು ಕಗ ವಾಹನ ಎನ್ನುತ್ತಾರೆ. ಇಲ್ಲಿ ಕಗ ಎಂದರೆ ಕಾಗೆ. ವಾಹನನಾದವನು

ಶನಿದೇವರು ಇಲ್ಲಿ ಬರುವುದಿಲ್ಲವೆಂದು ಬಾಗಿಲು ತೆರೆಯುವುದಿಲ್ಲ. ಹಾಗೆ ಗರುಡ ವಾಹನ ವಿಷ್ಣು ಸರ್ಪ ವಾಹನ ಅನಂತಶಯನ, ಅಶ್ವವಾಹನ, ಗಜವಾಹನ ಹೀಗೆ ಇತ್ಯಾದಿಯಾಗಿ ಶಿವನು ಬಂದಿದ್ದೇನೆ ಎಂದಾಗ ಪಾರ್ವತಿ ಬಾಗಿಲು ತೆರೆಯುವುದಿಲ್ಲ. ಹಿಗೆ ಇವರಿಬ್ಬರ ನಡುವೆ ವಾಗ್ವಾದ ನಡೆಯುತ್ತದೆ. ಕೊನೆಗೆ ಶಿವ ನಾನೇ ನಂದೀಶ ಬಂದಿದ್ದೇನೆ ಎಂದಾಗ ಘಂಟೆ, ಚಾಟಿ, ಡಮರುಗ ಬಾರಿಸುವುದನ್ನು ಆಲಿಸಿ ಪಾರ್ವತಿ ಶಿವನೇ ಬಂದಿದ್ದಾಣೆ ಎಂದು ಸಂತೋಷಗೊಂಡು ಬಾಗಿಲು ತೆಗೆಯುತ್ತಾಳೆ. ಆ ಸಂದರ್ಭದಲ್ಲಿ ಶಿವನ ಭಟರು ಬಂದು ಆಭರಣಗಳನ್ನು ಕಳವು ಮಾಡಿದ ಚೋರನನ್ನು ಹಾಗೂ ಆಭರಣ ಸಮೇತ ಬರಲು ಆಗ ಪಾರ್ವತಿ ದೇವಿ ಅವರನ್ನು ರಕ್ಷಿಸಲು ತಾನು ಆಡಿದ ಸುಳ್ಳು ನಾಟಕವನ್ನು ಶಿವನಿಗೆ ತಿಳಿಸುತ್ತಾಳೆ. ಆಗ ಶಿವ ಕಡಬುಗಳಿಂದ ಪಾರ್ವತಿದೇವಿಗೆ ತಾಡನೆ ಮಾಡುತ್ತಾನೆ. ಇಬ್ಬರು ನಗು-ನಗುತ್ತಾ ಮನೆಯ ಒಳಗೆ ಪ್ರವೇಶ ಮಾಡುತ್ತಾರೆ. ಈ ಕಥೆ ಕೇಳಿದ ಜನರು ಜಾತ್ರೆ ಮರುದಿನ ಕಡುಬಿನ ಅಡುಗೆ ಮಾಡಿ ಶಿವನಿಗೆ ನೈವೇದ್ಯ ಮಾಡುತ್ತಾರೆ. ಒಂಬತ್ತನೇ ದಿನ ದೇವಾಲಯದ ಸುತ್ತ-ಸುತ್ತಿರುವ ಕಂಕಣ ರೂಪದ ದಾರವನ್ನು ಪೂಜಾರಿಯ ಕೈಯಲ್ಲಿನ ಕಂಕಣವನ್ನು ಬಿಚ್ಚುತ್ತಾರೆ.[೧೫೩]

**ವಸಂತೋತ್ಸವ:** ದೇವಾಲಯಗಳಲ್ಲಿ ನಡೆಯುವ ದೊಡ್ಡ ಉತ್ಸವಗಳಲ್ಲಿ ವಸಂತೋತ್ಸವವೂ ಒಂದು. ಶಾಸನಗಳಲ್ಲಿ ಇದನ್ನು ವಸಂತೋತ್ಸವ, ವಸಂತನಿತ್ಯೋತ್ಸವ ಎಂದು ಕರೆಯಲಾಗಿದೆ.[೧೫೪] ವೈಶಾಖ ಶುದ್ಧ ಪಂಚಮಿ ದಿನದಂದು ಮೂಲ ದೇವರಿಗೆ (ಶಿವಲಿಂಗಕ್ಕೆ) ಹಾಗೂ ಕಳಶಕ್ಕೆ ಪೂಜೆ ಮಾಡುತ್ತಾರೆ. ಹೋಮ, ಬಲಿ ಮುಗಿಸಿ ಕಳಶ ದೇವರ ಬಳಿ ಇರುವ ಯಜ್ಞ ಕುಂಡದಲ್ಲಿ ವಿಶೇಷ ಹೋಮ ಮಾಡಿ, ಪೂರ್ಣಾಹುತಿ ಮಾಡಿ ಕಳಶಗಳ ಉದ್ವಾಸನಗೊಳಿಸಿ ಕಲಶಗಳಲ್ಲಿನ ನೀರನ್ನು ಈಶ್ವರ ಲಿಂಗಕ್ಕೆ ಹಾಗೂ ಇತರ ದೇವತೆಗಳಿಗೆ (ಪಾರ್ವತಿನಂದಿ ಮತ್ತು ವೀರಭದ್ರ) ಅಭಿಷೇಕ ಮಾಡುತ್ತಾರೆ. ನಂತರ ಕಂಕಣ ತೆಗೆದು ವಸಂತ ಮಾಧವ ಪೂಜೆ, ಪ್ರೋಕ್ಷಣೆ ಮಾಡಿ ಉತ್ಸವ ಮೂರ್ತಿಗಳಿಗೆ ತೈಲಾಭ್ಯಂಜನ ಮಾಡಿ ವಿಗ್ನೇಶ್ವರನನ್ನು ವಿಸರ್ಜನೆ ಮಾಡಿದ ನಂತರ ಉತ್ಸವ ಮೂರ್ತಿಯನ್ನು ಯಥಾ ಸ್ಥಿತಿಯಲ್ಲಿ ಸ್ಥಾಪಿಸಲಾಗುವುದು ಇಲ್ಲಿಗೆ ಈ ಜಾತ್ರೆಯ ಉತ್ಸವ ಕೊನೆಯಾಗುವುದು.

**ರಾಘವೇಂದ್ರಸ್ವಾಮಿ ರಥೋತ್ಸವ:** ದೇಹಾಲಯವು ಗರ್ಭಗೃಹ, ನವರಂಗ ಮಂಟಪ ಮತ್ತು ಮುಖಮಂಟಪವನ್ನು ಒಳಗೊಂಡಿದೆ. ಇದರ ಕಾಲ ವಿಜಯನಗರೋತ್ತರ. ಈ ದೇವಾಲಯದಲ್ಲಿ ಬೃಂದಾವನದ ಉತ್ಸವ ಕಾರ್ಯಕ್ರಮ ಪ್ರತಿವರ್ಷ ಶ್ರಾವಣ ಬಹುಳ ಪ್ರತಿಪದ, ದ್ವಿತೀಯ, ತೃತೀಯ ದಿನದಂದು ನಡೆಯುತ್ತದೆ (ರಾಯರ ಆರಾಧನಾ ಮಹೋತ್ಸವ) ಪ್ರತಿಪದ ದಿನದಂದು ಬೆಳಿಗ್ಗೆ ನಿರ್ಮಾಲೆ, ಅಭಿಷೇಕ, ಪಂಚಾಮೃತ ಅಭಿಷೇಕ, ನಂತರ ಅಲಂಕಾರ ಸೇವೆ ನೈವೇದ್ಯ ಹೀಗೆ ಕಾರ್ಯಕ್ರಮಗಳು ನಡೆಯುತ್ತವೆ. ೩ ದಿನದ ಕಾರ್ಯಕ್ರಮಗಳು ಪ್ರತಿಪದಿ, ದ್ವಿತೀಯ ಹಾಗೂ ತೃತೀಯ ದಿನಗಳಂದು ಬೆಳಿಗ್ಗೆ ಸಾಯಂಕಾಲ ನಡೆಯುತ್ತವೆ. ದ್ವಿತೀಯ ದಿನದಂದು ಅನ್ರಿದ್ಧಾಯನಮಃ ಪ್ರದ್ಯುಮ್ನಾಯನಮಃ ಸಂಕರ್ಷಣಾಯನಮಃ ಶ್ರೀವಾಸುದೇವಾಯನಮಃ ಶ್ರೀನಾರಾಯಣಾಯನಮಃ ಎಂದು ಐದು ಜನ ಅಲಂಕಾರ ಬ್ರಾಹ್ಮಣರನ್ನು ಕೂಡಿಸಿ ಅವರಿಗೆ ಅರ್ಘ್ಯ, ವಾದ್ಯ, ವಸ್ತ್ರ, ರಜಿತಪಾತ್ರೆ,

ದಕ್ಷಿಣೆ ಕೊಡುತ್ತಾರೆ. ಇವರು ಬ್ರಾಹ್ಮಣತ್ವದ ಪ್ರಕಾರ ಶಿಖೆ, ಬಿಟ್ಟಿರಬೇಕು. ಆದಿನ ಹಿಂದೆ ಹಾಗೂ ಅಂದು ಉಪವಾಸವಿರಬೇಕು. ಇವರು ರಾಯರ ಪರಮ ಪವಿತ್ರ ಭಕ್ತರಾಗಿರಬೇಕು. ಇಂತಹ ಬ್ರಾಹ್ಮಣರು ಮಾತ್ರ ಪೂಜಕ್ಕೆ ಅರ್ಹರು.[೧೫೫] ತೃತೀಯ ದಿನದಂದು ವಿಶೇಷವಾಗಿ ರಾಹು ಕಾಲ ಹೊರತು ಪಡಿಸಿ ಮಠದಿಂದ ಪಾದಗಟ್ಟೆಯ ಆಂಜನೇಯ ದೇವಸ್ಥಾನದವರೆಗೂ ರಥೋತ್ಸವ ವಿಜೃಂಭಣೆಯಿಂದ ನಡೆಯುತ್ತದೆ. ಭಜನೆ, ಮೇಳ ಇತ್ಯಾದಿ ವಾದ್ಯಗೋಷ್ಠಿಗಳಿಂದ ಉತ್ಸವವನ್ನು ಆಚರಿಸುತ್ತಾರೆ.

ರಥದ ಒಳಗೆ ರಾಯರ ಉತ್ಸವ ಗೋಷ್ಠಿಗಳಿಂದ ಉತ್ಸವವನ್ನು ಎಳೆಯಲಾಗುತ್ತದೆ. ನಂತರ ಈ ಉತ್ಸವ ಮೂರ್ತಿಗಳನ್ನು ಯಥಾ ಸ್ಥಾನದಲ್ಲಿಟ್ಟು ಪೂಜಿಸುತ್ತಾರೆ. ರಥೋತ್ಸವ ಕಾರ್ಯಕ್ರಮ ಮುಗಿದ ನಂತರ ಅಂದು ಸಮಸ್ತ ಭಕ್ತಾದಿಗಳಿಗೆ ತೀರ್ಥ–ಪ್ರಸಾದಗಳ ವಿತರಣೆ ಕಾರ್ಯಕ್ರಮ ನಡೆಯುತ್ತದೆ.

**ಗಾರಿಬಾವಿ ಆಂಜನೇಯ ಸ್ವಾಮಿ ರಥೋತ್ಸವ:** ಚೈತ್ರ ಮಾಸದ ಶುದ್ಧ ಪಾಡ್ಯಮಿ ದಿನದಂದು ಈ ರಥೋತ್ಸವವನ್ನು ಪ್ರತಿ ವರ್ಷ ಆಚರಿಸುವ ಪದ್ಧತಿ ಇದೆ. ಅಂದು ಮುಂಜಾನೆ ದೇವಾಲಯದ ಸುತ್ತಲೂ ಬಲಿ ಅನ್ನವನ್ನು ಇಡುತ್ತಾರೆ. ಪೂಜಾರಿ ಕಂಕಣವನ್ನು ಕಟ್ಟಿಕೊಂಡು ಹೋಮದ ಪೂಜೆ ಮಾಡುತ್ತಾರೆ. ಸಂಜೆಯ ವೇಳೆಗೆ ರಥದ ಮುಂಭಾಗದಲ್ಲಿ ಹೋಮವನ್ನು ಮಾಡುತ್ತಾರೆ ಬಲಿ ಪೂಜೆಯನ್ನು ಮಡಿ ನಂತರ ಉತ್ಸವ ಮೂರ್ತಿಯನ್ನು ರಥದ ಪೀಠದಲ್ಲಿ ಕುಳ್ಳಿರಿಸಿ ಹಿರೇಕೇರಿಯ ಸಮುದಾಯದವರು ಮಾತ್ರ ರಥವನ್ನು ಎಳೆಯುತ್ತಾರೆ. ಸಂಜೆ ಊರಿನ ಆರು ಕೇರಿಯವರು ಮತ್ತು ಸಾರ್ವಜನಿಕರು ಸೇರಿ ತೇರಿನ ಧ್ವಜಕ್ಕೆ ಸವಾಲು ಹಾಕುವ ಕಾರ್ಯನಡೆಸಿ ನಂತರ ಭಕ್ತಾದಿಗಳ ಸಮ್ಮುಖದಲ್ಲಿ ರಥವನ್ನು ಎಳೆಯುತ್ತಾರೆ. ಅಂದು ಭಕ್ತಾದಿಗಳೆಲ್ಲರೂ ಬೆಲ್ಲ. ಬಾಳೆಹಣ್ಣು ಮತ್ತು ಹೂಗಳನ್ನು ರಥಕ್ಕೆ ಎಸೆಯುತ್ತಾರೆ. ನಂತರ ಉತ್ಸವ ಮೂರ್ತಿಯನ್ನು ಯಥಾ ಸ್ಥಾನಕ್ಕೆ ತಂದು ಪೂಜಿಸಿ ರಾತ್ರಿ ಬಲಿ ಅನ್ನವನ್ನು ಹಾಕುತ್ತಾರೆ. ಗಾರಿ ಬಾವಿ ಆಂಜನೇಯ ಸ್ವಾಮಿ ಹಿರೇಕೇರಿ ಸಮುದಾಯದ ಆರಾಧ್ಯ ದೈವ. ಆದಕಾರಣ ರಥೋತ್ಸವದ ಪ್ರಾರಂಭದಿಂದ ಮುಕ್ತಾಯದವರೆಗೆ ಎಲ್ಲಾ ಕಾರ್ಯಕ್ರಮಗಳು ಇವರ ಸಮ್ಮುಖದಲ್ಲಿಯೇ ನಡೆಯುತ್ತದೆ.

**ಯುಗಾದಿ ಬೇಟೆ ಆಚರಣೆ:** ಪುಸ್ತುತ ಕಾಮಲಾಪುರದಲ್ಲಿನ ಪ್ರಮುಖ ಬೇಡ ಬುಡಕಟ್ಟು ಜನರು ಯುಗಾದಿ ಬೇಟೆ ಹಬ್ಬವನ್ನು ವಿಶಿಷ್ಠ ರೀತಿಯಲ್ಲಿ ಆಚರಿಸುವುದನ್ನು ಕಾಣುತ್ತೇವೆ. ಪಾಡ್ಯದ ಮರುದಿನ ಬಿದಿಗೆಯಂದು ತಮ್ಮ ಸಮುದಾಯದವರೆಲ್ಲರೂ ಸೇರಿಕೊಂಡು ಬೇಟೆಗೆ ಹೋಗುತ್ತಾರೆ. ಮೊದಲು ಮ್ಯಾಸ ಮಂಡಲದ ಆರು ಕೇರಿಗಳ ಜನ ಬೇಟೆಗೆ ಹೋಗುವುದಕ್ಕಿಂತ ಮುಂಚಿತವಾಗಿ ಗುರಿಕಾರನ ಆಜ್ಞೆಯ ಮೇರೆಗೆ ಆಷಾಡದವು ಎಂಬ ವ್ಯಕ್ತಿಯು ಇಂದಿನ ಆನೆಗೊಂದಿ ಅರಸು ಮನೆತನದವರ ಬೇಟೆ ಆಚರಣೆಗೆ ಒಪ್ಪಿಗೆ ಪಡೆದು, ಅವನು ಬಂದು ಅರಸರ ವಿಚಾರ ತಿಳಿಸಿ ನಂತರ ಬೇಟೆಗೆ ಹೋಗುತ್ತಾರೆ. ಆ ಸಂದರ್ಭದಲ್ಲಿ ಆಷಾಡದವ ತಂದೆ ಸುದ್ದಿ ಗೊಂಚಿಗಾರರು ಮನೆ–ಮನೆಗೂ ತಲುಪಿಸುತ್ತಾರೆ. ಆ ವೇಳೆಗೆ ಬೇಟೆಗೆ ಹೊರಡುವವರು ಆಯುಧಗಳನ್ನು ಹಿಡಿದು ಬೇಟೆ ನಾಯಿಗಳೊಂದಿಗೆ ಸನ್ನದ್ದರಾಗಿ ವಾದ್ಯಗಳ ಆರ್ಭಟದೊಂದಿಗೆ ಬಹು ವಿಜೃಂಭಣೆಯಿಂದ ತಮ್ಮ ಕೇರಿಯ ದೇವತೆಗಳನ್ನು

ಪೂಜಿಸಿ ಹಿರಿಯರ ಆಶೀರ್ವಾದ ಪಡೆದು (ಸರಿಯಾಗಿ ಒಂದು ಮೂವತ್ತ ರಿಂದ ಎರಡುಗಂಟೆ) ಯೊಳಗೆ ಎಲ್ಲಾ ಕೇರಿಯವರು ಸ್ಥಳಬಿಡುತ್ತಾರೆ.[೧೫೬]

ಬೇಟೆಗೆ ಹೋಗುವವರೆಲ್ಲರೂ ತಮ್ಮ ಬಟ್ಟೆಗಳನ್ನು ಕೆಂಪು ಬಣ್ಣದ ಹಸ್ತ ಗುರುತಿನ ಮೂಲಕ ಇಟ್ಟುಕೊಳ್ಳುತ್ತಾರೆ. 'ಹಸ್ತ ಗುರುತು' ಮನುಷ್ಯನಿಗೆ ಹರುಷ, ಉಮ್ಮಸ್ಸು, ಧೈರ್ಯ ವೃದ್ಧಿಯಾಗುತ್ತದೆಂಬ ನಂಬಿಕೆ ಇವರಲ್ಲಿದೆ. ಇವರು ಸಹ ತಮ್ಮ ಬೇಟೆ ಆಯುಧಗಳನ್ನು ಹಿಡಿದುಕೊಂಡು ಜೊತೆಗೆ ಬೇಟೆ ನಾಯಿ ಸಂಗಡವಿರಿಸಿಕೊಂಡು ವಾದ್ಯಗಳೊಂದಿಗೆ ಕೂಗು ಹಾಕುತ್ತಾ ತಮ್ಮ ಕೇರಿಯಿಂದ ಎರಡು ಗಂಟೆಗೆ ಹೊರಡುತ್ತಾರೆ. ಮುಂದೆ ಹಿರೇಕೇರಿಯವರನ್ನು ದಾಟಿ ಗಾರಿಬಾವಿ ಆಂಜನೇಯ ಸ್ವಾಮಿ ರಸ್ತೆಯ ಮಾರ್ಗವಾಗಿ, ಮೆರವಣಿಗೆ ಸಾಗುತ್ತದೆ. ತಿಮ್ಮನಾಥಕೇರಿಯವರು ಸಹ ಎಲ್ಲರಂತೆ ಕೇರಿಯ ಹಿರಿಯರನ್ನು ಒಳಗೊಂಡು ಉದಾ: ಗುರಿಕಾರ, ಆಷಾಡದವರು, ಗೊಂಚಿಗಾರರು ಬೇಟೆಗೆ ಹೋಗುವ ಯುವಕರನ್ನು ಒಳಗೊಂಡು ಒಂದು ಮೂವತ್ತರಷ್ಟಿಗೆ ನಿಜಲಿಂಗಮ್ಮಳಿಗೆ ಪೂಜೆ ಸಲ್ಲಿಸಿ, ದೇವತೆಯಿಂದ ಹೂ ಕೇಳುತ್ತಾರೆ. ದೇವತೆ ಅರ್ಪಿಸಿದ ಹೂಗಳು ಮುಂಭಾಗ ಬಿದ್ದರೆ, ಪೂರ್ವಕ್ಕೆ ಹಿಂಬಾಗ ಬಿದ್ದರೆ, ಪಶ್ಚಿಮಕ್ಕೆ, ದೇವರ ಎಡಭಾಗಕ್ಕೆ ಬಿದ್ದರೆ, ಉತ್ತರಕ್ಕೆ ಬಲಭಾಗಕ್ಕೆ ಬಿದ್ದರೆ ದಕ್ಷಿಣಕ್ಕೆ ಬೇಟೆಗೆ ಹೋಗುವ ನಂಬಿಕೆ ಇಂದಿಗೂ ಕೂಡ ಇದೆ. ಇದು ಬೇಡ ಬುಡಕಟ್ಟಿನ ಮ್ಯಾಸಬೇಡರ ನಂಬಿಕೆ. ಈ ಸಂಪ್ರದಾಯಗಳನ್ನು ಗಮನಿಸಿದರೆ ತಮ್ಮ ಸಂಸ್ಕೃತಿಯ ಅನನ್ಯತೆ ಉಳಿಸಿ ಬೆಳಸಿಕೊಂಡು ಬಂದಿರುವುದೇ ವಿಶೇಷ. ನಂತರ ವಾದ್ಯಗಳೊಂದಿಗೆ ಆಯುಧಗಳಾದ ಭರ್ಚಿ, ಈಟಿ, ಚಂದ್ರಾಯುಧ, ಗಂಡುಗೊಡಲಿ, ಕೋಲು, ಕೊಡಲಿ ಇವುಗಳನ್ನು ಹಿಡಿದು ಕೇಕೆ ಹಾಕುತ್ತಾ ಕುಣಿಯುತ್ತಾರೆ. ಹಿರೇಕೇರಿ ಬಂಡೀಕೇರಿಗಳ ಮೆರವಣಿಗೆಯ ಹಿಂದೆ ಬಂದು ತಿಮ್ಮನಾಥಕೇರಿಯವರನ್ನು ಸೇರಿಸಿಕೊಳ್ಳುತ್ತಾರೆ. ಮನ್ಮಥ ಕೇರಿ ಚೌಕ ಸಮೀಪಿಸಿದಂತೆಯೇ ಮೂರು ಕೇರಿಯ ಜನರು ಕೂಡಿದಾಗ ವಾದ್ಯ ಸಂಗೀತದೊಂದಿಗೆ ಕುಣಿತದೊಂದಿಗೆ ವಾತಾವರಣ ರಂಗೇರುತ್ತದೆ. ಗೋನಾಳ ಕೇರಿಯವರು ತಮ್ಮ ಹಿರಿಯರು, ಗುರಿಕಾರ, ಆಷಾಡದವ, ಗೊಂಚಗಾರ, ತಮ್ಮ ಕೇರಿಯ ಯುವಕರು, ಬೇಟೆಗಾರರು, ಪೂಜಾರಿ ಸೇರಿಕೊಂಡು ತಮ್ಮ ದೇವತೆಗಳಾದ ನಿಜಲಿಂಗಮ್ಮ, ನಿಜಲಿಂಗಪ್ಪ,ಸಸಸ ಗಾದ್ರಿ ಪಾಲಯ್ಯ ಹಾಗೂ ಇತರ ದೇವತೆಗಳ ಪೂಜೆ ೧.೩೦ಕ್ಕೆ ಮುಗಿಸುತ್ತಾರೆ. ನಂತರ ದೇವರ ಹಾಗೂ ಹಿರಿಯರ ಆಶೀರ್ವಾದ ಪಡೆದುಕೊಂಡು ತಮ್ಮ ಬೇಟೆ ಆಯುಧಗಳಾದ ಬಂದೂಕು, ಕೊಡಲಿ ಚಂದ್ರಾಯುಧ ಭರ್ಚಿ, ಈಟಿ, ಗುಂಡುಗೊಡಲಿ ಇತರ ಆಯುಧಗಳೊಂದಿಗೆ ಬೇಟೆ ನಾಯಿಗಳ ಸಹಿತವಾಗಿ ಹೊರಡುವರು, ತಮ್ಮ ಬಟ್ಟೆಗಳಿಗೆ ಕೆಂಪು ಬಣ್ಣದ ಹಸ್ತದ ಗುರುತು ಹಚ್ಚಿಕೊಂಡ ಮೇಲೆ ಸಂಗೀತದೊಂದಿಗೆ ಕುಣಿದು–ಕುಪ್ಪಳಿಸಿ, ಕೂಗುತ್ತಾ ಮನ್ಮಥಕೇರಿಯ ರಸ್ತೆ ಮಾರ್ಗವಾಗಿ ಮನ್ಮಥಕೇರಿಯ ಚೌಕಿಗೆ ಬರುವಷ್ಟರಲ್ಲಿ ಬಂಡಿಕೇರಿದ, ತಿಮ್ಮನಾಥಕೇರಿಯವರು ಮೆರವಣಿಗೆ ಸಹಿತ ಹೊರಟಿರುತ್ತಾರೆ. ಇವರ ಹಿಂದೆ ಗೋನಾಳಕೇರಿಯವರು ಸೇರಿಕೊಳ್ಳುವ ದೃಶ್ಯ ಮೆರವಣಿಗೆಗೆ ಮತ್ತಷ್ಟು ಮೆರಗು ನೀಡಿದಂತಾಗುತ್ತದೆ. ಮನ್ಮಥಕೇರಿಯವರು ಸಹ ತಮ್ಮ ಕೇರಿಯ ದೇವತೆಯಾದ ನರೆಗಲ್ಲಮ್ಮಗೆ ಹಿರಿಯರೂ, ಗುರಿಕಾರಿ, ಪೂಜಾರಿ ಆಷಾಡದವ,

ಗೋಂಚಿಗಾರ ಬೇಟೆಗೆ ಹೋಗುವ ಬೇಟೆಗಾರರು ನವಯುವಕರು ಸಮ್ಮಿಲನಗೊಂಡು ಒಂದು ಮೂವತ್ತರ ಒಳಗೆ ಪೂಜೆ ಮುಗಿಸುತ್ತಾರೆ. ಕೆಂಪು ಹಸ್ತದ ಗುರುತನ್ನು ತಮ್ಮ ಬಟ್ಟೆಗಳಿಗೆ ಹಚ್ಚಿಕೊಳ್ಳುತ್ತಾರೆ.

ಮೊದಲಿನ ರೂಢಿ–ಸಂಪ್ರದಾಯದಂತೆ ಐದು ಕೇರಿಗಳು ಕ್ರಮಾನುಗತವಾಗಿ ಸೇರಿಕೊಂಡು ಚಾವಡಿಕೇರಿಯನ್ನು ಸೇರಿ ಮೆರವಣಿಗೆ ಸಹಿತ ಚಲಿಸುತ್ತಾರೆ. ಅಲ್ಲಿಂದ ಮುಂದೆ ತಮ್ಮ ಇಚ್ಛಾನುಸಾರವಾಗಿ ಅರಣ್ಯ ಪ್ರವೇಶ ಮಾಡುತ್ತಾರೆ. ಮ್ಯಾಸ ಮಂಡಲದಲ್ಲಿರುವ ಐದು ಕೇರಿಯ ಜನ ಬೇಟೆಗೆ ಹೋಗುವ ಸಂದರ್ಭದಲ್ಲಿ ಚಾವಡಿಕೇರಿಗೆ ಎಲ್ಲಾ ಕೇರಿಯ ಜನರು ಬಂದು ಸೇರಿಕೊಂಡು ಮುಂದೆ ಸಾಗುವ ಸಂಪ್ರದಾಯವಿದೆ. ಇವರ ಸಂಪ್ರದಾಯ ನಂಬಿಕೆಗಳಲ್ಲಿ ಹೆಚ್ಚಿನ ಬದಲಾವಣೆ ಕಂಡುಬರುವುದಿಲ್ಲ. ಬುಡಕಟ್ಟಿನ ಐಕ್ಯತೆಯನ್ನು ಇದು ಮೂಡಿಸುವುದು. ಕಾಮಲಾಪುರದಲ್ಲಿರುವ ಹಿರೇಕೇರಿಯ ಜೊತೆಗೆ ಉಳಿದ ಐದು ಕೇರಿಯ ಜನ ಸಮುದಾಯ ಸೇರಿ ಯುಗಾದಿ ಬೇಟೆ ಆಚರಣೆಯ ಮೆರವಣಿಗೆಯಲ್ಲಿ ಸೇರಿಕೊಳ್ಳುವ ಬಗೆ ಅರಿಯುವುದು ವಿಶೇಷವೇ ಸರಿ. ಆರು ಕೇರಿಗಳ ಸ್ಥಾನಗಳು ಹೀಗಿವೆ. ಹಿರೆಕೇರಿ, ಬಂಡೀಕೇರಿ, ತಿಮ್ಮನಾಥಕೇರಿ, ಗೋನಾಳಕೇರಿ, ಮನ್ಮಥಕೇರಿ, ಚಾವಡಿಕೇರಿ ಹಿರಿಯರು ಯುಗಾದಿ ಬೇಟೆಗೆ ಆಚರಣೆಯಲ್ಲಿ ಮೆರವಣಿಗೆ ಸಹಿತ ಪಾಲ್ಗೊಳ್ಳುತ್ತಾರೆ. ಪ್ರಥಮ ಸ್ಥಾನದಲ್ಲಿ ಹಿರೇಕೇರಿಯ ಬೇಟೆ ಆಚರಣೆಯ ದಿನದಂದು ತಮ್ಮ ಕೇರಿಯ ಹಿರಿಯರು ಹಾಗೂ ಗುರಿಕಾರ ಆಷಾಡದವು, ಗೋಂಚಿಗಾರ, ಗುಡಿ ಪೂಜಾರಿ, ಯುವಕರು, ಇತರರು ಸೇರಿಕೊಂಡು ತಮ್ಮ ಕೇರಿಯ ದೇವತೆಗಳಾದ ಮಾರೆಮ್ಮ (ಸಿಂಹಾನ ಕಟ್ಟೆ) ಲಕ್ಕು ಮುತ್ಯಾ (ಬೆತ್ತದೇವರು) ದೇವತೆಗಳಿಗೆ ಪೂಜೆಯನ್ನು ಸುಮಾರು ಒಂದು ಗಂಟೆಗೆ ಮಾಡುತ್ತಾರೆ. ತಮ್ಮ ದೇವತೆ ಪೂಜೆಯಾಯಿತೆಂದು ಗ್ರಹಿಸಲು ಬೇಗ ಕೇರಿಯವರು ಹೊರಡಲು ಸಜ್ಜಾಗಬೇಕೆಂಬ ಮುನ್ಸೂಚನೆ ಕೊಟ್ಟಂತೆ ಕಂಡುಬರುತ್ತದೆ. ಎಲ್ಲರೂ ಕೆಂಪು ಬಣ್ಣವನ್ನು ಹಸ್ತದಿಂದ ಬಡಿದುಕೊಳ್ಳುತ್ತಾರೆ. ಹಿಂದೆ ಕೆಮ್ಮಣ್ಣು ಹಚ್ಚಿಕೊಳ್ಳುತ್ತಿದ್ದರೆಂಬ ಪ್ರತೀತಿ ಇದೆ. ಇದರ ಅರ್ಥ ಮನುಷ್ಯನಲ್ಲಿ ಉಗ್ರತೆ ಬರುತ್ತದೆಯಂತೆ. ಇಂದು ಕೆಮ್ಮಣ್ಣು ಸಿಗದ ಕಾರಣ ಇದರ ಬದಲು ಕೆಂಪು ಬಣ್ಣ ಹಚ್ಚಿಕೊಳ್ಳುತ್ತಾರೆ. ಯುವಕರೆಲ್ಲರೂ ತಮ್ಮ ಆಯುಧಗಳಾದ ಗುಂಡ್ಗೋಡ್ಲಿ, ಚಂದ್ರಾಯುಧ, ಭರ್ಚಿ, ಈಟಿ, ಕೋಲು, ಬಂದೂಕು, ಬೇಟೆ ನಾಯಿಗಳ ಸಂಗಡ ಸನ್ನದ್ಧರಾಗಿ ವಾದ್ಯಗಳ ಆರ್ಭಟ, ಸಂಗೀತದೊಂದಿಗೆ ಕುಣಿಯುತ್ತಾರೆ. ಬೇಟೆಗೆ ಹೋಗುವಾಗ ಕುಣಿದು ಕುಪ್ಪಳಿಸುವುದು ವಾಡಿಕೆಯಾಗಿದೆ.

"After Killing an animal Some Indian hunter's used to purify themselves in water as a religious rite. when a Damara hunter return's from a Successful ejeuts it three over his feat".[೧೫೭]

ಬುಡಕಟ್ಟು ಜನರು ಕಾಡು ಪ್ರಾಣಿಗಳನ್ನು ಬೇಟೆಯಾಡಲು ಹೋಗುವ ಸಂದರ್ಭದಲ್ಲಿ ಬೇಟೆ ಪ್ರಾಣಿಗಳಂತೆ ನೃತ್ಯ ಮಾಡುವ ಸಂಪ್ರದಾಯವಿದೆ. ಬೇಟೆಯಿಂದ ಬಂದ ಬೇಟೆಗಾರರು ಮುಖದ ಮೇಲೆ ಮೂರು ಬಾರಿ ನೀರು ಹಾಕಿಕೊಳ್ಳುತ್ತಾರೆ. ಇದೇ ಪ್ರಕಾರವಾಗಿ ಬೇಡ ಬುಡಕಟ್ಟಿನವರು ಸಹ ಯುಗಾದಿ ಹಬ್ಬದಂದು ಬೇಟೆಗೆ ಹೋಗುವ ಸಂದರ್ಭದಲ್ಲಿ ನೃತ್ಯ ಮಾಡುವರು. ಹಿಂದಿನ ಸ್ಥಾನದಲ್ಲಿರುವ

ಬಂಡಿಕೇರಿಯವರು ಬಂದು ಹಿರೇಕೇರಿಯ ಗಡಿ ಭಾಗಕ್ಕೆ ನಿಲ್ಲುತ್ತಾರೆ. ಆ ಸಂದರ್ಭದಲ್ಲಿ ಹಿರೇಕೇರಿಯವರು ಗಾರಿಬಾವಿ ಆಂಜನೇಯ ಸ್ವಾಮಿ ದೇವಾಲಯದ ರಸ್ತೆಯ ಮಾರ್ಗವಾಗಿ ಸಾಗುತ್ತಾರೆ. ಈ ಸಂಪ್ರದಾಯ ಬಹಳ ಹಿಂದಿನ ಕಾಲದಿಂದಲೂ ನಡೆದು ಬಂದಿದೆ. ಬಂಡೀಕೇರಿಯವರು ತಮ್ಮ ಕೇರಿಯ ದೇವತೆಗಳಾದ ಹುಲಿಗೆಮ್ಮ, ಗಾದ್ರಿಪಾಲನಾಯಕ ಇನ್ನೂ ಮುಂತಾದ ದೇವತೆಗಳನ್ನು ೧.೩೦ರ ಒಳಗೆ ಪೂಜಿಸಿ ಹಿರಿಯರ ಆಶೀರ್ವಾದ ಪಡೆದು ಗಾದ್ರಿಪಾಲನಾಯಕ ದೇವಸ್ಥಾನದ ಮುಂದುಗಡೆ ಕುಣಿಯುತ್ತಿರುತ್ತಾರೆ.

ಬಂದೂಕು, ಕೊಡಲಿ, ಕೋಲು, ಚಂದ್ರಾಯುಧ, ಗುಂಡೋಡ್ಲಿ, ಭರ್ಚಿ, ಈಟಿ, ಕುಡುಗೋಲು ಇತರ ಆಯುಧಗಳೊಂದಿಗೆ ಸಿದ್ದರಾಗಿ ಬೇಟೆಗೆ ಹೋಗುವಾಗ ಕುಪ್ಪಳಿಸಿ ಕುಣಿಯುತ್ತಿರುತ್ತಾರೆ. ಈ ನಾಲ್ಕು ಕೇರಿಗಳ ಮೆರವಣಿಗೆ ತಮ್ಮ ಕೇರಿಯಿಂದ ಮುಂದೆ ಸಾಗಿದ ಮೇಲೆ ಗೋನಾಳ ಕೇರಿಯವರ ಹಿಂದೆ ಇವರು ಬಂದು ಸೇರಿಕೊಳ್ಳುತ್ತಾರೆ. ಬೇಟೆಗೆ ಹೋಗುವವರ ವಸ್ತ್ರಕ್ಕೆ ಕೆಂಪು ಬಣ್ಣದಿಂದ ಹಸ್ತದ ಗುರುತನ್ನು ತಮ್ಮ ದೇಹದ ವಸ್ತ್ರದ ಹಿಂಭಾಗ-ಮುಂಭಾಗಕ್ಕೆ ಹಂಚಿಕೊಳ್ಳುತ್ತಾರೆ. ದೇವರ ಮತ್ತು ಹಿರಿಯರ ಆಶೀರ್ವಾದ ಪಡೆದು ಗುರಿಕಾರನ ಮುಖಂಡತ್ವದಲ್ಲಿ ವಾದ್ಯಗಳ ಸಮೇತ ಕುಣಿಯುತ್ತಾ ಕೂಗು ಹಾಕುತ್ತಾ ಐದು ಕೇರಿಯವರ ಬರುವಿಕೆಗಾಗಿ ಆತುರತೆಯಿಂದ ನೋಡುತ್ತಿರುತ್ತಾರೆ. ಎಲ್ಲಾ ಕೇರಿಯವರು ಚಾವಡಿ ಕೇರಿಯಲ್ಲಿ ಬಂದು ಸೇರಿಕೊಂಡು ಬೇಟೆಗೆ ಹೋಗುವ ದೃಶ್ಯ ಅರಣ್ಯದಲ್ಲಿನ ಸಾಮೂಹಿಕ ಬೇಟೆಯನ್ನು ನೆನಪಿಸಿಕೊಡುತ್ತದೆ. ಇದರಿಂದ ಬೇಡ ಬುಡಕಟ್ಟು ಜನರ ಸಂಪ್ರದಾಯ ಇಂದಿಗೂ ನಡೆದು ಬಂದದ್ದನ್ನು ಸಾಬೀತು ಪಡಿಸುತ್ತದೆ. ಬೇಟೆಗೆ ಹೋದವರು ಸುಮಾರು ಸಂಜೆ ೫.೪೫ ನಿಮಿಷಕ್ಕೆ ಪ್ರತಿಯೊಂದು ಕೇರಿಯ ಬೇಟೆಗಾರರು ಬೇಟೆಯಾಡಿದ ಪ್ರಾಣಿಗಳನ್ನು ಸಿಂಗರಿಸಿ ಪೂಜೆ ಮಾಡುತ್ತಾರೆ. ಅಲಂಕೃತ ಪ್ರಾಣಿಗಳು ಅಂದರೆ ಮೂರು ಕಾಡು ಹಂದಿಗಳನ್ನು ಗೋನಾಳಕೇರಿ, ಚಾವಡಿಕೇರಿ, ಹಿರೇಕೇರಿ ಈ ಮೂರು ಕೇರಿಯವರು ಮಾತ್ರ ಬೇಟೆಯಾಡುತ್ತಾರೆ. ಹೀಗೆ ಪ್ರತಿ ಕೇರಿಯವರು ಹಂತ-ಹಂತವಾಗಿ ತಾವು ಬೇಟೆಯಾಡಿದ ಪ್ರಾಣಿ, ಪಕ್ಷಿಗಳೊಂದಿಗೆ ಬಹು ಹುಮ್ಮನಸ್ಸಿನಿಂದ ಕುಣಿಯುತ್ತಾರೆ. ಊರೆಲ್ಲಾ ಅಂದರೆ ತಮ್ಮ-ತಮ್ಮ ಎಲ್ಲಾ ಕೇರಿಗಳಿಗೆ ಮೆರವಣಿಗೆ ಮೂಲಕ ಹೋಗುವ ಸಮಯಕ್ಕೆ ರಾತ್ರಿಯಾಗುತ್ತದೆ. ಗಾರಿಬಾವಿ ಆಂಜನೇಯ ದೇವಸ್ಥಾನದ ಎಡಭಾಗದಲ್ಲಿ ಈ ದೃಶ್ಯ ನೋಡುಗರ ಮನಸ್ಸನ್ನು ಸೂರೆಗೊಳ್ಳುತ್ತದೆ.' ಈ ಯುಗಾದಿ ಬೇಟೆ ಆಚರಣೆ ಇಂದಿನದಲ್ಲ. ಇದು ಆನೆಗೊಂದಿ ರಾಜ ಮಹಾರಾಜರ ಕಾಲದಿಂದಲೂ ನಡೆದುಕೊಂಡು ಬಂದಿದೆ.

**ಭಂಗೀ ಊಟ ಕಾರ್ಯಕ್ರಮ:** ತದಿಗೆ ದಿನ ಅಂದರೆ ಬೇಟೆಯಾಡಿದ ಮರುದಿನ ಪ್ರತಿಯೊಂದು ಕೇರಿಯವರು ಬೇರೆ ಬೇರೆ ಗುರಿಕಾರನ ಸಮ್ಮುಖದಲ್ಲಿ ಆಷಾಡದವರು, ಗೊಂಚಿಗಾರರು, ಬೇಟೆಗಾರರು ಕೂಡಿಕೊಂಡು ತಮ್ಮ ಕೇರಿಯ ಹಿರಿಯರು ಗುರಿಕಾರನಿಗೆ ನೀಡಿದ ಮೇಕೆಯನ್ನು ಕಾಣಿಕೆಯಾಗಿ ತೆಗೆದುಕೊಂಡು ತಮ್ಮ ಕೇರಿಯ ದೇವತೆಯ ಹೆಸರಿನ ಮೇಲೆ ಬಲಿ ನೀಡುತ್ತಾರೆ ಮಾಂಸವನ್ನು ಬೇಯಿಸುವಾಗ ಗಾಂಜಾ ಸೇರಿಸಿ ಬೇಯಿಸುವ ಸಂಪ್ರದಾಯವಿದೆ. ಮ್ಯಾಸ ಬೇಡರಲ್ಲಿ ಮದ್ಯಪಾನ ನಿಷೇದಿಸಿದೆ. ಈ ಪ್ರಕ್ರಿಯೆಗೆ ಭಂಗೀ ಊಟದ ಕಾರ್ಯ ಕ್ರಮವೆಂದು ಕರೆಯುತ್ತಾರೆ. ಹಿಂದಿನ ಸಂಪ್ರದಾಯದಂತೆ ಇಂದಿಗೂ ಆಂಜನೇಯ ದೇವಸ್ಥಾನದಿಂದ ಒಂದು ಬುಟ್ಟಿಯಲ್ಲಿ ಬೇವಿನ ಸೊಪ್ಪನ್ನು ಇರಿಸಿ ಬುಟ್ಟಿಯಲ್ಲಿ ಅಂಚಿಗೆ ಕುಂಕುಮ ಅರಿಶಿನ ಹಚ್ಚಿ ಪೂಜೆ ಮಾಡಿ, ಕೇರಿ ದೇವತೆಯ ಪೂಜಾರಿಯ

ತಲೆಯ ಮೇಲೆ ಹೋರಿಸುತ್ತಾರೆ. ಆತನ ಮುಖಕ್ಕೆ ಕುಂಕುಮ ಅರಿಶಿನ ಹಚ್ಚುತ್ತಾರೆ. ತಮ್ಮ ಕೇರಿಯ ದೇವತೆಯ ಸಂಕೇತವಾಗಿ ದೇವತೆಯನ್ನು ಮರಳಿ ಕೇರಿಗೆ ಕರೆದುಕೊಂಡು ಹೋಗುತ್ತೇವೆಂಬುದು ಅವರ ನಂಬಿಕೆ. ತಮ್ಮ ಕೇರಿಯವರಿಗೆ ವಿಜೃಂಭಣೆಯಿಂದ ಮೆರವಣಿಗೆ ಮಾಡಿಕೊಂಡು ರಾತ್ರಿ ಸುಮಾರು ಒಂಬತ್ತು ಗಂಟೆಗೆ ಕೇರಿಯ ದೇವಸ್ಥಾನಕ್ಕೆ ತಲುಪಿ ಮರಳಿ ದೇವತೆಯನ್ನು ದೇವಸ್ಥಾನದಲ್ಲಿ ಕುಳ್ಳಿರಿಸುತ್ತಾರೆ. ನಂತರ ಕೇರಿಯ ಎಲ್ಲ ಭಕ್ತರು ದೇವತೆಯಲ್ಲಿ ಕಾಪಾಡುವ ತಾಯಿಯೆಂದು ವಿನಂತಿಸಿಕೊಳ್ಳುತ್ತಾರೆ.[೧೫] ನಾಡು ಸೇರಿದ ಬೇಡ ಬುಡಕಟ್ಟಿನ ಮ್ಯಾಸ ಬೇಡರಲ್ಲಿ ಇಂದಿನವರೆಗೂ ಕೆಲವೊಂದು ಸಂಪ್ರದಾಯ ನಂಬಿಕೆ. ಆಚರಣೆಗಳು ಬುಡಕಟ್ಟು ಸಂಸ್ಕೃತಿಯ ಪ್ರತೀಕವಾಗಿ ಕಂಡು ಬರುತ್ತವೆ. ಇದರಲ್ಲಿ ಊರ ಬೇಡರ ಸಂಪ್ರದಾಯಕ್ಕಿಂತ ಭಿನ್ನವಾದ ಅಂಶಗಳು ಕಂಡು ಬರುವುದು ಗಮನಾರ್ಹ.

ಒಟ್ಟಿನಲ್ಲಿ ಈ ಜಾತ್ರೆ-ಉತ್ಸವಗಳು ಪ್ರಾದೇಶಿಕ ವೈವಿಧ್ಯತೆಯಿಂದ ಕೂಡಿದ್ದರೂ ಮುಖ್ಯವಾಗಿ ಜನಸಮೂಹದ ಕಲ್ಯಾಣಕ್ಕಾಗಿ ಮತ್ತು ಸಾಂಸ್ಕೃತಿಕ, ವಾಣಿಜ್ಯ ವಹಿವಾಟುಗಳ ಕೊಂಡು-ಕೊಳ್ಳುವಿಕೆಯಲ್ಲಿ ಸಾರ್ವಜನಿಕ ಸಂಭ್ರಮದಲ್ಲಿ ಸೇರುವ ವೇದಿಕೆಗಳಾಗಿವೆ. ಯಾವುದೇ ಮತ ಧರ್ಮದ ಹಾಗೂ ನಂತರ ಜಾತ್ರೆಯಿರಲಿ ಎಲ್ಲಾ ಜಾತಿ-ಜನಾಂಗದದವರು ಸೇರಿ ಜಾತ್ರೆ ನೆರವೇರಿಸುತ್ತಾರೆ. ಇವು ಐಕ್ಯತೆಯ ಭಾವನೆಯನ್ನು ಪುಷ್ಟೀಕರಿಸಿ ಬೆಳೆಸುವ ಸಾಧನಗಳಾಗಿವೆ. ಜಾತ್ರೆ-ಉತ್ಸವಗಳು ಜನಪದರಿಗೆಲ್ಲಾ ಸಮಷ್ಠಿಯ ಸಂಪತ್ತಾಗಿ, ಪುಣ್ಯ ಪ್ರಸಂಗದ ಪರ್ವಕಾಲವಾಗಿದೆ. ಧಾರ್ಮಿಕ ಹಿನ್ನಲೆಯಲ್ಲಿ ಹುಟ್ಟಿಕೊಂಡು ಬಂದ ಯಾವುದೇ ಜಾತ್ರೆ-ಉತ್ಸವಗಳು ಹೆಣ್ಣು-ಗಂಡು, ಬಡವ-ಬಲ್ಲಿದ, ಊರು-ಕೇರಿ, ಜಾತಿ, ಬೇಧ-ಭಾವವಿಲ್ಲದೇ ಜನರು ನೆರೆಯುವುದರಿಂದ ಜಾತ್ರೆಗಳು ಸಾಮಾಜಿಕ ಭಾವೈಕ್ಯತೆಯ ಸಂಕೇತಗಳಾಗಿ ಪ್ರತಿಬಿಂಬಿಸುತ್ತಲಿವೆ.



**ಅಡಿ ಟಿಪ್ಪಣಿ**

೧. ವೀರಣ್ಣ ದಂಡೆ, ಸಂಪಾದಕ ಬಸವರಾಜ ನೆಲ್ಲಿಸರ "ಜಾನಪದ ಮತ್ತು ಪೂರಕ ಕ್ಷೇತ್ರಗಳು ಲೇ.(ಜಾನಪದ ಮತ್ತು ಪುರಾಣ)" ೧೯೯೧, ಪು.೩೪

೨. ಜಿ.ಸಂ.ಪರಮಶಿವಯ್ಯ "ಜಾನಪದ" ೧೯೬೯, ಪು.೧೫

೩. ಸ್ಟಿಂಥ್ ಥಾಮಸ್ "Standard Dictonary of Folkïore Methology and legend" ೧೯೭೫, P-403

೪. ವಿಲಿಯಂ.ಆರ್. ಬಾಸ್ ಕಾಮ್ "Frontiers of Folklore Boulder Colorado Westview Press" ೧೯೭೫, P-398

೫. ಪರಮಶಿವಯ್ಯ, ಪೂರ್ವೋಕ್ತ, ಪು.೧೪

೬. ಅದೇ ಪೂರ್ವೋಕ್ತ, ಪು.೫

೭. ಹಾ.ಮಾ. ನಾಯಕ್ ಜಾನಪದ ಸ್ವರೂಪ, ೧೯೭೧, ಪು.೧೬-೧೮

೮. ಪರಮಶಿವಯ್ಯ.ಜಿ.ಸಂ. ಪೂರ್ವೋಕ್ತ, ಪು.೮

೯. ಅದೇ ಪೂರ್ವೋಕ್ತ, ಪು.೧೪

೧೦. ವೃಷಭೇಂದ್ರ ಸ್ವಾಮಿ.ಎಮ್. ೧೯೮೨, ಜಾನಪದ ಸಾಹಿತ್ಯ ದರ್ಶನ-೧೦, ಪು.೩

೧೧. ಚೆಲುವರಾಜು, ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಧ್ಯಯನ, ೨೦೦೨, ಪು.೬೦

೧೨. ಅದೇ ಪು.೮೧

೧೩. ಬೋರಲಿಂಗಯ್ಯ.ಹಿ.ಚಿ., ಜಾನಪದ ಕಲೆಗಳ ಕೋಶ, ೧೯೯೬, ಪು. ೧೮೨

೧೪. ಪುರುಷೋತ್ತಮ ಬಿಳಿಮಲೆ, ಚೆಲುವರಾಜು, ಹಂಪಿಯ ಜಾನಪದ, ೧೯೯೦, ಪು.೧೪೭

೧೫. ಬೋರಲಿಂಗಯ್ಯ.ಹಿ.ಚಿ. ಪೂರ್ವೋಕ್ತ, ಪು. ೧೮೩

೧೬. ಅದೇ ಪೂರ್ವೋಕ್ತ, ಪು.೧೪೨-೧೪೩

೧೭. ಅದೇ ಪೂರ್ವೋಕ್ತ, ಪು.೧೪೫

೧೮. ಸುರೇಶ್.ಕೆ.ಎಮ್. ವೀರಶೈವ ಸ್ಮರಣ ಸಂಚಿಕೆ, ೨೦೦೦, ಪು.೧೮

೧೯. ಅದೇ ಪು.೧೯

೨೧. ಪುರುಷೋತ್ತಮ ಬಿಳಿಮಲೆ, ಚೆಲುವರಾಜು, ಪೂರ್ವೋಕ್ತ, ಪು.೧೪೦-೧೪೧

೨೨. ಅದೇ ಪೂರ್ವೋಕ್ತ, ಪು.೧೪೨

೨೩. ಅದೇ ಪೂರ್ವೋಕ್ತ, ಪು.೧೪೬

೨೪. ಅದೇ ಪೂರ್ವೋಕ್ತ, ಪು.೧೪೯

೨೫. ಅದೇ ಪೂರ್ವೋಕ್ತ, ಪು.೧೪೬-೧೪೭

೨೬. ಪರಿಷ್ಕೃತ ಸಂ.೩, ಇಂಗ್ಲೀಷ-ಕನ್ನಡ (ನಿಘಂಟು) ಶಬ್ದಕೋಶ, ೧೯೯೯, ಪು.೪೦೧೧-೪೦೧೨

೨೭. ಗಣನಾಥ ಎಕ್ಕಾರು, ತುಳುನಾಡಿನ ಜಾನಪದ ಆಟಗಳು, ೨೦೦೦, ಪು.೨೨

೨೮. ಅದೇ ಪೂರ್ವೋಕ್ತ, ಪು.೨೪೭-೨೪೮

೨೯. ಅದೇ ಪೂರ್ವೋಕ್ತ, ಪು.೨೪೯

೩೦. ಅದೇ ಪೂರ್ವೋಕ್ತ, ಪು.೧೧೧

೩೧. ಚೆಲುವರಾಜು ಪೂರ್ವೋಕ್ತ, ಪು.೧೧೬

೩೨. ಅದೇ ಪು.೧೧೭

೩೩. ಭೈರೇಗೌಡ.ಎಂ. ಜಾನಪದ ವೈವಿಧ್ಯತೆ, ೧೯೯೯, ಪು.೧೪೫
೩೪. ಅದೇ ಪು.೧೩೬
೩೫. ಅದೇ ಪು.೧೩೮
೩೬. ಅದೇ ಪು.೧೩೮
೩೭. ಅದೇ ಪು.೧೩೯
೩೮. ಅದೇ ಪು.೧೪೦
೩೯. ಅದೇ ಪು.೧೪೯
೪೦. ಅದೇ ಪು.೧೪೦
೪೧. ಅದೇ ಪು.೧೪೦
೪೨. ಅದೇ ಪು.೧೪೮-೧೪೯
೪೩. ಅದೇ ಪು.೧೪೯
೪೪. ಗಣನಾಥ ಎಕ್ಕಾರು ಪೂರ್ವೋಕ್ತ, ಪು.೩೨೪
೪೫. ಚೆಲುವರಾಜು ಪೂರ್ವೋಕ್ತ, ಪು.೧೧೪-೧೧೫
೪೬. ಚೆಲುವರಾಜು ಪೂರ್ವೋಕ್ತ, ಪು.೧೧೬
೪೭. ಗಣನಾಥ ಎಕ್ಕಾರು ಪೂರ್ವೋಕ್ತ, ಪು.೩೧೩-೩೧೪
೪೮. ಗಣನಾಥ ಎಕ್ಕಾರು ಪೂರ್ವೋಕ್ತ ಪು.೮೩-೯೧
೪೯. ಪುರುಷೋತ್ತಮ ಬಿಳಿಮಲೆ ಪೂರ್ವೋಕ್ತ, ಪು.೧೫೩-೧೫೮.
೫೦. ವೃಷಭೇಂದ್ರ ಸ್ವಾಮಿ.ಎಸ್.ಎಮ್. ಪೂರ್ವೋಕ್ತ, ಪು.೬೮
೫೧. ಶಿವಾನಂಧ ಭಂಟನೂರು ಕರ್ನಾಟಕ ಜಾನಪದ ಶಿಲ್ಪಕಲೆ, ೨೦೦೨, ಪು.೫೫
೫೨. ಬೋರಲಿಂಗಯ್ಯ.ಹಿ.ಜಿ. (ಸಂ) ಪೂರ್ವೋಕ್ತ, ಪು.೧೬೪
೫೩. ಲಕ್ಕಪ್ಪ ಗೌಡ ಹೆಚ್.ಜೆ. ಸುವರ್ಣ ಜಾನಪದ ಸಂ.೧೨, ೧೯೯೭ ಪು.೬೫
೫೪. ಗದ್ದಿಗಿಮಠ.ಬಿ.ಎಸ್. ಕನ್ನಡ ಜಾನಪದ ಗೀತೆಗಳು, ೧೯೫೪ ಪು.೧೬೪
೫೫. ಶಿವಾನಂದ ಭಂಟನೂರು ಕರ್ನಾಟಕ ಜನಪದ ಶಿಲ್ಪಕಲೆ – ಒಂದು ಅಧ್ಯಯನ (ಪಿ.ಎಚ್.ಡಿ ಪ್ರಬಂಧ ಅ ಪ್ರಕಟಿತ) ೨೦೦೨, ಪು.೫೬
೫೬. ವೃಷಭೇಂದ್ರ ಸ್ವಾಮಿ.ಎಸ್.ಎಮ್. (ಸಂ) ಪೂರ್ವೋಕ್ತ, ಪು.೧೦೦
೫೭. ಮಾಲತಿ (ವಿವರ ನೀಡಿದವರು) ೫೦ ವರ್ಷ ಕಾಮಲಾಪುರ, ಹೊಸಪೇಟೆ ತಾ, ಬಳ್ಳಾರಿ.ಜಿ.
೫೮. ಗುರುನಾಥ ಜೋಷಿ, ಅಶ್ವಥ್ ನಾರಾಯಣ, ಕನ್ನಡ-ಕನ್ನಡ ಶಬ್ದಕೋಶ, ೨೦೦೨, ಪು.೧೦

೫೯. ಶಿವಾನಂದ ಭಂಟನೂರು ಪೂರ್ವೋಕ್ತ, ಪು.೧೧೧

೬೦. ಚೆನ್ನಣ್ಣ ವಾಲೀಕಾರ್. ಹೈದರಾಬಾದ್ ಕರ್ನಾಟಕ ಗ್ರಾಮ ದೇವತೆಗಳ ಒಂದು ಅಧ್ಯಯನ, ೧೯೯೮, ಪು.೧೪೦

೬೧. ಬೋರಲಿಂಗಯ್ಯ.ಹಿ.ಚಿ. ಪೂರ್ವೋಕ್ತ, ಪು.೨೭

೬೨. ಅದೇ ಪೂರ್ವೋಕ್ತ, ಪು.೨೮

೬೩. ಶಿವಾನಂದ ಭಂಟನೂರು ಪೂರ್ವೋಕ್ತ, ಪು.೧೪೩

೬೪. ಬೋರಲಿಂಗಯ್ಯ.ಹಿ.ಜಿ. ಪೂರ್ವೋಕ್ತ, ಪು.೧೮೨

೬೫. ವೃಷಬೇಂದ್ರ ಸ್ವಾಮಿ (ಸಂ) ಪೂರ್ವೋಕ್ತ, ಪು.೧೪೬

೬೬. ಮಳೇಮಠ ಸಿದ್ದಲಿಂಗಯ್ಯ (ವಿವರಣೆ ನೀಡಿದವರು) ೭೫ವರ್ಷ

೬೭. ಬೋರಲಿಂಗಯ್ಯ.ಹಿ.ಚಿ. ಪೂರ್ವೋಕ್ತ, ಪು.೨೦

೬೮. ಪಾಟೀಲ್.ಎಸ್.ಸಿ (ಸಂ) ಶಿಕ್ಷಣ ಸಂಪದ ಮಾರಿಹಾಳ ಅಭಿನಂದನಾ ಗ್ರಂಥ ಪು.೧೮೧

೬೯. ಚೆನ್ನಣ್ಣ ವಾಲೀಕಾರ್ ಪೂರ್ವೋಕ್ತ, ಪು.೧೭–೧೮

೭೦. ಚೆನ್ನಣ್ಣ ವಾಲೀಕಾರ್ ಪೂರ್ವೋಕ್ತ, ಪು.೮೯–೧೨೫

೭೧. ಶಶಿಕಲಾ ಮೊಳ್ದಿ (ಸಂ) ವಂದನೆ ಸಂಭಾವನಾ ಗ್ರಂಥ, ೧೯೮೮, ಪು.೧೨೨

೭೨. ಅದೇ ಪು.೧೨೩

೭೩. ನೆರೆಗಲ್ಲಪ್ಪ ಅರ್ಚಕರು ೪೦ ವರ್ಷ (ವಿವರಣೆ ನೀಡಿದವರು)

೭೪. ಮಹಾದೇವ.ಸಿ. ಬಳ್ಳಾರಿ ಜಿಲ್ಲೆಯ ಮರದ ವಾಸ್ತು, ೨೦೦೦, ಪು.೨೪–೨೫

೭೫. ಅದೇ ಪು.೨೯

೭೬. ಚಿದಾನಂದ ಮೂರ್ತಿ.ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೦, ಪು.೧

೭೭. ಪಾಟೀಲ್.ಎಸ್.ಸಿ. ಕರ್ನಾಟಕ ಜನಪದ ಚಿತ್ರಕಲೆ, ೧೯೯೩, ಪು.೩

೭೮. ಪರಮಶಿವಯ್ಯ.ಜಿ.ಸಂ. ಜನಪದ ಸಾಹಿತ್ಯ ಸಮೀಕ್ಷೆ, ೧೯೬೭, (ಮುನ್ನುಡಿ)

೭೯. ಪಾಟೀಲ್.ಸಿ.ಎಸ್. ಕರ್ನಾಟಕ ಜನಪದ ಚಿತ್ರಕಲೆ, ೧೯೯೩, ಪು.೫

೮೦. ಅದೇ ಪು.೩೧

೮೧. ಶರಣಬಸಪ್ಪ.ಪಿ. ಕೊಪ್ಪಳ–ಹಂಪಿ ಪ್ರದೇಶದ ಪ್ರಾಗೈತಿಹಾಸದ ಕಲೆ, ೨೦೦೨, ಪು.೧೫೬

೮೨. ನೀಲಗಿರಿ ತಳವಾರ ಲೇಖಕ ಖಂಡೋಬ.ಪಿ.ಕೆ, ಲಂಬಾಣಿ ಕಲೆ ಮತ್ತು ಸಂಸ್ಕೃತಿ, ೧೯೯೪, ಪು.೯೩

೮೩. ಕವಲಿ.ಜೆ.ಎ. ಕನ್ನಡ ಕಸ್ತೂರಿ ಕೋಶ, ೨೦೦೩, ಪು.೫೬೬

೮೪. ಕಿಟೆಲ್.ಎಫ್. ಎ. ಕನ್ನಡ ಇಂಗ್ಲೀಷ ಡಿಶ್‌ನರಿ, ೧೮೯೪, ಪು.೧೬೨೨

೮೫. ಕಲ್ಬುರ್ಗಿ.ಎಮ್.ಎಮ್. ಉತ್ತರ ಕರ್ನಾಟಕ ಜಾನಪದ ಪದ್ಯ ಸಾಹಿತ್ಯ, ೧೯೭೮, ಪು.೬೮

೮೬. ನಾಗೇಗೌಡ.ಹೆಚ್.ಎಲ್. ಪ್ರವಾಸಿ ಕಂಡ ಇಂಡಿಯಾ ಸಂ-೨, ಪು,೧೩೦

೮೭. ಕಿಟೆಲ್.ಎಫ್. ಪೂರ್ವೋಕ್ತ, ಪು.೧೬೨೨

೮೮. ಮಹೇಶ್ವರಯ್ಯ.ಹೆಚ್.ಎಮ್, ೧೯೮೮, ಒಂದು ಜಾನಪದ ಕಲೆ, ಪು.೨

೮೯. ಪಾಟೀಲ್.ಎಸ್.ಸಿ ಪೂರ್ವೋಕ್ತ, ಪು.೮೬-೮೭

೯೦. ಅದೇ ಪು.೮೭-೮೮

೯೧. ಸಂ.ನೀಲಗಿರಿ ತಳವಾರ ಲೇಖಕ ಖಂಡೋಬ.ಪಿ.ಕೆ. ಪೂರ್ವೋಕ್ತ, ಪು.೯೪

೯೨. ಪಾಟೀಲ್.ಸಿ.ಎಸ್. ಪೂರ್ವೋಕ್ತ, ಪು.೨೧೯

೯೩. ತರಂಗ ವಾರ ಪತ್ರಿಕೆ, ಸೆಪ್ಟೆಂಬರ್ ೨೨, ೧೯೮೫, ಪು.೩೯

೯೪. ಪಾಟೀಲ್.ಸಿ.ಎಸ್. ಪೂರ್ವೋಕ್ತ, ಪು.೨೨೦-೨೨೧

೯೫. ಕಿಟೆಲ್.ಎಫ್. ಪೂರ್ವೋಕ್ತ, ಪು.೧೯೨೭

೯೬. ಶಿವರಾಮ್ ಕಾರಂತ್, ಸಿರಿಗನ್ನಡ ಅರ್ಥಕೋಶ, ೧೯೯೦, ಪು.೪೫೩

೯೭. ತರಂಗ ವಾರಪತ್ರಿಕೆ, ಸೆಪ್ಟೆಂಬರ್ ೨೨, ೧೯೮೫, ಪು.೫

೯೮. ಶ್ರೀಮತಿ ಶಾಂತಿನಾಯಕ್, ಜಾನಪದ ಕಲೆ, ೧೯೮೭, ಪು.೮-೧೩

೯೯. ಜೋಷಿ.ಶಂ.ಭಾ. ಕರ್ನಾಟಕ ಸಂಸ್ಕೃತಿ ಪೂರ್ವ ಪೀಠಿಕೆ ಭಾಗ-೧, ೧೯೬೯, ಪು.೨೨

೧೦೦. ಸಿದ್ದಲಿಂಗಯ್ಯ ಗ್ರಾಮ ದೇವತೆಗಳು, ೧೯೯೭, ಪು.೧

೧೦೧. ಶೀಲಾಕಾಂತ ಪತ್ತಾರ ಬಾದಾಮಿ ಸಾಂಸ್ಕೃತಿಕ ಅಧ್ಯಾಯನ, ೨೦೦೦, ಪು.೯೦

೧೦೨. ಬಡಿಗೇರ್.ಪಿ.ಬಿ. ಗಾಹಾಸತ್ತಸಈ, ೧೯೯೧, ಪು.೫೪

೧೦೩. ಚೆಲುವರಾಜು ಪೂರ್ವೋಕ್ತ, ಪು.೮೪

೧೦೪. ಅದೇ ಪು.೮೫

೧೦೫. ಅದೇ ಪು.೮೫

೧೦೬. ಅದೇ ಪು.೯೦

೧೦೭. ಅದೇ ಪು.೯೮

೧೦೮. ಪಂಚಮುಖಿ.ಆರ್. ಕರ್ನಾಟಕ ಇತಿಹಾಸ ೧೯೬೭, ಪು.೪೪

೧೦೯. ಸುಂದರ.ಅ. ಮಲಪ್ರಭ ಬಯಲಿನ ಪ್ರಾಚೀನ ಸಂಸ್ಕೃತಿ-ಒಂದು ಸಮೀಕ್ಷೆ, ೧೯೮೨, ಪು.೮

೧೧೦. ಚೆಲುವರಾಜ ಪೂರ್ವೋಕ್ತ, ಪು.೯೯

೧೧೧.ಜವರೇಗೌಡ.ದೇ. ಜಾನಪದ ಅಧ್ಯಯನ, ೨೦೦೧, ಪು.೩೬೫

೧೧೨.ಅದೇ ಪು.೩೬೭

೧೧೩.ಸಂ.ಕುವೆಂಪು, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಮತ್ತು ಕುಮಾರ ವ್ಯಾಸ ಕರ್ನಾಟಕ ಕಥಾ ಮಂಜರಿ ಉದ್ಯೋಗ ಪರ್ವ, ೧೯೫೮, ಪು.೨-೧೩

೧೧೪.ಜೆ.ಎ.ಕವಲಿ ಭಾರತೀಯ ಹಬ್ಬಗಳು, ೧೯೭೫, ಪು.೨೫

೧೧೫.ಹುಸೇನ್.ಜಿ.ಜೀಳಗಿ ಜಾನಪದ ಸೃಷ್ಠಿ-ದೃಷ್ಠಿ, ೨೦೦೦, ಪು.೩೯

೧೧೬.ಅರ್ಜುನ್.ಮು. ಗೋಳಸಂಗಿ, ಗೋಳಸಂಗಿ ಗ್ರಾಮ-ಒಂದು ಸಾಂಸ್ಕೃತಿಕ ಅಧ್ಯಾಯನ, ೧೯೯೫, ಪು.೮೫

೧೧೭.ಅದೇ ಪು.೮೫-೮೬

೧೧೮.ನರಸಿಂಹಮೂರ್ತಿ.ಎಚ್.ವ್ಹಿ. ನಮ್ಮ ಹಬ್ಬಗಳು, ೨೦೦೨, ಪು.೩

೧೧೯.ಪುರುಷೋತ್ತಮ ಬಿಳಿಮಲೆ, ಚೆಲುವರಾಜು ಪೂರ್ವೋಕ್ತ, ಪು.೧೨೮-೧೨೯

೧೨೦.ಸಂ.ಬರಗೂರು ರಾಮಚಂದ್ರಪ್ಪ ಕರ್ನಾಟಕ ಸಂಗಾತಿ, ೨೦೦೨, ಪು.೩೫೪

೧೨೧.ಚೆನ್ನಣ್ಣ ವಾಲೀಕಾರ್ ಸಮಗ್ರ ಜಾನಪದ ಪ್ರಬಂಧ, ೨೦೦೨, ಪು.೪೭೮.

೧೨೨.ಭಟ್ಟ ಬೆತ್ತಗೇರಿ.ವಿ.ಎನ್. ಭಾರತೀಯ ಹಬ್ಬಗಳ ವೈಶಿಷ್ಠತೆ, ೨೦೦೨, ಪು.೧೯

೧೨೩.ಸಂ.ಬರಗೂರು ರಾಮಚಂದ್ರಪ್ಪ ಪೂರ್ವೋಕ್ತ, ಪು.೩೫೪

೧೨೪.ರಾಜಶೇಖರ್.ಪಿ.ಕೆ. ಜಾನಪದ ಸಂಭ್ರಮ, ೨೦೦೩, ಪು.೧೦೫

೧೨೫.ಭಟ್ಟ ಬೆತ್ತಗೇರಿ.ವಿ.ಎನ್. ಪೂರ್ವೋಕ್ತ, ಪು.೧೧೮

೧೨೬.ಅದೇ ಪು.೧೦೩

೧೨೭.ನರಸಿಂಹ ಮೂರ್ತಿ.ಹೆಚ್.ವಿ. ಪೂರ್ವೋಕ್ತ, ಪು.೧೦೫

೧೨೮.ಅರ್ಜುನ್.ಯು.ಗೊಳಸಂದ್ರಿ ಪೂರ್ವೋಕ್ತ, ಪು.೯೬-೯೭

೧೨೯.ಭಟ್ಟ ಬೆತ್ತಗೇರಿ.ವಿ.ಎನ್. ಪೂರ್ವೋಕ್ತ, ಪು.೧೦೩

೧೩೦.ಅದೇ ಪು.೧೦೧-೧೦೨

೧೩೧.ಅದೇ ಪು.೧೦೪-೧೦೫

೧೩೨.ಅದೇ ಪು.೧೬

೧೩೩.ವಾಗೀಶ್ವರಿ ಶಾಸ್ತ್ರಿ ಕರ್ನಾಟಕದ ಹಬ್ಬಗಳು, ೧೯೮೩, ಪು.೩೨

೧೩೪.ಉಮಾಶಂಕರ್ ಜಾನಪದ, ೨೦೦೧, ಪು.೨೮

೧೩೫.ಎಚ್.ವಿ. ನರಸಿಂಹ ಮೂರ್ತಿ. ಪೂರ್ವೋಕ್ತ, ಪು.೧೩೯

೧೩೬. ಅದೇ ಪು.೧೩೯

೧೩೭. ಅದೇ ಪು.೧೩೯

೧೩೮. ಪುರುಷೋತ್ತಮ ಬಿಳಿಮಲೆ, ಚೆಲುವರಾಜು, ಪೂರ್ವೋಕ್ತ, ಪು.೧೨೩.

೧೩೯. ಪುರುಷೋತ್ತಮ ಬಿಳಿಮಲೆ, ಚೆಲುವರಾಜು, ಪೂರ್ವೋಕ್ತ, ಪು.೧೨೪

೧೪೦. ಚೆನ್ನಣ್ಣ ವಾಲೀಕಾರ, ಪೂರ್ವೋಕ್ತ, ಪು.೪೭೮

೧೪೧. ಚೆನ್ನಣ್ಣ ವಾಲೀಕಾರ-ಒಂದು ಗ್ರಾಮದ ಜಾನಪದೀಯ ಅಧ್ಯಯನ, ೧೯೯೧, ಪು.೧೦೨

೧೪೨. ಚೆನ್ನಣ್ಣ ವಾಲೀಕಾರ ಪೂರ್ವೋಕ್ತ, ಪು.೧೦೯

೧೪೩. ಚೆನ್ನಣ್ಣ ವಾಲೀಕಾರ ಸಮಗ್ರ ಜಾನಪದ ಸಂ.ಪ್ರಬಂಧ ಸಂ-೧, ೨೦೦೨, ಪು.೪೮೧

೧೪೪. ಸಿದ್ದಗಂಗಪ್ಪ.ಎಚ್.ಎಸ್. ಹಳ್ಳಿಯ ಬಳ್ಳಿ, ೧೯೭೯, ಪು.೫೦-೫೧

೧೪೫. ಚೆನ್ನಣ್ಣ ವಾಲೀಕಾರ್-ಒಂದು ಗ್ರಾಮದ ಜಾನಪದೀಯ ಅಧ್ಯಯನ, ೧೯೯೧, ಪು.೧೦೯

೧೪೬. ಚೆನ್ನಣ್ಣ ವಾಲೀಕಾರ್ ಪೂರ್ವೋಕ್ತ, ಪು.೧೦೬

೧೪೭. ಭೈರೇಗೌಡ.ಎಂ. ಪೂರ್ವೋಕ್ತ, ಪು.೧೧೧

೧೪೮. ಸಿದ್ದಗಂಗಪ್ಪ.ಎಚ್.ಎಸ್. ಹಳ್ಳಿ-ಬಳ್ಳಿ, ೧೯೭೯, ಪು.೫೪-೫೫

೧೪೯. ಹಿರೇಮಠ.ಎಸ್.ಸಿ. ಕೊಪ್ಪಳ ಜಿಲ್ಲೆಯ ಜಾತ್ರೆಗಳು, ೨೦೦೦, ಪಿ-IX,

೧೫೦. ಶಿವಕುಮಾರ ಸ್ವಾಮಿ.ಸಿ.ಎಸ್. ಉತ್ತರ ಕರ್ನಾಟಕದ ಜಾತ್ರೆಗಳು, ೧೯೮೮, ಪು-೩೦

೧೫೧. ನಾಗರಾಜಯ್ಯ.ಹಂ.ಪ. ಕರ್ನಾಟಕದ ಜಾತ್ರೆಗಳು, ೧೯೮೫, ಪು.೨೧

೧೫೨. ಹಿರೇಮಠ.ಎಸ್.ಎಸ್. ಕರ್ನಾಟಕದ ಜಾತ್ರೆಗಳು, ೨೦೦೨, ಪು.೩೬೧

೧೫೩. ಅಶ್ವಥ್ ನಾರಾಯಣ ಶರ್ಮಾ.ಪಿ. ೬೦ ವರ್ಷ ಅರ್ಚಕರು

೧೫೪. ಅಪರ್ಣ.ಸಿ.ಎಸ್. ಸಂಗಮರ ಕಾಲದ ದೇವಾಲಯಗಳು (ಡಿ.ಲಿಟ್. ಅಪ್ರಕಟಿತ ಪ್ರಬಂಧ) ೨೦೦೪, ಪು.೨೬೨

೧೫೫. ನರಸಿಂಹ ಮೂರ್ತಿ.ಹೆಚ್. ೩೦ ವರ್ಷ ಅರ್ಚಕರು

೧೫೬. ಜಗದೀಶ್ ಕುಮಾರ್ ಬೇಡ ಬುಡಕಟ್ಟಿನ ಬೇಟೆ ಆಚರಣೆ-ಒಂದು ಸಮಾಜ ಶಾಸ್ತ್ರೀಯ ಅಧ್ಯಯನ, ೨೦೦೪, (ಎಂ.ಫಿಲ್. ಪ್ರಬಂಧ ) ಪು.೧೭-೧೮

೧೫೭. Frazer, The Golden Bough Delhi Macmillan Press Ltd., 1990 P.220

೧೫೮. ಜಗದೀಶ್ ಕುಮಾರ್ ಪೂರ್ವೋಕ್ತ, ಪು.೨೧-೨೩ ೧೯೭೫ P-398



## ಅಧ್ಯಾಯ-೬

# ವಸ್ತುಸಂಗ್ರಹಾಲಯದ ಅರ್ಥ ಮತ್ತು ವೈಶಿಷ್ಠತೆ

'ಮ್ಯೂಸಿಯಂ' ಎಂಬ ಶಬ್ದ ಗ್ರೀಕ್ ಶಬ್ದದಿಂದ ಉದ್ಭವವಾಗಿದ್ದು, ಗ್ರೀಕ್ ಕಲಾಭಿಮಾನಿ ದೇವತೆಗಳ 'ಗರ್ಭಗುಡಿ' ಎಂದು ಅರ್ಥ. ಈ ದೇವತೆ ಎಲ್ಲ ವಿದ್ಯೆ ಮತ್ತು ಕಲೆಗಳ ಅಧಿದೇವತೆ.[೧] ವಸ್ತುಸಂಗ್ರಹಾಲಯಗಳು ಕೇವಲ ಅನುಪಯುಕ್ತ ವಸ್ತುಗಳ ಸಂಗ್ರಹ ಮಾತ್ರವಲ್ಲ, ಇವು ನಿರ್ದಿಷ್ಠ ಪ್ರದೇಶದ ಅಥವಾ ಸಮುದಾಯದ ಕಲೆ ಮತ್ತು ಸಂಸ್ಕೃತಿಗಳನ್ನು ಪ್ರತಿಬಿಂಬಿಸುತ್ತವೆ. ಮಾನವನ ಸೃಜನಶೀಲತೆ ಮತ್ತು ಪ್ರಕೃತಿಯ ಮೇಲಣ ನಿಯಂತ್ರಣದ ಬಗ್ಗೆ, ಮೂಲಭೂತ ಸಾಕ್ಷ್ಯಗಳನ್ನು ಸಾದರಪಡಿಸುವುದರ ಮೂಲಕ ಮಾನವನ ಸಾಮಾಜಿಕ ಮತ್ತು ಸಾಂಸ್ಕೃತಿಕ ಉತ್ಥಾನಕ್ಕೆ ನೆರವಾಗುವ ಮೂಲ ಆಕರಗಳಾಗಿವೆ. ವಸ್ತುಸಂಗ್ರಹಾಲಯಗಳು ವಿಷಯ ವಸ್ತುಗಳನ್ನು ನಿರೂಪಿಸುವ ಕಾರ್ಯಗಾರ, ವಸ್ತು ವಿಷಯಗಳ ಬೋಧನಾಶಾಲೆ, ಸಾಂಸ್ಕೃತಿಕ ಆನಂದ ಪಡೆಯುವ ತಾಣ. ಪ್ರೇಕ್ಷಕರನ್ನು ತನ್ನ ದಿನನಿತ್ಯದ ದುಡಿತದ ಬಳಲಿಕೆ ಅಥವಾ ಆತಂಕಗಳಿಂದ ವಿರಾಮ ಪಡೆಯುವ ವಿಶಾಲ ಜ್ಞಾನ ದಿಗಂತಗಳನ್ನು ಕಾಣುವ ಸ್ಥಳ.[೨]

ಡೇವಿಡ್ ಮರ್ರೆ ರವರ ಅಭಿಪ್ರಾಯದಲ್ಲಿ 'ಪುರಾತನ ಸ್ಮಾರಕಗಳನ್ನು ಅಥವಾ ವಿದ್ವಾಂಸರು ಮತ್ತು ವಿಜ್ಞಾನಿಗಳ ಮನ ಸೆಳೆಯುವ ವಸ್ತುಗಳನ್ನು ವೈಜ್ಞಾನಿಕ ರೀತಿಯಲ್ಲಿ ಜೋಡಿಸಿ ಪ್ರದರ್ಶಿಸಿರುವುದೇ ವಸ್ತುಸಂಗ್ರಹಾಲಯ.'[೩] ಇವು ಪ್ರಾಚ್ಯವಸ್ತು ಸಂಗ್ರಹ, ಪ್ರಾಕೃತಿಕ ಇತಿಹಾಸ, ಮಾನವಶಾಸ್ತ್ರ ಮತ್ತು ಕಲೆ ಹೀಗೆ ಮೊದಲಾದ ವಿಷಯಗಳ ವಸ್ತುಗಳ ಕುರಿತು ಹೆಚ್ಚಿನ ಮಾಹಿತಿ ನೀಡುತ್ತವೆ.[೪] ಒಟ್ಟಾರೆ ವಸ್ತು ಸಂಗ್ರಹಾಲಯ ಎಂದರೆ 'ಅಪೂರ್ವವಾದ ಪದಾರ್ಥಗಳನ್ನು ಪ್ರದರ್ಶನಕ್ಕಾಗಿ ಸಂಗ್ರಹಿಸಿಡುವ ಸ್ಥಳ' ಎಂದರ್ಥ.[೫] ಆದರೆ ಇದೊಂದು ತಾತ್ಕಾಲಿಕ ಪ್ರದರ್ಶನ ಕೇಂದ್ರವಲ್ಲ, ಶಾಶ್ವತಸ್ಥಳ. ವಸ್ತು ಸಂಗ್ರಹಾಲಯಗಳು ಕೇವಲ ಕಲಾವಸ್ತುಗಳ ಸಂಗ್ರಹಾಲಯಗಳಷ್ಟೇ ಅಲ್ಲ. ಇವು ಜ್ಞಾನದ ಎಲ್ಲಾ ಕ್ಷೇತ್ರಗಳನ್ನು ಪ್ರತಿನಿಧಿಸುವಂತಹ ಅಪೂರ್ವ ವಸ್ತುಗಳನ್ನು ಒಳಗೊಂಡಿರುವಂಥವು. ಇವು ಪ್ರಾಚೀನ ಮತ್ತು ಅರ್ವಾಚೀನ ವಸ್ತುಗಳನ್ನು ಒಳಗೊಂಡ ವಸ್ತುಸಂಗ್ರಹಾಲಯಗಳು. ಜ್ಞಾನದಾಹವನ್ನು ತಣಿಸುವ ಮಹತ್ವದ ತಾಣಗಳೆನಿಸಿವೆ.[೬]

ಪ್ರಸ್ತುತ ಕಾಮಲಾಪುರ ಗ್ರಾಮ ಸೀಮಿತ ಮಾಡಿಕೊಂಡು ಅಧ್ಯಯನ ಇದಾಗಿದೆ. ಕಾಮಲಾಪುರ ಗ್ರಾಮದಲ್ಲಿ ಕೇಂದ್ರ, ರಾಜ್ಯ ಮತ್ತು ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯಗಳು ಇವೆ. ಇವು ತಮ್ಮ ಹೆಮ್ಮೆಯ ಸಾಧನೆಯನ್ನು ಇಲ್ಲಿ ಜನಪದರಿಗೆ ತೋರಿಸಿ, ಶೈಕ್ಷಣಿಕ ಪ್ರಗತಿ ಪಥದಲ್ಲಿ ಮುಂದುವರೆಯುತ್ತಲಿವೆ.

**ವೈಶಿಷ್ಟತೆ:** ಇಲ್ಲಿನ ವಸ್ತುಸಂಗ್ರಹಾಲಯಗಳಿಂದ ಸಮಾಜದಲ್ಲಿ ಉಂಟಾಗುವ ಸಾಂಸ್ಕೃತಿಕ ಕ್ರಾಂತಿಗಳಲ್ಲಿ ಇವುಗಳ ಪಾತ್ರ ಹಿರಿಯದಾಗಿದೆ. ಇವು ದೇಶದ ಅಥವಾ ಜನಾಂಗದ ಸಾಂಸ್ಕೃತಿಕ ಹಾಗೂ ಕಲಾಕುಶಲತೆಯ ಬೆಳವಣಿಗೆಯನ್ನು ಪ್ರತಿನಿಧಿಸುತ್ತವೆ. ಕೇಂದ್ರದ ವಸ್ತು ಸಂಗ್ರಹಾಲಯ ಇದು ಇಡೀ ರಾಷ್ಟ್ರದ ವಿವಿಧ ಜನಾಂಗದ ಕಲೆ ಮತ್ತು ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುತ್ತದೆ. ಇದರಿಂದಾಗಿ ಕಲೆ ಮತ್ತು ಸಂಸ್ಕೃತಿಯ ತುಲನಾತ್ಮಕ ಅಭ್ಯಾಸಕ್ಕೆ ಇವು ಕೇಂದ್ರಬಿಂದು ಎಂದರೆ ಉತ್ಪ್ರೇಕ್ಷೆಯಾಗಲಾರದು. ವಸ್ತುಸಂಗ್ರಹಾಲಯಗಳು ಪಂಡಿತ ವರ್ಗಕ್ಕೆ ಮಾತ್ರವಲ್ಲದೆ ಜನ ಸಮುದಾಯಕ್ಕೆ ಉಪಯುಕ್ತವಾಗಿದೆ. ವಸ್ತು ಸಂಗ್ರಹಾಲಯಗಳು ಮಾನವ ಜನಾಂಗ ಮತ್ತು ಅವನ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಹೀಗೆ ಒಂದು ಕಲಾ ವಸ್ತುವಿನ ಮೌಲ್ಯ ಅದರಲ್ಲಿರುವ ರಸಾಭಿಜ್ಞತೆಯ ಗುಣಗಳನ್ನು ಬಿಟ್ಟರೂ ಅಂದು ಐತಿಹಾಸಿಕ ಮೌಲ್ಯದಿಂದ ಅಷ್ಟೇ ಮಹತ್ವದ್ದಾಗಿದೆ. ವಸ್ತು ಸಂಗ್ರಹಾಲಯಗಳು ಮಾನವ ಜನಾಂಗದ ಸಾಂಸ್ಕೃತಿಕ ಮತ್ತು ಬುದ್ಧಿ ಶಕ್ತಿಯ ಬೆಳವಣಿಗೆಯ ಮೇಲೆ ಸರ್ವತೋಮುಖವಾಗಿ ಕಾರ್ಯಕೈಗೊಂಡಿವೆ. ಕೇವಲ ವಸ್ತುಗಳ ಸಂಗ್ರಹ ಮತ್ತು ಸಂರಕ್ಷಣೆಯ ಮೂಲಕಾರ್ಯಗಳ ಜೊತೆಗೆ ಶಿಕ್ಷಕನಾಗಿ, ಭಾವೋದ್ದೀಪಕನಾಗಿ ಕಾರ್ಯನಿರ್ವಹಿಸುತ್ತವೆ. ವಿಶಿಷ್ಟ ವಸ್ತು ಸಂಗ್ರಹದ ತಾಣವಾಗಿರುವ ಮತ್ತು ವಿದ್ಯಾರ್ಥಿ ಮತ್ತು ಪ್ರೇಕ್ಷಕರ ಗಮನವನ್ನು ಸಂಶೋಧನಾ ಹಾದಿಗೆ ಕೊಂಡೊಯ್ಯುವ ಏಕೈಕ ಮಾಧ್ಯಮ ಇದಾಗಿದೆ. ಆಯಾಕಾಲದ ಸಾಂಸ್ಕೃತಿಕ ಬೆಳವಣಿಗೆಯನ್ನು ನಿರೂಪಿಸುವಲ್ಲಿ ಇವು ದಾರಿ ದೀಪವಾಗಿವೆ.

**ವಸ್ತುಸಂಗ್ರಹಾಲಯ ಒಂದು ಶೈಕ್ಷಣಿಕ ಸಂಸ್ಥೆಯಾಗಿ:** ಕೇವಲ ಕೆಲವು ವಿಷಯಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದೇ ಶಿಕ್ಷಣವಲ್ಲ. ಇದು ವಿಷಯಗ್ರಾಹಕನ ಕಲ್ಪನೆಯನ್ನು ವಿಕಾಸಗೊಳಿಸುವ ಗುರಿ ಮಾತ್ರ, ಇವು ನಮ್ಮ ಮುಂದೆ ನೀಡುವ ಶಿಕ್ಷಣಕ್ಕೆ ಸಾಕ್ಷಿಯಾಗಿ ನಿಂತಿದೆ. ಶೈಕ್ಷಣಿಕವಾಗಿ ವ್ಯವಸ್ಥಿತ ಪ್ರದರ್ಶನ ಶಾಲೆಗಳು. ಈ ವಿದ್ಯಾರ್ಥಿವೃಂದ ಮತ್ತು ಪ್ರಸ್ತುತ ಸಮಾಜದ ವಿಶೇಷ ಗಮನ ಸೆಳೆಯುವುದು ವಸ್ತುಸಂಗ್ರಹಾಲಯದ ಉದ್ದೇಶ. ಕಿರಿಯ ವಿದ್ಯಾರ್ಥಿಗಳಿಗೆ ತಾವು ಕಲಿತ ಪಾಠಗಳಿಗೆ ಇವು ಪೂರಕ ಜ್ಞಾನ ನೀಡಿ, ವಿವಿಧ ರೀತಿಯ ಸೌಂದರ್ಯಾನುಭೂತಿಯ ಕಡೆ ಒಲವು ಮೂಡಿಸಿವೆ. ಈ ಒಲವು ಅಪಾರ ಜ್ಞಾನ ವೃದ್ಧಿಯಾಗಲಿಕ್ಕೆ ಅನುವು ನೀಡಿವೆ. ಭವಿಷ್ಯದಲ್ಲಿ ಯಾವುದೋ ವಸ್ತುವಿನ ವಿಶೇಷ ಅಧ್ಯಯನಕ್ಕೆ ದಾರಿ ದೀಪವಾಗಿವೆ. ಹಳ್ಳಿಗಾಡಿನ ವಿದ್ಯಾರ್ಥಿಗಳಿಗೆ ವಸ್ತು ಸಂಗ್ರಹಾಲಯ ಮತ್ತು ಅವುಗಳ ಸಂಪರ್ಕವನ್ನು ಪಡೆಯುವ ಅವಕಾಶ ನೀಡಿದಂತಾಗಿವೆ. ವಸ್ತುಸಂಗ್ರಹಾಲಯಗಳಲ್ಲಿ ಚರಿತ್ರೆ, ಭೂಗೋಳಶಾಸ್ತ್ರ, ಕಲೆ, ವಿಜ್ಞಾನ, ತಾಂತ್ರಿಕ ಮತ್ತು ಪ್ರಾಕೃತಿಕ ಅಲೇಖ್ಯಗಳ ಮತ್ತು ಇತರೆ ಹತ್ತಾರು ವಿಷಯಗಳ ವಿವರಣಾ ಪಟ್ಟಿಕೆಗಳನ್ನು ಒಳಗೊಂಡ ಕಣಜವಾಗಿರುವುದರಿಂದ ವಿದ್ಯಾರ್ಥಿವೃಂದ ಮತ್ತು ಶಿಕ್ಷಕರಿಗೆ ಆ ವಿಷಯಗಳ ಬಗ್ಗೆ ಅರಿಯಲು ವಿವರಣಾ ಪಟ್ಟಿಕೆಗಳು ಮಾರ್ಗದರ್ಶಿಗಳಾಗಿವೆ.[೭] ಇಲ್ಲಿನ ಕಲಾ ಸೌಂದರ್ಯ ವಸ್ತುವಿನ ಇನ್ನೊಂದು ಭಾಗ. ಶಾಲಾ ವಿದ್ಯಾರ್ಥಿಗಳು ವಸ್ತು

ಸಂಗ್ರಹಾಲಯಗಳಿಗೆ ಸಂದರ್ಶನ ನೀಡುವುದರಿಂದ ವಿದ್ಯಾರ್ಥಿಗಳಿಗೆ ದೃಶ್ಯದ ಅನುಭವ ಪಡೆಯುವ ಅವಕಾಶ ಮತ್ತು ವಸ್ತು ವಿಗೆ ಕುರಿತು ಓದಿದ್ದುದನ್ನು ನೋಡಿ ತಿಳಿಯಲು ಸಾಧ್ಯ. ಓದಿದರೊಂದಿಗೆ ಪಡೆದ ಜ್ಞಾನ ನೋಡುವುದರಿಂದ ಪರಿಪಕ್ವವಾಗುತ್ತದೆ. ಬೋಧನೆಯಿಂದ ತಿಳಿಯದೇ ಸಾಧ್ಯವಾದ ವಸ್ತುಗಳ ಬಗೆಗಿನ ತಿಳುವಳಿಕೆ ನೀಡುತ್ತವೆ. ಉಪಾಧ್ಯಾಯರಿಗೆ ತಮ್ಮ ತರಗತಿ ವಿಷಯ ಬೋಧನೆಯಲ್ಲಿ ಈ ಸಂಗ್ರಹಾಲಯದ ವಸ್ತುಗಳು ಪೂರ್ಣ ಪ್ರಯೋಜನ ಪಡೆಯಲಿಕ್ಕೆ ಪ್ರೇರಣೆ ನೀಡಿದಂತಾಗಿವೆ.[೮]

ಶೈಕ್ಷಣಿಕ ಕ್ಷೇತ್ರದಲ್ಲಿ ಇವುಗಳ ಮಹತ್ವವನ್ನು ಅರಿಯಲು ಚಾರಿತ್ರಿಕ, ಧಾರ್ಮಿಕ, ಸಾಮಾಜಿಕ, ಕಲಾತ್ಮಕ, ವೈಜ್ಞಾನಿಕ, ತಾಂತ್ರಿಕ, ಜೀವನ ಮತ್ತು ಸಾಧನೆಗಳನ್ನು ತೋರುವ ಹೆಜ್ಜೆ ಗುರುತುಗಳಾಗಿ ಅನೇಕ ಕುರುಹುಗಳನ್ನು ಒಳಗೊಂಡ ಕೇಂದ್ರಗಳಾಗಿವೆ. ಜಾನಪದ ವಸ್ತು ಸಂಗ್ರಹಾಲಯಗಳು ಕುತೂಹಲಕಾರಿ ವಸ್ತುಗಳನ್ನು ಒಳಗೊಂಡಿವೆ. ಅಲ್ಲದೇ ಆಯಾಪ್ರದೇಶದ ಅಂದರೆ ಹೆಚ್ಚಿನ ಮಟ್ಟಿಗೆ ವಿಜಯನಗರ ಸಾಮ್ರಾಜ್ಯದ ಅರಸರ ಸಾಮಾಜಿಕ, ಸಾಂಸ್ಕೃತಿಕ, ಕಲಾತ್ಮಕ ಅಂಶಗಳನ್ನು ಪ್ರತಿನಿಧಿಸುತ್ತವೆ. ಪ್ರಸ್ತುತ ಕಾಮಲಾಪುರ ಗ್ರಾಮಕ್ಕೆ ಸಂಬಂಧಿಸಿದಂತೆ ಇಲ್ಲಿನ ವಸ್ತುಸಂಗ್ರಾಹಾಲಯಗಳು ಜನಸಾಮಾನ್ಯರನ್ನು ಆಕರ್ಷಿಸುವುದರ ಜೊತೆಗೆ ಆಯಾ ಕ್ಷೇತ್ರದಲ್ಲಿ ಸಂಶೋಧನೆ ಕೈಗೊಳ್ಳುವವರಿಗೆ ಇಲ್ಲಿನ ಮೂರು ವಸ್ತುಸಂಗ್ರಹಾಲಯಗಳು ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ, ಮತ್ತು ಶ್ರೀ ಸಾಮಾನ್ಯರಿಗೆ ಹೆಚ್ಚು ಸಹಾಯಕಾರಿ.[೯]

**ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯ:** ಕಾಮಲಾಪುರದಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣಾ ವಸ್ತುಸಂಗ್ರಹಾಲಯವನ್ನು ೧೯೫೩ರಲ್ಲಿ ಹಂಪಿಯ ಗಜ ಶಾಲೆಯಲ್ಲಿ ಪ್ರಾರಂಭ ಮಾಡಿದರು. ೧೯೭೨ರಲ್ಲಿ ಈ ವಸ್ತು ಸಂಗ್ರಹಾಲಯವು ಕಾಮಲಾಪುರ ಎಚ್.ಪಿ.ಸಿ ರಸ್ತೆಯ ಹೊಸ ಕಟ್ಟಡಕ್ಕೆ ಸ್ಥಳಾಂತರಗೊಂಡಿತು. ವಸ್ತುಸಂಗ್ರಹಾಲಯದಲ್ಲಿ ದೊರೆತ ಶಿಲ್ಪಗಳು ಹೆಚ್ಚಿನ ಮಟ್ಟಿಗೆ ವಿಜಯನಗರ ಮತ್ತು ವಿಜಯನಗರೋತ್ತರ ಕಾಲಕ್ಕೆ ಸೀಮಿತವಾಗಿವೆ. ಇವು ಹಂಪಿ ಮತ್ತು ಕಾಮಲಾಪುರ ಪರಿಸರದ ಅನ್ವೇಷಣೆ ಉತ್ಖನನದ ಸಂದರ್ಭದಲ್ಲಿ ದೊರೆತಂತಹವು, ಈ ಸಂಗ್ರಹಾಲಯದಲ್ಲಿ ೩೫೦೦ಕ್ಕೂ ಹೆಚ್ಚು ಶಿಲ್ಪಗಳಿವೆ.[೧೦]

**ಹೊರಾವರಣದ ನೋಟ:** ವಸ್ತು ಸಂಗ್ರಹಾಲಯದ ಅಂಕಣಗಳ ಹೊರ ಆವರಣದ ಮುಂಭಾಗದಲ್ಲಿ ವಿಜಯನಗರ ಕಾಲದ ವೀರಗಲ್ಲು, ಮಾಸ್ತಿಗಲ್ಲು, ವೀರಮಾಸ್ತಿಗಲ್ಲು, ನಿಷೀಧಿಗಲ್ಲು ನಾಗಶಿಲ್ಪ, ಗಣೇಶ, ನಂದಿ, ವೀರಭದ್ರ, ದೇವಿಶಿಲ್ಪ, ವಿಷ್ಣು, ಜೈನ ತೀರ್ಥಂಕರ ಶಿಲ್ಪ ಸ್ತಂಭಗಳು ವಿವಿಧ ರೀತಿಯ ಶೈಲಿಗಳಲ್ಲಿ ದ್ವಾರ ಸ್ತಂಭಗಳು, ಆನೆ ಶಿಲ್ಪಗಳು, ವಿದೇಶಿವರ್ತಕರ ಶಿಲ್ಪ ಇನ್ನೂ ವೈವಿಧ್ಯತೆಯ ಮೂರ್ತಿ ಶಿಲ್ಪಗಳನ್ನು ಇಡಲಾಗಿದ್ದು ಸಂಶೋಧಕರಿಗೆ ಹಾಗೂ ವಿದ್ಯಾರ್ಥಿಗಳನ್ನು ಕೈಬೀಸಿ ಕರೆಯುತ್ತಲಿವೆ.

**ಒಳಾಂಗಣದ ನೋಟ:** ಈ ಪರಿಸರದ ಸುತ್ತಮುತ್ತ ದೊರೆತ ಶಿಲ್ಪಗಳು, ನಾಣ್ಯಗಳು, ಲೋಹ ವಸ್ತುಗಳು, ತಾಳೆಗರೆ, ತಾಮ್ರಶಾಸನಗಳು, ಶಿಲಾಶಾಸನಗಳಾದ ವೀರಗಲ್ಲು, ಮಾಸ್ತಿಗಲ್ಲು, ಮತ್ತು ನಿಷೀಧಿಗಲ್ಲುಗಳನ್ನು ಸಂಗ್ರಹಿಸಿ ವ್ಯವಸ್ಥಿತವಾಗಿ ಪ್ರದರ್ಶನಕ್ಕಾಗಿ ವಸ್ತು ಸಂಗ್ರಹಾಲಯದ ಒಳಗೆ ಪ್ರದರ್ಶನಕ್ಕಾಗಿ ಇಡಲಾಗಿದೆ.[೧೧]

ಪ್ರಸ್ತುತ ವಸ್ತು ಸಂಗ್ರಹಾಲಯದಲ್ಲಿ ನಾಲ್ಕು ಅಂಕಣಗಳಿವೆ. ಮೊದಲನೆಯ ಅಂಕಣವು ಶೈವ ದ್ವಾರವನ್ನು ಹೊಂದಿಸಿದ ಅಂಕಣವಾಗಿದೆ. ಶೈವ ಪಂಥಕ್ಕೆ ಸೇರಿದ ಇದರ ಜೊತೆಗೆ ವಿಜಯನಗರ ಕಾಲದ ಮಂಟಪವನ್ನು ಹೋಲುವಂತೆ ಕೆಲವು ಸ್ತಂಭಗಳನ್ನು ಮತ್ತು ಪಾವಟಿಗಳನ್ನು ಆಯೋಜಿಸಲಾಗಿದೆ. ಈ ಸ್ತಂಭಗಳಲ್ಲಿ ಶೈವ ದ್ವಾರ ಪಾಲಕರು ಸ್ಥಾನಿಕ ಭಂಗಿಯಲ್ಲಿದ್ದಾರೆ. ಶಿವನ ಪರಿವಾರ ಮೂರ್ತಿಗಳ ಪ್ರತೀಕಗಳಾದ ವೀರಭದ್ರ, ಭೈರವ, ಭಿಕ್ಷಾಟನ ಮೂರ್ತಿ, ಚತುರ್ಭುಜ ಭೈರವ, ದಶಭುಜ, ವೀರಭದ್ರ, ಪಾರ್ವತಿ, ಕಾಳಿ, ಭದ್ರಕಾಳಿ, ಮಹಿಷಾಸುರಮರ್ಧಿನಿ ಈ ಮೂರ್ತಿಶಿಲ್ಪಗಳ ಜೊತೆಗೆ ಲೀಲಾಮೂರ್ತಿಯ ಸ್ವರೂಪವಾದ ಉಮಾಮಹೇಶ್ವರ ಶಿಲ್ಪವೂ ಇಲ್ಲಿ ಪ್ರದರ್ಶಿತಗೊಂಡಿದೆ. ದೇವಿ ಸಹಿತ ಕಾರ್ತಿಕೇಯ ಮತ್ತು ದೇವಸೇನೆ, ಗಣೇಶನ ಶಿಲ್ಪವೂ ಇಲ್ಲಿ ಪ್ರಮುಖವಾಗಿ ಕೆತ್ತಲ್ಪಟ್ಟಿದೆ. ಗಣೇಶ ಮೂರ್ತಿ ಪದ್ಮ ಪೀಠದಲ್ಲಿ ಸರ್ಪಾಲಂಕೃತ ವೃಕ್ಷದ ಕೆಳಗೆ ಶಕ್ತಿ ಸಹಿತ ಕುಳಿತ ದಶಭುಜ ಮೂರ್ತಿ ಶಾಕ್ತ ಪಂಥದ ಆಕರ್ಷಣೀಯ ಶಿಲ್ಪವಾಗಿದೆ. ಇದರ ಸನಿಹದಲ್ಲಿಯೇ ಪ್ರದರ್ಶಿಸಲ್ಪಟ್ಟ ವೀರಭದ್ರ (ರುಂಡವಿಲ್ಲದ) ಮೂರ್ತಿಶಿಲ್ಪ ತನ್ನ ಸಹಜ ಭಂಗಿಗೆ ಮತ್ತು ವೇಷ-ಭೂಷಣ ವಿವರಗಳಿಗೆ ಹೆಸರುವಾಸಿಯಾಗಿದ್ದು ವಿಜಯನಗರ ಶೈಲಿಯ ಉತ್ಕೃಷ್ಟ ಮಾದರಿಯಾಗಿದೆ. ಮಂಟಪದ ಎದುರಿನಲ್ಲಿ ಸಂಯೋಜಿಸಲ್ಪಟ್ಟ ಸಾಧಾರಣ ಉಡುಪಿನಲ್ಲಿರುವ ರಾಜದಂಪತಿಗಳು (ರುಂಡವಿಲ್ಲದ್ದು) ಸಮರ್ಪಣಾಭಾವ ಬಿಂಬಿಸುವ ಶಿಲ್ಪಗಳಾಗಿವೆ. ದೈವದ ಬಗ್ಗೆ ಅವರಿಗಿರುವ ಭಯ-ಭಕ್ತಿಗಳನ್ನು ಇವು ಬಿಂಬಿಸುತ್ತವೆ. ಶಿಲ್ಪಗಳಲ್ಲಿ ಶಕ್ತಿ ಗಣೇಶ, ಶಿವಲಿಂಗ, ೧೪ನೇ ಶತಮಾನಕ್ಕೆ ಸೇರಿದಂತವು. ಬಿಕ್ಷಾಟನ ಮೂರ್ತಿ, ಚತುರ್ಭುಜ ಭೈರವ, ವಳ್ಳಿ ಮತ್ತು ದೇವಸೇನೆಯರೊಂದಿಗೆ ಕಾರ್ತಿಕೇಯ, ರಾಜಭಕ್ತ (ಎರಡನೇ ದೇವರಾಯ), ದುರ್ಗಾ, ಚಂದ್ರಮೌಳೇಶ್ವರ, ವೀರಭದ್ರ (ಅರ್ಧ ಪ್ರತಿಮೆ) ಆಸೀನಕಾಳಿ, ನಾಗಲಿಂಗ, ಮಹಿಷಾಸುರ ಮರ್ಧಿನಿ ಇವು ೧೫ನೇ ಶತಮಾನಕ್ಕೆ ಸೇರಿವೆ.

ದೇವಿ ಪ್ರತಿಮೆ ವೀರಭದ್ರ, ಭೈರವ, ದಶಭುಜ ವೀರಭದ್ರ, ಮಹಿಷಮರ್ಧಿನಿ, ನಂದಿ, ಉಮಾಮಹೇಶ್ವರ, ಆತ್ಮಲಿಂಗದೊಂದಿಗೆ ಶಿವ, ನಂದಿ, ಲಿಂಗ, ವಿರುಪಾಕ್ಷ(ಮುಖಲಿಂಗ) ಮತ್ತು ಅಷ್ಟಭುಜ ಮಹಿಷಮರ್ಧಿನಿ ಇವು ೧೬ನೇ ಶತಮಾನಕ್ಕೆ ಸೇರಿವೆ. ಬೆಣಚು ಮತ್ತು ಕಪ್ಪು ಬೆಣಚು ಶಿಲೆಗಳಿಂದ ಈ ಶಿಲ್ಪಗಳು ಮಾಡಲ್ಪಟ್ಟಿವೆ. ಗ್ಯಾಲರಿಯಲ್ಲಿನ ಲೋಹದ ಅವಶೇಷಗಳು ೧೬ನೇ ಶತಮಾನಕ್ಕೆ ಸೇರಿವೆ. ಹಿತ್ತಾಳೆ ಬಟ್ಟಲು, ದೀಪ ಸ್ತಂಭ, ನೀಲಾಂಜನದ ಭಾಗ ಮತ್ತು ರಜ್ಜುಕ ಅಲಂಕೃತ ಬಟ್ಟಲುಗಳು ಕಾಮಲಾಪುರದ ಭೀಮದ್ವಾರದ ಹತ್ತಿರ ದೊರೆತಿವೆ. ಇಲ್ಲಿನ ಎರಡು ರೀತಿಯ ವೈವಿಧ್ಯಮಯ ದೀಪಲಕ್ಷ್ಮಿಗಳು ಸಣ್ಣ ಲೋಹ ಶಿಲ್ಪವಾಗಿದ್ದು ಇವುಗಳ ಕಾಲಮಾನ ವಿಜಯನಗರೋತ್ತರ ಕಾಲಕ್ಕೆ ಸೇರಿದ್ದಾಗಿದೆ. ಹತ್ತೊಂಬತ್ತನೆ ಶತಮಾನಕ್ಕೆ ಸೇರಿದಂತಹ ನಾಗನೊಂದಿಗಿರುವ ನಂದಿ ಶಿಲ್ಪದ ಕಾಲ ಇದು ಹಂಪಿಯ ಉತ್ಖನನದ ಸ್ಥಳದಲ್ಲಿ ದೊರೆಕಿದೆ.[೧೨]

ಎರಡನೆಯ ಅಂಕಣವು ವೈಷ್ಣವ ಪಂಥಕ್ಕೆ ಮೀಸಲಾಗಿದೆ. ವಿಷ್ಣುವಿನ ಅನೇಕ ರೂಪಗಳನ್ನು ಬಿಂಬಿಸುವ ಮೂರ್ತಿಗಳಿದ್ದು, ಇವುಗಳ ಜೊತೆಗೆ ವಿಷ್ಣುವಿನ ಅವತಾರ ಮೂರ್ತಿಗಳಾದ ವರಹಾ, ನರಸಿಂಹ ಮತ್ತು ಶ್ರೀನಿವಾಸ ಮೂರ್ತಿ ಶಿಲ್ಪಗಳು ಪ್ರದರ್ಶಿತಗೊಂಡಿವೆ. ವಿಷ್ಣುವಿನ ಭಕ್ತಾಗ್ರೇಸರಲ್ಲಿ

ಪ್ರಮುಖರಾದ ಹನುಮಂತ ಮತ್ತು ಗರುಡನ ಆಳೆತ್ತರದ ವಿಗ್ರಹಗಳು ಆಕರ್ಷಕ. ಇದರ ಜೊತೆಗೆ ವಿಷ್ಣು ಭಕ್ತರಾದ ಆಳ್ವಾರರುಗಳ ಮೂರ್ತಿ ಶಿಲ್ಪಗಳು ಇವೆ.

ಪ್ರಾರಂಭದಲ್ಲಿ ಅತ್ಯಂತ ಸೂಕ್ಷ್ಮವಾಗಿ ಕೆತ್ತಲ್ಪಟ್ಟ ಕಂಚಿನ ವಿಗ್ರಹಗಳನ್ನು ನೆನಪಿಗೆ ತರುವ ಶ್ರೀದೇವಿ ಮತ್ತು ಭೂದೇವಿ ಸಹಿತ ಇರುವ ರಂಗನಾಥನ ವಿಗ್ರಹವಲ್ಲದೇ ರಂಗನಾಥನ ಪಾದದಡಿಯಲ್ಲಿ ಸುಮಧುರವಾಗಿ ಕೆತ್ತಲ್ಪಟ್ಟ ಕಮಲದ ಪುಷ್ಪವನ್ನು ಕಾಣಬಹುದು. ಚತುರ್ಭುಜ ಲಕ್ಷ್ಮೀ, ಆಸೀನ ವಿಷ್ಣು ಮತ್ತು ಲಕ್ಷ್ಮೀನರಸಿಂಹ ಮೂರ್ತಿಗಳು ವಿಜಯನಗರ ಶೈಲಿಯ ಪ್ರಮುಖ ಶಿಲ್ಪಗಳಾಗಿವೆ. ವರಹಾ ಶಿಲ್ಪದ ಮುಖಭಾವವು ನೋಡುಗರಿಗೆ ಅಚ್ಚರಿಯನ್ನು ಮೂಡಿಸುತ್ತದೆ ಮೇಲೆ ಹೇಳಿದ ಪ್ರಮುಖ ಶಿಲ್ಪಗಳಲ್ಲದೆ ಅಶೋಕ ವನದಲ್ಲಿ ಸೀತೆ, ರಥಾರೂಢರಾದ ಕೃಷ್ಣಾರ್ಜುನರು, ವೇಣುಗೋಪಾಲ ಆಳ್ವಾರರುಗಳು ಮತ್ತು ಕೆಲವು ಗಾರೆಗಚ್ಚಿನ ಶಿಲ್ಪಗಳು ಈ ಅಂಕಣದ ವಿಶೇಷತೆಯನ್ನು ಎತ್ತಿಹಿಡಿಯುವ ಆಕರ ಸಾಮಗ್ರಿ(ಶಿಲ್ಪ)ಗಳಾಗಿವೆ. ಎಲ್ಲಾ ಶಿಲ್ಪಗಳನ್ನು ಕಾಲಾನುಕ್ರಮದಲ್ಲಿ ಕ್ರೋಢೀಕರಿಸಲಾಗಿದೆ. ಇದರಿಂದ ಕಾಲಾನುಕ್ರಮದಲ್ಲಿ ಮೂರ್ತಿಶಿಲ್ಪದಲ್ಲಾದ ಬದಲಾವಣೆಯನ್ನು ತಿಳಿಯಲು ಸಾಧ್ಯ. ೧೫ನೇ ಶತಮಾನದ ಶಿಲ್ಪಗಳು ವಿಷ್ಣು (ಕಾಮಲಾಪುರ) ಗರುಡ, ವೇಣುಗೋಪಾಲ, ಆಂಜನೇಯ ವಿಷ್ಣು, ಲಕ್ಷ್ಮಣ, ಲಕ್ಷ್ಮೀನಾರಾಯಣ, ಅಂಜಲಿಮುದ್ರೆಯಲ್ಲಿ ಗರುಡ (ಹಂಪಿ) ನಾಗವನ್ನು ಹಿಡಿದ ಗರುಡ, ವರಹ ಅವತಾರ, ರಾಮ, ಅಂಜಲಿಮುದ್ರೆಯಲ್ಲಿ ಭಕ್ತ. ಲಕ್ಷ್ಮೀನರಸಿಂಹ (ಅರ್ಧ) ಆಳ್ವಾರ್, ಮತ್ಸ್ಯ ಮತ್ತು ಕಲ್ಕಿಅವತಾರಗಳು ವೆಂಕಟೇಶ, ವೈಷ್ಣವದೇವತೆ, ಪದ್ಮಾಸೀನ ನರಸಿಂಹ, ವ್ಯಾಲ ಸಹಿತ ಭತ್ತಿಸ್ತಂಭ, ಲಕ್ಷ್ಮೀನರಸಿಂಹ, ಗೋಪಿಯರೊಂದಿಗೆ ವೇಣು ಗೋಪಾಲ, ಅನುಭಿಜ್ಞಾತ ಮೂರ್ತಿಯ ತಲೆ, ನರಸಿಂಹ, ಕೃಷ್ಣ ಮತ್ತು ಅರ್ಜುನ ಶ್ರೀದೇವಿ ಭೂದೇವಿ ಸಹಿತ ವಿಷ್ಣು ವೆಂಕಟೇಶ, ವಿಷ್ಣು ಇವು ಹದಿನಾರನೇ ಶತಮಾನಕ್ಕೆ ಸೇರಿದ್ದಾಗಿದೆ. ಈ ಎಲ್ಲಾ ಶಿಲ್ಪಗಳು ಕಾಮಲಾಪುರ ಪರಿಸರದಲ್ಲಿ ದೊರೆತ (ಸಿಕ್ಕಿದ) ಶಿಲ್ಪಗಳೇ ಆಗಿವೆ.

**ಮೂರನೇ ಅಂಕಣದಲ್ಲಿ:** ಶಸ್ತ್ರಾಸ್ತ್ರಗಳು ಸೂಕ್ಷ್ಮ ಕಂಚಿನ ಮತ್ತು ಲೋಹದ ಪ್ರತಿಮೆಗಳು ದಾನಶಾಸನಗಳು, ತಾಮ್ರ ಫಲಕಗಳು, ತಾಳೆಗರಿಯ ಹಸ್ತ ಪ್ರತಿಗಳು, ಲೇಖನ ಸಾಮಗ್ರಿಗಳು, ಹಿತ್ತಾಳೆ ಹರಿವಾಣಗಳು, ಮತ್ತು ಮಡಿಕೆ-ಕುಡಿಕೆಗಳನ್ನು ಇಲ್ಲಿ ಪ್ರದರ್ಶಿಸಲಾಗಿದೆ. ಕಬ್ಬಿಣ ಲೋಹಕ್ಕೆ ಸಂಬಂಧಿಸಿದ ಹದಿನೇಳು-ಹದಿನೆಂಟನೇ ಶತಮಾನಕ್ಕೆ ಸಂಬಂಧಿಸಿದ ಕಠಾರಿ, ಗುರಾಣಿ, ಬಂದೂಕು, ಕೊಳವೆ, ಖಡ್ಗಗಳೂ ಇಲ್ಲಿವೆ.

ಹದಿನೆಂಟನೇ ಶತಮಾನಕ್ಕೆ ಸಂಬಂಧಿಸಿದ ಕಠಾರಿ, ಗುರಾಣಿ, ಬಂದೂಕು, ಕೊಳವೆ, ಖಡ್ಗಗಳೂ ಇಲ್ಲಿವೆ. ಹದಿನೆಂಟನೇ ಶತಮಾನಕ್ಕೆ ಸೇರಿದ ವಸ್ತ್ರದ ಮೇಲಿನ ಚಿತ್ರಕಲೆಯ ಶ್ರೀರಾಮನ ಪಟ್ಟಾಭಿಶೇಕವನ್ನು ಬಿಂಬಿಸುತ್ತದೆ. ಲೇಪನ ತಾಂತ್ರಿಕತೆಯಿಂದ ಮೂಡಿಸುವ ಈ ವರ್ಣ ಚಿತ್ರದಲ್ಲಿ ರಾಜನ ಉಡುಗೆಗಳಿಂದ ಅಲಂಕೃತರಾದ ಸೀತಾ-ರಾಮರನ್ನು ಸಿಂಹಾಸನದಲ್ಲಿರುವಂತೆ ಚಿತ್ರಿಸಿ ಸುತ್ತಲೂ ಚಾಮರಧಾರಿಗಳಾದ ಲಕ್ಷ್ಮಣ ಭರತರನ್ನು ರಾಮನ ಹಿಂದೆಯೂ ಮತ್ತು ಶತ್ರುಘ್ನನನ್ನು ಸೀತಾದೇವಿಯ ಹಿಂದೆಯೂ ಬರುವಂತೆ ಚಿತ್ರಿಸಲಾಗಿದೆ. ಈ ಚಿತ್ರದ ಬಲಭಾಗದಲ್ಲಿ ಒಬ್ಬ ರಾಕ್ಷಸ ರೂಪದಲ್ಲಿರುವ ಭಕ್ತ ಮತ್ತು ಮುನಿಜನರ ಸಮೂಹವನ್ನು ತೋರಿಸಿ ಅವರ ತಳಭಾಗದಲ್ಲಿ ಕೋಲಾಹಲಗೈಯುತ್ತಿರುವ ವಾನರ

ಸೈನ್ಯವನ್ನು ಚಿತ್ರಿಸಲಾಗಿದೆ. ಈ ವರ್ಣ ಚಿತ್ರವನ್ನು ಕುತೂಹಲಕಾರಿಯಾಗಿ ಕಂಡು ಬರುವ ವಿಶೇಷ ಅಂಶವೆಂದರೆ ಜಾಂಬುವಂತನನ್ನು ನೀಲಿ ಬಣ್ಣದಲ್ಲಿ ಚಿತ್ರಿಸಿ ಹನುಮಂತ ಶ್ರೀರಾಮನ ಪಾದಗಳನ್ನು ಆಧರಿಸುವಂತೆ ಚಿತ್ರಿಸಲಾಗಿದೆ. ಇದಲ್ಲದೇ ಈ ವರ್ಣಚಿತ್ರದಲ್ಲಿ ಯೂರೋಪಿನ ರಿನೈಸಾನ್ ಕಾಲದ ಕ್ರೈಸ್ತ ಕಲೆಯ ಪ್ರಭಾವವನ್ನು ಪ್ರತಿಬಿಂಬಿಸಿರುವ ಪುಷ್ಪದೇವತೆಗಳಲ್ಲಿ ಕಾಣಬಹುದು. ಕಂಚಿನ ಲೋಹದ ಸಾಮಗ್ರಿಗಳಲ್ಲಿ ವಿಜಯನಗರ ಕಾಲಕ್ಕೆ ಹದಿನಾರನೇ ಶತಮಾನಕ್ಕೆ ಸೇರಿದ ಶಿಲ್ಪಗಳು ದೀಪಸ್ತಂಭ, ತಂಬಿಗೆ, ಎರಡು ಕಲಶಗಳು ಇವು ಕಾಮಲಾಪುರದ ಪೆನುಗೊಂಡ ದ್ವಾರದ ಬಳಿಯ ಭಗ್ನ ಶಿವಾಲಯ ಪ್ರದೇಶದಲ್ಲಿ ದೊರೆತವು. ಕುದರೆ, ಮೂರು ವೈವಿಧ್ಯಮಯ ಮಾದರಿಯ ದೀಪಲಕ್ಷ್ಮಿಶಿಲ್ಪಗಳು ಹಾಗೂ ಸ್ತ್ರೀಯಳೊಬ್ಬಳ ತಲೆ ಪ್ರಮುಖವಾಗಿದ್ದು ಇವು ವಿಜಯನಗರೋತ್ತರ ಕಾಲಕ್ಕೆ (ಹದಿನಾರು–ಹದಿನೇಳನೇ ಶತಮಾನ) ಸೇರಿದ ಪ್ರಮುಖ ಶಿಲ್ಪಗಳಾಗಿವೆ. ಇಲ್ಲಿ ದೊರೆಕಿರುವ ತಾಮ್ರನಾಣ್ಯಗಳಲ್ಲಿ ಗೂಳಿ, ಆನೆ, ಸೂರ್ಯ, ಚಂದ್ರರೊಡನೆ ಗೂಳಿ, ಗರುಡ, ಗಂಡಭೇರುಂಢ, ವರಾಹ, ಗಣೇಶ ಮುಂತಾದ ಚಿತ್ರಗಳಿದ್ದು ಇವು ವಿಜಯನಗರ ಕಾಲಕ್ಕೆ ಸೇರಿವೆ. ಈ ನಾಣ್ಯಗಳ ಹಿಮ್ಮುಖದಲ್ಲಿ ವಿಜಯನಗರ ಅರಸರುಗಳ ಹೆಸರುಗಳಿವೆ. ಶ್ರೀ ಪ್ರತಾಪ ಕೃಷ್ಣರಾಯ, ಶ್ರೀ ಪ್ರತಾಪದೇವರಾಯ, ಅಚ್ಯುತರಾಯ II, ಶ್ರೀವೆಂಕಟ III, ಶ್ರೀಸದಾಶಿವರಾಯ, ಶ್ರೀನೀಲಕಂಠ, ಶ್ರೀ ಪ್ರತಾಪದೇವರಾಯ II, ರಾಯಗಜಗಂಡ ಭೇರುಂಡ, ಶ್ರೀಪ್ರತಾಪ, ಹರಿಹರ, ಶ್ರೀಕೃಷ್ಣರಾಯ–V, ರಾಮರಾಯ, ತಿರುಮಲರಾಯನ ಕಾಲಕ್ಕೆ ಸೇರಿವೆ. ವಿಜಯನಗರಕಾಲಕ್ಕೆ ಸೇರುವ ಇಲ್ಲಿನ ಬಂಗಾರದ ನಾಣ್ಯಗಳಲ್ಲಿ ಮುಮ್ಮುಖದಲ್ಲಿ ಉಮಾ ಮಹೇಶ್ವರ, ಲಕ್ಷ್ಮೀನಾರಾಯಣ, ವೆಂಕಟೇಶ ಮುಂತಾದ ಚಿತ್ರಗಳನ್ನು ಹಾಗೂ ನಾಣ್ಯಗಳನ್ನು ಹೊರಡಿಸಿದ ರಾಜರ ಹೆಸರುಗಳ ಹಿಂಬರಹಗಳನ್ನು ಹೊಂದಿವೆ. ಹಿತ್ತಾಳೆ ಲೋಹದ ಸಾಮಗ್ರಿಗಳು ವಿಜಯನಗರ ಕಾಲಕ್ಕೆ ಸೇರಿದವು (ಹದಿನಾಲ್ಕು ಹದಿನಾರನೇಶತಮಾನಕ್ಕೆ) ಹದಿನಾರನೇ ಶತಮಾನಕ್ಕೆ ಸಂಬಂಧಿಸಿದ ಸಾಮಗ್ರಿಗಳು ಹಿತ್ತಾಳೆಬಟ್ಟಲು, ಎರಡು ದೀಪಲಕ್ಷ್ಮಿ, ನೀಲಾಂಜನದ ಭಾಗ ಎರಡು ರಜ್ಜುಕ, ಅಲಂಕೃತ ಬಟ್ಟಲು, ದೀಪಲಕ್ಷ್ಮಿ ಇವು ಇಲ್ಲಿ ಅಲಂಕೃತವಾಗಿವೆ. ಹತ್ತೊಂಬತ್ತನೇಯ ಶತಮಾನಕ್ಕೆ ಸಂಬಂಧಿಸಿದ ಸಾಮಗ್ರಿಗಳು ನಾಗನೊಂದಿಗೆ ನಂದಿ(ಹಂಪಿ) ಪೀಠದೊಂದಿಗೆ ಲಿಂಗ, ಧೂಪಾರತಿ, ನಂದಿಯ ಮುಖದಿಂದ ದೀಪದ ಹಣತೆ, ·ಚತುರ್ಭುಜ ವೀರಭದ್ರ ಇವು ವಿಜಯನಗರೋತ್ತರ ಶಿಲ್ಪಗಳನ್ನು ಪ್ರದರ್ಶಿಸಲಾಗಿದೆ. ಪ್ರದರ್ಶಿಸಲಾಗಿರುವ ಏಳು ತಾಮ್ರ ಶಾಸನಗಳಲ್ಲಿ ಮೂರು ವಿಜಯನಗರ ಕಾಲಕ್ಕೆ ಸೇರಿದ್ದು ಉಳಿದ ನಾಲ್ಕು ಶಾಸನಗಳು ಹದಿನೇಳನೇ ಶತಮಾನಕ್ಕೆ (ಪಾಳೇಗಾರರು) ಸಂಬಂಧಿಸಿವೆ. ಇವುಗಳ ಭಾಷೆ ಕನ್ನಡ, ಸಂಸ್ಕೃತ, ಹಿಂದಿ, ಲಿಪಿ ತೆಲಗು, ಹಿಂದಿ ಭಾಷೆಗಳಿಂದ ಕೂಡಿದೆ. ತಾಳೆಗರಿಯ ಹಸ್ತ ಪ್ರತಿಗಳು ಕ್ರಿ.ಶ. ಹತ್ತೊಂಬತ್ತನೆಯ ಶತಮಾನಕ್ಕೆ ಸೇರಿದ್ದು, ಇವು ಹರಪನಹಳ್ಳಿಯಲ್ಲಿ ದೊರೆತಿವೆ. ಏಳು ಲೇಖನಿಗಳನ್ನು ಸಹ ಅಲ್ಲಿಂದಲೇ ತಂದು ಸಂಗ್ರಹಿಸಿಡಲಾಗಿದೆ. ನಾರಿನಿಂದ ಹೆಣೆಯಲಾದ ಲೇಖನ ಸಾಮಗ್ರಿ, ಮಸಿಪಾತ್ರೆ, ಲೇಖನಿಯ ಮುಚ್ಚಳ, ಹರಿವಾಣಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

ಈ ಅಂಕಣದಲ್ಲಿ ಮಧ್ಯಕಾಲೀನ(ವಿಜಯನಗರದ) ಮಣ್ಪಾತ್ರೆಗಳನ್ನು ಸಂಗ್ರಹಿಸಲಾಗಿದೆ. ಕೆಂಪು, ಕಪ್ಪು, ಮಡಿಕೆಗಳು, ಸಣ್ಣದಾದ ಆಟಿಕೆಯ ಕುಡಿಕೆಗಳು, ಮುಚ್ಚಳವಿರುವ ಕುಡಿಕೆ ಮತ್ತು ಜಾರ್

ರೀತಿಯ ಕಪ್ಪು ಮಡಿಕೆಗಳು ದೈನಂದಿನ ಬಳಕೆಯ ಆಧಾರದ ಮೇಲೆ ಇವುಗಳನ್ನು ಅಡುಗೆ ಮಾಡುವ ಶೇಖರಣಾ ಹಾಗೂ ಧಾರ್ಮಿಕವಾಗಿ ಉಪಯೋಗಿಸುವ ಪಾತ್ರೆಗಳಾಗಿ ವಿಂಗಡಿಸಬಹುದು. ಅಡುಗೆ ಮಾಡುವ ಪಾತ್ರೆಗಳು, ವಿಶಾಲವಾದ ಬಾಯಿಯನ್ನು ಹೊಂದಿದ್ದು ಚಿಕ್ಕ ಕಂಠವನ್ನು ಹೊಂದಿರುತ್ತವೆ. ಕಲಾ ದೃಷ್ಠಿಯಿಂದ ಭುಜ ಇಳಿಜಾರಾಗಿ ಇರುವ ಈ ಪಾತ್ರೆಗಳು ನುಸು ಮೇಲೆತ್ತಿರುವ ಅಂಚನ್ನು ಹೊಂದಿದೆ. ಶೇಖರಣಾ ಪಾತ್ರೆಗಳು ಗಾತ್ರದಲ್ಲಿ ದೊಡ್ಡದಾಗಿದ್ದು, ದಪ್ಪಗಾತ್ರದ ಕಂಠವನ್ನು ಹೊಂದಿದೆ. ನೀರಿನ ಕೊಡ, ತಟ್ಟೆಗಳು, ವಿವಿಧ ರೀತಿಯ ಮುಚ್ಚಳಗಳು ಹಾಗೂ ಲೋಟಗಳು ಇಲ್ಲಿ ಪ್ರದರ್ಶಿತವಾಗಿವೆ. ಧೂಪಧಾರತಿಗಳು, ದಾನಕುಡಿಕೆಗಳು, ಗೌರಿಕಲಶ, ಇವು ಅಂದಿನ ಧಾರ್ಮಿಕ ಕಾರ್ಯಗಳಿಗೆ ಸಂಬಂಧಿಸಿದ ಕುಡಿಕೆಗಳಾಗಿವೆ. ಕ್ರಿ.ಶ. ಹದಿನಾರನೇ ಶತಮಾನದ ರಾಜ ಮುದ್ರೆಗಮನಾರ್ಹವಾದುದು. ಭಾರತೀಯ ಲಿಪಿ ವಿಕಾಸ ಮತ್ತು ಬೆಳವಣಿಗೆಯ ಫಲಕವೊಂದು ಕನ್ನಡ ಮತ್ತು ತೆಲಗು ಲಿಪಿಗಳ ವಿವಿಧ ಹಂತದ ಬೆಳವಣಿಗೆಯನ್ನು ತಿಳಿಸುತ್ತದೆ. ಕನ್ನಡ ಲಿಪಿ ಬ್ರಾಹ್ಮಿಲಿಪಿಯಿಂದ ಅನೇಕ ಅರಸುಮನೆತನಗಳ ಜೊತೆಗೆ ಯಾವ ರೀತಿ ಪರಿವರ್ತನೆಗೊಂಡು ಒಂದು ಕನ್ನಡ ರೂಪ ಪಡೆದುಕೊಂಡಿತು ಎಂಬುದನ್ನು ತಿಳಿಯಬಹುದು. ನಾಲ್ಕನೇ ಅಂಕಣವನ್ನು ಪ್ರವೇಶಿಸಿದರೆ ಅಲ್ಲಿ ಪ್ರಮುಖವಾಗಿ ಹದಿನಾಲ್ಕನೇ ಶತಮಾನದ ಕುಬೇರ(ತಲೆಭಾಗ) ಭಗ್ನಗೊಂಡಿದೆ ಹಾಗೂ ಕ್ರಿ.ಶ. ಹದಿನೈದನೇ ಶತಮಾನದ ಗ್ರಥಿತನಾಗ, ಹಂಸ ಮತ್ತು ತೀರ್ಥಂಕರರ ಶಿಲ್ಪಗಳು ಪ್ರದರ್ಶಿತವಾಗಿವೆ. ಕ್ರಿ.ಶ. ೧೬ನೇ ಶತಮಾನಕ್ಕೆ ಸೇರುವ ವೀರಗಲ್ಲುಗಳು, ರತಿ ಮತ್ತು ಮದನ, ಆರಾಧಕ, ಯೋಧ, ಮಾಸ್ತಿಗಲ್ಲು, ಗುರತಿಸಲಾರದ ಆತ್ಮಬಲಿದಾನ ಸ್ಮಾರಕ (ಕಡ್ಡಿರಾಂಪುರ) ಬಳೆಕಲ್ಲು ಹಾಗೂ ಭೋಜನ ಶಿಲೆಗಳನ್ನು ಇಲ್ಲಿ ಹೆಸರಿಸಬಹುದಾಗಿದೆ.[೧೩]

ಪ್ರಾಗೈತಿಹಾಸ(ನೂತನ ಶಿಲಾಯುಗದ ಅವಶೇಷಗಳು) ನೂತನ ಶಿಲಾಯುಗದ ಜನರ ವಾಸ–ನೆಲಗಳು ಭಿತ್ತಿ ಚಿತ್ರಗಳನ್ನು ಇಲ್ಲಿ ಪ್ರರ್ಶಿಸಲಾಗಿದೆ. ನೂತನ ಶಿಲಾಯುಗದ ಆಯುಧಗಳಾದ ಉಳಿ, ಕೈಕೊಡಲಿಯಲ್ಲಿ ವೈವಿಧ್ಯಮಯ ಆಕರಗಳಲ್ಲಿ ಸಂಗ್ರಹಿಸಿಡಲಾಗಿದೆ. ನವ ಶಿಲಾಯುಗದ ವರ್ಣರೇಖಾಚಿತ್ರಗಳಾದ ಮುಸಲಯ್ಯನ ಗುಡ್ಡದ, ನೂತನ ಶಿಲಾಯುಗದ ಸಮಾಧಿ ನೂತನ ಶಿಲಾಯುಗದ ಮಡಿಕೆ ಚೂರುಗಳು ಶಿಲೆ, ಕಟ್ಟಾಣಿ (Pounder) ಅರೆಯುವ ಕಲ್ಲು ಇವು ಇಲ್ಲಿನ ಶಿಲಾಯುಧಗಳ ಪರಿಚಯವನ್ನು ಮಾಡಿಸುತ್ತವೆ.

**ಗಾರೆ ಶಿಲ್ಪಗಳು:** ತಕಲಿ–ಚಕ್ರ ವಿಜಯನಗರ ಕಾಲಕ್ಕೆ (ಹದಿನಾರನೇ ಶತಮಾನಕ್ಕೆ) ಸೇರಿದೆ. ಇವು ಹಂಪಿಯ ಉತ್ಖನನದ ಸಂದರ್ಭದಲ್ಲಿ ದೊರೆತಂತಹವು. ಇವಲ್ಲದೆ ಸ್ಪಟಿಕ ಮತ್ತು ದಂತದ ಪುರಾವಸ್ತು, ಪಿಂಗಾಣಿ, ಪಾತ್ರೆಯ ಚೂರುಗಳು, ಕಬ್ಬಿಣದ ವಸ್ತುಗಳನ್ನು ಇಲ್ಲಿ ಪ್ರದರ್ಶಿಸಲಾಗಿದೆ.

ರಾಜ ಪ್ರಾಂಗಣ, ವಿಹಂಗಮದೃಶ್ಯ (ಉತ್ಖನನಕ್ಕೆ ಮೊದಲು ನಂತರ) ಮಹಾನವಮಿ ದಿಬ್ಬ, ಬೃಹತ್ ಸಾರ್ವಜನಿಕ ಕೊಳ, ಆಯತಕಾರದ ಕಟ್ಟೆ, ಕೊಳ, ರಾಜ ಪ್ರಾಂಗಣ (ಉತ್ಖನನ ಮೊದಲು ನಂತರ) ನೀರಿನ ಕಾಲುವೆ, ದಕ್ಷಿಣ ವೀಧಿ, ಹಜಾರರಾಮ ದೇಗುಲ, ರಾಜ ಪ್ರಾಂಗಣ, ಸಂಕೀರ್ಣ ಭೌದ್ಧಚಿತ್ರಫಲಕಗಳು (ಸಂರಕ್ಷಣೆಯ ಮೊದಲು ನಂತರದ) ವೀರ ಹರಿಹರರಾಯನ ಅರಮನೆ (ಉತ್ಖನನ ನಂತರ) ಇವೆಲ್ಲವನ್ನು ಇಲ್ಲಿ ಸಂಗ್ರಹಿಸಿ ಇಡಲಾಗಿದೆ. ಇದು ಈ ಗ್ಯಾಲರಿಯ ಅತ್ಯುತ್ತಮ

ಆಕರ್ಷಕ ಅಂಶವಾಗಿದೆ. ವಿಜಯನಗರ ಅರಸು-ಮನೆತನಗಳ ಬಾಗಿಲುವಾಡವನ್ನು ಕಣಶಿಲೆ ಗಾರೆ-ಗಚ್ಚು ಮತ್ತು ಮರದಿಂದ ನಿರ್ಮಾಣ ಮಾಡಿರುವುದು ಕಂಡು ಬರುತ್ತದೆ. ಇಲ್ಲಿ ದೊರತ ಈ ಬಾಗಿಲುವಾಡದ ತೊಲೆಯು ಸುಮಾರು ನೂರಅರವತ್ತು ಸೆಂ.ಮೀ ಉದ್ದ ಮತ್ತು ಹದಿನೆಂಟು ಸೆಂ.ಮೀ ಅಗಲವಿದೆ. ಒಂದು ತುದಿ ಏಳು ಸೆಂ.ಮೀ ವ್ಯಾಸವಿರುವ ಒಂದು ರಂಧ್ರವಿದ್ದು, ಬಾಗಿಲ ರೆಕ್ಕೆಗಳ ನಿಲುವು ಪಟ್ಟಿಯನ್ನು ಆಧರಿಸುತ್ತಿದ್ದುದಾಗಿ ಕಂಡು ಬರುತ್ತದೆ. ಈ ಗ್ಯಾಲರಿಯಿಂದ ಹೊರಬಂದಾಗ ಮಧ್ಯದ ತೆರೆದ ಆವರಣದಲ್ಲಿ ಸುತ್ತಲೂ ಬಿಡಿ ಶಿಲ್ಪಗಳನ್ನು ಕಾಣಬಹುದು. ವಾಯುವ್ಯ ಮೂಲೆಯಲ್ಲಿರುವ ವೈಮಾನಿಕ ಛಾಯಚಿತ್ರವು ಇಡೀ ಹಂಪಿ ಪ್ರದೇಶದ ಪರಿಸರದ ಭೌಗೋಳಿಕ ನೋಟವನ್ನು ಪರಿಚಯಿಸುತ್ತದೆ.

ಕ್ರಿ.ಶ.ಹದಿನೈದನೆಯ ಶತಮಾನದ ನಂದಿ ಮತ್ತು ಲಿಂಗದೊಂದಿಗೆ ಧ್ಯಾನಮಗ್ನಳಾದ ಮಹಿಳೆ, ಲಕುಲೀಶ, ವೇಣುಗೋಪಾಲ, ಆಂಜನೇಯ ಮತ್ತು ಗರುಡ, ಬಾಹುಬಲಿ, ನಾಗಿಣಿ, ಸೂರ್ಯ, ವೀರಯೋಧ ಮತ್ತು ಸತಿ ಸ್ಮಾರಕ ಶಿಲೆ ಇವು ಪ್ರಮುಖ ಶಿಲ್ಪಗಳಾಗಿವೆ. ನಂತರ ಕ್ರಿ.ಶ.ಹದಿನಾರನೇ ಶತಮಾನದ ಶಿಲ್ಪಗಳಲ್ಲಿ ಅರಬ್ ಅಶ್ವವ್ಯಾಪಾರಿಗಳು, ಕಾರ್ತಿಕೇಯ ಮತ್ತು ದೀಪ ಸ್ತ್ರೀಯರು ಮುಖ್ಯವಾಗಿವೆ, ಭೈರವ, ಕಾಳಿ, ಗಣಪತಿ, ಯೋಗ ಭಂಗಿಯಲ್ಲಿ ಕುಳಿತ ಸ್ತ್ರೀ, ವೀರಭದ್ರ, ವಿಷ್ಣು, ಮುಂತಾದ ಶಿಲ್ಪಗಳು ಇಲ್ಲಿ ಪ್ರದರ್ಶಿತಗೊಂಡಿವೆ. ವಸ್ತು ಸಂಗ್ರಹಾಲಯದ ಹೊರಭಾಗದ ಅಂದರೆ ಸುತ್ತಲೂ ಆವರಿಸಿಕೊಂಡಿರುವ ಅನೇಕ ಶಿಲ್ಪಗಳು ಆವರಿಸಿಕೊಂಡು ಇದು ಶಿಲ್ಪಗಳ ತಾಣ ಎಂಬಂತಿದೆ. ಇಲ್ಲಿ ಮತ್ತೊಂದು ಪ್ರಮುಖ ಅಂಶ ಕಲ್ಯಾಣ ಚಾಲುಕ್ಯರ ಮತ್ತು ವಿಜಯನಗರ ಕಾಲದ ಸ್ತಂಭಗಳನ್ನು ಪ್ರದರ್ಶಿಸಲಾಗಿದೆ.[೧೪] ಹೊರ ಆವರಣದಲ್ಲಿನ ಶೈವದ್ವಾರಪಾಲಕರು, ವೈಷ್ಣವದ್ವಾರಪಾಲಕರು, ಚತುರ್ಭುಜ ಭೈರವ, ಗಣೇಶ, ನಂದಿ(ಕಲ್ಯಾಣಿ ಚಲುಕ್ಯ) ಮಾಸ್ತಿಗಲ್ಲು, ವೀರಗಲ್ಲು, ವೀರಮಾಸ್ತಿಗಲ್ಲು, ನಾಗಚಿಹ್ನೆ, ಐದುಹೆಡೆನಾಗ, ಏಳುಹೆಡೆನಾಗ, ಚತುರ್ಭುಜ ಗಣೇಶ, ಅಂಜಲಿಮುದ್ರೆಯಲ್ಲಿ ನಾಗಿಣಿ, ಸ್ಥಾನಿಕ ಭಂಗಿ ನಾಗಿಣಿ, ಕಿರೀಟಧಾರಿ ನಾಗಿಣಿ, ಚತುರ್ಭುಜ ಸ್ಥಾನಿಕ ವೀರಭದ್ರ (ಕ.ಚಾ), ರಾಮ,ಲಕ್ಷ್ಮಣ, ಸೀತೆ, ಸ್ಥಾನಿಕ ಭಂಗಿಯಲ್ಲಿ ಸರ್ವಾಲಂಕೃತ ನಂದಿ, ಅಭಯಮುದ್ರೆಯಲ್ಲಿರುವ ಆಂಜನೇಯ, ಚತುರ್ಭುಜ ವಿಷ್ಣು, ಸಿಡೆತಲೆಗಲ್ಲು, ಪುಷ್ಪಗುಚ್ಚ ಹಿಡಿದ ಆಂಜನೇಯ, ಆನೆ-ಕುದುರೆ ಕಾಳಗ, ಧ್ಯಾನಸಕ್ತ, ಭಕ್ತ ಅಂಜಲೀ ಮುದ್ರೆಯಲ್ಲಿ ಭಕ್ತ, ವಿದೇಶಿ ವರ್ತಕರಶಿಲ್ಪಗಳು ವೀರ, ವೀರಮಾಸ್ತಿಗಲ್ಲು ಹೀಗೆ ವೈವಿಧ್ಯ ಮೂರ್ತಿಶಿಲ್ಪಗಳನ್ನು ಶ್ರೀ ಸಾಮಾನ್ಯರ ವೀಕ್ಷಣೆಗೆ ಇಡಲಾಗಿದೆ. ಲಕ್ಷ್ಮೀನರಸಿಂಹ, ಅಂಜಲಿಮುದ್ರೆಯಲ್ಲಿ ಗರುಡ, ಒಕ್ಕೈ ಮಾಸ್ತಿಗಲ್ಲು, ಎರಡು ಹಂತದ ಮಾಸ್ತಿಗಲ್ಲು, ಮೂರು ಹಂತದ ವೀರಮಾಸ್ತಿಗಲ್ಲು, ಅಂಜಲಿ ಮುದ್ರೆಯಲ್ಲಿ ದಂಪತಿಗಳು, ಕುದರೆ ಸವಾರಿ ವೀರ, ಕತ್ತಿ ಮತ್ತು ಗುರಾಣಿ ಹಿಡಿದ ವೀರರು, ದ್ವಿಬಾಹು ಭೈರವ, ಆಸೀನ ಭಂಗಿಯಲ್ಲಿ ಚತುರ್ಭುಜ ದೇವಿ, (ಕಲ್ಯಾಣಿಚಾಲುಕ್ಯ) ವಾಮನ ಮುದ್ರೆಗಲ್ಲು, ಆನೆ ಜೊತೆಗೆ ಕಾಳಗದಲ್ಲಿ ಹೋರಾಡುತ್ತಿರುವ ವೀರ, ಮಹಿಷಾಸುರ ಮರ್ಧಿನಿ, ಒಕ್ಕೈಮಾಸ್ತಿಗಲ್ಲು, ಗಜಲಕ್ಷ್ಮಿ ಲಿಂಗಮುದ್ರೆಗಲ್ಲು, ಲಕ್ಷ್ಮೀನರಸಿಂಹ, ಕುದರೆ ಕಾಳಗ, ಮೂರುಹಂತ ವೀರಗಲ್ಲು, ವಾಮನಮುದ್ರೆಗಲ್ಲು, ಜಟಾಧಾರಿ ವೀರಭದ್ರ, ಗಡೆ ಹಿಡಿದ ವೀರ ಆಂಜನೇಯ, ಸಿಂಹಯ್ಯಾಳಿ, ಅನಂತಶಯನ, ಅಲಂಕೃತ ಚತುರ್ಭುಜ ಗಣೇಶ (ಕ.ಚಾ), ಬಿಲ್ಲುಗಾರ, ಖಡ್ಗ-ಬಾಕು ಹಿಡಿದು, ತುರುಬು, ಕೋಡು ಇರುವ

ಟೊಪ್ಪಿಗೆ ಅಲಂಕರಿಸಿದ ವೀರ. ಬಲಿಪೀಠ, ದ್ವಿಬಾಹು ಭೈರವ. ಊಟದ ತಟ್ಟೆ, ಒರಳು, ಕಲಶ, ಪ್ರಾಣಿ(ಕತ್ತೆ) ಸ್ಮರಣಾರ್ಥಕವಾಗಿ ನಿಲ್ಲಿಸಿದ ಗಲ್ಲು ಇದರ ಕೆಳಭಾಗದಲ್ಲಿ ಅಸ್ಪಷ್ಟ ಶಾಸನ. ಹೀಗೆ ಅನೇಕ ಸ್ಮಾರಕಗಲ್ಲುಗಳು ಮತ್ತು ಅನೇಕ ದೇವ-ದೇವತೆಗಳ ಬಿಡಿ ಶಿಲ್ಪಗಳು ಕಲ್ಯಾಣಿ ಚಾಲುಕ್ಯ, ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ಶಿಲ್ಪಗಳಾಗಿದ್ದು ಇವು ಬಿಳಿ ಮಿಶ್ರಿತ ಕಪ್ಪುಶಿಲೆ, ಬೆಣಚಿಗಲ್ಲು ಮತ್ತು ಕಪ್ಪು ಬೆಣಚುಶಿಲೆಗಳಿಂದ ರಚಿತಗೊಂಡಿವೆ. ಒಟ್ಟಾರೆ ಇಲ್ಲಿನ ವಸ್ತುಸಂಗ್ರಹಾಲಯ ಕರ್ನಾಟಕ ಅದರಲ್ಲೂ ಹೆಚ್ಚಾಗಿ ವಿಜಯನಗರ ಕಾಲದ ಮೂರ್ತಿಕಲೆ, ನಾಣ್ಯ, ಲಿಪಿಶಾಸ್ತ್ರ, ಭಾಷಾ ಶಾಸ್ತ್ರ, ನೀರಾವರಿ ವ್ಯವಸ್ಥೆಯ ಸ್ಥೂಲ ಪರಿಚಯವನ್ನು ಮಾಡಿಕೊಡುತ್ತದೆ. ಇಲ್ಲಿನ ಪ್ರಾಚ್ಯವಸ್ತುಗಳನ್ನು ನೋಡಿದಾಗ ವಿಜಯನಗರ ಕಾಲದ ಭವ್ಯ ಪರಂಪರೆಯುನ್ನು ನಮ್ಮ ಕಣ್ಮುಂದಿಟ್ಟಂತಾಗುತ್ತದೆ. ಈ ವಸ್ತುಸಂಗ್ರಹಾಲಯವನ್ನು ಇತ್ತೀಚಿಗೆ ಅಭಿವೃದ್ಧಿ ಪಡಿಸಲಾಗುತ್ತದೆ. ಈ ಶಿಲ್ಪಗಳಲ್ಲಿ ಪ್ರತಿಯೊಂದು ಶಿಲ್ಪಗಳ ಲಕ್ಷಣಗಳನ್ನು ಹಾಗೂ ದೇಗುಲದಲ್ಲಿನ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಮೂರ್ತಿಶಿಲ್ಪ ಅಧ್ಯಾಯದಲ್ಲಿ ಸೆರೆಹಿಡಿಯಲಾಗಿದೆ.

**ರಾಜ್ಯ ಪುರಾತತ್ವ ಇಲಾಖೆಯ ವಸ್ತುಸಂಗ್ರಹಾಲಯ:** ಕೆಲವು ರಾಜವಂಶಗಳ ಕಾಲದ ಮೂರ್ತಿಶಿಲ್ಪಗಳನ್ನು ಇಲ್ಲಿ ಪ್ರದರ್ಶನಕ್ಕೆ ವ್ಯವಸ್ಥಿತವಾಗಿ ಸಂಗ್ರಹಿಸಿಡಲಾಗಿದೆ. ಈ ವಸ್ತು ಸಂಗ್ರಹಾಲಯದಲ್ಲಿ ಎಂಬತ್ತು ಮೂರು ಶಿಲ್ಪಗಳು ಇವೆ. ಆಂಜನೇಯ, ಸಿಡಿಕಲ್ಲು, ಮಾಸ್ತಿಗಲ್ಲು, ನಂದಿ ವಿವಿಧ ಕಾಲಮಾನದ ಕಲ್ಲಿನ ಗುಂಡುಗಳು (ಬ್ರಹ್ಮದೇವರು) ಶಿವಲಿಂಗ, ಗಣಪತಿ, ದೇವಿ ವಿವಿಧ ಕಾಲಮಾನದ ಭಿಕ್ಷಾಟನ ಮೂರ್ತಿಗಳು, ಶಿವ (ರುದ್ರ) ವೈಷ್ಣವ ದ್ವಾರಪಾಲಕ, ವೈಷ್ಣವ ಶಾಸನ, ಕನ್ನಡ ಶಾಸನ(ಶೈವ), ಸ್ಮಾರಕಶಿಲ್ಪ, ಶಾಂತಿನಾಥ, ಗಣಪತಿ, ಮಹಾವೀರ, ಭುವನೇಶ್ವರಿ, ವಿವಿಧ ರೀತಿಯ ಆಳ್ವಾರರು, ಅನಂತಪದ್ಮನಾಭ, ಸಿದ್ಧಿ ವಿನಾಯಕ, ವಿಭಿನ್ನಕಾಲಮಾನದ ವೀರಭದ್ರ ಶಿಲ್ಪಗಳು, ದಂಪತಿಗಳು, ಆಯುಕ್ತ ಸ್ತಂಭ, ಮಹಾಸತಿಕಲ್ಲು, ಸತಿಕಲ್ಲು ಶೈವ ಶಾಸನ, ವೀರಗಲ್ಲು, ಸೂರ್ಯ, ಶೈವ ದ್ವಾರ ಪಾಲಕ, ದ್ವಾರ ಪಾಲಕ, ವಿವಿಧ ಕಾಲಮಾನ ನಂದಿ, ಶಿಲ್ಪಗಳ ಪಟ್ಟಿಕೆ, ನರ್ತಕಿಯರು, ವೈವಿಧ್ಯಮ ವೀರಗಲ್ಲುಗಳು, ಗರುಡ, ವಾನರ, ವೆಂಕಟೇಶ, ಲಕ್ಷ್ಮೀನರಸಿಂಹ, ವಿವಿಧ ರಾಜವಂಶ ಕಾಲದ ವಿಷ್ಣು, ಕೋದಂಡರಾಮ, ನಾಗದೇವತೆ, ಕಾರ್ತಿಕೇಯ, ದುರ್ಗಿ, ವಿವಿಧ ಕಾಲದ ದೇವಿ ಶಿಲ್ಪಗಳು, ಪಂಚಲಿಂಗ, ಗೋಪುರ ಅಂಜಲಿ ಮುದ್ರೆಯಲ್ಲಿ ನಾಗಿಣಿ ಶಿಲ್ಪಗಳು ಇವೆ. ಕ್ರಿ.ಶ.೧ನೇ ಮತ್ತು ೨ನೇ ಶತಮಾನದ ಶಾತವಾಹನರ ಕಾಲದ ಮೂರ್ತಿ ಶಿಲ್ಪಗಳನ್ನು ಇಲ್ಲಿ ಸಂಗ್ರಹಿಸಿಡಲಾಗಿದೆ. ಆಯುಕ್ತ ಸ್ತಂಭದ ಭಾಗ, ದಂಪತಿಗಳು, ಗೋಪುರ ಇವು ಬಳಪದ ಶಿಲೆಯಿಂದ ಕೆತ್ತಲ್ಪಟ್ಟಿವೆ. ವೈಷ್ಣವ ದ್ವಾರಪಾಲಕ, ನಂದಿ, ಇವು ಈ ಶತಮಾನಕ್ಕೆ ಸೇರಿದ್ದಾಗಿವೆ. ಕ್ರಿ.ಶ.೧೧ ಮತ್ತು ೧೨ನೇ ಶತಮಾನದ ಅಂದರೆ ಕಲ್ಯಾಣಿ ಚಲುಕ್ಯರ ಕಾಲದ ಮೂರ್ತಿಶಿಲ್ಪಗಳು ಬಿಳಿ ಮಿಶ್ರಿತ ಕಪ್ಪು ಶಿಲೆಗಳಿಂದ ಅಲಂಕೃತವಾಗಿವೆ. ದೇವಿ (ತಳವಾರ ಘಟ್ಟ), ಸುಬ್ರಮಣ್ಯಂ (ಕಾಮಲಾಪುರ), ಸೂರ್ಯ (ತಳವಾರ ಘಟ್ಟ), ವೈಷ್ಣವ ದ್ವಾರಪಾಲಕ (ಸನ್ನತಿ), ಬಳಪದ ಕಲ್ಲಿನ ಗಣೇಶ(ಕಾಮಲಾಪುರ), ಪಾರ್ಶ್ವನಾಥ (ಹೊಸಪೇಟೆಯ ವೀರಭದ್ರ ದೇವಸ್ಥಾನದ ಬಳಿ) ಈ ಎರಡೂ ಶಿಲ್ಪಗಳು ಹೊಯ್ಸಳರ ಕಾಲದ ಮೂರ್ತಿ ಶಿಲ್ಪಗಳಾಗಿವೆ ಇಲ್ಲಿ ಸಂಗ್ರಹಿಸಿಡಲಾಗಿದೆ. ಕ್ರಿ.ಶ.೧೩ ಮತ್ತು ೧೪ನೇ ಶತಮಾನದ ಅಂದರೆ ವಿಜಯನಗರ ಕಾಲದ

ಮೂರ್ತಿಶಿಲ್ಪಗಳನ್ನು ಇಲ್ಲಿ ಪ್ರದರ್ಶನಕ್ಕೆ ಇಡಲಾಗಿದೆ. ಗಣಪತಿ (ಕಾಮಲಾಪುರ) ವೀರಭದ್ರ (ಗುರುಗುಹೇಶ್ವರ ಆಶ್ರಮ ಹಂಪಿ) ಆಳ್ವಾರರು (ಕಾಮಲಾಪುರ) ಗಣಪತಿ, (ಪ್ರತಿಷ್ಠಿತ ವ್ಯಕ್ತಿಗಳ ಅರಮನೆ), ಶಾಂತಿನಾಥ (ಹೊಸಪೇಟೆ), ವೀರಗಲ್ಲು (ಪ್ರವಾಸಿಗರ ತಾಣ, ಹಂಪಿ), ವೆಂಕಟೇಶ (ಹಳ್ಳಿಕೇರಿ), ಈ ಶಿಲ್ಪಗಳು ನೀಲಿಮಿಶ್ರಿತ ಕಪ್ಪುಶಿಲೆ, ಬೆಣಚುಕಲ್ಲು ಶಿಲೆಗಳಿಂದ ಮಾಡಲ್ಪಟ್ಟಿವೆ.

ಕ್ರಿ.ಶ.೧೪ ಮತ್ತು ೧೫ನೇ ಶತಮಾನದ ಅಂದರೆ ವಿಜಯನಗರ ಕಾಲದ ಮೂರ್ತಿ ಶಿಲ್ಪಗಳನ್ನು ಇಲ್ಲಿ ಪ್ರದರ್ಶಿಸಲಾಗಿದೆ. ದೇವಿ (ಕಾಮಲಾಪುರ), ನಂದಿ (ಪ್ರತಿಷ್ಠಿತ ವ್ಯಕ್ತಿಗಳ ಅರಮನೆ), ದೇವಿ (ಕಾಮಲಾಪುರ), ದುರ್ಗಿ (ಕಾಮಲಾಪುರ), ಗಣೇಶ (ಕಾಮಲಾಪುರ), ದೇವಿ (ಪಾಪಿನಾಯಕನಹಳ್ಳಿ), ಗಣೇಶ (ಕಾಮಲಾಪುರ), ಶಿವ (ಕಾಮಲಾಪುರ), ಭಿಕ್ಷಾಟನಾ ಮೂರ್ತಿ (ಕಾಮಲಾಪುರ) ವಿಷ್ಣು, ನಂದಿ, ವೀರಭದ್ರ (ಕಾಮಲಾಪುರ) ನಂದಿ (ಕಾಮಲಾಪುರ) ನಂದಿ(ಹಂಪಿ), ವೀರಭದ್ರ (ಕಾಮಲಾಪುರ), ಗರುಡ (ಕಾಮಲಾಪುರ), ಲಕ್ಷ್ಮಿ ನರಸಿಂಹ (ಹಳ್ಳಿಕೇರಿ) ಈ ಶಿಲ್ಪಗಳು ಬೆಣಚುಕಲ್ಲು ಶಿಲೆಗಳಿಂದ ಮಾಡಲ್ಪಟ್ಟಿವೆ. ವೀರಭದ್ರ (ಅಹಮ್ಮದ್ ಖಾನ್ ಧರ್ಮ ಶಾಲೆ) ಭಕ್ತರು, ದೇವಿ, ದ್ವಾರಪಾಲಕ, ಆಳ್ವರು (ಕಾಮಲಾಪುರ) ಇವು ಬೆಣಚುಕಲ್ಲು ಶಿಲೆಗಳಿಂದ ಮಾಡಲ್ಪಟ್ಟಿವೆ.

ಹದಿನಾರನೇ ಶತಮಾನದ ಅಂದರೆ ವಿಜಯನಗರೋತ್ತರ ಮೂರ್ತಿ ಶಿಲ್ಪಗಳಾದ ಆಳ್ವರು ಅನಂತಪದ್ಮನಾಭ (ಕಡ್ಡಿರಾಂಪುರ), ನಂದಿ ವಾಹನ, ಶಿವಲಿಂಗ (ರಾಮಲಿಂಗ ಮಠ), ವಿಷ್ಣು (ಅರಮನೆಯ ಬಳಿ), ಭುವನೇಶ್ವರಿ (ಕುರೆಕುಪ್ಪ), ಕಲ್ಲಿನಗುಂಡುಗಳು, ಸಿಡಿ ತಲೆಗಲ್ಲು, ಮಾಸ್ತಿಗಲ್ಲು, ಎರಡು ಹಂತದ ಮಾಸ್ತಿಗಲ್ಲು, ಆಂಜನೇಯ, ದೇವಿ, ಗಣೇಶ, ವೀರಭದ್ರ, ಕೋದಂಡರಾಮ, ಹದಿನೇಳನೇ ಶತಮಾನದ ಪಾಳೆಗಾರರ ಕಾಲದ ಮೂರ್ತಿಶಿಲ್ಪಗಳಾದ ನರ್ತಕಿಯರು, ವೀರಗಲ್ಲು, ಗರುಡ, ಶೈವದ್ವಾರಪಾಲಕ, ಮಹಾಸತಿಗಲ್ಲು, ಗಣೇಶ, ನಂದಿ, ನಂದಿ, ಗಣೇಶ, ಪಂಚಲಿಂಗ ಐದುಪೀಠ, ವಿಷ್ಣು ಇವುಗಳನ್ನು ಇಲ್ಲಿ ಪ್ರದರ್ಶಿಸಲಾಗಿದೆ. ಕ್ರಿಶ ೧೮-೧೯ನೇ ಶತಮಾನದ ಅಂದರೆ ಪಾಳೆಗಾರರ ಕಾಲದ, ಸರ್ಪ ಐದು ಹೆಡೆಗಳುಳ್ಳ ಮನುಷ್ಯ ಮುಖ, ನಾಗದೇಹ ಹೊಂದಿದ ಶಿಲ್ಪ, ಗಣೇಶ, ವೀರಭದ್ರ (ತಳವಾರಘಟ್ಟ) ನಂದಿ, ಶಿಲ್ಪಗಳ ಪಟ್ಟಿಕೆ, ವೈಷ್ಣವ ದ್ವಾರಪಾಲಕರು, ವೀರಗಲ್ಲು, ಸತಿಗಲ್ಲು, ಮಹಾಸತಿಗಲ್ಲು ಈ ಶಿಲ್ಪಗಳು ಬೆಣಚಿಕಲ್ಲುಗಳಿಂದ ಮಾಡಲ್ಪಟ್ಟಿವೆ. ಒಟ್ಟಾರೆ ಈ ವಸ್ತು ಸಂಗ್ರಹಾಲಯದಲ್ಲಿರುವ ಎಲ್ಲಾ ಮೂರ್ತಿಶಿಲ್ಪಗಳನ್ನು ಕಾಲಾನುಕ್ರಮದಲ್ಲಿ, ಪಂಥಾನುಕ್ರಮದಲ್ಲಿ ವಿಂಗಡಿಸಿ ಅದರ ಪ್ರತಿಮಾ ಲಕ್ಷಣಗಳನ್ನು ಮೂರ್ತಿ ಶಿಲ್ಪ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯ:** ೧೯೯೪ರಲ್ಲಿ ಈ ವಸ್ತು ಸಂಗ್ರಹಾಲಯ ಸ್ಥಾಪಿತವಾಯಿತು. ಜನತೆಯ ಆಕರ್ಷಣೆ, ವಿದ್ವಜ್ಜನತೆಯ ಅಧ್ಯಯನ ಇದು ಸಂಶೋಧಕರಿಗೆ ಇದು ಪ್ರಯೋಗ ಶಾಲೆಯಾದಂತಿದೆ. ಹೆಚ್ಚಿನ ಮಟ್ಟಿಗೆ ಬಳ್ಳಾರಿ, ಕೊಪ್ಪಳ, ದಾವಣಗೆರೆ, ಚಿತ್ರದುರ್ಗ ಈ ಪ್ರದೇಶಗಳಲ್ಲಿ ಲಭ್ಯವಾಗಿದ್ದ ಪುರಾತನ ವಸ್ತುಗಳನ್ನು ಸಂಗ್ರಹಿಸಿ ಪ್ರದರ್ಶನಕ್ಕೆ ಇಡಲಾಗಿದೆ. ಜಾನಪದ ಕ್ಷೇತ್ರಕ್ಕೆ ಸೀಮಿತವಾಗಿರುವ ೫೦೦೦ಕ್ಕೂ ಹೆಚ್ಚು ವಸ್ತುಗಳು ಇಲ್ಲಿ ಪ್ರದರ್ಶಿತವಾಗಿವೆ. ಪುರಾತತ್ವ ಶಿಲ್ಪ ಸಲಕರಣೆಗಳು ೩೦೦ ಕ್ಕೂ ಹೆಚ್ಚಿವೆ. ಈ ವಸ್ತು ಸಂಗ್ರಹಾಲಯವು ಐದು ಅಂಕಣಗಳಿಂದ ಆವೃತ್ತವಾಗಿದೆ.

ಪುರಾತತ್ವ ಶಿಲಾಯುಗದ ಅಂಕಣ, ಬುಡಕಟ್ಟು ಅಂಕಣ, ಆಧುನಿಕ ಚಿತ್ರಕಲೆ, ಕರ್ನಾಟಕ ಸಾಹಿತ್ಯಗಾರರ ಅಂಕಣ, ಆಯ್ದ ಶಾಸನ ಮತ್ತು ದೇವಾಲಯ ಮೂರ್ತಿಶಿಲ್ಪಗಳ ಛಾಯಾಚಿತ್ರ ಅಂಕಣ, ಜಾನಪದ ಅಂಕಣ, ಹೀಗೆ ಕನ್ನಡ ಸಂಸ್ಕೃತಿ ಮತ್ತು ಕಲೆಗೆ ಸಂಬಂಧ ಪಟ್ಟ ವಸ್ತುಗಳನ್ನು ಈ ಸಂಗ್ರಹಾಲಯ ಪ್ರದರ್ಶನ ಮಾಡಲಾಗಿದೆ.[೨೫] ಕರ್ನಾಟಕದ ಪ್ರಕೃತಿ ಸೌಂದರ್ಯದ, ಸಾಹಿತ್ಯದ ಕಲೆಗಳ ಮತ್ತಿತರ ಸಂಮೃದ್ಧಿಯ ವಿಶೇಷತೆಗಳನ್ನು ಪ್ರತಿಬಿಂಬಿಸುವ ವಸ್ತು ಸಂಗ್ರಹಾಲಯ ಇದಾಗಿದೆ.

ಕನ್ನಡ ವಿಶ್ವವಿದ್ಯಾಲಯವು ಸಂಶೋಧನೆಯ ಜತೆಗೆ ಅಧ್ಯಯನಕ್ಕೂ ಒತ್ತು ನೀಡಿದೆ. ಇದರ ಜೊತೆ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಿ, ಶೈಕ್ಷಣಿಕ ಕೇಂದ್ರವಾಗಲು ಒತ್ತು ನೀಡಲಾಗಿದೆ. ಪ್ರಾಚ್ಯವಸ್ತು ಸಂಗ್ರಹಾಲಯದ ಜೊತೆಗೆ ಪ್ರಾಚೀನ ಅವಶೇಷಗಳನ್ನು ಸಂಗ್ರಹಿಸಿ ಕರ್ನಾಟಕದ ಪ್ರಕೃತಿ ಸೌಂದರ್ಯದ, ಸಾಹಿತ್ಯದ, ಕಲೆಗಳ ಮತ್ತಿತರ ಸರ್ವಮುಖ ಸಂಮೃದ್ಧಿಯ ವಿಶೇಷತೆಗಳನ್ನು ಪ್ರತಿಬಿಂಬಿಸುವ ರಾಷ್ಟ್ರೀಯ ಮ್ಯೂಜಿಯಂ ಮಾದರಿಯ ವ್ಯಾಪಕ ವಸ್ತು ಸಂಗ್ರಹಾಲಯವೊಂದನ್ನು ಸ್ಥಾಪಿಸಿ ವಿಜಯನಗರ ಕಲ್ಪನೆಯೊಂದನ್ನು ರೂಪಿಸುತ್ತಲಿದೆ.

ಈ ವಸ್ತುಸಂಗ್ರಹಾಲಯವು ಪುರಾತತ್ವ ವಸ್ತುಪ್ರದರ್ಶನ, ಬುಡಕಟ್ಟು ವಸ್ತು ಪ್ರದರ್ಶನ, ಚಿತ್ರಕಲೆ ವಸ್ತು ಪ್ರದರ್ಶನ, ಕನ್ನಡ–ಸಾರಸ್ವತ, ಲೋಕದ ಗಣ್ಯರ ಭಾವಚಿತ್ರಗಳ ಪ್ರದರ್ಶನ, ಸ್ಮಾರಕ ಛಾಯಾಚಿತ್ರ ಪ್ರದರ್ಶನ, ಶಾಸನಗಳಲ್ಲಿ ಪ್ರಮುಖ ಶಾಸನಗಳ ಛಾಯಾಚಿತ್ರ ಪ್ರದರ್ಶನ, ಜಾನಪದ ವಸ್ತು ಪ್ರದರ್ಶನಗಳೆಂಬ ಈ ಎಲ್ಲಾ ಅಂಶಗಳು ಈ ವಸ್ತು ಸಂಗ್ರಹಾಲಯದ ಹಿರಿಮೆ ಮತ್ತಷ್ಟು ಹೆಚ್ಚಿಸಿವೆ.

**ಶಿಲಾಯುಧಗಳು:** ಗುಲ್ಬರ್ಗಾ ಜಿಲ್ಲೆಯ ಹುಣಸಗಿಯ ಸುತ್ತ–ಮುತ್ತ ಪರಿಸರದಲ್ಲಿ ದೊರಕಿರುವ ಕೈಕೊಡಲಿಗಳು, ನಾಲ್ಕು ವೈವಿಧ್ಯಮಯ ಆಕಾರ ಅಂದರೆ (ಚೂಪಾಕಾರದ) ಕೈಕೊಡಲಿಗಳನ್ನು ಇಲ್ಲಿ ಸಂಗ್ರಹಿಸಿ ಇಡಲಾಗಿದೆ. ಬಿಜಾಪುರ ಜಿಲ್ಲೆಯ ಅನಗವಾಡಿ ಗ್ರಾಮದ ಪರಿಸರದ ಸುತ್ತಮುತ್ತಲಿನಲ್ಲಿ ಎರಡು ಶಿಲಾಯುಧಗಳು ದೊರೆತಿವೆ. ಇವುಗಳ ಆಕಾರ ಉದ್ದವಾದ ಮತ್ತು ಚೂಪಾಕಾರದಿಂದ ಕೂಡಿದೆ. ಇದೇ ಪ್ರದೇಶದಲ್ಲಿ ದೊರೆತ ಮುಚ್ಚು ಗತ್ತಿ ಆಯುಧಗಳು ಪ್ರದರ್ಶನಕ್ಕಿಟ್ಟಿರುವುದರಿಂದ ಶಿಲಾಯುಗ ಕಾಲದ ಉಪಯೋಗಿಸುವ ಆಯುಧಗಳ ಪರಿಚಯ ಮಾಡಿದಂತಾಗಿದೆ. ಸೀಳುಗತ್ತಿ ಇದು ಗುಲ್ಬರ್ಗಾ ಜಿಲ್ಲೆಯ ಹುಣಸಿಗಿ ಪ್ರದೇಶದ ಪರಿಸರದಲ್ಲಿ ದೊರಕಿರುವ ಆಯುಧಗಳು, ನಾಲ್ಕು ಚಿಕ್ಕ ಸೀಳು ಗತ್ತಿಗಳು, ಐದು–ಮಧ್ಯಮ ಗಾತ್ರದ ಸೀಳು ಗತ್ತಿಗಳು ಇವು ವೈವಿಧ್ಯಮ ಶಿಲೆಗಳಿಂದ ರೂಪಗೊಂಡಿದ್ದು ಪ್ರದರ್ಶನಕ್ಕೆ ಇಡಲಾಗಿದೆ. ಸೂಕ್ಷ್ಮ ಶಿಲಾಯುಗದ ಆಯುಧಗಳು ಗುಲ್ಬರ್ಗಾ ಜಿಲ್ಲೆಯ ದಿಂಡವಾರ, ಸಾತಿಹಾಳು ಈ ಪ್ರದೇಶಗಳ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಎಪ್ಪತ್ತೆಂಟು ಶಿಲಾ ಆಯುಧಗಳು ವೈವಿಧ್ಯಮಯ ಆಕಾರಗಳಲ್ಲಿ ದೊರಕಿವೆ. ಬೂದಿ ದಿಬ್ಬದ ಅವಶೇಷಗಳು ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಹಿರೇ ಬೆನಕಲ್ಲು ಪ್ರದೇಶದ ಸುತ್ತಮುತ್ತಲಿನ ಪರಿಸರದಲ್ಲಿ ಒಂಬತ್ತು ಅವಶೇಷಗಳು ದೊರಕಿವೆ. **ಉದಾ:**ಸೀಮೆಸುಣ್ಣ, ಇಟ್ಟಿಗೆ. ಬಳ್ಳಾರಿ ಜಿಲ್ಲೆಯ ತೆಕ್ಕಲು ಕೋಟೆಯ ಪರಿಸರದಲ್ಲಿ ದೊರೆತಿರುವ ನಯಗೊಳಿಸಿದ ಕೊಡಲಿಯು ಗ್ರಾನೈಟ್ ಶಿಲೆಯಿಂದ ಕೂಡಿದ್ದು ಸಣ್ಣ ಗಾತ್ರದ್ದಾಗಿದೆ. ಕೈ–ಗೊಡಲಿ ಇದರ ಆಕಾರ ಕೆಳಭಾಗ ಅಗಲವಾಗಿದ್ದು ಬರಬರುತ್ತಾ ಮುಂಭಾಗವು

ಚೂಪಾಗಿರುತ್ತದೆ. ಇದರಿಂದ ನೂತನ ಶಿಲಾಯುಗದಲ್ಲಿ ಕೊಡಲಿಯು ಬಳಕೆಯಾದ ಬಗ್ಗೆ ಮಾಹಿತಿ ನೀಡುತ್ತವೆ. ಬಳ್ಳಾರಿ ಜಿಲ್ಲೆಯ ತೆಕ್ಕಲ ಕೋಟೆಯಲ್ಲಿ ಹದಿಮೂರು ಸೂಕ್ಷ್ಮ ಕೆತ್ತನೆಯ ಆಯುಧಗಳು ದೊರಕಿವೆ. ಇವುಗಳನ್ನು ಪ್ರದರ್ಶನಕ್ಕೆ ಇಡಲಾಗಿದೆ. ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆಯಲ್ಲಿ ಹದಿಮೂರು ಸೂಕ್ಷ್ಮ ಕೆತ್ತನೆಯ ಆಯುಧಗಳು ದೊರೆಕಿವೆ ಇವುಗಳನ್ನು ಪ್ರದರ್ಶನಕ್ಕೆ ಇಡಲಾಗಿದೆ. ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ಪ್ರಾಂತ್ಯದ ಸುತ್ತಮುತ್ತಲಿನ ಪರಿಸರದಲ್ಲಿ ದೊರೆತಿರತಕ್ಕಂತಹ ಹದಿನೆಂಟು ಕಪ್ಪುಗಲ್ಲಿನ ಕೊಡಲಿಗಳು ವೈವಿಧ್ಯಮಯ ಆಕಾರದಲ್ಲಿ ದೊರತಿವೆ.

ಬೃಹತ್ ಗಾತ್ರದ ಕೊಡಲಿಗಳು ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ಗ್ರಾಮದಲ್ಲಿ ದೊರೆಕಿವೆ. ಬಳ್ಳಾರಿ ಜಿಲ್ಲೆಯ ಸಂಗನ ಕಲ್ಲು ಗ್ರಾಮದಲ್ಲಿ ದೊರೆತ ಮೂಳೆಯ ಆಯುಧ ಆಕರ್ಷಕ. ಇದೇ ನೆಲದಲ್ಲಿ ಕವಣೆಗಲ್ಲುಗಳು ದೊರಕಿವೆ. ಕಬ್ಬಿಣ ಲೋಹದಿಂದ ನಿರ್ಮಿತವಾದ ಕೈಗತ್ತಿಗಳು ಎರಡು ಬೃಹದಾಕಾರದಲ್ಲಿ ಎರಡು ಮಧ್ಯಮ ಗಾತ್ರದಲ್ಲಿ ದೊರಕಿವೆ. ಮಡಕೆ ಅವಶೇಷಗಳು ಮೂರು ಮಾದರಿಯಲ್ಲಿದ್ದು ಬಿಳಿ, ಬೂದು, ಕೇಸರಿ ಬಣ್ಣದಲ್ಲಿ ದೊರಕಿವೆ. ತೆಕ್ಕಲ ಕೋಟೆಯಲ್ಲಿ ಆರು ವೈವಿಧ್ಯಮಯ ಮಡಿಕೆ ತುಂಡುಗಳು ವೈವಿಧ್ಯಮಯ ಬಣ್ಣ ಅಂದರೆ ಬಿಳಿ, ಬೂದು, ಕಪ್ಪು ಇವುಗಳಿಂದ ಆವೃತ್ತವಾಗಿವೆ. ತಳಭಾಗ, ಮೇಲ್ಭಾಗದ ತುಂಡುಗಳು ಮಾತ್ರ ಲಭ್ಯವಾಗಿವೆ. ಸಂಗನ ಕಲ್ಲಿನಲ್ಲಿ ಪೂರ್ಣ ಮಡಿಕೆ ಸಾಧನಗಳು ದೊರೆಕಿವೆ. ಇಲ್ಲಿ ಪ್ರದರ್ಶನಕ್ಕಿಡಲಾದ ಬೃಹತ್ ಶಿಲಾಯುಗದ ಸಂಸ್ಕೃತಿಯ ಅವಶೇಷಗಳು ಚಿತ್ರದುರ್ಗ ಜಿಲ್ಲೆಯ ಕೂನುಬೇವು ಗ್ರಾಮದಲ್ಲಿ ಹನ್ನೊಂದು ನೀರಿನ ಹೂಜಿಗಳು ಲಭ್ಯವಾಗಿವೆ.

**ಶಾತವಾಹನರ ಕಾಲದ ಅವಶೇಷಗಳು:** ಚಿತ್ರದುರ್ಗ ಜಿಲ್ಲೆಯ ಚಿಪ್ಪಿನ ಕೆರೆಯಲ್ಲಿ ವೈವಿಧ್ಯಮಯ ಆಕಾರ ಮತ್ತು ಗಾತ್ರದ ಕೆಂಪು ಬಣ್ಣದ, ಕಪ್ಪು ಬಣ್ಣದ ಅಗಲವಾದ ಚಿಕ್ಕ ಗಾತ್ರದ ಮಡಕೆ ತುಂಡುಗಳು ಅವುಗಳ ಮೇಲೆ ಅಲಂಕೃತವಾದ ರೇಖಾ ಚಿತ್ರದ ವಿನ್ಯಾಸದ ಕಲೆಗಳನ್ನು ಕಾಣಬಹುದು. ಕಪ್ಪು ಅಥವಾ ಕಂದು ಬಣ್ಣದ ಅಡಿಕೆ ಆಕಾರದ ನಾಲ್ಕು ವೈವಿಧ್ಯಮಯ ಮಣಿಗಳು ಐದು ಪ್ಲಾಸ್ಟಿಕ್, ಹವಳ, ಬಿಳಿ ಬಣ್ಣದ ಮಣಿಗಳು, ವೃತ್ತಾಕಾರದ ಮಣ್ಣಿನ ಅವಶೇಷಗಳೂ ದೊರಕಿವೆ. ದಾವಣಗೆರೆಯ ಆಕನೂರಿನಲ್ಲಿ ಹದಿನಾರು ಪ್ರಾಚೀನ ಅವಶೇಷಗಳು ಶಾತವಾಹನರ ಕಾಲದ್ದು ದೊರಕಿವೆ. ಮಡಕೆ ಚೂರುಗಳು, ಬಳಪದ ಕಲ್ಲು ಇವುಗಳ ಮೇಲೆ ವೈವಿಧ್ಯಮಯ ಕಲೆಗಳನ್ನು ರೇಖಾ ವಿನ್ಯಾಸವನ್ನು ಚಿತ್ರಿಸಿದ್ದನ್ನು ವಸ್ತು ಸಂಗ್ರಹಾಲಯದಲ್ಲಿ ಬಿಂಬಿಸಲಾಗಿದೆ. ಕೊಪ್ಪಳ ಜಿಲ್ಲೆಯ ಬೆಣಕಲ್ಲು ಗ್ರಾಮದ ಪರಿಸರದಲ್ಲಿ ಶಾತವಾಹನರ ಕಾಲದ ಮಡಕೆ ಚೂರುಗಳು ಇಲ್ಲಿ ಕಲಾತ್ಮಕವಾಗಿ ಪ್ರದರ್ಶಿಸಲಾಗಿದೆ. ಕಬ್ಬಿಣ ಲೋಹದಲ್ಲಿ ತಯಾರಿಸಿದ ಹನ್ನೆರಡು ವೈವಿಧ್ಯಮಯವಾದ ಖಡ್ಗಗಳು, ಖಡ್ಗಗಳನ್ನು ಹಿಡಿದುಕೊಳ್ಳಲು ಅನುಕೂಲವಾಗುವಂತೆ ತಯಾರಿಸಿದ ಹಿಡಿಕೆಗಳು ಕಲಾತ್ಮಕವಾಗಿವೆ. ಗಂಡುಗೊಡಲಿ, ಭರ್ಚಿಗಳು, ಬಂದೂಕು ಬೃಹದಾಕಾರದಲ್ಲಿ ತಯಾರಿಸಿದ್ದು ವಸ್ತು ಸಂಗ್ರಹಾಲಯದಲ್ಲಿ ಪ್ರದರ್ಶಿಸಲಾಗಿದೆ.

ಬಾಗಲಕೋಟೆ ಜಿಲ್ಲೆಯ ಹೆರಕಲ್ ಪ್ರಾಂತ್ಯದಲ್ಲಿ ದೊರೆತ ಮಡಕೆ ತುಂಡುಗಳು, ಬಳೆ ಶಂಖು ಹೀಗೆ ಇಪ್ಪತ್ತೊಂಬತ್ತು ವೈವಿಧ್ಯಮಯ ಆಕಾರದ ಅವಶೇಷಗಳನ್ನು ಇಲ್ಲಿ ಕಾಣಬಹುದು. ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲುಕು ಕಾಕುಬಾಳುವಿನಲ್ಲಿ ಶಾತವಾಹನರ ಕಾಲದ ಕಪ್ಪು ಶಿಲೆಯ ನಂದಿ

ಮತ್ತು ಮಡಕೆಯ ಅವಶೇಷಗಳು ಇಲ್ಲಿವೆ. ಕೊಪ್ಪಳ ಜಿಲ್ಲೆಯ ಕುಕುನೂರು, ಯಲಬುರ್ಗಾದಲ್ಲಿಯೂ ವಿವಿಧ ಮಡಕೆ ಅವಶೇಷಗಳು, ವಿವಿಧ ಕಲಾ ವಿನ್ಯಾಸಗಳಿಂದ ಆವೃತ್ತವಾಗಿ ಪ್ರದರ್ಶಿತಗೊಂಡಿವೆ. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನಲ್ಲಿ ಶಿಲಾಯುಧಗಳು, ಹದಿನಾಲ್ಕು ಮಡಕೆ ಚೂರುಗಳು ದೊರಕಿವೆ. ಕೊಪ್ಪಳ ಜಿಲ್ಲೆಯ ಲಿಂಗನ ಬಂಡಿಯಲ್ಲಿ ಒಂಬತ್ತು ಕಬ್ಬಿಣದ ಅದಿರಿನ ತುಂಡುಗಳು ಮೂರು ಮಡಕೆ ಚೂರುಗಳು ವಿಜಯನಗರ ಕಾಲದ ಕಬ್ಬಿಣ ಕಾರ್ಯಗಾರದ ಅವಶೇಷಗಳು ದೊರಕಿವೆ. ಬಳ್ಳಾರಿ ಹಗರಿಬೊಮ್ಮನಹಳ್ಳಿ ತಾಲೂಕಿನ ನಂದಿ ಬಂಡಿಯ ಪರಿಸರದಲ್ಲಿ ವೈವಿಧ್ಯಮಯವಾದ ಹದಿನಾಲ್ಕು ಕಬ್ಬಿಣದ ತುಂಡುಗಳು ದೊರಕಿವೆ. ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ ಪರಿಸರದಲ್ಲಿ ಇಪ್ಪತ್ತುಕ್ಕೂ ಹೆಚ್ಚು ಮಡಕೆ ತುಂಡುಗಳು ದೊರಕಿವೆ. ಈ ಎಲ್ಲಾ ಪ್ರಾಚೀನ ಆಯುಧಗಳನ್ನು ಮಡಿಕೆ ಚೂರುಗಳನ್ನು ಪ್ರದರ್ಶನಕ್ಕೆ ಇಡಲಾಗಿದ್ದು ಆಕಾಲದಲ್ಲಿನ ಸಂಸ್ಕೃತಿಯ ಜೀವನದ ಕುರಿತು ಮಾಹಿತಿ ನೀಡುತ್ತವೆ. ಕಪ್ಪು ಶಿಲೆ ಮತ್ತು ನಯವಾದ ಕಲ್ಲುಗಳಿಂದ ತಯಾರಿಸಿದ ಆಯುಧಗಳಿವೆ. ಭೈರವಿ, ಧ್ಯಾನಾಸಕ್ತೆ, ವೀರಭದ್ರ, ಬ್ರಹ್ಮಾಣಿ, ಯಕ್ಷ ಸೂರ್ಯ, ಮುಧೋಳು, ಸುಖಾಸೀನ ಭಂಗಿಯಲ್ಲಿನ ಗಣೇಶ, ಶಿಲ್ಪಗಳು ಚಿತ್ರದುರ್ಗ ಜಿಲ್ಲೆಯ ತಮಟಕಲ್ಲು ಗ್ರಾಮದಲ್ಲಿ ದೊರೆತಿವೆ. ಇವು ಕಪ್ಪು ಶಿಲೆಯಿಂದ ಕೂಡಿದ್ದು ಅಲ್ಲಿನ ಸಂಶೋಧನಾ ಸಮಯದಲ್ಲಿ ದೊರಕಿದ ವಸ್ತುಗಳಾಗಿವೆ. ಯಲಬುರ್ಗಾದಲ್ಲಿ ೨೪ನೇ ಜೈನ ತೀರ್ಥಂಕರ ಶಿಲ್ಪ ದೊರತಿದೆ. ಈ ತೀರ್ಥಂಕರರ ಸುತ್ತಲೂ ಧ್ಯಾನಕ್ತರಾದ ಜೈನ ತೀರ್ಥಂಕರ ಶಿಲ್ಪಗಳಿವೆ. ಇಲ್ಲಿ ಗಣೇಶ ಶಿಲ್ಪ ಕಲ್ಯಾಣಿ ಚಾಲುಕ್ಯರ ಕಾಲದ್ದಾಗಿದೆ.

**ಬುಡಕಟ್ಟು ಅಂಕಣ:** ಬುಡಕಟ್ಟು ಜನಾಂಗದ ಜನರು ಉಪಯೋಗಿಸುವ ದಿನನಿತ್ಯದ ಸಲಕರಣೆಯಾದ ನಾಲ್ಕು ಬುಟ್ಟಿಗಳು ಬಿಳಿ ಮತ್ತು ಕೆಂಪು ಬಣ್ಣದ ವೈವಿಧ್ಯಮಯ ರೀತಿಯಲ್ಲಿ ದೊರಕಿವೆ. ಕೊರಗರ ಜನಾಂಗದ ತಂಬೂರಿ ಇದು ಜನಪದ ಸಂಗೀತದ ಒಂದು ವಾದ್ಯಸಲಕರಣೆಯಾಗಿದ್ದು ಅವರ ಸಂಗೀತ ಅಭಿರುಚಿಯನ್ನು ಪ್ರದರ್ಶಿಸುತ್ತದೆ. ಸೋಲಿಗರು ತಮ್ಮ ದಿನನಿತ್ಯದ ಬಳಸುವ ಸಲಕರಣೆಯಾದ ಕುಡುಗೋಲು, ಮನರಂಜನೆಯ ಸಾಧನ ಕೊಳಲು ದೊರಕಿದೆ. ಬೇಟೆಯಾಡುವ ಬಿಲ್ಲು-ಬಾಣಗಳು ಲಭ್ಯವಾಗಿವೆ. ಪ್ರಾಚೀನ ಜನರು ಉಪಯೋಗಿಸುವ ಕಾಷ್ಠವಸ್ತುಗಳಾದ ಚಕ್ಕಲಿ, ಮುಟ್ಟು, ಹಂಡೆ, ಅಳೆಯುವ ಮಾಪನಗಳು, ಬಿದಿರಿನ ಸಿಂಬೆಗಳು, ಮರದ ಹರಿವಾಣಗಳು ಇವರ ಕಾಷ್ಠ ವಸ್ತುಗಳ ಪರಿಚಯ ಮತ್ತು ಬಳಕೆಯ ಕುರಿತು ಮಾಹಿತಿ ನೀಡುತ್ತವೆ.

ಹಾಲಕ್ಕಿ ಸ್ತ್ರೀಯರು ಬಳಸುವ ಆಭರಣಗಳು, ಕರಿಮಣಿಸರ, ಹಳದಿ ಬೆಲ್ಲದ ಮಣಿ, ಕಪ್ಪು ಮಣಿ ಇವುಗಳಿಂದ ತಯಾರಿಸಲ್ಪಟ್ಟಿದೆ. ಹಾಲಕ್ಕಿ ಜನರ ಧಾರ್ಮಿಕ ರೇಖಾ ಚಿತ್ರಗಳ ವಿನ್ಯಾಸ ಚುಕ್ಕಿ-ಗೆರಗಳಿಂದ ಹೆಂಗಸರು ರಚಿಸುತ್ತಿರುವ ದೃಶ್ಯವನ್ನು ಇಲ್ಲಿ ಚಿತ್ರಿಸಲಾಗಿದೆ. ಇವರು ಉಪಯೋಗಿಸುವ ಹುಟ್ಟು-ಕಟ್ಟಿಗೆ ಸಾಧನ, ಮೀನಿನ ಬಲೆ, ಬಿದಿರಿನ ಬುಟ್ಟಿಗಳು, ವೈವಿಧ್ಯಮ ರೀತಿಯಲ್ಲಿ ರಚಿಸಲಾಗಿದೆ. ಕೊಡಲಿ, ಚಿಕ್ಕಡೋಲು, ಮೈಲಾರ ಲಿಂಗದ ಪವಿತ್ರ ಪಾದರಕ್ಷೆಗಳು, ಜಾನಪದ ವಾದ್ಯಗಳಾದ ಡೋಲು, ಹಾಲಕ್ಕಿ ಡೋಲು, ಎರವರದುಡಿ, ದೇವರ ಡೊಳ್ಳು, ಕೊರವರ ಡೊಳ್ಳು, ಗೊಂಡರ ನೊಗ, ಬೆಣ್ಣೆ ತೆಗೆಯುವ ಅಡಿಕೆ, ಹಾಳೆ, ಬಿದಿರಿನ ಚಾಪೆ, ಮಡಿಕೆ, ಬಳಪದ ಕಲ್ಲಿನ ನೀರಿನ ಹೂಜು, ಗಂಟೆ,

ಬಿದುರಿನ ಪೆಟ್ಟಿಗೆ, ಪೂಜಾ ಬುಟ್ಟಿ, ಟೊಪ್ಪಿಗೆ, ವೈವಿಧ್ಯಮಯ ಮುಖವಾಡ, ಚಮಚಗಳು, ಎತ್ತುಗಳ ಕೊರಳ ಹಾರಗಳು, ಮಣಿಸರ, ಚರ್ಮ, ಬಣ್ಣದ ಹಗ್ಗಗಳು, ಗ್ರಾಮ್‌ಫೋನ್, ರೇಡಿಯೋ, ಹಾರ್ಮೋನಿಯಂ, ಇವೆಲ್ಲಾ ಸಾಧನಗಳು ಅಂದಿನ ಸಂಸ್ಕೃತಿಯ ಕುರಿತು ಮಾಹಿತಿ ನೀಡುತ್ತವೆ. ಈ ಜನಾಂಗದ ಧಾರ್ಮಿಕ ದೈವಗಳ ಬಗ್ಗೆ ಇಲ್ಲಿ ಪರಿಚಯಿಸಲು ಇಲ್ಲಿನ ಶಿಲ್ಪಗಳು ಸಾಕ್ಷಾಧಾರಗಳಾಗಿವೆ. ಕಾಷ್ಠಶಿಲ್ಪಗಳಾದ ದ್ಯಾವಮ್ಮ, ದುರ್ಗಮ್ಮ, ಸ್ತ್ರೀ ಶಿಲ್ಪಗಳು ಇವುಗಳ ಅಲಂಕಾರ ವೈವಿಧ್ಯತೆಯನ್ನು ಇಲ್ಲಿ ಪ್ರದರ್ಶಿಸಲಾಗಿದೆ. ಧಾರ್ಮಿಕ ಲೋಹದ ಸಾಮಗ್ರಿಗಳಾದ ಗಂಟೆ, ತಂಬಿಗೆ, ತೀರ್ಥದ ಲೋಟ, ಪೂಜಾ ಸಾಮಗ್ರಿಯ ಪೆಟ್ಟಿಗೆ, ಲೋಭಾನ ಹಾಕುವ ಸಾಧನಗಳನ್ನು ಇಲ್ಲಿ ಪ್ರದರ್ಶನಕ್ಕೆ ಇಡಲಾಗಿದೆ. ಬಾಗಿಲಿನ ಲಲಾಟಬಿಂಬದ ರೇಖಾ ವಿನ್ಯಾಸದ ಕಾಷ್ಠಶಿಲ್ಪ ಕಲಾತ್ಮಕವಾಗಿ ರೂಪಗೊಂಡಿದೆ. ಕೆಲವೊಂದು ದುಂಡು ಶಿಲೆಯ ಮೇಲೆ ಸೂರ್ಯ ಚಂದ್ರರ ಉಬ್ಬು ಶಿಲ್ಪ ಹಾಗೂ ಕೆಲವೊಂದು ವರ್ಣಗಳನ್ನು ರಚಿಸಲಾಗಿದೆ. ಜಾನಪದ ಜನಾಂಗವು ಉಪಯೋಗಿಸುವ ದಿನ ನಿತ್ಯದ ಸಲಕರಣೆಗಳಾದ ಲ್ಯಾಟಿನ್ ದೀಪ, ಪಾತ್ರೆ ಹಿಡಿಯುವ ಸಿಂಬೆ, ರೊಟ್ಟಿ ಹಾಕುವ ಸಿಂಬೆಗಳನ್ನು ಇಲ್ಲಿ ಪ್ರದರ್ಶಿಸಲಾಗಿದೆ. ಶಿಲ್ಪಗಳು ಕಾಷ್ಠ ಸಾಧನಗಳಿಂದ ಕೂಡಿದ್ದು ಆ ಜನಾಂಗದವರ ಸ್ತ್ರೀ–ಪುರುಷರ ವೈವಿಧ್ಯಮಯ ಅಲಂಕಾರದ ಆಭರಣಗಳನ್ನು ಇಲ್ಲಿ ಚಿತ್ರಿಸಲಾಗಿದ್ದು ಆ ಜನಾಂಗದ ಅಲಂಕಾರಿಕ ಆಭರಣಗಳ ಕುರಿತು ಪರಿಚಯಿಸಲಾಗಿದೆ. ಸ್ತ್ರೀ–ಜಾನಪದ ಶಿಲ್ಪದ ಆಭರಣಗಳು ಪುಷ್ಪಾಲಂಕಾರದ ಓಲೆ, ಕೊರಳಪಟ್ಟಿ, ಮುತ್ತಿನ ಹಾರ, ಮುತ್ತಿನ ಸೊಂಟಪಟ್ಟಿ, ನೋಡಲು ಆಕರ್ಷಕ. ಪುರುಷನ ಆಭರಣ, ಸಲಕರಣೆಗಳು, ಪೇಟ, ರುಮಾಲು, ಮುತ್ತಿನ ಕರ್ಣಾಭರಣ, ವೀರಾವೇಷದ ಮೀಸೆ, ಜನಿವಾರ, ಪದಕಹಾರ, ತೋಳುಬಂಧಿ, ಕಡಗ, ಬಲಗೈಯಲ್ಲಿ ಕತ್ತಿ, ಪಂಚೆ ಹೀಗೆ ವೈವಿಧ್ಯಮಯವಾದ ಕಲಾತ್ಮಕತೆಯ ರೀತಿಯಲ್ಲಿ ಶಿಲ್ಪರೂಪಿತಗೊಂಡಿದ್ದು ಜಾನಪದ ಅಧ್ಯಯನ ದೃಷ್ಟಿಯಿಂದ ಇದು ಮಹತ್ವದ್ದಾಗಿದೆ.

**ಚಿತ್ರಕಲೆ ಅಂಕಣ:** ಈ ಅಂಕಣವು ವೈವಿಧ್ಯಮಯ ಸಾಂಸ್ಕೃತಿಕ ವಿಚಾರಗಳನ್ನು ಬಿತ್ತರಿಸುವ ಮಾಧ್ಯಮಗಳಾಗಿವೆ. ಅವುಗಳಲ್ಲಿ ಮುಖ್ಯವಾಗಿ ವಿಷ್ಣುವಿನ ವಿವಿಧ ಅವತಾರಗಳು–ಮತ್ಸ್ಯಾವತಾರ, ಈ ಅವತಾರದ ಸುತ್ತಲೂ ಮೇಲ್ಭಾಗದಲ್ಲಿ ನೃತ್ಯ ಭಂಗಿಯಲ್ಲಿ ಅಲಂಕೃತವಾದ ಸ್ತ್ರೀ–ಪುರುಷರೂ ಯಜ್ಞ ಮಾಡುತ್ತಿರುವ ಋಷಿ ಮತ್ತು ವನ್ಯ ಪಕ್ಷಿಗಳ ದೃಶ್ಯ. ಇವು ಅಂದಿನ ಧಾರ್ಮಿಕ ಮತ್ತು ಸಾಂಪ್ರದಾಯಿಕ ಚಿತ್ರಣವನ್ನು ಎತ್ತಿ ತೋರಿಸುತ್ತದೆ. ತಂಬೂರಿ ಹಿಡಿದು ರುಮಾಲು ಸುತ್ತಿಕೊಂಡು ನಿಂತಿರುವ ದಾಸ ಚಿತ್ರಣವು ಜಾನಪದ ವಾದ್ಯವನ್ನು ಪರಿಚಯಿಸುವುದರ ಜೊತೆಗೆ ಜಾನಪದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಬುಡಕಟ್ಟು ಜನಾಂಗದ ರೇಖಾಚಿತ್ರಗಳು ಅವರ ಧಾರ್ಮಿಕ ಆಚಾರ–ವಿಚಾರಗಳನ್ನು ವ್ಯಕ್ತ ಪಡಿಸುತ್ತವೆ. ದೇವಿಯ ಚಿತ್ರ ಒಕ್ಕೈ ಮಾಸ್ತಿಗಲ್ಲು. ಹೂವಿನ ಚಿತ್ರ, ವೀರಶೈವ ಜನಾಂಗದ ಧಾರ್ಮಿಕ ಆಚಾರವಾದ ಗುಗ್ಗಳದ ಒಂದು ಚಿತ್ರ ವಿನ್ಯಾಸ ಕಲಾತ್ಮಕವಾಗಿದೆ. ಹೆಣ್ಣು ಮಕ್ಕಳು ಉಡುಪು–ಅಲಂಕಾರ ಅವರ ಗೆಳೆತನದ ಸಲಗೆ ಇವುಗಳ ವಿನ್ಯಾಸಗಳು ಕಲಾತ್ಮಕವಾಗಿವೆ. ಹಳ್ಳಿಯ ಜನರ ಕೌಟುಂಬಿಕ ಜೀವನದ ಸಾಂಪ್ರದಾಯಿಕ ಚಿತ್ರಣವನ್ನು ಜಾನಪದ ದೈವಗಳ ಚಿತ್ರಣ, ಹಗಲು ವೇಷಧಾರಿಗಳ ಅಲಂಕಾರಿಕ ದೃಶ್ಯವನ್ನು ರಮಣೀಯವಾಗಿ ಚಿತ್ರಿಸಲಾಗಿದೆ. ಗೊರವನ ಅಲಂಕಾರದ

ನೈಜ ಚಿತ್ರಣವನ್ನು ಇಲ್ಲಿ ಸೆರೆಹಿಡಿಯಲಾಗಿದೆ. ಪ್ರಕೃತಿಯು ವಿಕೋಪಗೊಂಡ ದೃಶ್ಯವನ್ನು ಪರಿಸರ ನಾಶದ ಚಿತ್ರಣವನ್ನು ಒಣಗಿದ ಮರ, ಮರ ಕಡಿಯುವ ದೃಶ್ಯ, ಗುಡ್ಡ-ಗಾಡು ಪ್ರದೇಶಗಳನ್ನು ಕಲಾತ್ಮಕವಾಗಿ ಬಿಡಿಸಿ ಜನ-ಮನ ಸೂರೆಗೊಳ್ಳುವಂತೆ ಚಿತ್ರಿಸಲಾಗಿದೆ.

ಆಧುನಿಕ ಕಲೆ, ಮಿಥುನ ಶಿಲ್ಪದ ಒಂದು ಮಾದರಿಯ ಚಿತ್ರಣ, ವೀರನ ವೀರಾವೇಶ, ಪ್ರಕೃತಿಯ ಒಂದು ನೋಟದ ಚಿತ್ರಣ, ಮನುಷ್ಯ-ಸ್ತ್ರೀ-ಸಸ್ಯ ಇವುಗಳ ನಡುವಿನ ಸಂಬಂಧ, ಹಾವಾಡಿಗ, ಏಕಾಗ್ರತೆಯಿಂದ ಪುರುಷ ಪುಂಗಿ ಊದುವ ದೃಶ್ಯ, ಮಸೀದಿ, ಕೋಟೆ, ಗೋರಿ, ಜಲ, ಇವುಗಳ ಚಿತ್ರಣ ಜನರ ಮನಸ್ಸನ್ನು ಅಕರ್ಷಿಸುವಂತಿದೆ. ಸ್ತ್ರೀ ಸ್ನಾನಗೃಹ ಮತ್ತು ಅದರ ಸಾಧನಗಳು ಅಲಂಕೃತವಾಗಿ ಚಿತ್ರಿತವಾಗಿದೆ.

**ಕನ್ನಡ ಸಾರಸ್ವತ ಲೋಕ ಗಣ್ಯರು:** ಜ್ಞಾನ ಪೀಠ ಪ್ರಶಸ್ತಿ ವಿಜೇತರ ಭಾವಚಿತ್ರದ ಸಹಾಯದಿಂದ ಕಲಾತ್ಮಕವಾಗಿ ಚಿತ್ರಿಸಿರುವ ಚಿತ್ರಗಳು ಈ ಅಂಕಣದಲ್ಲಿನ ಮಹತ್ವವನ್ನು ತೋರಿಸುವ ಕನ್ನಡಿ. ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ ಮತ್ತು ಜಾನಪದ ಪ್ರೇಕ್ಷಕರಿಗೆ ಈ ಕನ್ನಡ ಸಾಹಿತ್ಯ ಲೋಕದ ಸಪ್ತ ಜನರನ್ನು ಪರಿಚಯಿಸುವುದರ ಜೊತೆಗೆ ಸಾಹಿತ್ಯದ ಅಭಿರುಚಿಯನ್ನು ಹೆಚ್ಚಿಸುವ ಪ್ರಮುಖ ಮಾಧ್ಯಮವಾಗಿ ಇಲ್ಲಿ ಪ್ರತಿನಿಧಿಸಿವೆ. ಕೆ.ವಿ.ಪುಟ್ಟಪ್ಪ, ದ.ರಾ.ಬೇಂದ್ರೆ, ಶಿವರಾಮ ಕಾರಂತ, ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ವಿ.ಕೃ.ಗೋಕಾಕ್, ಯು.ಆರ್.ಅನಂತ ಮೂರ್ತಿ, ಗಿರೀಶ್ ಕರ್ನಾಡ್ ಛಾಯಾಚಿತ್ರಗಳನ್ನು ಪ್ರದರ್ಶಿಸಲಾಗಿದೆ.

**ಪಂಪ ಪ್ರಶಸ್ತಿ ವಿಜೇತರು:** ಎ.ಎನ್.ಮೂರ್ತಿರಾವ್, ಸೇಡಿಯಾಪು ಕೃಷ್ಣಭಟ್, ಎಂ.ಗೋಪಾಲಕೃಷ್ಣ ಅಡಿಗ, ಎಂ.ಎಂ.ಕಲಬುರ್ಗಿ, ಡಿ.ಜವರೇಗೌಡ, ಚನ್ನವೀರ ಕಣವಿ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ, ಎಂ.ಚಿದಾನಂದ ಮೂರ್ತಿ, ಚಂದ್ರಶೇಖರ ಕಂಬಾರ, ಜೋಳದರಾಶಿದೊಡ್ಡನ ಗೌಡ, ಪಿ.ಲಂಕೇಶ, ಬಿ.ವಿ.ಕಾರಂತ, ಎಣಗಿ ಬಾಳಪ್ಪ, ಬೀಚಿ, ಗುಬ್ಬಿವೀರಣ್ಣ, ಬಿ.ಜಯಮ್ಮ, ಶಂಬಾಜೋಷಿ, ಪುಟ್ಟಸ್ವಾಮಯ್ಯ, ಎಸ್.ಶ್ರೀಕಂಠಶಾಸ್ತ್ರಿ, ರಂ.ಶ್ರೀ.ಮುಗುಳಿ, ಚಂದ್ರಶೇಖರ ಶಾಸ್ತ್ರಿ(ವ್ಯಾಕರಣ ತೀರ್ಥರು)ಯವರ ಛಾಯಾಚಿತ್ರಗಳನ್ನು ಪ್ರದರ್ಶಿಸಲಾಗಿದೆ.

**ಸಂಗೀತಗಾರರ ಛಾಯಾಚಿತ್ರಣ:** ಪಂಡಿತ ಭೀಮಸೇನ ಜೋಷಿ. ಪಂಡಿತ ಮಲ್ಲಿಕಾರ್ಜುನ ಮನ್ಸೂರ್, ಇವರ ಸಂಗೀತ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಸಿದ್ದರಾಮ ಜಂಬಲ ದಿನ್ನಿ, ಪಂಡಿತ ಬಸವರಾಜ ರಾಜಗುರು, ವಿದ್ವಾನ್ ದೊರೆ ಸ್ವಾಮಿ ಅಯ್ಯಂಗಾರ್, ಹಿಂದೂಸ್ತಾನಿ ಸಂಗೀತಗಾರರ ಪರಿಚಯವನ್ನು ಈ ಅಂಕಣದಲ್ಲಿ ಸೆರೆಹಿಡಿಯಲಾಗಿದೆ. ಪುಟ್ಟರಾಜಗವಾಯಿ, ಗಂಗೂಬಾಯಿ ಹಾನಗಲ್, ಹುಕ್ಕೇರಿ ಬಾಳಪ್ಪ ಇವರ ಭಾವಚಿತ್ರಗಳನ್ನು ಇಲ್ಲಿ ಸಂಗ್ರಹಿಸಿಡಲಾಗಿದೆ.

ಕನ್ನಡದ ಹೆಸರಾಂತ ಲೇಖಕರಾದ ತ.ರಾ.ಸುಬ್ಬರಾವ್, ಬಸವರಾಜ ಕಟ್ಟೀಮನಿ, ಚಂದ್ರಶೇಖರ ಪಾಟೀಲ, ತಿರುಮಲಾಂಬ, ನಂಜನಗೂಡು ಆದ್ಯರಂಗಾಚಾರ್ಯ, ಯಶವಂತ, ಚಿತ್ತಾಲ, ಚದುರಂಗ, ಬೆಟಗೇರಿ ಕೃಷ್ಣ ಶರ್ಮ, ವ್ಯಾಸರಾಯ ಬಲ್ಲಾಳ, ಜಿ.ಪಿ.ರಾಜರತ್ನಂ, ಎಸ್.ಎಲ್.ಭೈರಪ್ಪ, ಕೆ.ಎಸ್.ನಿಸಾರ್ ಅಹಮ್ಮದ್, ಸಿದ್ದಯ್ಯ ಪುರಾಣಿಕ್, ಡಿ.ವಿ.ಗುಂಡಪ್ಪ, ಸ.ಸ.ಮಾಳವಾಡ. ಶಾಂತದೇವಿ, ಮಾಳವಾಡ,

ನಿರಂಜನ, ಅನುಪಮಾ, ನಿರಂಜನ, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಕೈಯಾರ ಕಿಞ್ಞಣ್ಣರೈ ಅ.ನ.ಕೃಷ್ಣರಾವ್, ಆ.ನೆ.ಉಪಾಧ್ಯ, ಹಾ.ಮಾ.ನಾಯಕ್, ಸಿಂಪಿ ಲಿಂಗಣ್ಣ, ಶಾಂತಿನಾಥ ದೇಸಾಯಿ, ಕೆ.ಕೆ.ಹೆಬ್ಬಾರ್, ಇವರ ಭಾವಚಿತ್ರಗಳನ್ನು ಈ ಅಂಕಣದಲ್ಲಿ ಸೆರೆಹಿಡಿಯಲಾಗಿದೆ. ಇದರಿಂದ ಎಲ್ಲಾ ಪ್ರೇಕ್ಷಕರಿಗೆ, ವಿದ್ಯಾರ್ಥಿಗಳಿಗೆ, ಅಧ್ಯಯನದ ದೃಷ್ಟಿಯಿಂದ ಪ್ರಯೋಜನಕಾರಿಯಾಗಿದೆ.

**ದೇವಾಲಯ ಮೂರ್ತಿಶಿಲ್ಪಗಳ ಛಾಯಾಚಿತ್ರಗಳು ಅಂಕಣ:** ಬಾದಾಮಿಯ ಗುಹೆ-೧ ಇದು ಶೈವ ಗುಹೆ, ಬಾದಾಮಿ ಗುಹೆ-೨, ಆಸೀನ ಭಂಗಿಯಲ್ಲಿ ಚತುರ್ಭುಜ ವಿಷ್ಣು, ಮಿಶ್ರಕಸ್ತಂಭ ಮತ್ತು ಚೌಕಾಕಾರದ ಸ್ತಂಭಗಳಿಂದ ಆವೃತ್ತವಾದ ವೈಷ್ಣವಗುಹೆ, ಸ್ಥಾನಿಕ ಭಂಗಿಯಲ್ಲಿ ನಟರಾಜ ಶಿಲ್ಪ, ಬಾದಾಮಿ ಚತುರ್ಭುಜ ತ್ರಿವಿಕ್ರಮ ಶಿಲ್ಪ. ಪಟ್ಟದಕಲ್ಲು-ಮಿಥುನ ಶಿಲ್ಪ, ಬದಾಮಿ ಗುಹೆ-೪, ಸ್ತ್ರೀ-ಪುರುಷರ ಸಂಯೋಗ, ಶಿಖರವನ್ನು ಆವರಿಸಿದ ಜಂಬುಲಿಂಗದೇವಾಲಯ, ಐಹೊಳೆಯ ದುರ್ಗಾ ದೇವಾಲಯ, ಐಹೊಳೆಯ ಲಾಡಖಾನ್ ದೇವಾಲಯ, ಎರಡು ಅಂತಸ್ತು, ಐಹೊಳೆಯ ಕೊಂತಿ ದೇವಾಲಯ, ಪಟ್ಟಕದಲ್ಲು-ಗಳಗನಾಥ ದೇವಾಲಯ, ಪ್ರಮುಖ ದೇವಾಲಯಗಳ ವೈವಿಧ್ಯಮಯ ಶಿಖರಗಳ ದೃಶ್ಯ ಕಂಬದಹಳ್ಳಿ-ಪಂಚಕೂಟ ಬಸದಿ ಈ ಬಸದಿಯ ಐದು ವೈವಿಧ್ಯಮಯ ಶಿಖರಗಳು ಒಂದೇ ಪರಿಸರದಲ್ಲಿ ಇವೆ. ಪಟ್ಟದಕಲ್ಲು ಮಲ್ಲಿಕಾರ್ಜುನ ಮತ್ತು ಕಾಶಿ ವಿಶ್ವೇಶ್ವರ ದೇವಾಲಯ, ವಿರುಪಾಕ್ಷದೇವಾಲಯ, ಶ್ರವಣಬೆಳಗೊಳ-ಚಾವುಂಡರಾಯಬಸದಿ, ಡಂಬಳದ ದೊಡ್ಡಬಸಪ್ಪ ದೇವಾಲಯ, ನೀಲಗುಂದ ಭೀಮೇಶ್ವರ ದೇವಾಲಯ ಬಸಕಾಳು-ಮಲ್ಲಿಕಾರ್ಜುನ ದೇವಾಲಯ, ಲಕ್ಕುಂಡಿ ಕಾಶಿವಿಶ್ವೇಶ್ವರ, ಬೇಲೂರು-ಚನ್ನಕೇಶ್ವರ ದೇವಾಲಯ, ಅವನಿಯ-ರಾಮಲಿಂಗೇಶ್ವರ ದೇವಾಲಯ, ಹಳೇಬೀಡು-ಚತುರ್ಭುಜ ನಾಟ್ಯ ಸರಸ್ವತಿ ಶಿಲ್ಪ, ಆದಿಶೇಷನ ಮೇಲೆ ಆಸೀನರಾದ ವಿಷ್ಣು ಸೋಮಲಾಪುರ ಗೋವರ್ಧನ ಗಿರಿಧಾಮ, ಹಳೇಬೀಡು-ಅಲಂಕೃತ ದ್ವಾರಪಾಲಕ, ಹಳೇಬೀಡು-ಅಲಂಕೃತ ಗಣೇಶ, ಬೇಲೂರು-ದರ್ಪಣ ಸುಂದರಿ, ಹಳೇಬೀಡು-ವಿಹಂಗಮ ನೋಟ ಶೃಂಗೇರಿ-ವಿದ್ಯಾಶಂಕರ ದೇವಾಲಯ ಹಂಪಿಯ ರಾಜಲಾಂಛನ (ವರಹಾ-ಸಿಂಹ ಬಾಕು-ಚಂದ್ರ) ಬಾಲಕೃಷ್ಣ ದೇವಾಲಯ, ವಿಠಲದೇವಾಲಯ, ಕಲ್ಲಿನ ರಥ, ಅಚ್ಯುತಾರಾಯ ದೇವಾಲಯ, ವಿರುಪಾಕ್ಷ ದೇವಾಲಯ, ಮಹಾನವಮಿ ದಿಬ್ಬ, ಪುಷ್ಕರಣಿ, ಸಾಸಿವೆ ಕಾಳು ಗಣಪ, ಲಕ್ಷ್ಮೀನರಸಿಂಹ, ಆನೆಲಾಯ ಕಮಲ ಮಹಲ್, ಅನಂತಶಯನ, ಬೀದರ್‌ನ ರಂಗಿನ ಮಹಲ್, ಗುಂಬಜ್ ಬಾಗಿಲು ಮದರಸಾ, ಅಮೀರ್ ಬಾರೀದಾ, ಸಾಲುಕಂಬ ಮಸೀದಿ, ಬೆಂಗಳೂರಿನ-ಟಿಪ್ಪುವಿನ ಬೇಸಿಗೆ ಅರಮನೆ ಬಿಜಾಪುರದ ಗೋಳಗುಮ್ಮಟ, ಇಬ್ರಾಹಿಂ ರೋಜಾ, ಮಂಡ್ಯ ಜಿಲ್ಲೆಯ ಸೋಮನಾಥಪುರದ ಸೋಮನಾಥದೇವಾಲಯ, ಗೋವಿಂದನ ಹಳ್ಳಿಯ ಪಂಚ ಲಿಂಗೇಶ್ವರ ದೇವಾಲಯ, ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯ, ಶ್ರೀರಂಗ ಪಟ್ಟಣದಲ್ಲಿನ ಟಿಪ್ಪು ಹಿಂದೂ ಅರೇಬಿಕ್ ಶೈಲಿಯ ಅರಮನೆ, ಬನವಾಸಿಯ ಮಧುಕೇಶ್ವರ ದೇವಾಲಯ, ಕಾರ್ಕಳದ ಚತುರ್ಮುಖ ಬಸದಿ, ಶಿವಮೊಗ್ಗ ಜಿಲ್ಲೆಯ ಕೆಳದಿಯ ಈಶ್ವರ ದೇವಾಲಯ, ಪಟ್ಟದ ಕಲ್ಲಿನ ನಟರಾಜ, ಬ್ರಹ್ಮ, ಧರ್ಮಸ್ಥಳ ಮ್ಯೂಸಿಯಂನ ಭಿಕ್ಷಾಟನಾ ಶಿವ, ಪಟ್ಟದಕಲ್ಲು-ಮಹಿಷಾಸುರಮರ್ಧಿನಿ, ಬದಾಮಿ-೨ನೇ ಗುಹೆಯ ನರಸಿಂಹ, ಶ್ರವಣಬೆಳಗೊಳದ ಗೊಮ್ಮಟೇಶ್ವರ, ಯಕ್ಷಿ, ಚತುರ್ಮುಖ ಬ್ರಹ್ಮ, ಇವು

ದೇವಾಲಯ ವಾಸ್ತುಕಲೆ ಮತ್ತು ಮೂರ್ತಿ ಶಿಲ್ಪಗಳ ಪ್ರತಿಮಾ ಲಕ್ಷಣಗಳನ್ನು ಕುರಿತು ವಿದ್ಯಾರ್ಥಿಗಳಿಗೆ ಸಂಶೋಧಕರಿಗೆ ಹಾಗೂ ಕಲಾಭಿಮಾನಿಗಳಿಗೆ ಉಪಯುಕ್ತವಾಗುವಂತೆ ಪ್ರದರ್ಶಿಸಲಾಗಿದೆ.

**ಶಾಸನಗಳು:** ಪಟ್ಟದಕಲ್ಲು ಪ್ರದೇಶದಲ್ಲಿನ ಒಂದನೇ ವಿಕ್ರಮಾದಿತ್ಯನ ಶಾಸನ ೭ನೇ ಶತಮಾನದ ಕನ್ನಡ ಭಾಷೆ, ಶ್ರಣಬೆಳಗೊಳದ ಪೀಠ ಶಾಸನ, ಕನ್ನಡ–ಮರಾಠಿ/ಮಲಯಾಳಂ ಭಾಷೆಯಲ್ಲಿದೆ, ತಮಿಳನಾಡಿನ ಚೆನ್ನೈಯಲ್ಲಿ–ಶ್ರೀವೆಂಕಟೇಶ್–ಶ್ರೀವಿರುಪಾಕ್ಷನ ಸಹಿಯುಳ್ಳ ತಾಮ್ರದ ದತ್ತಿ ಶಾಸನ ಕ್ರಿ.ಶ.೧೬೩೨, ಕಾಲದ್ದಾಗಿದ್ದು ಕನ್ನಡ ಲಿಪಿ ಭಾಷೆಯಲ್ಲಿದೆ. ಮಹಾರಾಷ್ಟ್ರದ ಕೊಲ್ಲಾಪುರದಲ್ಲಿ ಹೊಯ್ಸಳ ಬಲ್ಲಾಳನ ಮುದ್ರೆ (ಕ್ರಿ.ಶ.೧೦೦೩) ಕಾಲದಾಗಿದ್ದು, ಕನ್ನಡ/ನಾಗರಿ ಲಿಪಿ ಭಾಷೆಯಲ್ಲಿದೆ. ತುಮಕೂರು ಜಿಲ್ಲೆಯ ತುರುವಕೆರೆಯಲ್ಲಿ ವೀರನ ಸಿಂಹ ಸಹಿವುಳ್ಳ ಶಾಸನ (ಕ್ರಿ.ಶ.೧೨೫೮–೭೨) ಕಾಲದ್ದಾಗಿದ್ದು ಸಂಸ್ಕೃತ/ನಾಗರಿ ಲಿಪಿಯಲ್ಲಿದೆ. ಗಂಗರ ಎರಡನೆಯ ಶಿವಮಾರನ ತಾಮ್ರ ಶಾಸನ ಮತ್ತು ಮುದ್ರೆ–ಕಾಲಗಣನೆ, ೮ನೇ ಶತಮಾನದಾಗಿದ್ದು ಸಂಸ್ಕೃತ–ಕನ್ನಡದಲ್ಲಿದೆ. ಕೋಲಾರ ಜಿಲ್ಲೆಯ ನಂದಿ ಕ್ರಿ.ಶ.೯ನೇ ಶತಮಾನದಾಗಿದ್ದು, ಕನ್ನಡ ಭಾಷೆಯಲ್ಲಿದೆ. ರಾಯಚೂರು ಜಿಲ್ಲೆಯ ಜೀವನ ಹಳ್ಳಿಯಲ್ಲಿ ಸದಾಶಿವರಾಯನ ಶ್ರೀ ವಿರುಪಾಕ್ಷ ಸಹಿಯುಳ್ಳ ತಾಮ್ರ ಶಾಸನ, ಕ್ರಿ.ಶ.೧೫೫೧ರ ಕಾಲದಾಗಿದೆ. ಕನ್ನಡ ಭಾಷೆಯಲ್ಲಿದೆ ಗದಗ ಜಿಲ್ಲೆಯ ಶಿರೂರಿನಲ್ಲಿ ೧ನೇ ಅಮೋಘವರ್ಷನ ಶಾಸನ, ಕ್ರಿ.ಶ.೬೬೬ರ ಕಾಲದಾಗಿದ್ದು ಕನ್ನಡ ಲಿಪಿಯಲ್ಲಿದೆ, ಧಾರವಾಡ ಜಿಲ್ಲೆಯ ನಿಡುಗುಂಡಿಯಲ್ಲಿ ೧ನೇ ಅಮೋಘವರ್ಷನ ಶಾಸನ ಕ್ರಿ.ಶ.೮೭೪ರ ಕಾಲದಾಗಿದ್ದು ಕನ್ನಡ ಭಾಷೆಯಲ್ಲಿದೆ. ಮೈಸೂರು ಜಿಲ್ಲೆಯ ಕೂಡಲೂರಿನಲ್ಲಿ ಮಾರ ಸಿಂಹನ ತಾಮ್ರ ಶಾಸನದ ಮುದ್ರೆ ಕ್ರಿ.ಶ.೯೬೨ರ ಕಾಲದಾಗಿದ್ದು. ಸಂಸ್ಕೃತ/ಕನ್ನಡ ಭಾಷೆಯಲ್ಲಿದೆ. ಗುಲ್ಬರ್ಗಾ ಜಿಲ್ಲೆಯ ಅಂದೋಳದಲ್ಲಿ ಕ್ರಿ.ಶ.೯೭೨ರ ಕಾಲದ್ದು ಕನ್ನಡ ಭಾಷೆಯಲ್ಲಿದೆ. ಬೆಂಗಳೂರು ಜಿಲ್ಲೆಯ ಮಣ್ಣೆಯಲ್ಲಿ ಮಾರಸಿಂಹನ ತಾಮ್ರ ಶಾಸನ, (ಕ್ರಿ.ಶ.೭೯೮) ಕಾಲದ್ದಾಗಿದ್ದು ಸಂಸ್ಕೃತಿಕ/ಕನ್ನಡ, ಭಾಷೆಯಲ್ಲಿದೆ. ಮೈಸೂರು ಜಿಲ್ಲೆಯ ಕಿರುಮೊರೆ ಕೋಲಿಯಲ್ಲಿ ಗಂಗ ಮುಷ್ಕರನ ದತ್ತಿ ಶಾಸನ, ಕ್ರಿ.ಶ.೬ನೇ ಶತಮಾನದಾಗಿದ್ದು ಸಂಸ್ಕೃತ/ಕನ್ನಡ ಭಾಷೆಯಲ್ಲಿದೆ. ಬಳ್ಳಾರಿ ಜಿಲ್ಲೆಯ ಕಾಮಲಾಪುರ ಕೃಷ್ಣದೇವರಾಯನ ತಾಮ್ರ ಶಾಸನ, ೧೫೨೬ರ ಕಾಲದಾಗಿದ್ದು ಸಂಸ್ಕೃತ/ನಾಗರಿ ಲಿಪಿಯಲ್ಲಿದೆ. ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯ ಪೆನುಗೊಂಡದಲ್ಲಿ ಎರಡನೇಯ ಮಾಧವನ ತಾಮ್ರ ಶಾಸನ ಕ್ರಿ.ಶ.೫ನೇ ಶತಮಾನದಾಗಿದ್ದು ಸಂಸ್ಕೃತ/ತೆಲಗು ಲಿಪಿಯಲ್ಲಿದೆ. ಮಹರಾಷ್ಟ್ರದ ಥಾಣಾ ಜಿಲ್ಲೆಯ ಚಿಂಚಣಿಯಲ್ಲಿ ಮೂರನೇ ಕೃಷ್ಣನ ಶಾಸನ, ಕ್ರಿ.ಶ.೧೦ನೇ ಶತಮಾನದಾಗಿದ್ದು, ಸಂಸ್ಕೃತ/ನಾಗರಿ ಲಿಪಿಯಲ್ಲಿದೆ, ತುಮಕೂರು ಜಿಲ್ಲೆಯ ಚಿಕ್ಕ ಸಾರಾಂಗಿಯಲ್ಲಿ ಶ್ರೀ ಪುರುಷನ ಅಗಳಿ ದತ್ತಿ ಶಾಸನ ಕ್ರಿ.ಶ.೭೪೮ ಕಾಲದ್ದಾಗಿದ್ದು ಸಂಸ್ಕೃತ/ಕನ್ನಡ ಲಿಪಿಯಲ್ಲಿದೆ. ಮಹಾರಾಷ್ಟ್ರದ ಥಾಣಾ ಜಿಲ್ಲೆಯ ಚಿಂಚಣಿಯಲ್ಲಿ ಮೂರನೇ ಕೃಷ್ಣನ ಶಾಸನ ಕ್ರಿ.ಶ.೧೦ನೇ ಶತಮಾನದಾಗಿದ್ದು, ಸಂಸ್ಕೃತ/ನಾಗರಿ ಭಾಷೆಯಲ್ಲಿದೆ. ಮೂರನೇ ಕೃಷ್ಣನ ಜೂರಾ ಪ್ರಶಸ್ತಿ ಶಾಸನ ಮಧ್ಯ ಪ್ರದೇಶದ ಸ್ನಾತಿ ಜಿಲ್ಲೆಯಲ್ಲಿದೆ ಇದು ಕ್ರಿ.ಶ.೧೦ನೇ ಶತಮಾನದ್ದಾಗಿದ್ದು ಕನ್ನಡ ಭಾಷೆಯಲ್ಲಿದೆ. ಹಾಸನ ಜಿಲ್ಲೆಯ ಬೇಲೂರಿನಲ್ಲಿ ಬೇಲೂರಂ ಶಾಸನ ಕ್ರಿ.ಶ.೧೧೧೭ನೇ ಶತಮಾನಕ್ಕೆ ಸೇರಿದೆ. ಕನ್ನಡ ಭಾಷೆಯದ್ದಾಗಿದೆ. ಗದಗ ಜಿಲ್ಲೆಯ ಲಕ್ಷ್ಮೀಶ್ವರದಲ್ಲಿ

ಆರನೇ ವಿಕ್ರಮಾದಿತ್ಯನ ಶಾಸನ ದೊರೆತಿದೆ ಕ್ರಿ.ಶ.೧೦-೧೧ನೇ ಶತಮಾನ, ಸಂಸ್ಕೃತ/ಕನ್ನಡ ಭಾಷೆಯಲ್ಲಿದೆ. ಗದಗ ಜಿಲ್ಲೆಯ ಸೂಡಿಯಲ್ಲಿ ಒಂದನೇ ಸೋಮೇಶ್ವರ ಶಾಸನವಿದೆ. ಇದರ ಕಾಲ ಕ್ರಿ.ಶ.೧೦೫೦ ಕನ್ನಡ ಭಾಷೆಯಲ್ಲಿದೆ. ಗುಲ್ಬರ್ಗಾ ಜಿಲ್ಲೆಯ ವಡಗೆರೆಯಲ್ಲಿ ಆರನೇ ವಿಕ್ರಮಾದಿತ್ಯನ ಶಾಸನವಿದೆ. ಕ್ರಿ.ಶ.೧೦೭೭ ಕಾಲದ್ದಾಗಿದ್ದು ಕನ್ನಡ ಭಾಷೆಯಲ್ಲಿದೆ. ಬಳ್ಳಾರಿ ಜಿಲ್ಲೆಯ ಹಂಪಿಯಲ್ಲಿ ಚಾಲುಕ್ಯ ವಿಕ್ರಮಶಕೆ ಪ್ರಸ್ತಾಪಿಸುವ ಮೊಟ್ಟ ಮೊದಲ ಶಾಸನ ಇದಾಗಿದೆ. ಇದರ ಕಾಲ ೧೦೭೮, ಕನ್ನಡ ಭಾಷೆಯಲ್ಲಿದೆ. ಬೀದರ್ ಜಿಲ್ಲೆಯ ಜಲಸಂಗ್ವಿಯಲ್ಲಿ ಆರನೇ ವಿಕ್ರಮಾದಿತ್ಯನ ಶಾಸನ ಕ್ರಿ.ಶ.೧೧ನೇ ಶತಮಾನ ಸಂಸ್ಕೃತ/ಕನ್ನಡ ಭಾಷೆಯಲ್ಲಿದೆ. ಧಾರವಾಡ ಜಿಲ್ಲೆಯ ಸಿರುಗುಪ್ಪ ವಾಣಸತ್ತಿರಸನ ಶಾಸನ. ಈ ಶಾಸನ ಕ್ರಿ.ಶ.೭ನೇ ಶತಮಾನ. ಕನ್ನಡ ಭಾಷೆಯಲ್ಲಿದೆ. ದಕ್ಷಿಣ ಕನ್ನಡ ಜಿಲ್ಲೆಯ ವಾರಂಗದಲ್ಲಿ ಕುಂದನನ ಶಾಸನ ಕ್ರಿ.ಶ.೧೩ನೇ ಶತಮಾನದ್ದಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಉದ್ಯಾವರದಲ್ಲಿ ಆಳುವರಸನ ಶಾಸನ ಕ್ರಿ.ಶ.೯ನೇ ಶತಮಾನದ್ದಾಗಿದೆ. ಕನ್ನಡ ಭಾಷೆಯಲ್ಲಿದೆ. ದಕ್ಷಿಣ ಕನ್ನಡ ಜಿಲ್ಲೆಯ ಬೆಳಮಣ್ಣು ಎರಡನೇ ಆಳುವರಸನ ತಾಮ್ರ ಶಾಸನ ಕ್ರಿ.ಶ.೮ನೇ ಶತಮಾನದ್ದಾಗಿದ್ದು ಕನ್ನಡ ಭಾಷೆಯಲ್ಲಿದೆ. ಇದು ಮೊಟ್ಟಮೊದಲಿನ ಕನ್ನಡ ತಾಮ್ರ ಶಾಸನ. ತಮಿಳುನಾಡಿನ ಕಂಚಿಯಲ್ಲಿ ಎರಡನೇ ವಿಕ್ರಮಾದಿತ್ಯನ ಶಾಸನ, ಕ್ರಿ.ಶ.೮ನೇ ಶತಮಾನದ್ದಾಗಿದ್ದು ಸಂಸ್ಕೃತ. ಕನ್ನಡ ಭಾಷೆಯಲ್ಲಿದೆ. ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ತುರಿಮಲ್ಲಾದಲ್ಲಿ ಒಂದನೇ ವಿಕ್ರಮಾದಿತ್ಯನ ಶಾಸನ ಕ್ರಿ.ಶ.೬೮೦ರ ಕಾಲಕ್ಕೆ ಸೇರಿದೆ ಇದು ತೆಲಗು ಭಾಷೆಯಲ್ಲಿದೆ. ಬಾಗಲಕೋಟೆ ಜಿಲ್ಲೆಯ ಮಹಾಕೂಟದಲ್ಲಿ ಮಂಗಳೇಶನ ಸ್ತಂಭ ಶಾಸನ ಕ್ರಿ.ಶ.೬೦೧ರದ್ದಾಗಿದ್ದು ಸಂಸ್ಕೃತ ಭಾಷೆಯಲ್ಲಿದೆ. ಮಹಾರಾಷ್ಟ್ರದ ಪೂನಾ ಜಿಲ್ಲೆಯ ಕೆಂದೂರುನಲ್ಲಿ ಎರಡನೇ ಕೀರ್ತಿವರ್ಮನ ತಾಮ್ರ ಶಾಸನ ಕ್ರಿ.ಶ.೭೫೦ರದ್ದಾಗಿದ್ದು ಸಂಸ್ಕೃತ/ಕನ್ನಡ ಭಾಷೆಯಲ್ಲಿದೆ. ಬಾಗಲಕೋಟೆ ಜಿಲ್ಲೆಯ ಐಹೊಳೆಯಲ್ಲಿ ಇಮ್ಮಡಿ ಪುಲಕೇಶಿಯ ಶಾಸನ ಕ್ರಿ.ಶ.೬೩೪ರದ್ದಾಗಿದ್ದು, ಸಂಸ್ಕೃತ/ಕನ್ನಡ ಭಾಷೆಯಲ್ಲಿದೆ. ಚಿಕ್ಕ ಮಂಗಳೂರು ಜಿಲ್ಲೆಯ ಸಕ್ಕರೆ ಪಟ್ಟಣದಲ್ಲಿ ಸಿಂಹ ವರ್ಮನ ತಾಮ್ರ ಶಾಸನ ಕ್ರಿ.ಶ.೪೭೭ ಕಾಲದ್ದಾಗಿದೆ. ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿದೆ. ಹಾವೇರಿ ಜಿಲ್ಲೆಯ ಚೌಡದಾನಾಪುರದಲ್ಲಿ ಕದಂಬರ ತಾಮ್ರ ಶಾಸನ ಕ್ರಿ.ಶ.೧೨೧೬೮ ಕಾಲದ್ದಾಗಿದ್ದು ಸಂಸ್ಕೃತ ಮತ್ತು ನಾಗರಿ ಲಿಪಿಯಲ್ಲಿದೆ. ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ಮೃಗೇಶವರ್ಮನ ಶಾಸನ ಕ್ರಿ.ಶ.೫ನೇ ಶತಮಾನದ್ದಾಗಿದ್ದು ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿದೆ. ಹಾಸನ ಜಿಲ್ಲೆಯ ಹಲ್ಮಿಡಿಯಲ್ಲಿ ಕಾಕುತ್ಸವರ್ಮನ ಶಾಸನ ಕ್ರಿ.ಶ.೪೫೦ರ ಕಾಲದಾಗಿದ್ದು, ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿದೆ. ಉತ್ತರ ಕನ್ನಡ ಜಿಲ್ಲೆಯ ಗುಡ್ನಾಪುರದಲ್ಲಿ ರವಿವರ್ಮನ ಶಾಸನ ಕ್ರಿ.ಶ.೫ನೇ ಶತಮಾನದಾಗಿದ್ದು ಇದು ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿದೆ. ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯಲ್ಲಿ ಮಯೂರ ವರ್ಮನ ಶಾಸನ, ಕ್ರಿ.ಶ.೪ನೇ ಶತಮಾನದಾಗಿದ್ದು ಇದರ ಭಾಷೆ ಸಂಸ್ಕೃತ ಮತ್ತು ಬ್ರಾಹ್ಮಿಯಲ್ಲಿದೆ. ಶಿವಮೊಗ್ಗ ಜಿಲ್ಲೆಯ ತಾಳಗುಂದದಲ್ಲಿ ಶಾಂತಿ ವರ್ಮನ ಶಾಸನ ಕ್ರಿ.ಶ.೫ನೇ ಶತಮಾನದ್ದಾಗಿದ್ದು ಸಂಸ್ಕೃತ ಭಾಷೆಯಲ್ಲಿದೆ. ಧಾರವಾಡ ಜಿಲ್ಲೆಯ ವಾಸನದಲ್ಲಿ ವಸಿಷ್ಠೆಮುತ್ರ ಸಿವಸಿರಿ ಪುಳುಮಾವಿ ಶಾಸನ ಕ್ರಿ.ಶ.೩ನೇ ಶತಮಾನದ್ದಾಗಿದ್ದು ಪ್ರಾಕೃತ ಮತ್ತು ಬ್ರಾಹ್ಮಿ ಭಾಷೆಯಲ್ಲಿದೆ. ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ವಿಷ್ಣುಕುಡ ಸಾತಕರ್ಣಿಯ ಶಾಸನ ಕ್ರಿ.ಶ.೨ನೇ ಶತಮಾನದ್ದಾಗಿದ್ದು ಪ್ರಾಕೃತ

ಮತ್ತು ಬ್ರಾಹ್ಮಿ ಭಾಷೆಯಲ್ಲಿದೆ. ಗುಲ್ಬರ್ಗಾ ಜಿಲ್ಲೆಯ ಸನ್ನತಿಯಲ್ಲಿ ಅಶೋಕನ ಬಂಡೆಗಲ್ಲು ಶಾಸನ ಕ್ರಿ.ಪೂ.೩ನೇ ಶತಮಾನದಾಗಿದ್ದು, ಪ್ರಾಕೃತ ಮತ್ತು ಬ್ರಾಹ್ಮಿ ಭಾಷೆಯಲ್ಲಿದೆ. ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿಯಲ್ಲಿ ಅಶೋಕನ ಬಂಡೆಗಲ್ಲು ಶಾಸನ ಕ್ರಿ.ಪೂ.೩ನೇ ಶತಮಾನದ್ದಾಗಿದ್ದು ಪ್ರಾಕೃತ ಬ್ರಾಹ್ಮಿ ಭಾಷೆಯಲ್ಲಿದೆ. ರಾಯಚೂರು ಜಿಲ್ಲೆಯ ಮಸ್ಕಿಯಲ್ಲಿ ಅಶೋಕನ ಬಂಡೆಗಲ್ಲು ಶಾಸನ ಕ್ರಿ.ಪೂ ೩ನೇ ಶತಮಾನದಾಗಿದ್ದು ಪ್ರಾಕೃತ ಮತ್ತು ಬ್ರಾಹ್ಮಿ ಭಾಷೆಯಿಂದ ಕೂಡಿದೆ. ಬಳ್ಳಾರಿ ಜಿಲ್ಲೆಯ ಉದೇಗೊಳಂನಲ್ಲಿ ಅಶೋಕನ ಬಂಡೆಗಲ್ಲು ಶಾಸನ ಕ್ರಿ.ಪೂ.೩ನೇ ಶತಮಾನದಾಗಿದ್ದು ಪ್ರಾಕೃತ ಮತ್ತು ಬ್ರಾಹ್ಮಿ ಭಾಷೆಯಲ್ಲಿದೆ. ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ಶಿವಸಿರಿ ಪುಳುಮಾವಿಯ ಶಾಸನ ಕ್ರಿ.ಶ.೨ನೇ ಶತಮಾನದ್ದಾಗಿದ್ದು, ಪ್ರಾಕೃತ ಮತ್ತು ಬ್ರಾಹ್ಮಿ ಭಾಷೆಯಿಂದ ಕೂಡಿದೆ. ಕನ್ನಡ ಮತ್ತು ತೆಲಗು ಲಿಪಿಗಳ ಉಗಮ ಮತ್ತು ವಿಕಾಸದ ನಕಾಶೆಯನ್ನು ಈ ಶಾಸನ ಅಂಕಣದಲ್ಲಿ ಕಾಣಬಹುದು. ಎಲ್ಲಾ ಶಾಸನಗಳ ಮಹತ್ವ ಮತ್ತು ಲಿಪಿ ಬೆಳವಣಿಗೆಯನ್ನು ತಿಳಿಯಲು ಸಂಶೋಧನಾ ವಿದ್ಯಾರ್ಥಿಗಳಿಗೆ ಇದು ಬಹಳ ಉಪಯುಕ್ತವಾದ ಅಂಕಣವೆನಿಸಿದೆ.

**ಜಾನಪದ ವಸ್ತುಸಂಗ್ರಹಾಲಯ:** ಕನ್ನಡ ವಿಶ್ವವಿದ್ಯಾಲಯದಲ್ಲಿ ಬರೇ ಪುರಾತತ್ವ ವಸ್ತುಸಂಗ್ರಹವಲ್ಲದೇ ಜಾನಪದ ವಸ್ತು ಸಂಗ್ರಹವೂ ಇದೆ. ಜ್ಞಾನದ ಎಲ್ಲಾ ಕ್ಷೇತ್ರಗಳನ್ನು ಪ್ರತಿನಿಧಿಸುವಂತೆ ಜಾನಪದ ಕ್ಷೇತ್ರದಲ್ಲಿ ಅಪೂರ್ವ ವಸ್ತುಗಳನ್ನೊಂಡ "ಜ್ಞಾನದ ಆಗರ ಇದು". ಒಂದು ಪ್ರದೇಶದ ಜನಾಂಗ ಅಥವಾ ವಿವಿಧ ಪ್ರದೇಶದ ವಿವಿಧ ಜನಾಂಗಗಳ ಚಾರಿತ್ರಿಕ ಮತ್ತು ಸಾಮಾಜಿಕ ಕಲಾತ್ಮಕ ಜೀವನ ಸಾಧನೆಗಳನ್ನು ತೋರುವ ಹೆಜ್ಜೆಯ ಗುರುತುಗಳಾಗಿ ನಿಲ್ಲುವ ಸ್ತಂಭಗಳೇ ಈ ವಸ್ತುಸಂಗ್ರಹಾಲಯಗಳು.[೯೬]

ಈ ವಸ್ತುಸಂಗ್ರಹಾಲಯಗಳ ಅಪೂರ್ವ ವಸ್ತುಗಳನ್ನು ಒಳಗೊಂಡಿರುವುದಲ್ಲದೇ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ವಸ್ತುಸಂಗ್ರಹಾಲಯಗಳು ಈಗ ಬೆಳೆಯುತ್ತಲಿವೆ. ವಸ್ತುಸಂಗ್ರಹಾಲಯಗಳು ಕೇವಲ ಕುತೂಹಲಕಾರಿ ವಸ್ತುಗಳನ್ನೊಳಗೊಳದೇ ವಸ್ತುಸಂಗ್ರಹಾಯಗಳು ಆಯಾ ಜ್ಞಾನ ಕ್ಷೇತ್ರಕ್ಕೆ ಸಂಬಂಧಿದಂತೆ ವಿಶಿಷ್ಠ ರೀತಿಯಲ್ಲಿ ರೂಪಗೊಳ್ಳುತ್ತವೆ. ಇವು ಸಾಮಾನ್ಯ ಜನರಿಗೆ ಆಕರ್ಷಿಸುವುದರ ಜೊತೆಗೆ, ಆಯಾ ಕ್ಷೇತ್ರದಲ್ಲಿ ಸಂಶೋಧನೆಗಳನ್ನು ಕೈಗೊಳ್ಳುವವರಿಗೆ, ವಿಧ್ಯಾರ್ಥಿಗಳಿಗೆ ಹೆಚ್ಚು ಸಹಾಯಕವಾಗುತ್ತವೆ: ಜಾನಪದ ವಸ್ತುಸಂಗ್ರಹಗಳು.[೯೭] ಒಂದು ಕಾಲದ ಒಂದು ಪ್ರದೇಶದ ಮಾನವನ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಬದುಕನ್ನು ರೂಪಿಸುತ್ತವೆ. ಇದು ಕೇವಲ ಸಾಧನ–ಸಲಕರಣೆಗಳಿಗೆ ವಸ್ತು ಒಡವೆಗಳಿಗೆ ಮಾತ್ರ ಸೀಮಿತವಾಗಿಲ್ಲ, ಎಲ್ಲಾ ಕ್ಷೇತ್ರಗಳಿಗೂ ಅದರ ವ್ಯಾಪ್ತಿ ವಿಸ್ತರಿಸಿವೆ. ಆಧುನೀಕರಣದೊಂದಿಗೆ ನಾಶವಾಗುತ್ತಿರುವ ಸೌಂದರ್ಯಾಂಶಗಳನ್ನು ಪ್ರಭಾವೀಕರಿಸುವ ಹಿನ್ನಲೆಯಲ್ಲಿ ಜಾನಪದ ವಸ್ತುಸಂಗ್ರಹಾಲಯಗಳು ಮಹತ್ವದ ಸ್ಥಾನ ಪಡೆದಿವೆ. ಇವು ಸ್ಥಳೀಯವಾಗಿ ದೊರೆತ ಪ್ರಾಚೀನ ವಸ್ತುಗಳ ವೈಭವವನ್ನು ಸಾರುವ ಸಾಮಗ್ರಿಗಳಾಗಿ ಶ್ರೀಸಾಮಾನ್ಯರಿಗೆ ಅಂದಿನ ಪರಂಪರೆಯನ್ನು ತಿಳಿಸುತ್ತದೆ. ಜಾನಪದ ವಸ್ತುಸಂಗ್ರಹಾಲಯಗಳ ಮುಖ್ಯಗುರಿ ಆಯಾ ಸಮುದಾಯದ ಬದುಕಿನ ಸ್ಪಷ್ಟ ಚಿತ್ರಣ ನೀಡುವುದು. ಐತಿಹಾಸಿಕ ಪ್ರಗತಿಯನ್ನು ಪರಿಕಲ್ಪಿಸಿಕೊಳ್ಳಲು ಈ ಸಾಮಗ್ರಿಗಳು ಸಹಕಾರಿಯಾಗಿವೆ. ಈ ಸಂಗ್ರಹಾಲಯಗಳು ಮಾನವ ಸಂಸ್ಕೃತಿಯ ವಿಕಾಸದ

ಕುತೂಹಲಕರ ಕಥೆಯನ್ನು ತಿಳಿ ಹೇಳುವ ಮಾಹಿತಿ ಕೋಶಗಳಂತೆ ಕಾರ್ಯನಿರ್ವಹಿಸುತ್ತವೆ. ಇವು ಕೇವಲ ಬರಿಯ ಪ್ರಾಚೀನ ವಸ್ತುಗಳ ಉಗ್ರಾಣವಾಗದೇ ಬದಲಾಗುತ್ತಿರುವ ವರ್ತಮಾನ ಬದುಕಿನ ವಿವರಗಳನ್ನು ದಾಖಲಿಸುವ ಕೇಂದ್ರಗಳಾಗಿವೆ. ವಸ್ತುಸಂಗ್ರಹಾಯಗಳು ಸಮುದಾಯದ ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸಿ ಸಾಂಸ್ಕೃತಿಕ ಬಹುತ್ವ ನಾಶಮಾಡಿ ಏಕತ್ವವನ್ನು ಪ್ರಮಾಣ ಭೂತ ವ್ಯವಸ್ಥೆಯನ್ನು ಹುಟ್ಟು ಹಾಕುವ ಸಾಧನವಾಗಿಯೂ ಕಾರ್ಯನಿರ್ವಹಿಸುತ್ತದೆ ಎಂದರೆ ಉತ್ಪ್ರೇಕ್ಷೆಯಾಗಲಿಕಿಲ್ಲ. ಪ್ರಾಚೀನ ಸಾಂಸ್ಕೃತಿಕ ಅವನತಿಯ ಸಂದಿಗ್ಧ ಕಾಲದಲ್ಲಿ ಮುಂದಿನ ತಲೆಮಾರಿಗೆ ಇವುಗಳ ಪರಿಚಯ ದೃಷ್ಟಿಯಿಂದ ಅವರ ಜ್ಞಾನ ವ್ಯಾಪ್ತಿ ಹೆಚ್ಚಿಸುವುದರ ಬಗ್ಗೆ ಇವು ಪ್ರೇರಣೆ ನೀಡುತ್ತವೆ. ಪ್ರಾಚೀನ ಮತ್ತು ಈಗಿನ ವಸ್ತುಗಳ ಬಳಕೆಯ ಪರಂಪರೆಯ ಮುದ್ರೆಯನ್ನು ಪಡೆದ ಬೃಹತ್ ಭಂಡಾರವೇ ಇದಾಗಿದೆ.

ಜಾನಪದ ವಸ್ತು ಸಂಗ್ರಹಾಲಯಗಳನ್ನು ಅಧ್ಯಯನ ದೃಷ್ಟಿಯಿಂದ ಬೇರೆ ಬೇರೆ ವಿಭಾಗಗಳನ್ನು ಜನ ಜೀವನದ ಹಿನ್ನಲೆಯಾಗಿ ಹಾಗೂ ವಿಶೇಷಗಳಿಗೆ ಅನುಗುಣವಾಗಿ ಮಾಡಲಾಗಿದೆ.[೧೮]

೧. ದಿನಬಳಕೆಯ ವಸ್ತುಗಳು
೨. ಯಕ್ಷಗಾನ ಬಯಲಾಟದ ವೇಷ-ಭೂಷಣಗಳು
೩. ವಿವಿಧ ಬೊಂಬೆಯಾಟದ ಬೊಂಬೆಗಳು
೪. ಲೋಹದ ಸಾಧನಗಳು
೫. ಪೂಜಾ ಸಾಮಗ್ರಿಗಳು
೬ ವಾದ್ಯ ವಿಶೇಷಗಳು
೭ ಜಾನಪದ ಚಿತ್ರಕಲೆ
೮. ಆಯುಧಗಳ ವೈವಿಧ್ಯತೆ
೯. ವ್ಯವಸಾಯದ ಸಾಧನಗಳು
೧೦. ಮಣ್ಣಿನ ಸಾಧನಗಳು
೧೧. ಹಣಿಗೆಯ ಸಾಧನಗಳು
೧೨. ವಿವಿಧ ವೃತ್ತಿಗೆ ಸಂಬಂಧಿಸಿದ ಸಾಧನ ಸಲಕರಣೆಗಳು
೧೩. ಉಡುಪುಗಳು
೧೪. ಆದಿವಾಸಿ ವಸ್ತುಗಳು
೧೫. ಗರಡಿ ಸಾಧನಗಳು
೧೬. ಕ್ರೀಡಾ ಸಾಧನಗಳು
೧೭. ಮಕ್ಕಳ ಸಾಧನಗಳು
೧೮. ಮರದ(ಕಾಷ್ಠ) ಸಾಧನಗಳು
೧೯. ರಥಗಳಲ್ಲಿ ವೈವಿಧ್ಯತೆ
೨೦. ಇತರ ಅಪೂರ್ವ ವಸ್ತುಗಳು.

ಈ ಎಲ್ಲಾ ಸಾಂಸ್ಕೃತಿಕ ಸಾಮಗ್ರಿಗಳ ಸಾಧನಗಳನ್ನು ಇಲ್ಲಿನ ಜಾನಪದ ಅಂಕಣದಲ್ಲಿ ಪ್ರದರ್ಶನಕ್ಕೆ ಇಡಲಾಗಿದೆ.

ತೀರ್ಥಯಾತ್ರೆಯ ತೀರ್ಥಪಾತ್ರೆ, ರೈಲು ಚೊಂಬು, ಅಗಲವಾದ ಚಿಕ್ಕ ಕುಡಿಕೆ, ಕಲಸ, ಗಿಂಡಿ, ಹಾಲಿನ ಪಾತ್ರೆ, ಚೆಂಬಿನ ಸುತ್ತಲೂ ಅಲಂಕೃತ ಕೆತ್ತನೆ ಇರುವುದು ವಿಶೇಷತೆ. ತಾಮ್ರದ ಲೋಹದಿಂದ ತಯಾರಿಸಿದ ಭೂತದ ಮುಖವಾಡಗಳು, ಸಪ್ತ ಸರ್ಪಗಳಿಂದ ಅಲಂಕಾರವಾದ ಕಿರೀಟ, ಧರಿತ ರೌದ್ರ ರೂಪದ ಕೆತ್ತನೆ ನೋಡುಗರಿಗೆ ಭೂತ ಪರಿಕಲ್ಪನೆಯ ರೂಪವನ್ನು ಪ್ರದರ್ಶನಕ್ಕೆ ಇಡಲಾಗಿದೆ. ಆಗಿನ ಕಾಲದ ಜನರಲ್ಲಿ ಭೂತದ ಬಗ್ಗೆ ಇದ್ದ ಪರಿಕಲ್ಪನೆಯನ್ನು ಶಿಲ್ಪದ ಮೂಲಕ ಸೆರೆಹಿಡಿಯಲಾಗಿದೆ.

ವೀರ: ಕುದುರೆಯ ಸವಾರನಾಗಿದ್ದು, ಆಗಿನ ಕಾಲದ ವೀರನ ಅಲಂಕಾರವನ್ನು ಈ ಶಿಲ್ಪದಲ್ಲಿ ಕೆತ್ತಲಾಗಿದೆ. ವೀರನು ಕಡಗ, ಕತ್ತಿ, ಗುರಾಣಿ ಮತ್ತು ವೀರಾಗಾಸೆ ತೊಟ್ಟು ಆಯುಧಗಳನ್ನು ಹಿಡಿದಿರುವುದನ್ನು ತೋರಿಸಲಾಗಿದೆ.

**ಹೆಣ್ಣು ಭೂತ ಮೂರ್ತಿ:** ಭಯಾನಕ ಅಲಂಕೃತ ಕಿರೀಟ, ಹಣೆಯಲ್ಲಿ ಅಗಲವಾದ ಕುಂಕುಮ, ಕೋರೆಹಲ್ಲು, ಕಿವಿಗೆ ಓಲೆ, ಉಬ್ಬಿನ ಎದೆ, ಕೊರಳಲ್ಲಿ ಮಣಿಸರ, ಸೊಂಟಪಟ್ಟಿ ಎಡಗೈಯಲ್ಲಿ ಬಟ್ಟಲು, ಬಲಗೈಯಲ್ಲಿನ ಆಯುಧ ಸ್ಪಷ್ಟವಾಗಿಲ್ಲ. ಅಲಂಕೃತವಾದ ಸೀರೆಯ ಕೆತ್ತನೆ ಕಾಲಲ್ಲಿ ಕಡಗ ಈ ರೀತಿಯಾಗಿ ಶಿಲ್ಪ ಕಲಾತ್ಮಕವಾಗಿದೆ.

**ವೀರ ಪುರುಷ ಶಿಲ್ಪ:** ಈ ಶಿಲ್ಪ ಕಿರೀಟ ಧರಿಸಿದ್ದು ಅಗಲವಾದಮೂಗು, ಕೊರಳಿನಹಾರ, ಎರಡೂ ಕೈಗಳಲ್ಲಿ ಕಿರುಗತ್ತಿಗಳು ಸ್ಥಾನಿಕ ಭಂಗಿಯಲ್ಲಿ ಆಸೀನನಾಗಿದ್ದಾನೆ.

**ವರಹ:** ವಿಷ್ಣುವು ದಶಾವತಾರಗಳಲ್ಲಿ ಒಂದಾದ ಈ ಶಿಲ್ಪ ಸ್ಥಾನಿಕ ಭಂಗಿಯಲ್ಲಿದ್ದು, ಕೊರಳಲ್ಲಿನ ಹಾರಗಳು ಅಲಂಕೃತ ಕೆತ್ತನೆಯಿಂದ ಕೂಡಿದ್ದು ಈ ಶಿಲ್ಪ ಹದಿನಾಲ್ಕು-ಹದಿನೈದನೇ ಶತಮಾನಕ್ಕೆ ಸೇರಿದೆ.

**ಬೆಣ್ಣೆಕೃಷ್ಣ:** ಕರಂಡ ಮುಕುಟ, ಕಿವಿಯಲ್ಲಿ ವರ್ತುಲಾಕಾರದ ಓಲೆ, ಹರಡಿದ ಕೂದಲು, ಕೊರಳಲ್ಲಿ ಎರಡು ಮಾದರಿಯ ಕಂಠೀಹಾರಗಳು, ಪದಕ, ಹಾರ, ತೋಳುಬಂಧಿ, ಕೈಗಳಲ್ಲಿ ಕಡಗ, ಅಂಬೆಗಾಲು ಹಾಕುವ ಶೈಲಿ ಕಾಲಲ್ಲಿ ಗೆಜ್ಜೆ ಕಡಗ, ಬಲಗೈ ಮೇಲಕ್ಕೆ ಎತ್ತಿ, ಬೆಣ್ಣೆ ಬಟ್ಟಲು ಹಿಡಿದಿದ್ದಾನೆ, ಎಡಗೈಯನ್ನು ನೆಲಕ್ಕೆ ಊರಿದ್ದಾನೆ.

**ದೇವಿ:** ಕರಂಡ ಮಕುಟ, ದ್ವಿಬಾಹು ಬಲಗೈಯಲ್ಲಿ ಕತ್ತಿ ಎಡಗೈಯಲ್ಲಿ ಕುಂಕುಮ ಬಟ್ಟಲು, ಕೊರಳಲ್ಲಿ ಸರ, ಉಬ್ಬಿದ ಎದೆ, ಸೊಂಟಪಟ್ಟಿ, ಸೀರೆಯ ನೆರಿಗೆಯ ಕೆತ್ತನೆ ಕಲಾತ್ಮಕವಾಗಿದೆ. ದೇವಿ ಸ್ಥಾನಿಕ ಭಂಗಿಯಲ್ಲಿದ್ದಾಳೆ.

**ದುರ್ಗಾದೇವಿ:** ಮುಕುಟ, ಕಿರೀಟ, ಚತುರ್ಭುಜ, ಬಲಗೈಯಲ್ಲಿ ಶಂಖ, ಪಾಶ, ಎಡಗೈಯಲ್ಲಿ ಎಲೆ, ಮತ್ತೊಂದು ಆಯುಧ ಸ್ಪಷ್ಟವಾಗಿಲ್ಲ. ಬಲಗಾಲನ್ನು ನೆಲಕ್ಕೆ ಊರಿ, ಎಡಗಾಲನ್ನು ಮಡಚಿ ಕುಳಿತಿದ್ದಾಳೆ. ಸೀರೆಯ ನೆರಿಗೆ ಕಲಾತ್ಮಕತೆಯಿಂದ ಕೂಡಿದೆ.

**ಹಣದ ಕರಡಿಗೆ:** ಮೇಲ್ಭಾಗದಲ್ಲಿ ಪುಷ್ಪದ ಅಲಂಕೃತವಾದ ಕೆತ್ತನೆ ಸೂಕ್ಷ್ಮತೆಯಿಂದ ಕೂಡಿದ್ದು ತಳದ ವಿನ್ಯಾಸ ಅಗಲವಾಗಿದೆ.

**ದೀಪದ ಮಲ್ಲಿ:** ಕಮಲದ ಹೂವಿನ ವಿನ್ಯಾಸದ ಕಿರೀಟಧಾರಿ, ಹಣೆಯ ಮೇಲೆ ನಾಮದ ಚಿಹ್ನೆ, ಅಗಲವಾದ ಪದಕಹಾರ, ಕೈಗಳಿಗೆ ತೋಳುಬಂಧಿ, ಬಳೆ, ಉಬ್ಬಿದ ಎದೆ, ಎರಡೂ ಕೈಗಳಿಂದ ದೀಪದ ಪ್ರಣತಿ ಹಿಡಿದಿದ್ದಾಳೆ. ನೆರಿಗೆಯ ಕೆತ್ತನೆ, ಕಾಲಲ್ಲಿ ಕಡಗ, ಧರಿಸಿ ಸ್ಥಾನಿಕ ಭಂಗಿಯಲ್ಲಿದ್ದಾಳೆ.

**ಆಭರಣದ ಕರಡಿಗೆ:** ಚೌಕಾಕಾರವಾಗಿದ್ದು, ಮೇಲ್ಭಾಗದಲ್ಲಿ ರೇಖಾಚಿತ್ರ ವಿನ್ಯಾಸ ತುಂಬಾ ಅಲಂಕೃತವಾಗಿದೆ.

**ದೊಡ್ಡ ಗಾತ್ರದ ಹುಂಡಿ:** ಈ ಹುಂಡಿಯನ್ನು ತೆರೆಯಲು ಮುಚ್ಚಲು ಮುಚ್ಚುಳ ಇದ್ದರೂ ಒಂದು ಕಡೆ ಬೀಗಹಾಕಲು ಮಾಡಲಾಗಿದೆ. ಈ ಎಲ್ಲಾ ಹುಂಡಿ, ಕರಡಿಗೆಗಳು ಹಣ ಆಭರಣಗಳನ್ನು ಹಾಕಿ ಹಿಡಲು ಉಪಯೋಗಿಸುವ ಸಾಧನಗಳಾಗಿದ್ದವೆಂದು ತಿಳಿದುಬರುತ್ತವೆ.

**ಜಾಗಟೆ:** ಇದೊಂದು ಧಾರ್ಮಿಕ ಚಟುವಟಿಕೆಗಳ ಸಾಧನಗಳಲ್ಲಿ ಒಂದು. ದೇವರನ್ನು ಆರಾಧಿಸುವಲ್ಲಿ ಬಳಸುತ್ತಾರೆ.

**ತಾಮ್ರದ ಕಲಸ:** ಇದು ಐದು ಹಂತದ ಕಳಸವಾಗಿದ್ದು, ಮೇಲ್ಭಾಗದಲ್ಲಿ ತ್ರಿಭುಜ ಮಾದರಿಯ ಶಿಖರವಿದೆ.

**ಭೂತದ ಮುಖವಾಡ:** ಇದು ತಾಮ್ರದ್ದಾಗಿದ್ದು, ಕರಂಡ ಮುಕುಟ, ಹಣೆಯಲ್ಲಿ ಕುಂಕುಮ, ಉದ್ದವಾದ ಮೂಗು, ಕೊರಳಲ್ಲಿ ದುಂಡಾಕಾರದ ಮೂರು ಪದಕಗಳ ಸರ, ಈ ಶಿಲ್ಪಕ್ಕೆ ಧರಿಸಲಾಗಿದೆ.

**ರಥಾರತಿ:** ರಥದ ಮಾದರಿಯಲ್ಲಿ ದೇವರಿಗೆ ಪೂಜೆ ಮಾಡುವಲ್ಲಿ ಆರುತಿ ಬೆಳಗುವ ಸಾಧನ. ಏಕಾರತಿ, ಪಂಚಾರತಿ, ಸಪ್ತರತಿ, ಹನ್ನೊಂದು ಹಂತ ಮತ್ತು ಹದಿನೈದು ಹಂತದ ಆರತಿ, ಮಾಡುವ ಸಾಧನಗಳು. ಇವು ತಾಮ್ರಲೋಹದಿಂದ ಕೂಡಿದ್ದು ದೇವರಿಗೆ ವಿಶೇಷ ಪೂಜೆ ಮಾಡುವಲ್ಲಿ ಈ ಸಾಧನಗಳು ಪ್ರಯೋಜನಕಾರಿಯಾಗಿವೆ.

ಜಾನಪದ ಅಳತೆ ಸಾಧನೆಗಳಾದ ಪಾವು, ಸೇರು, ಚಟಾಕು, ಇವುಗಳನ್ನು ಪ್ರದರ್ಶನಕ್ಕೆ ಇಡಲಾಗಿದೆ. ಕಾಲದೀಪ, ನಿಲುದೀಪ, ಬೃಹತಾಕಾರದ ಪೂಜಾ ಗಂಟೆ, ಚಿಕ್ಕ ನಿಲುಗಂಟೆ, ಇವು ಆಗಿನ ಧಾರ್ಮಿಕ ಸಂಸ್ಕೃತಿಯನ್ನು ಪ್ರತಿನಿಧಿಸಿತ್ತವೆ. ಇಲ್ಲಿ ಇದ್ದ ಸಾಮಾಗ್ರಿಗಳು ತಾಮ್ರ ಲೋಹವಾಗಿದ್ದು ಬಾಕು, ಕಡಸಾಲೆ, ಅಂಡೆಬೀಗ, ಸರಪಣಿ ಇನ್ನೂ ಮೊದಲಾದ ಸಾಮಗ್ರಿಗಳನ್ನು ಸಂಗ್ರಹಿಸಿ ಪ್ರದರ್ಶನಕ್ಕೆ ಇಡಲಾಗಿದೆ. ಮರದ ಮಾಧ್ಯಮ ಸಾಧನಗಳು ಮೂರ್ತಿ ಶಿಲ್ಪಗಳಿಗೆ ಸಂಬಂಧಿಸಿದಂತೆ ಇಲ್ಲಿನ ಕಾಷ್ಠ ಮಾಧ್ಯಮದಿಂದ ತಯಾರಿಸಿದ ಶಿಲ್ಪಗಳು ಜಾನಪದ ದೃಷ್ಠಿಯಿಂದ ರಚಿಸಿದ್ದಾಗಿದೆ. ಧಾರ್ಮಿಕ ದೇವತೆಗಳಾದ ದುರುಗಮ್ಮ, ಭೈರವಿ, ಚೌಡಮ್ಮ, ದ್ಯಾವಮ್ಮ ಈ ದೇವತೆಗಳ ಆಭರಣಗಳನ್ನು ಅಲಂಕೃತವಾಗಿ ಕೆತ್ತಲಾಗಿದೆ. ಈ ದೇವತೆಗಳ ಕಿವಿಯಲ್ಲಿ ವರ್ತುಲಾಕಾರದ ಓಲೆ, ಬುಗಡೆ ಅಗಲವಾದ ಕಣ್ಣು, ಭಯಾನಕದ ರೂಪ, ಕೊರಳಲ್ಲಿ ಎರಡು–ಮೂರು ಮಾದರಿಯ ಮಣಿ ಸರಗಳು, ಸೂಕ್ಷ್ಮ ಕರಕುಶಲತೆಯ ಕಸುಬು, ವಿವಿಧ ಬಣ್ಣಗಳಿಂದ ಅಲಂಕೃತ ನೆರಿಗೆಯುಳ್ಳ ಸೀರೆ, ಸೊಂಟ ಪಟ್ಟಿ, ಪಾದಗಳಲ್ಲಿ ಪಾದಸರ, ಕಡಗ ಧರಿಸಿದ ಕೆತ್ತನೆ ತುಂಬಾ ಅಲಂಕೃತವಾಗಿದೆ. ಈ ಮೂರ್ತಿಶಿಲ್ಪಗಳು ದೇವತೆಗಳು ಅಂದರೆ ಜಾನಪದ ದೇವತೆಗಳ ವೇಷ ಭೂಷಣ ಜನಪದರೊಂದಿಗೆ ಯಾವ ರೀತಿ ಬೆರತುಕೊಂಡಿದೆ ಎಂಬುದನ್ನು ಈ ಮೇಲಿನ ಮೂರ್ತಿಶಿಲ್ಪಗಳ ವೇಷಭೂಷಣಗಳಿಂದ ಅರಿತುಕೊಳ್ಳಲು ಸಾಧ್ಯವಾಗುತ್ತದೆ.

**ಉಳಿದ ಸಾಮಗ್ರಿಗಳು:** ಉಪ್ಪಿನ ಸಣ್ಣಮರಿಗೆ, ಚೆನ್ನಮಣಿ(ಕ್ರೀಡಾ ಸಾಧನ) ಸ್ತ್ರೀ–ಮಗುವಿನ ವಾತ್ಸಲ್ಯದ ಕಾಷ್ಠಶಿಲ್ಪಗಳನ್ನು ಪ್ರದರ್ಶನದಲ್ಲಿ ಕಾಣಬಹುದು.

**ಊರಮ್ಮ ದೇವಿ:** ಸಪ್ತ ಸರ್ಪಗಳಿಂದ ಅವೃತವಾದ ಕಿರೀಟ, ಕಿವಿಯಲ್ಲಿ ಜುಮಕಿ, ಬುಗುಡೆ ಧರಿಸಿದ್ದಾಳೆ. ಕೊರಳಲ್ಲಿ ಎರಡು ಮೂರು ಮಾದರಿಯ ಆಭರಣಗಳನ್ನು ಧರಿಸಿದ್ದಾಳೆ. ದಶ ಭುಜವುಳ್ಳ

ಬಲಗೈಯಲ್ಲಿ ಪರಶು, ಖಡ್ಗ, ಎಡಗೈಯಲ್ಲಿ ಡಮರು, ಡಮರು, ಈಟಿ, ತ್ರಿಶೂಲ, ಕುಂಕುಮ ಬಟ್ಟಲು, ಸಿಂಹದ ಮೇಲೆ ಆಸೀನಳಾಗಿದ್ದಾಳೆ. ತೋಳುಬಂಧಿ, ಬಳೆಗಳನ್ನು ಧರಿಸಿದ್ದಾಳೆ.

ವೈವಿಧ್ಯ ಬಣ್ಣದ ಕುಪ್ಪಸವನ್ನು ಧರಸಿದ್ದಾಳೆ. ಕಾಲಲ್ಲಿ ಕಡಗ, ಗೆಜ್ಜೆ, ಪಾದ ಸರವನ್ನು ಧರಿಸಿದ್ದಾಳೆ. ಹಸಿರು ಹಳದಿ, ಬಣ್ಣದ ವೈವಿಧ್ಯಮಯವಾದ ಸೀರೆಯ ನೆರಿಗೆಯು ಕಲಾತ್ಮಕತೆಯಿಂದ ಕೂಡಿದೆ.

**ಸಣ್ಣ ಊರಮ್ಮ:** ಏಕ ಸರ್ಪದ ಕಿರೀಟಧಾರಣಿ, ಕಿವಿಗೆ ಜಮುಕಿ, ಬುಗುಡೆ, ಕೊರಳಲ್ಲಿ ಪದಕಸರ ಉದ್ದವಾದ ಮಣಿಸರ ಧರಿಸಿದ್ದಾಳೆ. ಅಷ್ಟಭುಜವುಳ್ಳವಳಾಗಿದ್ದು ತೋಳುಬಂಧಿ, ಭುಜಬಂಧಿ, ಧರಿಸಿದ್ದಾಳೆ, ಬಲಗೈಯಲ್ಲಿ ಎಲೆಯಾಕಾರದ ಆಯುಧ, ಮತ್ತೊಂದು ಕೈ ತ್ರಿಶೂಲ ಖಡ್ಗ ಎಡಗೈಯಲ್ಲಿ ಈಟಿ, ಕತ್ತಿ, ಕುಂಕುಮ ಬಟ್ಟಲು, ಹುಲಿವಾಹನದ ಮೇಲೆ ಆಸೀನಳಾಗಿದ್ದಾಳೆ. ಕೈಗಳಲ್ಲಿ ಬಳೆಗಳಿವೆ. ಕಾಲಲ್ಲಿ ಕಡಗ, ಗೆಜ್ಜೆ ಧರಿಸಿದ್ದಾಳೆ.

**ದ್ಯಾವಮ್ಮ:** ಮುಕುಟ ಕಿರೀಟದ ಮುಂಭಾಗದಲ್ಲಿ ಲಿಂಗಶಿಲ್ಪ, ಕಿವಿಯಲ್ಲಿ ಜಿಮುಕಿ, ಬುಗಡೆ, ನೀಳವಾದ ಚದುರಿದ ಕೂದಲು, ಕೊರಳಲ್ಲಿ ಪದಕಸರ, ಮಣಿಸರ, ಕೈಯಲ್ಲಿ ತೋಳುಬಂಧಿ, ಬಳೆ, ಚತುರ್ಭುಜ ಬಲಗೈಯಲ್ಲಿ ತ್ರಿಶೂಲ, ಮತ್ತೊಂದು ಆಯುಧ ಶಿಥಿಲವಾಗಿದೆ. ಎಡಗೈಯಲ್ಲಿ ಶಂಖ, ಕುಂಕುಮ ಬಟ್ಟಲು, ಹಸಿರು ಕುಪ್ಪಸ, ಕೆಂಪು ಸೀರೆಯ ವಿನ್ಯಾಸವಿದ್ದು ಆಸೀನ ಭಂಗಿಯಲ್ಲಿದ್ದಾಳೆ.

**ನಂದಿ:** ನಂದಿಯ ಬೆನ್ನ ಮೇಲೆ ಅಲಂಕೃತ ವಸ್ತ್ರದ ಕೆತ್ತನೆ. ಎರಡು ವೈವಿಧ್ಯಮಯ ಮಾದರಿಯ ಗಂಟೆ, ಸರಪಣಿ, ಸರಗಳು, ಮುಖದ ಮೇಲ್ಭಾಗ(ಹಣೆಗೆ) ಹಣೆಪಟ್ಟಿ, ಮೂಗುದಾಣ, ಕಾಲಿಗೆ ಕಡಗ ಇವುಗಳ ಕೆತ್ತನೆ ತುಂಬಾ ಕಲಾತ್ಮಕತೆಯಿಂದ ಕೂಡಿದೆ.

**ಜೋಗಿ ಪುರುಷ:** ತಲೆಗೆ ಪೇಟ, ಹಣೆಗೆ ವಿಭೂತಿ, ಭಯಾನಕ ಮುಖ, ತೆರೆದ ಬಾಯಿ, ಕೋರೆಹಲ್ಲು, ಉದ್ದವಾದ ಮೀಸೆ, ಕಿವಿಗೆ ಅಗಲವಾದ ಓಲೆ, ಕೊರಳಲ್ಲಿ ಪದಕಸರ, ಮಣಿಸರ, ಲಿಂಗಧಾರಣೆ ಮೈಗೆಲ್ಲಾ ವಿಭೂತಿ ಹಚ್ಚಿ, ಸೊಂಟಕ್ಕೆ ವೀರಗಾಸೆ, ಧರಿಸಿ, ಕೈಗೆ ತೋಳು ಬಂಧಿ, ಕಡಗ ಧರಿಸಿ ಬಲಗೈಯಲ್ಲಿ ಕತ್ತಿ ಎಡಗೈಯಲ್ಲಿ ಬಟ್ಟಲು, ಕಾಲಲ್ಲಿ ಗೆಜ್ಜೆ ಕಟ್ಟಿ, ಕಡಗ ಧರಿಸಿದ್ದಾನೆ. ಇವು ಈ ಶಿಲ್ಪದ ವೈಶಿಷ್ಟತೆಯಾಗಿದೆ.

**ಋಷಿ:** ತಲೆಯ ಮೇಲ್ಭಾಗದಲ್ಲಿ ತುರುಬಿನಾಕಾರದಲ್ಲಿ ಮುಡಿ ಕಟ್ಟಲಾಗಿದೆ. ಹಣೆಗೆ ತಿಲಕ, ಕಿವಿಯಲ್ಲಿ ವರ್ತುಲಾಕಾರದ ಓಲೆ, ಮೀಸೆ, ಮತ್ತು ಗಡ್ಡದ ಕೆತ್ತನೆ ತುಂಬಾ ಕಲಾತ್ಮಕತೆಯನ್ನು ಶಿಲ್ಪದ ಒಳಗೆ ತೋರಿಸುವುದು ವಿಶೇಷತೆ. ಕೊರಳಲ್ಲಿ ರುದ್ರಾಕ್ಷಿಸರ, ಪದಕಸರ, ಜನಿವಾರ ಧರಿಸಿದ್ದಾನೆ. ಎಡಗೈಯಲ್ಲಿನ ಆಯುಧ ಶಿಥಿಲವಾಗಿದೆ. ಧೋತ್ರ ಧರಿಸಿ ಬಲಗಾಲನ್ನು ನೆಲಕ್ಕೆ ಊರಿ ಎಡಗಾಲನ್ನು ಮಡಚಿ ಬಲಗಾಲಿನ ಮೇಲೆ ಹಾಕಿಕೊಂಡು ಕುಳಿತಿದ್ದಾನೆ. ಇಲ್ಲಿರುವ ಮತ್ತೊಂದು ಋಷಿಯ ಶಿಲ್ಪವೂ ಈ ಶಿಲ್ಪವನ್ನು ಹೋಲುತ್ತದೆ.

**ಹುಲಿವಾಹನ ಶಿಲ್ಪ:** ಕಾಷ್ಠ ಮಾಧ್ಯಮದ ಪ್ರಾಣಿ ಶಿಲ್ಪ. ಹಳದಿ, ಕೆಂಪು, ಬಿಳಿ-ಕಪ್ಪು ಬಣ್ಣದಿಂದ ಆವೃತ್ತವಾಗಿದೆ. ತೆರೆದ ಬಾಯಿ, ಕೋರೆಹಲ್ಲು, ಎತ್ತಿದಬಾಲ, ಸ್ಥಾನಿಕಭಂಗಿಯಲ್ಲಿನ ಕೆತ್ತನೆ ತುಂಬಾ ಮನೋಹರವಾಗಿದೆ.

## ದಿನಬಳಕೆ ವಸ್ತುಗಳು

**ಮುರಾಯಿ:** ಇದು ಅಡುಗೆ ಮಾಡಿಡುವಾಗ ಹಿಟ್ಟನ್ನು ಕಲಿಸಲು ಉಪಯೋಗಿಸುವ ಸಾಧನ. ಕಾಷ್ಠ ಮಾಧ್ಯಮದಿಂದ ಮಾಡಿದ, ಪೆಟ್ಟಿಗೆ ಕುಡುಗೋಲು, ವೈವಿಧ್ಯಮಯ ಸಟ್ಟುಗಗಳನ್ನು ಈ ವಸ್ತು ಸಂಗ್ರಹಾಲಯದಲ್ಲಿ ಪ್ರದರ್ಶನಕ್ಕೆ ಇಡಲಾಗಿದೆ.

**ಯಕ್ಷಗಾನದ ವೇಷ-ಭೂಷಣ:** ಅಗಲವಾದ ಅಲಂಕೃತ ಕಿರೀಟ, ಭಯಾನಕ ಹುಬ್ಬು, ಮೂರು ನಾಮ ಚಿಹ್ನೆ, ಕೆಂಪೇರಿದ ಕಣ್ಣು, ದಟ್ಟವಾದ ಮೀಸೆ, ವಿವಿಧ ಬಣ್ಣಗಳ ಜೋಡಣೆಯ ವಸ್ತ್ರ ವಿನ್ಯಾಸ, ಬಲಗೈಯಲ್ಲಿ ಬಾಣ, ಎಡಗೈಯಲ್ಲಿ ಬಿಲ್ಲು ಕೈ ಮತ್ತು ಕಾಲುಗಳಿಗೆ ಅಲಂಕೃತವಾದ ಹಳದಿ ಮಿಶ್ರಿತ ಬಣ್ಣದ ಆಭರಣಗಳು, ಇವೆಲ್ಲವನ್ನು ಪ್ರದರ್ಶಿಸುವುದರಿಂದ ಯಕ್ಷಗಾನದ ಬಗ್ಗೆ ಜಾನಪದದ ಬಗ್ಗೆ ಸಂಶೋಧಕರಲ್ಲಿ ಮತ್ತು ಜನಪದರಲ್ಲಿ ಆಸಕ್ತಿಹುಟ್ಟಿಸಿ ಅದರ ಬಗ್ಗೆ ತಿಳಿಯಲು ಸಹಕಾರಿಯಾಗಿವೆ.

**ಗಾರೆ ಶಿಲ್ಪಗಳು:** ರಾಮ-ಲಕ್ಷ್ಮಣ-ಸೀತೆಯರ ಅಲಂಕೃತ ಶಿಲ್ಪಗಳಿವೆ. ರಾಮ ಅಗಲವಾದ ನೀಳುವಿನ ಓಲೆ ಹೂವಿನ ಹಾರ, ಎರಡು ಪದಕಸರ, ಶಂಖು ಆಕಾರದ ತೋಳುಬಂಧಿ, ಕಡಗ ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಆಶೀರ್ವಾದ ಹಸ್ತ. ಈ ರೀತಿ ಸ್ಥಾನಿಕ ಭಂಗಿಯಲ್ಲಿದ್ದಾನೆ. ಲಕ್ಷ್ಮಣ ಮಕುಟ ಕಿರೀಟ, ಹಣೆಯಲ್ಲಿ ನಾಮ, ಕಿವಿಯಲ್ಲಿ ಕುಂಡಲ, ಕೊರಳಲ್ಲಿ ಪದಕಸರ, ತೋಳು ಬಂಧಿ ಬೆನ್ನಿಗೆ ಬತ್ತಳಿಕೆ, ಕೈಗೆ ಕಡಗ ಜನಿವಾರಧರಿಸಿ ಬಲಗೈ ಬಾಣ ಎಡಗೈ ಬಿಲ್ಲು ಹಿಡಿದು ಪಂಚೆ ಧರಿಸಿ ಸ್ಥಾನಿಕ ಭಂಗಿಯಲ್ಲಿದ್ದಾನೆ. ಸೀತೆ ಅಗಲವಾದ ಓಲೆ, ತೋಳುಬಂಧಿ, ಬಳೆ ಎಡಗೈಯಲ್ಲಿ ಪುಷ್ಪಗುಚ್ಛೆ, ಬಲಗೈ ಅಭಯ ಮುದ್ರೆಯಲ್ಲಿದ್ದು ಸ್ಥಾನಿಕ ಭಂಗಿಯಲ್ಲಿದ್ದಾಳೆ. ಚೌಡಮ್ಮ ಶಿಲ್ಪ ಸರ್ಪ ಕಿರೀಟ ಧಾರಿಣಿ, ಕಿವಿಗೆ ಸರ್ಪಓಲೆ, ಹಣೆಗೆ ವಿಭೂತಿ, ಮತ್ತು ಕುಂಕುಮ ಉಗ್ರರೂಪ, ಬಾಯಿ ತೆರೆದು ಚಾಚಿದ ನಾಲಗೆ, ಕೋರೆಹಲ್ಲು, ಕೊರಳಲ್ಲಿ ಮಣಿಸರ ಪದಕಸರ ಧರಿಸಿದ್ದಾಳೆ. ದ್ವಾರ ಪಾಲಕರ ನಾಲ್ಕು ಶಿಲ್ಪಗಳು ಒಂದೇ ತೆರನಾಗಿವೆ. ಕರಂಡ ಮಕುಟ, ಕಿವಿಗೆ ಓಲೆ, ಚತುರ್ಭುಜ, ತ್ರಿನಾಮ, ಬಲಗೈಯಲ್ಲಿ ಚಕ್ರ, ಎಡಗೈ ಶಂಖ, ಉಳಿದ ಎರಡು ಕೈಗಳಿಂದ ಗದೆ ಹಿಡಿದು, ಕೈಗಳಿಗೆ ತೋಳುಬಂಧಿ, ಕಡಗ ಧರಿಸಿದ್ದು ಪಾದದಲ್ಲಿ ಪಾದ ಸರ ಧರಿಸಿದ್ದು ಶಲ್ಯ ಧರಿಸಿದೆ. ವೈಷ್ಣವ ದ್ವಾರ ಪಾಲಕರ ಶಿಲ್ಪಗಳು ಇವು. ಗಂಗೆ-ಗೌರಿ ಶಿಲ್ಪ ಅಲಂಕೃತ ಸ್ತ್ರೀ-ಮಗುವನ್ನು ಸ್ತ್ರೀ ಎಡಗಡೆ ಸೊಂಟಕ್ಕೆ ಎತ್ತಿ ಕೊಂಡಿರುವ ದೃಶ್ಯ(ಶಿಲ್ಪ) ಜನಪದರಲ್ಲಿ ತಾಯಿ ವಾತ್ಸಲ್ಯದ ಬಗ್ಗೆ ಇರುವ ಸಂಬಂಧವನ್ನು ಈ ಶಿಲ್ಪದಲ್ಲಿ ಶಿಲ್ಪಿ ಸೆರೆಹಿಡಿದಿದ್ದಾರೆ.

**ಸರಸ್ವತಿ:** ಕರಂಡ ಮಕುಟ, ಚತುರ್ಭುಜ, ಕೈಗಳಿಗೆ ಬಳೆ, ತೋಳುಬಂಧಿ, ಎರಡು ಕೈಗಳಿಂದ ವೀಣೆಹಿಡಿದಿದ್ದು ಬಲಗೈಯಲ್ಲಿ ಪುಸ್ತಕ ಹಿಡಿದಿದ್ದಾಳೆ. ಕಿವಿಗಳಿಗೆ ಮೂಗುತಿ, ಕೊರಳಲ್ಲಿ ಪದಕಸರ, ಕಾಲಲ್ಲಿ ಕಡಗ, ಗೆಜ್ಜೆ ಧರಿಸಿ ಬಲಗಾಲನ್ನು ಎಡಗಾಲಿನ ಮೇಲೆ ಹಾಕಿ ಪೀಠದ ಮೇಲೆ ಕುಳಿತಿದ್ದಾಳೆ.

**ಸಿಂಹ:** ಭಯಾನಕ ನೇತ್ರ, ತೆರೆದನಾಲಿಗೆ, ಕೋರೆಹಲ್ಲು, ಕುತ್ತಿಗೆ ಸುತ್ತ ಕೂದಲು, ಅಗಲವಾದ ಮೂಗು ಇದು ಶಿಲ್ಪದ ವೈಶಿಷ್ಟ್ಯತೆಯಾಗಿದೆ. ಭಿತ್ತಿ ಚಿತ್ರಗಳು, ವೈವಿಧ್ಯಮ ರೀತಿಯಲ್ಲಿ ಚಿತ್ರಿತವಾಗಿದ್ದು, ಪ್ರದರ್ಶನಕ್ಕೆ ಇಡಲಾಗಿದೆ. ಅಲಂಕೃತ ಕೆತ್ತನೆಯ ತೊಟ್ಟಿಲು, ನಾಗವಾದ್ಯ, ನಂದಿ, ತಬಲ ಚರ್ಮದ ಅಲಂಕೃತ ಪಾದರಕ್ಷೆಗಳನ್ನು ಇಲ್ಲಿ ಚಿತ್ರಿಸಲಾಗಿದೆ.

**ವೀರ ಮಾಸ್ತಿ ಶಿಲ್ಪ:** ಕುದರೆ–ಕಾಷ್ಠ ಶಿಲ್ಪವಾಗಿದ್ದು ವೀರ ಬಲಗೈಯಲ್ಲಿ ಕತ್ತಿ ಹಿಡಿದು ಕಿರೀಟ ಧರಿಸಿ ಕೊರಳಹಾರ ವೀರಗಾಸೆ, ತೊಟ್ಟು ಕಾಲಲ್ಲಿ ಕಡಗ ಹಾಕಿ ಆಸೀನನಾಗಿದ್ದಾಳೆ. ಹಿಂದೆ ವೀರನ ಪತ್ನಿ ಓಲೆ, ಸರ ಧರಿಸಿ, ಸೀರೆ ಕಚ್ಚೆ ಹಾಕಿ ಅಲಂಕೃತವಾಗಿದೆ.

**ಬಯಲಾಟದ ಆಭರಣಗಳು:** ಅಲಂಕೃತ ಕಿರೀಟಗಳು, ಕಿವಿಗಳು, ವಸ್ತ್ರದ ಕಲಾತ್ಮಕ ವಿನ್ಯಾಸ ನಡುವಿನ ಪಟ್ಟಿ, ಕೊರಳಹಾರ, ಪದಕ ಮಣಿಸರಗಳನ್ನು ಪ್ರದರ್ಶನದಲ್ಲಿ ಇಡಲಾಗಿದೆ. ಆಭರಣಗಳು ಲೋಹಗಳಿಂದ ಹರಳುಗಳಿಂದ ಅಲಂಕೃತವಾಗಿದೆ. ಪದಕ, ಜಿಮುಕಿ, ಬೈತಲೆಮಣಿ, ಕಟಿಪಟ್ಟಿ, ತೋಳುಬಂಧಿ, ಮೊದಲಾದವುಗಳನ್ನು ಪ್ರದರ್ಶನದಲ್ಲಿ ಕಾಣಬಹುದು. ಬಳಪದ ಕಲ್ಲಿನಲ್ಲಿ ನಿರ್ಮಿತವಾದ ಶಿಲ್ಪಗಳಾದ ನಂದಿ, ಗಣೇಶ, ಜೋಡಿ ನಂದಿ, ಗಣೇಶ, ಲಿಂಗ ಮಣಿಗಳಿಮದ ಅಲಂಕೃತವಾದ ಎಣಿಕೆಯ ಬೊಂಬೆಗಳಲ್ಲಿ ಬಂಡಿ, ಕೃಷ್ಣನ ವಿವಾಹ, ಆನೆಯ ಮೇಲೆ ರಾಜನ ಮೆರವಣಿಗೆ, ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಅರ್ಜುನನಿಗೆ ಬೋದಿಸುತ್ತಿರುವ ಶಿಲ್ಪಗಳನ್ನು ಇಲ್ಲಿ ಪ್ರದರ್ಶಿಸಲಾಗಿದೆ. ಕಾಷ್ಠ ಶಿಲ್ಪಗಳಾದ ಚಂದಾಳದ ಗೊಂಬೆಗಳು, ಬೀಸುವಕಲ್ಲು, ಆರತಿಹೆಚ್ಚು, ಗೌರಿ ಶಿಲ್ಪ, ಕಾಡಸಿದ್ದ ಜೋಗತಿ, ಪವಾಡ ಮೈಲಾರ, ಕುಮಾರ ರಾಮ, (ಶಿಲ್ಪ)ಗಳನ್ನು ಪ್ರದರ್ಶನಕ್ಕೆ ಇಡಲಾಗಿದೆ. ಈ ಶಿಲ್ಪಗಳನ್ನು ನೋಡಿ ಇವುಗಳ ಐತಿಹಾಸಿಕ ಹಿನ್ನಲೆ ಅರಿಯುವ ಸಂಶೋಧಕ ವಿದ್ಯಾರ್ಥಿಗಳಿಗೆ ಇವು ಆಧಾರ ಸ್ತಂಭಗಳಾಗಿ ಕಾರ್ಯನಿರ್ವಹಿಸುತ್ತವೆ.

**ಲೋಹಸಾಧನಗಳು:** ಕುಡುಗೋಲು, ಭರ್ಚಿ, ಕಂದೀಲು, (ಕಾಕುಬಾಳು, ವೇಣನೂರು) ಜಾಗಟೆ, ಚಕ್ಕಲು, ಒರಳು, ದೇವರ ಮುಂದಿಡುವ ಲಾಂದ್ರ, ಕುಂಡಲ ತಂಬಿಗೆ, ಪುಷ್ಪದ ಬಟ್ಟಲುಗಳನ್ನು ಪ್ರದರ್ಶನಕ್ಕೆ ಇಡಲಾಗಿದೆ.

**ಲೋಹದ ಶಿಲ್ಪಗಳು:** ಭೂತದ ಮುಖವಾಡ ಅದರ ತಲೆಯ ಮೇಲೆ ಏಳುಹೆಡೆ ಸರ್ಪದ ಆಕಾರದ ಕಿರೀಟ, ಎರಡನೇ ಭೂತದ ಮುಖವಾಡ ಶಿಲ್ಪ, ಅದರ ತಲೆಯ ಮೇಲೆ ಹನ್ನೆರಡು ಹೆಡೆಯ ಸರ್ಪದ ಮಾದರಿಯ ಕಿರೀಟ, ಇದೇ ಶಿಲ್ಪದ ಹದಿಮೂರು ಹೆಡೆಯ ಸರ್ಪದ ಮಾದರಿಯ ಕಿರೀಟ. ಭೂತ ಶಿಲ್ಪಗಳ ಹಣೆಯ ಮೇಲೆ ವಿಭೂತಿ, ತಿಲಕ, ಚಂದ್ರ ಸಾಧಾರಣಾ ಹಲ್ಲುಗಳು, ಕೊರೆಹಲ್ಲು, ತೆರೆದ ನಾಲಗೆ, ತ್ರಿಶೂಲ, ಹೊಂದಿದ ಈ ಶಿಲ್ಪಗಳು ತಮ್ಮ ಹಿನ್ನಲೆಯ ಬಗ್ಗೆ ವಿದ್ಯಾರ್ಥಿಗಳು ತಿಳಿದುಕೊಳ್ಳಲು ಕುತೂಹಲ ಕೆರಳಿಸುತ್ತವೆ.

**ವೀರಮಾಸ್ತಿ ಶಿಲ್ಪ:** 'ಕುದರೆಯ ಮೇಲೆ ಸ್ತ್ರೀಯರನ್ನು ಹಿಡಿದು ಕುಳಿತಿರುವ (ಪುರುಷ) ವೀರ ಶಿಲ್ಪ ನಿಜಕ್ಕೂ ಸುಂದರ. ಆ ವೀರ ಕರಂಡ ಮುಕುಟ ಧರಿಸಿ ಬಲಗೈಯಲ್ಲಿ ಖಡ್ಗ ಎರಡು, ಮೂರು ಮಾದರಿಯ ಮಣಿಸರ, ವೀರಗಾಸೆ ಧರಿಸಿ, ಎಡಗೈಯಿಂದ ಸ್ತ್ರೀ ಕಟ್ಯಾವಲಂಬಿತಳಾಗಿದ್ದಾಳೆ. ಸ್ತ್ರೀ ಕಿರೀಟ ಧಾರಿಣಿಯಾಗಿ ಎರಡು, ಮೂರು ಮಾದರಿಯ ಪದಕ ಮಣಿಸರ, ಕೈಗೆ ತೋಳು ಬಂಧಿ, ಕಿವಿಯಲ್ಲಿ ಓಲೆ ಕಟ್ಯಾಪಟ್ಟಿ ಕಾಲಲ್ಲಿಗೆಜ್ಜೆ ಧರಿಸಿದ್ದಾಳೆ. ವೀರ ಎಡಗೈಯಿಂದ ಕುದುರೆಯ ಲಗಾಮು ಹಿಡಿದಿದ್ದಾನೆ. ವೀರನ ಹಿಂದೆ ಸಿಂಹ ಮುಖದ ಐದು ಹೆಡೆಯ ನಾಗದ ಪ್ರಭಾವಳಿ ಅಂಕೃತವಾಗಿದೆ. ಈ ಎಲ್ಲಾ ಶಿಲ್ಪಗಳನ್ನು ಈ ಜಾನಪದ ಅಂಕಣದಲ್ಲಿ ಕಾಣಬಹುದು.

